University of Mysore

Oriental Research Institute Publications

KANNADA SERIES No. 34

GENERAL EDITOR
H. DEVEERAPPA, M.A.,
*Director,*
*Oriental Research Institute, Mysore*

ಕುಮಾರ ವಾಲ್ಮೀಕಿ ವಿರಚಿತ

# ತೊರವೆ ರಾಮಾಯಣ

ಸಂಪುಟ ೧

# TORAVE RĀMĀYANA

OF

KUMĀRA VĀLMĪKI

Vol. I

EDITED BY
N. BASAVARADHYA, M.A.,
*...duate Kannada Specialist*

MYSORE :
...SENIOR ASST. DIRECTOR, GOVT. BRANCH PRESS
1956

Price : Rs. 4-0-0

5013

University of Mysore

Oriental Research Institute Publications

KANNADA SERIES No. 34

GENERAL EDITOR

H. DEVEERAPPA, M.A.,

*Director,*

*Oriental Research Institute, Mysore*

ಕುಮಾರ ವಾಲ್ಮೀಕಿ ವಿರಚಿತ

# ತೊರವೆ ರಾಮಾಯಣ

ಸಂಪುಟ ೧

# TORAVE RĀMĀYANA

OF

KUMĀRA VĀLMĪKI

Vol. I

EDITED BY

N. BASAVARADHYA, M.A.,

*Graduate Kannada Specialist*

MYSORE:

PRINTED BY THE SENIOR ASST. DIRECTOR, GOVT BRANCH PRESS

1956

# ಪ್ರಸ್ತಾವನೆ

ಭಾರತೀಯ ಇತಿಹಾಸಗಳಲ್ಲಿ ರಾಮಾಯಣ ಮಹಾಭಾರತಗಳು ಸುಪ್ರಸಿದ್ಧವಾದುವು. ಇವು ನಮ್ಮ ಭರತಖಂಡದ ರಾಷ್ಟ್ರೀಯ ಮಹಾ ಕಾವ್ಯಗಳೆಂದು ಪರಿಗಣಿಸಲ್ಪಟ್ಟಿವೆ. ಸಂಸ್ಕೃತ ಭಾಷೆಯಲ್ಲಿರುವ ಈ ಮಹಾಕೃತಿಗಳನ್ನು ಆಧಾರವಾಗಿಟ್ಟುಕೊಂಡು ಇತರ ಭಾಷೆಗಳಲ್ಲೂ ಕೆಲವು ಬದಲಾವಣೆಗಳೊಡನೆ ಸಮಗ್ರ ಕಥೆಯನ್ನು ನಿರೂಪಿಸುವ ಕೃತಿಗಳು ರಚಿತವಾಗಿವೆ. ಸಮಗ್ರ ಕಥೆ ಮಾತ್ರವಲ್ಲದೆ ಅದರ ಒಂದೊಂದು ಭಾಗವೂ ಪ್ರತ್ಯೇಕ ಸ್ವತಂತ್ರ ಕಾವ್ಯವಾಗಿ ಅನೇಕ ಕೃತಿಗಳು ಹುಟ್ಟಿವೆ. ವಾಲ್ಮೀಕಿ ವ್ಯಾಸರು ಈ ಇತಿಹಾಸಗಳ ಕರ್ತೃಗಳು ಎನ್ನುವುದು ಎಲ್ಲರಿಗೂ ತಿಳಿದ ವಿಷಯ.

ಕನ್ನಡ ವಾಙ್ಮಯದಲ್ಲೂ ಈ ಇತಿಹಾಸಗಳನ್ನು ಕಾವ್ಯವನ್ನಾಗಿ ಅನೇಕ ಕವಿಗಳು ರಚಿಸಿದ್ದಾರೆ. ಇವರಲ್ಲಿ ಕನ್ನಡಭಾರತ ಕರ್ತೃವಾದ ಕುಮಾರವ್ಯಾಸನ ಹೆಸರನ್ನು ಕೇಳದ ಕನ್ನಡಿಗನಿಲ್ಲ. ಕುಮಾರವ್ಯಾಸನಂತೆಯೇ ಕಾವ್ಯನಾಮವನ್ನು ಪಡೆದು ಕನ್ನಡ ರಾಮಾಯಣವನ್ನು ರಚಿಸಿರುವವನೇ ಕುಮಾರವಾಲ್ಮೀಕಿ. ಈತನ ಕೃತಿಯೇ ತೊರವೆ ರಾಮಾಯಣ. ಈತ ತೊರವೆ ನರಹರಿಯ ಅಂಕಿತದಲ್ಲಿ ಈ ರಾಮಾಯಣವನ್ನು ರಚಿಸಿರುವುದರಿಂದ ಈ ಕಾವ್ಯಕ್ಕೆ ತೊರವೆರಾಮಾಯಣ ಎಂಬ ಹೆಸರು ಬಂದಿದೆ.

ಕನ್ನಡ ರಾಮಾಯಣಗಳಲ್ಲೆಲ್ಲ ಷಟ್ಪದೀ ಛಂದಸ್ಸಿನಲ್ಲಿ ಸುಲಭ ಶೈಲಿಯಲ್ಲಿ ಜನಾದರಣೀಯವಾಗಿರುವ ರಾಮಾಯಣವೆಂದರೆ ತೊರವೆ ರಾಮಾಯಣ ಎನ್ನುವುದು ನಿರ್ವಿವಾದ. ಇದರಿಂದಲೇ ಕನ್ನಡನಾಡಿನಲ್ಲೆಲ್ಲ ಈ ಕಾವ್ಯ ಹೆಚ್ಚು ಪ್ರಚಾರದಲ್ಲಿದೆ.

ಜನಪ್ರಿಯವಾದ ಈ ರಾಮಾಯಣ ಇತರ ಕಡೆಗಳಲ್ಲಿ ಅಖಂಡವಾಗಿ (ದಂಡಾಕಾರದಲ್ಲಿ) ಅಚ್ಚಾಗಿದೆ. ಆದರೂ ಇದರ ಅಧಿಕೃತ ಮುದ್ರಣ ದೊರೆಯದ ಕಾರಣ, ಈ ಕಾರ್ಯವನ್ನು ಕೈಗೊಂಡು ಪಾಠಾಂತರಗಳೊಡನೆ ಈ ಕೃತಿಯ ಪ್ರಥಮ ಸಂಪುಟವನ್ನು ಈಗ ನಮ್ಮ ಸಂಸ್ಥೆಯಿಂದ ಪ್ರಕಟಿಸಲಾಗಿದೆ.

ಏಳು ಓಲೆ ಪ್ರತಿಗಳು ಮತ್ತು ಒಂದು ಕಾಗದದ ಪ್ರತಿ ಇವುಗಳ ಆಧಾರದ ಮೇಲೆ ಈ ಕೃತಿಯ ಮೊದಲನೆಯ ಸಂಪುಟವನ್ನು ಸಂಪಾದಿಸಲಾಗಿದೆ. ಇದರಲ್ಲಿ ಆರಂಭದಿಂದ ಸುಂದರಕಾಂಡ ಪೂರ್ತಿ ಐದು ಕಾಂಡ

ಗಳಿವೆ. ಆರನೆಯ ಯುದ್ಧಕಾಂಡವನ್ನು ಸಮಗ್ರ ಗ್ರಂಥವಿಮರ್ಶೆಯೊಡನೆ ಎರಡನೆಯ ಸಂಪುಟವಾಗಿ ಕ್ಷಿಪ್ರದಲ್ಲೇ ಪ್ರಕಟಿಸಲಾಗುತ್ತದೆ.

ಈ ಸಂಪುಟದ ಸಂಪಾದಕರಾದ ಶ್ರೀಮಾನ್ ಎನ್. ಬಸವಾರಾಧ್ಯ, ಎಂ.ಎ., ಅವರು ಮುದ್ರಣಕಾರ್ಯ ಆರಂಭವಾದ ತರುಣದಲ್ಲೇ ಬೇರೆ ಸಂಸ್ಥೆಗೆ ವರ್ಗಾಯಿಸಲ್ಪಟ್ಟಕಾರಣ ಅಲ್ಲಿಂದ ಮುಂದಕ್ಕೆ ವಿದ್ವಾನ್ ಶ್ರೀ॥ ಎಸ್. ಎನ್. ಕೃಷ್ಣಜೋಯಿಸರು ಕರಡನ್ನು ತಿದ್ದಿರುವರಲ್ಲದೆ ಕೆಲವು ಕಡೆ ಕಂಡುಬಂದ ವ್ಯತ್ಯಾಸಗಳನ್ನು ಸರಿಪಡಿಸಿರುತ್ತಾರೆ.

ಅಚ್ಚಿಗಾಗಿ ಹಸ್ತಪ್ರತಿಯನ್ನು ಸಿದ್ಧಪಡಿಸುವಲ್ಲಿ ಮಾತೃಕೆಯನ್ನು ಎರವಲಾಗಿ ಕೊಟ್ಟ ಶ್ರೀ॥ ನಾಗರಾಜರಾಯರು ಮತ್ತು ಶ್ರೀ॥ ಎಂ. ಚಿದಾನಂದಮೂರ್ತಿ ಇವರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಎಚ್. ದೇವೀರಪ್ಪ, ಎಂ.ಎ.,
ಡೈರೆಕ್ಟರ್,
ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್, ಮೈಸೂರು.

ಮೈಸೂರು,
ತಾ॥ ೫-೧-೧೯೫೬

# ವಿಷಯ ಸೂಚಿ

---

## ಅಯೋಧ್ಯಾಕಾಂಡ



## ಅರಣ್ಯಕಾಂಡ

## ಕಿಷ್ಕಿಂಧಾ ಕಾಂಡ

## ಸುಂದರಕಾಂಡ

# ಪೀಠಿಕೆ

ಶ್ರೀ ರಾಮಾಯಣವು ಹಿಂದೂಗಳಿಗೆ ಅತ್ಯಂತ ಪೂಜ್ಯವಾದ ಗ್ರಂಥ. ಇದು ಮಹತ್ತಿನಲ್ಲಿಯೂ ಬೃಹತ್ತಿನಲ್ಲಿಯೂ ಮಹಾಕಾವ್ಯ. ರಾಮಭಕ್ತರು ಈ ಮಹಾಕಾವ್ಯಕ್ಕೆ ತೋರುತ್ತಿರುವ ಭಕ್ತಿ ಅನನ್ಯವಾದುದು. ಇದು ಮಾನವರ ಉತ್ಥಾನಕ್ಕೂ, ಉದ್ಧಾರಕ್ಕೂ ನೆರವಾಗಬಲ್ಲ ಪರಮಪೂಜ್ಯ ಗ್ರಂಥ ಎಂದು ಅನೇಕರ ನಂಬಿಕೆ.

ರಾಮನಾಮ ಸಂಕೀರ್ತನೆಯಿಂದ ನಿಷಾದ ಮಹರ್ಷಿಯಾದ; ಆದಿಕವಿಯಾದ; ದ್ರಷ್ಟಾರನಾದ. ಆತನ ತಪಸ್ಸಿನ ಫಲವಾಗಿಯೇ ರಾಮಾಯಣ ಮಹಾಕಾವ್ಯ ಸೃಷ್ಟಿಯಾಯಿತು. ವಾಲ್ಮೀಕಿಯು ರಾಮ ನಾಮ ಮಹಿಮೆಯಿಂದ ಮಹರ್ಷಿಯಾದಮೇಲೆ ಒಮ್ಮೆ ತಮಸಾನದಿಗೆ ಸ್ನಾನಕ್ಕೆ ಹೋದನು. ಮಾರ್ಗಮಧ್ಯದಲ್ಲಿ ಸುತ್ತಲೂ ಸುಂದರವಾಗಿದ್ದ ವನಶ್ರೀಯನ್ನು ಕಂಡು ಆನಂದಿಸುತ್ತಿರುವಾಗ ಶುಭ್ರ ನೀಲಾಕಾಶದಲ್ಲಿ ನಿಶ್ಚಿಂತೆಯಿಂದ ಹಾರಾಡುತ್ತಿದ್ದ ಕ್ರೌಂಚಯುಗಳವನ್ನು ನೋಡಿ ಕ್ಷಣಕಾಲ ಅಲ್ಲಿ ನಿಂತನು. ಆ ಮಹರ್ಷಿ ಭಾವಪರವಶನಾಗಿ ನೋಡುತ್ತಿದ್ದಂತೆಯೇ ಕ್ರೌಂಚಯುಗಳದಲ್ಲಿ ಗಂಡು ಹಕ್ಕಿಯು ಬೇಡನೊಬ್ಬನು ಬಿಟ್ಟ ಬಾಣಕ್ಕೆ ಬಲಿಯಾಗಿ ರಕ್ತಸಿಕ್ತವಾಗಿ ನೆಲಕ್ಕುರುಳಿತು. ಹೆಣ್ಣು ಹಕ್ಕಿಯು ಕರುಣಾ ಜನಕವಾಗಿ ಚೀರುತ್ತ ತನ್ನ ಪತಿಯ ಸುತ್ತಲೂ ಸುತ್ತುತ್ತಿತ್ತು. ಈ ದೃಶ್ಯವನ್ನು ಕಣ್ಣಾರ ಕಂಡ ವಾಲ್ಮೀಕಿಗೆ ಕರುಣೆ ಉಕ್ಕಿಬಂದು ಬೇಡನು ಮಾಡಿದ್ದು ಅಧರ್ಮವೆಂದು ಮನ್ಯೂದ್ಗತಕಂಠದಿಂದ :

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ
ಯತ್ ಕ್ರೌಂಚ ಮಿಥುನಾದೇಕಮವಧೀಃ ಕಾಮಮೋಹಿತಮ್

ಎಂದು ನುಡಿದನು. ಆದರೆ ಮರುಕ್ಷಣದಲ್ಲಿಯೇ ತಾನಾಡಿದ ಮಾತನ್ನು ನೆನೆದು ಚಿಂತಾಕ್ರಾಂತನಾಗಿ 'ಆ ಹಕ್ಕಿಯ ನೋವನ್ನು ಕಂಡು ದುಃಖಿತ ನಾದ ನಾನು ಆಡಿದ ಮಾತೇನಿದು? ತಪಶ್ಶಕ್ತಿಕ್ಷಯಕಾರಿಯಾದ ವಚನ ವಿದಾಯಿತಲ್ಲ' ಎಂದು ನೊಂದು ಪಕ್ಕದಲ್ಲಿದ್ದ ಶಿಷ್ಯನಿಗೆ 'ಶೋಕಾರ್ತ ನಾದ ನನ್ನ ಬಾಯಿಂದ ಬಂದ ಪಾದಬದ್ಧವೂ, ಅಕ್ಷರಸಮವೂ ತಂತ್ರೀಲಯ ಸಮನ್ವಿತವೂ ಆದ ಈ ಮಾತು ಕೇವಲ ಶ್ಲೋಕವಾಗಲಿ. ಮತ್ತೇನೂ ಆಗುವುದು ಬೇಡ' ಎಂದು ಹೇಳಿ ಸ್ನಾನಮಾಡಿ ಚಿಂತಾಕ್ರಾಂತನಾಗಿ ಆತ ನೊಡನೆ ಆಶ್ರಮಕ್ಕೆ ಹಿಂತಿರುಗಿದನು. ಕ್ರೌಂಚ ವೃತ್ತಾಂತವನ್ನು ಸ್ಮರಿಸಿ ಅಂತರಂಗದಲ್ಲೇ ಚಿಂತಿಸುತ್ತಿದ್ದ ವಾಲ್ಮೀಕಿಗೆ ಚತುರ್ಮುಖಬ್ರಹ್ಮನು ಪ್ರತ್ಯಕ್ಷ ನಾಗಿ ಆತನನ್ನು ಸಂತೈಸಿ 'ನನ್ನ ಸಂಕಲ್ಪದಿಂದಲೇ ನಿನ್ನ ಬಾಯಿಂದ

ಹೊರಟ ಈ ವಾಣಿ ಯಶೋರೂಪವಾದ ಶ್ಲೋಕವಾಗುತ್ತದೆ. ನೀನು ಚಿಂತಿಸಬೇಡ. ಈ ಹಿಂದೆ ನೀನು ನಾರದನಿಂದ ಕೇಳಿದಂತೆ ರಾಮಚರಿತವನ್ನು ಈ ಛಂದೋನುಸಾರಿಯಾಗಿಯೇ ರಚಿಸು. ನಿನ್ನ ಕಾವ್ಯದಲ್ಲಿ ನೀನಾಡಿದ ಯಾವ ಮಾತೂ ಅನೃತವಾಗುವುದಿಲ್ಲ. ಈ ಮಹೀತಲದಲ್ಲಿ ಎಲ್ಲಿಯವರೆಗೆ ಗಿರಿಸರಿತ್ತುಗಳಿರುವುವೋ ಅಲ್ಲಿಯವರೆಗೆ ರಾಮಾಯಣ ಕಥೆಯು ಎಲ್ಲ ಲೋಕಗಳಲ್ಲಿಯೂ ಪ್ರಚಲಿತವಾಗಿರುವುದು ' ಎಂದು ಹೇಳಿ ಅಂತರ್ಧಾನನಾದನು. ಅಂತೆಯೇ ವಾಕ್ಯವಿಶಾರದನಾದ ವಾಲ್ಮೀಕಿ ಮಹರ್ಷಿಯು ರಾಮಾಯಣ ಮಹಾಕಾವ್ಯವನ್ನು ರಚಿಸಿದನು. ಈ ಮಹಾಕೃತಿಯ ಬಗ್ಗೆ ಕವಿವರ್ಯ 'ಕುವೆಂಪು' ರವರು "ವಾಲ್ಮೀಕಿಯ ಕೃತಿ ಅದು ಹುಟ್ಟಿದಂದು 'ಕವಿಕೃತಿ'ಯಾಗಿತ್ತು; ಇಂದು 'ಪ್ರಕೃತಿ'ಯಾಗಿದೆ. ಭಾರತೀಯರ ಬಾಳುವೆಯ ಲೋಕದಲ್ಲಿ ಪರ್ವತ ಅರಣ್ಯ ಸಮುದ್ರ ಆಕಾಶಗಳಿರುವಂತೆ ರಾಮಯಣವೂ 'ಇದೆ'. ಬಹುಶಃ ಅವುಗಳಿಗಿಂತಲೂ ಸುಸ್ಥಿರವಾಗಿ ಸಮಧಿಕವಾಗಿ ಸತ್ಯತರವಾಗಿ ಬಾಹ್ಯಾಭ್ಯಂತರಗಳನ್ನೂ ಲೋಕಾಲೋಕಗಳನ್ನೂ ಆಕ್ರಮಿಸಿ, ವ್ಯಾಪಿಸಿ, ಸೃಷ್ಟಿಯ ವಿಕಾಸರೂಪವಾದ ಪರಿಣಾಮ ಪಥದಲ್ಲಿ ಒಂದು ಪರಿವರ್ತನಾ ಸಮರ್ಥವಾದ ಸಾರಥಿಶಕ್ತಿಯಾಗಿದೆ. ಪ್ರಕೃತಿಯ ಪರ್ವತಾರಣ್ಯಗಳನ್ನು ಯಥಾಶಕ್ತಿಯಾಗಿ ಉಪಯೋಗಿಸಿಕೊಳ್ಳುವಂತೆ ರಾಮಾಯಣವನ್ನೂ ಉಪಯೋಗಿಸಿಕೊಳ್ಳಬಹುದು. ಆ ಪರ್ವತದ ಬಂಡೆಗಳಲ್ಲಿ ಸಾಮರ್ಥ್ಯವಿರುವವರು ಯಾರುಬೇಕಾದರೂ ತಂತಮ್ಮ ಪ್ರತಿಭೆಯ ಕಲ್ಪನಾಕೃತಿಗಳನ್ನು ಕಾಣಬಹುದು: ಶಿಲ್ಪಕೃತಿಗಳನ್ನೂ ಕಡೆಯಬಹುದು. ಆ ಅರಣ್ಯದ ಅಂಶದಿಂದ ತಂತಮ್ಮ ದರ್ಶನಕ್ಕೆ ಅನುರೂಪವಾಗಿ ಎಂತಹ ನಂದನೋದ್ಯಾನಗಳನ್ನು ಬೇಕಾದರೂ ರಚಿಸಿಕೊಳ್ಳಬಹುದು. ವಾಲ್ಮೀಕಿಯ ದಿವ್ಯಕೃತಿ ಪ್ರಕೃತಿಯ ಮೂಲಭೂತ ವಸ್ತುಗಳಂತೆ ಶಕ್ತಿಗಳಂತೆ ಅಪೌರುಷೇಯವಾಗಿ ಹೋಗಿದೆ. ಆದ್ದರಿಂದಲೆ ಅದು ವೇದಪಟ್ಟಕ್ಕೂ ಏರಿದೆ.

ಕವಿಮಹರ್ಷಿ ಅಂದು ಹಾಡಿದ ರಾಮಾಯಣ ಇಂದು ಮತ್ತೊಮ್ಮೆ ನಮ್ಮಲ್ಲಿ ಮೂಡಿದ ಹೊರತು ಸಾರ್ಥಕವಾಗುವುದಿಲ್ಲ: ಏಕೆಂದರೆ ಕೃತಿಯ ರಸಾಸ್ವಾದನೆಯೂ ಕೃತಿರಚನೆಯಂತೆಯೆ ಒಂದು ಸೃಷ್ಟಿಕಾರ್ಯ. ಓದುವ ಅಥವಾ ಆಲಿಸುವ ನಮ್ಮ ಒಬ್ಬೊಬ್ಬರ ಹೃದಯದಲ್ಲಿಯೂ ರಾಮಾಯಣದ ಪುನಃಸೃಷ್ಟಿಯಾಗಬೇಕು. ಹಾಗೆ ಒಂದೊಂದು ಚೇತನದಲ್ಲಿಯೂ ರಾಮಾಯಣಾವತಾರವಾಗುವುದರಲ್ಲಿಯೆ ವಾಲ್ಮೀಕಿಯ ಕೃತಿ ಸಾರ್ಥಕತೆ ಪಡೆಯುತ್ತದೆ; ನಮ್ಮ ಬಾಳುವೆಗೂ ಪುರುಷಾರ್ಥ ಸಿದ್ಧಿಯಾಗುತ್ತದೆ." ಎಂದಿದ್ದಾರೆ.[1]

---

1 ಜನಪ್ರಿಯ ವಾಲ್ಮೀಕಿ ರಾಮಾಯಣ, ಪೀಠಿಕೆ ಪುಟ ೨೫.

ಇಂತಹ ಜನಪ್ರಿಯ ಮಹಾಕಾವ್ಯವಾದ ವಾಲ್ಮೀಕಿ ರಾಮಾಯಣವು ನಾನಾ ದೇಶಗಳಲ್ಲಿ ನಾನಾ ಭಾಷೆಗಳಲ್ಲಿ ಅವತರಿಸಿತು. ಈ ಭವ್ಯಕೃತಿಯನ್ನು ಕನ್ನಡದಲ್ಲಿ ರಚಿಸಿ ಪ್ರಸಿದ್ಧನಾಗಿರುವವನು ಕುಮಾರ ವಾಲ್ಮೀಕಿ ಒಬ್ಬನೆ. ಈ ತೊರವೆ ರಾಮಾಯಣ ವಾಲ್ಮೀಕಿ ರಾಮಾಯಣದ ಅಕ್ಷರಶಃ ಭಾಷಾಂತರವಲ್ಲ. ಇದರ ಚೌಕಟ್ಟು* ಅಧ್ಯಾತ್ಮ ರಾಮಾಯಣದ್ದೇ ಆಗಿದ್ದರೂ, ಕಥೆ ಮಾತ್ರ ವಾಲ್ಮೀಕಿ ರಾಮಾಯಣದ್ದೇ ಆಗಿದೆ.

ಈ ಕಾವ್ಯದ ಕರ್ತೃವಿನ ಹೆಸರು ನರಹರಿ ಎಂದಿರಬಹುದು. 'ಕುಮಾರ ವಾಲ್ಮೀಕಿ' ಎಂಬುದು ಬಿರುದೇ ಹೊರತು ಕವಿಯ ನಿಜವಾದ ಹೆಸರಲ್ಲ. ವ್ಯಾಸಭಾರತವನ್ನು ಕನ್ನಡಿಸಿದ ನಾರಣಪ್ಪ ತನ್ನನ್ನು ಕುಮಾರ ವ್ಯಾಸನೆಂದು ಸಂಬೋಧಿಸಿಕೊಂಡಿರುವಂತೆ, ರಾಮಾಯಣವನ್ನು ಕನ್ನಡಿಸಿದ ಈ ನರಹರಿ ತನ್ನನ್ನು ಕುಮಾರ ವಾಲ್ಮೀಕಿ ಎಂದು ಸಂಬೋಧಿಸಿಕೊಂಡಿದ್ದಾನೆ. ಈತನಿಗೆ 'ಕವಿರಾಜಹಂಸ' ಎಂಬ ಮತ್ತೊಂದು ಬಿರುದಿದ್ದಂತೆ ಈ ಕೃತಿಯಿಂದಲೇ ತಿಳಿದುಬರುತ್ತದೆ.[1] ಈತನ ಜನ್ಮಸ್ಥಳ ತೊರವೆ. ಈ ಗ್ರಾಮದ ವಿಷಯವಾಗಿ ದಿ॥ ವೆಂಕಟರಂಗೋ ಕಟ್ಟಿ ಅವರು, "ತೊರವಿ—ವಿಜಾಪುರದ ಪಶ್ಚಿಮಕ್ಕೆ ನಾಲ್ಕು ಮೈಲಿನ ಮೇಲೆ, ಜ.ಸ. (೮೧) ೨೪೦೮. ವಿಜಾಪುರದ ಭರಭರಿಯ ಕಾಲಕ್ಕೆ ಇದು ಪಟ್ಟಣದ ಭಾಗವೆನಿಸುತ್ತಿತ್ತು. ೨ನೇ ಇಬ್ರಾಹಿಮುಶಹನು ಇಲ್ಲಿ ದೊಡ್ಡ ದೊಡ್ಡ ಅರಮನೆಗಳನ್ನೂ, ಮಸೀದಿಗಳನ್ನೂ ಕಟ್ಟಿಸಿ ವಾಸಿಸುತ್ತಿದ್ದನು. ಈ ಊರಿನ ಬಳಿಯಲ್ಲಿ ಒಂದು ನರಿಯನ್ನು ನಾಯಿಯು ಬೆನ್ನಟ್ಟಲಾಗಿ ನರಿಯು ಹಿಂದಿರುಗಿ ನಾಯಿಯನ್ನು ಹಿಡೀತಂತೆ. ಇದು ಅಪಶಕುನವೆಂದು ತಿಳಿದು ಇಬ್ರಾಹಿಮುಶಹನು ತೊರವಿಯನ್ನು ಬಿಟ್ಟು ವಿಜಾಪುರದಲ್ಲಿ ಹೋಗಿ ನಿಂತನೆಂದು ಹೇಳುತ್ತಾರೆ. ಅವನು ಕಟ್ಟಿಸಿದ ಇಮಾರತುಗಳಲ್ಲಿ ಒಂದೆರಡು ಮಸೀದಿಗಳು ಮಾತ್ರ ಈಗ ಉಳಿದಿರುತ್ತವೆ. ತೊರವಿಯಲ್ಲಿ ಹತ್ತೆಂಟು ಅರ್ವಾಚೀನಕಾಲದ ಗುಡಿಗಳಿರುತ್ತವೆ. ಅವುಗಳಲ್ಲಿ ನರಸಿಂಹನ ಗುಡಿಯು ಜಾಗೃತಸ್ಥಾನವೆಂದು ಎಣಿಸಲ್ಪಡುತ್ತದೆ. ನರಸಿಂಹನ ಗುಡಿಯನ್ನು ಇಟ್ಟಂಗಿಗಳಿಂದ ಚಚ್ಚೌಕಾಗಿ ಕಟ್ಟಿದ್ದಾರೆ. ಅದರ ಮಧ್ಯಭಾಗದಲ್ಲಿ ಒಂದು ವೃಂದಾವನವೂ ಹನುಮಂತನ ಮೂರ್ತಿಯೂ ಉಂಟು, ಗರ್ಭಗುಡಿಯಲ್ಲಿ ನರಸಿಂಹನ ಮೂರ್ತಿಯೂ ಒಂದು ಲಿಂಗವೂ ಉಂಟು. ಊರಹೊರಗೆ ದೊಡ್ಡದೊಂದು ಕೆರೆಯುಂಟು.

---

* "ವಾಲ್ಮೀಕಿ ರಾಮಾಯಣವನ್ನು ಭಾಸ್ಕರಕವಿ ತೆಲುಗಿನಲ್ಲಿ ಬರೆದನು. ಅದನ್ನೇ ಕುಮಾರ ವಾಲ್ಮೀಕಿ ಕನ್ನಡಿಸಿದನು. ಆದನ್ನು ಸರ್ವರಿಗೂ ತಿಳಿಯುವಂತೆ ಗದ್ಯರೂಪವಾಗಿ ಬರೆದಿದೆ (ಯುದ್ಧಕಾಂಡಮಾತ್ರ)" ಕವಿಚರಿತ್ರೆ, ಸಂ. 111, ಪುಟ ೩೧೭.

[1] ತೊರವೆ ರಾಮಾಯಣ, ಯುದ್ಧಕಾಂಡ, ಸಂಧಿ ೫೫, ಪದ್ಯ ೬೫.

ಅದರೊಳಗೆ ೧೨೦೦ ಪೂಟು ಚಚ್ಚೌಕಾದ ಹೊಂಡವಿರುತ್ತದೆ. ಇದಲ್ಲದೆ ಊರೊಳಗೆ ೪೦ ಬಾವಿಗಳಿರುತ್ತವೆ" ಎಂದು ಬರೆದಿರುತ್ತಾರೆ.[1]

ನರಹರಿ ತನ್ನ ಗ್ರಂಥವನ್ನು ತೊರವೆ ನರಸಿಂಹದೇವರ ಅಂಕಿತದಲ್ಲಿ ಬರೆದಿದ್ದಾನೆ. ಆದ್ದರಿಂದ ಈತನ ರಾಮಾಯಣಕ್ಕೆ 'ತೊರವೆ ರಾಮಾಯಣ' ಎಂಬ ಹೆಸರೇ ರೂಢಿಯಲ್ಲಿದೆ. ಇವನು ತನ್ನ ಕಾವ್ಯದಲ್ಲಿ ಎಲ್ಲಿಯೂ ಸ್ವಂತ ವಿಷಯವನ್ನು ಹೇಳಿಕೊಂಡಿಲ್ಲ. ಕರ್ಣಾಟಕ ಕವಿಚರಿತೆಕಾರರು "ಈತನು ರಾಮಾಯಣವನ್ನು ಬರೆದಿದ್ದಾನೆ. ಮೈರಾವಣನ ಕಾಳಗವನ್ನೂ ಬರೆದಿರುವಂತೆ ತೋರುತ್ತದೆ. ಈ ಗ್ರಂಥದಲ್ಲಿ ತನ್ನ ಹೆಸರನ್ನು ನರಹರಿ ಎಂದು ಹೇಳಿಕೊಂಡಿದ್ದಾನೆ...... ಇವನು ಬ್ರಾಹ್ಮಣ ಕವಿ. ಸುಮಾರು ೧೫೦೦ರಲ್ಲಿ ಇದ್ದಿರಬಹುದು" ಎಂದು ಹೇಳಿದ್ದಾರೆ.[2]

ಕುಮಾರವ್ಯಾಸನನ್ನು (ಕ್ರಿ.ಶ.ಸು. ೧೪೩೦) ಮನಸಾರೆ ಹೊಗಳಿರುವ ಈ ಕುಮಾರ ವಾಲ್ಮೀಕಿಯನ್ನು ಕ್ರಿ.ಶ.ಸು. ೧೭೬೦ರಲ್ಲಿ ಇದ್ದಿರಬಹುದಾದ ಬೊಬ್ಬೂರು ರಂಗನು ಸ್ಮರಿಸಿದ್ದಾನೆ.[3] ಅದರಂತೆ ಕುಮಾರವ್ಯಾಸನ ತರುವಾಯ, ಬೊಬ್ಬೂರು ರಂಗನಿಗಿಂತ ಹಿಂದೆ ಈ ಕವಿ ಜೀವಿಸಿದ್ದನೆಂಬುದು ಸ್ಪಷ್ಟವಾಯಿತು. ಆದರೆ ಕ್ರಿ. ಶ. ೧೪೩೦ರಿಂದ ಕ್ರಿ.ಶ. ೧೭೬೦ರ ಅವಧಿಯಲ್ಲಿ ಈತನು ಯಾವಾಗ ಜೀವಿಸಿದ್ದನೆಂಬುದನ್ನು ಆಧಾರಗಳು ಸಿಕ್ಕುವವರೆಗೂ ನಿರ್ಧರಿಸುವುದು ಸಾಧ್ಯವಿಲ್ಲ.

ಕುಮಾರವಾಲ್ಮೀಕಿ ಕುಮಾರವ್ಯಾಸನನ್ನು ಬಿಟ್ಟು ಮತ್ತಾರನ್ನೂ ಹೊಗಳಿಲ್ಲ, ಸ್ಮರಿಸಿಲ್ಲ.

ಸರಸವರ್ಣಕ ಕವಿಗಳಲಿ ಭಾ
ಸುರ ಕುಮಾರವ್ಯಾಸನೊಬ್ಬನು
ಎರಡನೆಯಲಾನೊಬ್ಬ ಮಗುಳೆಣಿಸುವರೆ ವರ್ಣಕಕೆ
ವರಕುಮಾರವ್ಯಾಸನೊಬ್ಬನು
ಎರಡನೆಯಲಾನೊಬ್ಬ ಮಿಕ್ಕಿನ
ಜರಡುಕವಿಗಳ ಲೆಕ್ಕಿಸುವನೆ ಕುಮಾರವಾಲ್ಮೀಕಿ

ವರ ಕುಮಾರವ್ಯಾಸ ಘನಬಂ
ಧುರದ ಭಾರತಕೃತಿಗೆ ಕರ್ತನು
ನಿರುತ ರಾಮಾಯಣಕೆ ಸುಕವಿ ಕುಮಾರವಾಲ್ಮೀಕಿ
ದೊರೆ ವಿಚಾರವದೇನು ಪೇಳದಿ
ರೆರಡು ಕಾವ್ಯಕೆ ಮಿಕ್ಕ ಶಬ್ದಾ
ಕ್ಷರ ದರಿದ್ರರ ಬಂಧಬಂಧುರರಸವಿವರ್ಜಿತರ

---

[1] ಬೊಂಬೈ ಗೆಜಟಿಯರ್, ಪುಟ ೫೫೭. [2] ಕರ್ಣಾಟಕ ಕವಿಚರಿತ್ರೆ, ಭಾಗ II, ಪುಟ ೧೪೨. [3] ಅಂಬಿಕಾವಿಜಯ, ಸಂಧಿ ೧, ಪದ್ಯ ೧೭.

ಎಂದು ಹೊಗಳಿದ್ದಾನೆ.[1] ಸರಸವರ್ಣಕ ಕವಿಗಳಲ್ಲಿ ಮಿಕ್ಕವರಾರೂ ತಮ್ಮಿಬ್ಬರ ಮಟ್ಟವನ್ನು ಮುಟ್ಟಲಾರರೆಂದೇ ಆತನ ಕೆಚ್ಚು. ತಾನು, ತನ್ನನ್ನು ಬಿಟ್ಟರೆ ಕುಮಾರವ್ಯಾಸ ಇಬ್ಬರೇ; ಉಳಿದವರೆಲ್ಲ ಜರಡು ಕವಿಗಳು, ಶಬ್ದಾಕ್ಷರ ದರಿದ್ರರು, ಬಂಧುರರಸವಿವರ್ಜಿತರು. ಕುಮಾರ ವಾಲ್ಮೀಕಿಯ ಈ ಹೇಳಿಕೆ ಸ್ವಲ್ಪಮಟ್ಟಿಗೆ ಉತ್ಪ್ರೇಕ್ಷೆಯಿಂದ ಕೂಡಿದೆ. ಒಟ್ಟಿನಲ್ಲಿ ಈತನು ಭಕ್ತಕವಿ. ತನ್ನ ಕಾವ್ಯವನ್ನು ಪಂಡಿತ ಮಂಡಲಿಗಾಗಲಿ, ರಾಜಾಸ್ಥಾನಕ್ಕಾಗಲಿ ಬರೆದಿಲ್ಲ. ಈತನ ಜೀವನಸಾರ ಸರ್ವಸ್ವವಾಗಿ, ಲೌಕಿಕಾಗಮಗಳೆರಡೂ ಏಕೀಭವಿಸಿ ರಾಮಾಯಣ ಹೊರಹೊಮ್ಮಿದೆ. ಆದುದರಿಂದಲೇ ಈತನು ಕೆಚ್ಚೆದೆಯಿಂದ ತನ್ನ ಅಗ್ಗಳಿಕೆಯನ್ನು ಹೇಳಿ ಕೊಂಡಿದ್ದಾನೆ. ಈತನು ಮಹಾಕವಿಯೇನೂ ಅಲ್ಲ. ಜನಸಾಮಾನ್ಯದ ಕವಿ. ಜನಸಾಮಾನ್ಯದ ಉದ್ಧಾರಕ್ಕಾಗಿ ವಾಲ್ಮೀಕಿ ರಾಮಾಯಣದ ಕಥೆ ಯನ್ನು ಕನ್ನಡದಲ್ಲಿ ಹೇಳುವ ಪ್ರಯತ್ನದಲ್ಲಿ ಈತನು ಜಯಶೀಲನಾಗಿ ದ್ದಾನೆ. ಹೀಗೆ ಜನಸಾಮಾನ್ಯದ ಕವಿಯಾಗಿ ಜೀವಂತವಾಗಿ ಉಳಿಯು ವುದು ಕೂಡ ಒಂದು ಪುಣ್ಯವಿಶೇಷವೇ; ಗೌರವವೇ. ಜನಸಾಮಾನ್ಯದ ಹೃದಯವನ್ನು ಆಕರ್ಷಿಸುವುದು ವಾಚ್ಯಾರ್ಥವೆ. ರಾಮಾಯಣ ಮಹಾ ಕಾವ್ಯದಲ್ಲಿ ಅಂತರ್ಹಿತವಾದ ಧ್ವನಿಯನ್ನೇ ಆಗಲಿ ದರ್ಶನವನ್ನೇ ಆಗಲಿ ಅನುಭವಿಸಬೇಕಾದರೆ ಪ್ರಪ್ರಥಮವಾಗಿ ಇಂತಹ ವಾಚ್ಯಾರ್ಥ ಪ್ರಧಾನ ವಾದ ಕೃತಿಯ ಪರಿಚಯವು ಸಹೃದಯ ಜನಸಾಮಾನ್ಯಕ್ಕೆ ಆವಶ್ಯಕ. ಇದು ಅರಸರ ಮೇಜಿಗೆ ಅರ್ಹವಾಗುವ ಆಹಾರವಾಗದಿದ್ದರೂ ಬಡವರ ಬಟ್ಟಲಿನ ದಿನನಿತ್ಯದ ಆಹಾರವಾಗಿರುತ್ತದೆ.

ಕನ್ನಡದಲ್ಲಿ ರಾಮಾಯಣಗಳನ್ನು ಬರೆದವರಲ್ಲಿ ಬಹುಶಃ ಜೈನರೇ ಮೊದಲಿಗರು. ಕನ್ನಡ ಕವಿಚಕ್ರವರ್ತಿಗಳಲ್ಲೊಬ್ಬನಾಗಿ 'ಕಾಳಿದಾಸಂಗಂ ನೂರ್ಮಡಿ' ಎಂದುಕೊಂಡ ಪೊನ್ನನ ಭುವನೈಕ ರಾಮಾಭ್ಯುದಯ, 'ಒರೆಯೆ ಸುವರ್ಣಂ ತೇಯೆ ಮಲಯಜಂ' ಎಂದು ಹೊಗಳಿಕೊಂಡ ಕುಮುದೇಂದುವಿನ ರಾಮಾಯಣ, ಜಗವೆಲ್ಲವೂ ಮೆಚ್ಚುವಂತೆ ಹೇಳುವೆ ನೆಂದ ನಾಗಚಂದ್ರನ ರಾಮಚಂದ್ರಚರಿತಪುರಾಣ, ಇವೇ ಮೊದಲಾದ ಜೈನ ರಾಮಾಯಣಗಳು ಶತಶತಮಾನಕ್ಕೆ ಅಲೆಅಲೆಯಾಗಿ ಬಂದರೂ ವಾಲ್ಮೀಕಿಯ ರಾಮಾಯಣಕಥಾಸರಣಿಗೆ ಬಳಕೆಗೊಂಡ ಕಿವಿಗೂ ಅಲ್ಲಿನ ಉನ್ನತ ವಿಶಿಷ್ಟ ಧ್ಯೇಯಗಳನ್ನು ತಣಿದುಂಡ ಆತ್ಮಕ್ಕೂ ಭಿನ್ನವಾಗಿ ಕಂಡು ಬಂದುವು. ಆದುದರಿಂದ ಅವು ಜನಮನವನ್ನು ಭಕ್ತಿರಸ ಸಮುದ್ರಕ್ಕೆ ಒಯ್ಯಲು ಸಮರ್ಥವಾಗಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವಾಲ್ಮೀಕಿಯ ರಾಮಾಯಣದ ಕಥಾ ಪದ್ಧತಿಯನ್ನೇ ಅನುಸರಿಸಿ ಪ್ರಚಾರಕ್ಕೆ ತಂದ ಕೀರ್ತಿ ತೊರವೆಯ ನರಹರಿಗೆ ಸಲ್ಲತಕ್ಕದ್ದಾಗಿದೆ.

---

[1] ತೊರವೆ ರಾಮಾಯಣ, ಯುದ್ಧಕಾಂಡ, ಸಂಧಿ ೫೦, ಪದ್ಯ ೬೪-೬೫.

ಈ ಕೃತಿಯಲ್ಲಿ ಒಟ್ಟು ಸುಮಾರು ಐದುಸಾವಿರದ ಇನ್ನೂರು ಪದ್ಯಗಳಿವೆ. ಕುಮಾರವ್ಯಾಸನಂತೆ ಈತನೂ ಭಾಮಿನೀಷಟ್ಪದಿಯಲ್ಲಿಯೇ ಕಾವ್ಯರಚನೆಮಾಡಿರುತ್ತಾನೆ. ಕಾವ್ಯದ ಸುಮಾರು ಅರ್ಧಭಾಗವನ್ನು ಐದು ಕಾಂಡಗಳಿಗೂ ಇನ್ನುಳಿದ ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಭಾಗವನ್ನು ಕೊನೆಯ ಯುದ್ಧಕಾಂಡಕ್ಕೂ ಹಂಚಿರುವ ಈ ಕವಿಗೆ ಯುದ್ಧ ವರ್ಣನೆಯಲ್ಲಿ ಹೆಚ್ಚು ಅಭಿಲಾಷೆಯಿರುವಂತೆ ತೋರುತ್ತದೆ. ಒಟ್ಟಿನಲ್ಲಿ ಈ ಕೃತಿಯನ್ನು ಮಧ್ಯಮ ತರಗತಿಯ ಕಾವ್ಯವೆಂದು ಹೇಳಬಹುದು.

ಈ ಕವಿ ರಾಮಾಯಣವನ್ನಲ್ಲದೆ 'ಮೈರಾವಣನ ಕಾಳಗ' ವನ್ನೂ ಬರೆದಿರುವನೆಂಬ ಪ್ರತೀತಿ ಇದೆ. ಆದರೆ ಇದು ಸಂದೇಹಾಸ್ಪದವಾದುದು. ತೊರವೆ ರಾಮಾಯಣದ ಒಂದು ಓಲೆಯ ಪ್ರತಿಯ ಕೊನೆಯಲ್ಲಿ 'ಕಪೋತ ಚರಿತೆ' ಇದೆ. ಈ ಮೈರಾವಣನ ಕಾಳಗ, ಕಪೋತ ಚರಿತೆಗಳ ಶೈಲಿಗೂ, ತೊರವೆ ರಾಮಾಯಣದ ಶೈಲಿಗೂ ಬಹಳ ಅಂತರವಿದೆ. ಈ ದಿಕ್ಕಿನಲ್ಲಿ ಸಂಶೋಧನೆ ನಡೆಯಬೇಕಾಗಿದೆ. ಸದ್ಯಕ್ಕೆ ಕುಮಾರ ವಾಲ್ಮೀಕಿ ತೊರವೆ ರಾಮಾಯಣವನ್ನು ಮಾತ್ರ ಬರೆದಿದ್ದಾನೆ, ಎಂದಿಟ್ಟುಕೊಳ್ಳಬಹುದು.

## ಗ್ರಂಥ ಸಂಪಾದನೆ

ತೊರವೆ ರಾಮಾಯಣವನ್ನು ಎಂಟು ಮಾತೃಕೆಗಳ ಆಧಾರದಿಂದ ಪರಿಷ್ಕರಿಸಲಾಗಿದೆ. ಇವುಗಳಲ್ಲಿ ಏಳು ಓಲೆಯ ಪ್ರತಿಗಳು, ಮತ್ತೊಂದು ಕರಡು ಕಾಗದದ ಪ್ರತಿ. ಈ ಪ್ರತಿಗಳ ಸಂಕೇತಗಳನ್ನೂ, ಇವುಗಳ ಸ್ವರೂಪವನ್ನೂ ಮುಂದೆ ತಿಳಿಸಲಾಗಿದೆ:—

(1) 'ಕ'—ಇದು ಪ್ರಾಚ್ಯಕೋಶಾಗಾರದ ಕೆ. 549ನೆಯ ನಂಬರಿನ ಓಲೆಯ ಪ್ರತಿ. ಸಮಗ್ರವಾಗಿದೆ. ಮುದ್ರಣದ ಪ್ರತಿಯನ್ನು ಈ ಓಲೆಯ ಪ್ರತಿಯಿಂದ ಸಿದ್ಧಪಡಿಸಿದೆ. ಇದರಲ್ಲಿ ೧೧ಳ ಸಂಧಿಗಳೂ ೫೧೩೨ ಪದ್ಯಗಳೂ ಇವೆ. ಪ್ರತಿಯ ಕಾಲ ಎಲ್ಲಿಯೂ ಉಕ್ತವಾಗಿಲ್ಲ. ಕೊನೆಯಲ್ಲಿ "ಈ ರಾಮಾಯಣ ಪುಸ್ತಕವನ್ನು ಬರೆದಾತ ಘಟ್ಟದ ಕೆಳಗಣ ಕೊಡೆಯಾಲದ ಹೋಬಳಿ ಪೋಮಾಂಜೂರ ಮಾಗಣ ಸೇನಭೋಗ ಕೃಷ್ಣಸೇನಭೋಗನ ಪುತ್ರ ರಾಮಯ್ಯಸೇನಭೋಗರ ಪುತ್ರ ಸೋಮನ ಪಾಲಲ್ಲುಯಿಹ ನಾರಾಯಣಯೆಂಬಾತನು ಕೊಪ್ಪದ ಹೋಬಳಿಗೆ ಶ್ರೇಷ್ಠರಾದ ಕೊಪ್ಪದ ಸೀಮೆವಳಗೆ ಸೂರ್ಯದ ...... ಬಲರಾಮಯ್ಯನಾಯ್ಕರ ಮಗ ಕಾಳಯ್ಯ ನಾಯ್ಕರಿಗೆ ದಾಶಾಷ್ಟ ಪುರಾಣಕಧಿಕ ಪುಣ್ಯಕಥೆಯಾದ ರಾಮಾಯಣ........" ಎಂದಿದೆ. ಈ ಪ್ರತಿಯ ಕೊನೆಯಲ್ಲಿ ಮೈರಾವಣನ ಕಾಳಗವೂ ಇದೆ. ಶಕಟರೇಫವನ್ನು ಎಲ್ಲಿಯೂ ಬಳಸಿಲ್ಲ. ಪಾಠಗಳು ಚೆನ್ನಾಗಿವೆ.

(2) 'ಗ'—ಪ್ರಾಚ್ಯಕೋಶಾಗಾರದ ಕೆ. 53ನೆಯ ನಂಬರಿನ ಓಲೆಯ ಪ್ರತಿ. ಪ್ರತಿ ಸಂಪೂರ್ಣವಾಗಿದೆ. ಕೊನೆಯಲ್ಲಿ ಮಾತ್ರ ಒಂದೆರಡು ಓಲೆಗಳಿಲ್ಲ. ಕೊನೆಯ ಓಲೆಯಲ್ಲಿ "ಅಂತು ಸಂಧಿ ೧೧೨ಕ್ಕಂ ಪದನೂ ೫೦೨೨ ಕ್ಕಂ" ಎಂದಿದೆ. ೧೧೩ನೆಯ ಸಂಧಿಯಲ್ಲಿ ಕೆಲವು ಪದ್ಯಗಳಿವೆ. ಪ್ರತಿ ಶಿಥಿಲವಾಗಿದೆ. ಪ್ರತಿಯ ಕಾಲ ಗೊತ್ತಾಗುವಂತಿಲ್ಲ. ಶಕಟರೇಫದ ಪ್ರಯೋಗವಿದೆ. ಪಾಠಗಳು ಉತ್ತಮವಾಗಿವೆ.

(3) 'ಚ'—ಇದೂ ಸಹ ಪ್ರಾಚ್ಯಕೋಶಾಗಾರದ ಕೆ. 632ನೆಯ ನಂಬರಿನ ಓಲೆಯ ಪ್ರತಿ. ಪೂರ್ಣವಾಗಿದೆ. ಇದರಲ್ಲಿ ರಾಮಾಯಣವಾದ ಮೇಲೆ ಮೈರಾವಣನ ಕಾಳಗ, ಕಪೋತ ಚರಿತೆ ಎಂಬ ಎರಡು ಭಾಗಗಳಿವೆ. ರಾಮಾಯಣದ ಕೊನೆಯಲ್ಲಿ "ಅಂತು ಸಂಧಿ ೧೧೩ಕ್ಕಂ ಪದ ೫೨೪೫ ಕ್ಕಂ ಮಂಗಳಂ" ಎಂದಿದೆ. ಕಾಲದ ವಿಚಾರ ಎಲ್ಲಿಯೂ ಹೇಳಿಲ್ಲ. ಶಕಟರೇಫದ ಪ್ರಯೋಗವಿಲ್ಲ. ಪ್ರತಿ ಶುದ್ಧವಾಗಿದೆ. ಪಾಠಗಳು ಶ್ರೇಷ್ಠವಾಗಿವೆ.

(4) 'ಜ'—ಪ್ರಾಚ್ಯಕೋಶಾಗಾರದ ಕೆ. 85ನೆಯ ನಂಬರಿನ ಓಲೆಯ ಪ್ರತಿ. ಅಸಮಗ್ರ ಪ್ರತಿ. ಯುದ್ಧ ಕಾಂಡದಲ್ಲಿ ಆರನೆಯ ಸಂಧಿಯವರೆಗೂ ಇದೆ. ಶ್ರೀರಾಮ ತನ್ನ ಬಲಸಹಿತ ಲಂಕೆಗೆ ಬಂದಲ್ಲಿಗೆ ಈ ಪ್ರತಿ ಮುಗಿಯುತ್ತದೆ. ಕಾಲ ಗೊತ್ತಿಲ್ಲ. ಅಪೂರ್ವವಾಗಿ ಶಕಟರೇಫ ಪ್ರಯೋಗವಾಗಿದೆ. ಪ್ರತಿ ಜೀರ್ಣವಾಗಿದೆ. ಪಾಠಗಳು ಹೆಸರಿಸ ತಕ್ಕಂತಹವಲ್ಲ.

(5) 'ಝ'—ಇದೂ ಪ್ರಾಚ್ಯಕೋಶಾಗಾರದ ಕೆ. 289ನೆಯ ನಂಬರಿನ ಓಲೆಯ ಪ್ರತಿ. ಸಮಗ್ರವಾಗಿದೆ. ಕಾಲ ಉಕ್ತವಾಗಿಲ್ಲ. ಶಕಟರೇಫದ ಪ್ರಯೋಗ ಅಶುದ್ಧವಾಗಿದೆ. ಪಾಠಗಳು ಸಾಮಾನ್ಯವಾಗಿವೆ.

(6) 'ಟ'—ಇದು ಶ್ರೀ॥ ನಾಗರಾಜರಾಯರಿಂದ ಹೋಲಿಕೆಗೆ ಬಂದಿರುವ ಪರಸ್ಥಳದ ಓಲೆಯ ಪ್ರತಿ. ಪ್ರತಿ ಪೂರ್ಣವಾಗಿದೆ. ಶಕಟರೇಫದ ಪ್ರಯೋಗವಿಲ್ಲ. ಪ್ರತಿಯ ಕೊನೆಯಲ್ಲಿ 'ಅಂತು ಸಂಧಿ ೧೧೦ ಕ್ಕಂ' ಪದ ೫೦೭೨ಕ್ಕಂ ಎಂದಿದೆ. ಕೊನೆಯ ಓಲೆಯಲ್ಲಿ ಒಂದೆರಡು ಜಾತಕಗಳಿವೆ. ಪ್ರತಿಯೂ ಅದೇ ಸುಮಾರಿನಲ್ಲಿ ಬರೆದದ್ದಾದರೆ ಅದರ ಕಾಲ ಕ್ರಿ.ಶ. ೧೭೫೧ ಆಗುತ್ತದೆ. ಪಾಠಗಳು ಸಾಧಾರಣವಾಗಿವೆ.

(7) 'ಡ'—ಪ್ರಾಚ್ಯಕೋಶಾಗಾರದ ಕೆ. ಬಿ. 476ನೆಯ ನಂಬರಿನ ಕರಡು ಕಾಗದದ ಪ್ರತಿ. ಯುದ್ಧಕಾಂಡದ ಕೊನೆಯ ಸಂಧಿಯಲ್ಲಿ ಕೆಲವು ಪದ್ಯಗಳು ಲುಪ್ತವಾಗಿವೆ. ಶಕಟರೇಫದ ಬಳಕೆ ಇಲ್ಲ. ಪ್ರತಿಯ ಆದಿಯಲ್ಲಿ "ರಾಕ್ಷಸನಾಮ ಸಂವತ್ಸರದ ಮಾರ್ಗಶಿರ ಶುದ್ಧ ೫ರಲ್ಲು

ಕರ್ಣಾಟಕ ರಾಮಾಯಣ ಪುಸ್ತಕ ಬರೆಯುವುದಕ್ಕೆ ಪ್ರಾರಂಭ" ಎಂದಿದೆ. ಪಾಠಗಳು ಚೆನ್ನಾಗಿವೆ.

(8) 'ಙ'—ಇದು ಶ್ರೀ॥ ಎಂ. ಚಿದಾನಂದ ಮೂರ್ತಿಯವರಿಂದ ಹೋಲಿಕೆಗಾಗಿ ಬಂದಿರುವ ಪರಸ್ಥಳದ ಓಲೆಯ ಪ್ರತಿ. ಸಮಗ್ರವಾಗಿದೆ. ಕಾಲ ಉಕ್ತವಾಗಿಲ್ಲ. ಶಕಟರೇಫದ ಪ್ರಯೋಗವಿಲ್ಲ. ಕೊನೆಯಲ್ಲಿ ಮೈರಾವಣನ ಕಾಳಗವೂ ಇದೆ. ಪಾಠಗಳು ಉತ್ತಮವಾಗಿವೆ.

ಮೇಲಿನ ಪ್ರತಿಗಳಲ್ಲಿ 'ಕ' ಮತ್ತು 'ಙ'ಗಳಿಗೆ ಸಂಪೂರ್ಣ ಹೋಲಿಕೆ ಇದೆ. 'ಚ' ಪ್ರತಿಯನ್ನು 'ಗ' ಮತ್ತು 'ಡ' ಪ್ರತಿಗಳು ಅನುಸರಿಸುತ್ತವೆ. ಉಳಿದ ಪ್ರತಿಗಳು ಸಂದರ್ಭಾನುಸಾರ 'ಕ' ಮತ್ತು 'ಚ' ಪ್ರತಿಗಳನ್ನು ಹೋಲುತ್ತವೆ. ಪಾಠಗಳನ್ನು ನಿರ್ಧರಿಸುವಲ್ಲಿ 'ಚ' ಪ್ರತಿಗೇ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಈ ಎಂಟು ಮಾತೃಕೆಗಳ ಜೊತೆಗೆ ಶ್ರೀ॥ ಟಿ. ಎಸ್. ಕೃಷ್ಣಯ್ಯಶೆಟ್ಟರ ಅಚ್ಚಿನ ಪ್ರತಿಯನ್ನೂ ಅವಲೋಕಿಸಲಾಗಿದೆ. ಆದರೆ ಪಾಠಗಳನ್ನು ಉಪಯೋಗಿಸಿಕೊಂಡಿಲ್ಲ. ಎಲ್ಲ ಪ್ರತಿಗಳಲ್ಲಿಯೂ ಇಲ್ಲದೆ ಒಂದೆರಡು ಪ್ರತಿಗಳಲ್ಲಿ ಮಾತ್ರ ಕಂಡುಬಂದ ಹೆಚ್ಚಿನ ಪದ್ಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

ಎನ್. ಬಸವಾರಾಧ್ಯ

೫-೧-೧೯೫೬.

# ತೊರವೆ ರಾಮಾಯಣ

## (ಬಾಲಕಾಂಡ)

—o—

### ಮೊದಲನೆಯ ಸಂಧಿ

ಶ್ರೀಜನಕಜಾರಮಣ ವಿಮಲಸ
ರೋಜಸಂಭವಜನಕನನುಪಮ
ರಾಜಶೇಖರವಿನುತ ನಿಖಿಳಾಮರಕಿರೀಟಚಯ
ರಾಜಿತಾಮಲ ಲಲಿತಪದಪಂ
ಕೇಜನಾನತಜನದಯಾಸುರ
ಭೂಜ ತೊರವೆಯರಾಯ ನರಹರಿ ಪಾಲಿಸುಗೆ ಜಗವ ೧

ಪರಮಮಂಗಳಮೂರ್ತಿ ಪಾವನ
ಚರಿತ ಪರಮಾನಂದಮಯ ಪುರ
ಹರ ಪುರಂದರ ಪೂಜಿತಾಂಘ್ರಿಸರೋಜ ಶಶಿಮೌಳಿ
ಶರಣಜನಸುರಧೇನು ಗಂಗಾ
ಧರ ಗಜಾಸುರಮಥನ ಗೌರೀ
ವರ ತ್ರಿಯಂಬಕನೊಲಿದು ಸಲಹುಗೆ ಸಕಲ ಸಜ್ಜನರ ೨

ವನರುಹಾಸನ ವಿಶ್ವಜಗತೀ
ಜನಕ ಸನಕಾದ್ಯಖಿಳಮುನಿಜನ
ವಿನುತ [1]ವಿಬುಧ[1]ವರೇಣ್ಯ ವಾಣೀ[2]ವಧುಮುಖಾಂ[2]ಭೋಜ
ದಿನಪಘನಚಾತುರ್ಯ ಚತುರಾ
ನನ ರಜೋಗುಣ ಲೋಕವಿಭು ಭೂ
ವಿನುತ ವಿಮಲವಿರಿಂಚಿ ಮಾಳ್ಕೆಮಗ[3]ಖಿಳ[3]ಸಂಪದವ ೩

ಉದಧಿಲಂಘನನವನಿಜಾಸ
ಮ್ಮುದವಿವರ್ಧನ ವೈರಿ[4]ಭಟ[4]ಗಜ
ವಿದಳನೋದ್ಧತಸಿಂಹ ಲಂಕಾನಗರನಿರ್ದಹನ
ಕದನಕರ್ಕಶಭೀಮ ರಿಪುದಶ
ವದನದರ್ಪವಿರಾಮ ರಾಘವ
ಪದಸರೋಜಭ್ರಮರ ಭುವನಪ್ರಾಣಜಂ ವಂದೆ ೪

---

[1] ವಿಮಳ (ಚ). [2] ಮುಖಪದಾಂ (ಕ). [3] ಧಿಕ (ಚ.ಟ). [4] ಮದ (ಕ).

ಸರಸಿಜಾಂಘ್ರಿದ್ವಯದ ಕೋಮಲ
ಚರಣಕಾಂಡದ ಘನನಿತಂಬದ
ನಿರುಪಮಾಂಗದ ನಿಮ್ನನಾಭಿಯ ನಿಬಿಡಕುಚ[1]ಭರದ[1]
ವರತರಾಭಯಕರದ ಶೋಭಾ
ಕರದ ನಗೆಮೊಗದನುಪಮದ ಬಂ
ಧುರದ ಭಾರತಿ ನಿಲುಗೆ [2]ಮನ್ಮುಖಪದ್ಮಸದ್ಮದಲಿ[2] ೫

ಕರಚತುಷ್ಟಯದು[3]ದಿತಮದ[3]ಸಿಂ
ಧುರನಿಭಾನನದಮಲಲಂಬೋ
ದರದ ವರಸಿಂಧೂರಚಂದನಗಂಧಬಂಧುರದ
ಉರುಲಲಾಟದಿ ನರ್ತಿಸುವ ಕಚ
ಭರದ ಕಮನೀಯಪ್ರಭಾವಿ
ಸ್ತರವಿನಾಯಕ ಮಾಡೆಮಗೆ ನಿರ್ವಿಘ್ನದಾಯಕವ ೬

ಸುರನರೋರಗವಂದ್ಯ ನಿಗಮೋ
ತ್ಕರಕಲಾಪಾನಿಂದ್ಯ ವಿಶ್ವಂ
ಭರಪದಾಂಬುಜಭೃಂಗ ಭೂನುತಮುನಿಜನೋತ್ತುಂಗ
[4]ಶರಣಜನ ಸುರಪಾಲನಾಯತ[4]
ಪರಿಧಿ ನಿರುಪಮತತ್ವವಿದ್ಯಾ
ಶರಧಿ ಸಲಹುಗೆ ನಮ್ಮ ಮಧ್ವಾಚಾರ್ಯಗುರುರಾಯ ೭

ಆದಿಕವಿ ಕವಿರಾಜಹಂಸನ
ನಾದಿಕವಿಕುಲಕಮಲಮಿತ್ರ ಮ
ಹಾದಿವೌಕಸಪ್ರಚುರಭಾಷಾಕವಿಜನೋ[5]ತ್ತಂಸ[5]
ವೇದಗರ್ಭವರಪ್ರಸಾದಾ
ಹ್ಲಾದಕವಿ ರಘುವರಕಥಾವಿಮ
ಲೋದ[6]ದಿಂದು[6] ಮಹಾಮುನಿ ಪ್ರಾಚೇತಸಂ ವಂದೆ ೮

---

[1] ಯುಗದ (ಕ). [2] ನೀ ಬಂದೆನ್ನ ಜಿಹ್ವೆಯಲಿ (ಚ.ಡ), ನಲಿದೊಲಿದೆನ್ನ ಜಿಹ್ವೆಯಲಿ (ಜ). [3] ರಿತಹರ (ಕ.ಝ.ಣ). [4] ಶರಣುಜನ ಸುರಪಾಲನಾಯತಿ (ಗ), ಶರಣಜನ ಪುರಪಾಲನಾಯಕ (ಚ), ಶರಣುಜನ ಪರಿಪಾಲನಾನತ (ಟ), ಶರಣಜನ ಸುರಭೂಜದಾಯಕ (ಣ). [5] ತ್ತುಂಗ (ಕ.ಗ.ಟ). [6] ಯೆಂದು (ಕ), ವೆಂದು (ಜ.ಟ), ನೆಂದು (ಡ).

ಚಾರುತರ ಕರ್ಣಾಟಕದ ವಿ
ಸ್ತಾರರಾಮಾಯಣಕೆ ಕರ್ತೃ ಕು
ಮಾರವಾಲ್ಮೀಕಿಯೆ ಕಥಾಪತಿ ತೊರವೆಯಧಿನಾಥ
ವೀರನರಹರಿಯೆನಲು ಮೆಚ್ಚದ
ರಾರು ಸತ್ಕವಿತಾವಿಲಾಸದ
ಸೂರಿಗಳ ಹೃದಯಾಕರುಷಣ ಕಥಾಕುತೂಹಲವ ೯

ಪರರ ಬಗೆ ಪರರುಕ್ತಿ ಪರರು
ತ್ಕರುಷ ಪರರುನ್ನತಿಯು ಕೃತಿಯುಪ
ಹರಣೆ ಪರರುಪಮಾನ ಪರರೊಡ್ಡವದ ಪರುಟವದ
ಹರಹು ಹೊಗದಗ್ಗಳಿಕೆ ಪದಸಂ
ಚರಣೆಯಲಿ ಲಿಪಿ ತಿರುಗಿ ನೋಡದ
ಬಿರಿದು ಬೇಱೆ ಕುಮಾರವಾಲ್ಮೀಕಿಯ ವಚೋಲಹರಿ ೧೦

ಸುಕವಿಗಳ ಸುಮ್ಮಾನ ಸೂರಿ
ಪ್ರಕರದಮಲಜ್ಞಾನ ಮುನಿಕರ
ಮುಕುರ ಗುಣಿಗಳ ಗೂಢನಿಧಿ [1]ಸುರಸರ ಸುಧಾಶರಧಿ[1]
ಅಕುಟಿಲರ ಮನಮೆಚ್ಚು ಸಿರಿಹರಿ
ಭಕುತರುಮ್ಮಹದಚ್ಚು ಶಿವಸೇ
ವಕರ ಮೆಚ್ಚು ಕುಮಾರವಾಲ್ಮೀಕಿಪ್ರಬಂಧಕೃತಿ ೧೧

ಪ್ರಿಯರಿಗಪ್ರಿಯರಿಗೆ ವಿವೇಕಾ
ಶ್ರಯರಿಗತಿಮೂರ್ಖರಿ[2]ಗವಜ್ಞಾ
ನಿಯಮ[2]ರಿಗೆ ಜಾಣರಿಗೆ ಜಡರಿಗಸೂಯಭಾವರಿಗೆ
ನಯವಿದರಿಗಜ್ಞರಿಗೆ ಹರುಷೋ
ದಯದ ಹೆಂಪು ಕುಮಾರವಾಲ್ಮೀ
ಕಿಯ [3]ವಿಲಾಸ[3] ಪ್ರೌಢತರ ಕವಿತಾಚಮತ್ಕಾರ ೧೨

---

[1] ರಸಿಕರ ಸುಧಾಸರಸಿ (ಚ), ಸುರಸರ ಸುಧಾಸರಸಿ (ಝ). [2] ಗವಜ್ಞಾನ ಯುತ (ಕ), ಗಭಿಜ್ಞಾನಿಯುತ (ಝ.ಣ). [3] ಪ್ರಬಂಧ (ಗ.ಝ.ಟ).

ಧರೆಯೊಳಗ್ಗದ ರಾಘವೇಂದ್ರನ
ಚರಿತಶತಕೋಟಿಪ್ರವಿಸ್ತರ
ವರಮಹಾಚಾರಿತ್ರರಚನಾಸುಪ್ರಬಂಧದಲಿ
ಪರಮಭಕ್ತಿಯೊಳಾವನೊಂದ
ಕ್ಷರವ [1]ಕೇಳ್ದ ನರಂಗೆ[1] ಪಾತಕ
ಹರೆವುದೆಂದು ಕುಮಾರರಿಗೆ ವಾಲ್ಮೀಕಮುನಿ ನುಡಿದ ೧೩

ಭವಭವಾರ್ಜಿತ ದುರಿತಕೋಟಿಯ
ತವಿಸುವಗ್ಗದ ನಾಮ ಸರಸಿಜ
ಭವಭ[2]ವಾಚ್ಯುತರಮಲ[2]ಪದವಿಯನೀವ ಗುಣನಾಮ
ಶಿವನ ನಚ್ಚಿನ ನಾಮ ಗಿರಿಸಂ
ಭವೆಯ ನೇಮದ ನಾಮ ಸುರನರ
ಭುವನಪಾವನ ನಾಮ ಸೀತಾಪತಿಯ ಸಿರಿನಾಮ ೧೪

ಒದೆ[3]ವು[3]ದಘಸಂಹತಿಯ ತಲೆದೋ
ಱಿದಡೆ ದಹಿಸುವುದೆಡರನೌಕಿದ
ಡದುಹಿ ಬಿಸುಡುವುದುನ್ಮದಪ್ರಳಯಪ್ರಪಂಚಕವ
ಮುದವನಿಹದಲಿ ಕೊಡುವುದಚ್ಯುತ
ಪದವ ಪರದೊಳಗೀವುದಿದು ನಿಗ
ಮದರಹಸ್ಯಪುರಾಣ[4]ಸಿದ್ಧ[4]ವಿದೆಂದು [5]ಮುನಿ[5] ನುಡಿದ ೧೫

---

[1] ಕೇಳ್ದನರರ್ಗೆ (ಝ.), ಕೇಳ್ವನರರ್ಗೆ (ಡ). [2] ವೇಂದ್ರಾದ್ಯಖಿಲ (ಕ).
[3] ವಿ (ಕ.ಡ). [4] ವಚನ (ಚ), ತತ್ವ (ಡ). [5] ಹರ (ಕ.ಡ), ಶಿವ (ಜ).

# ಎರಡನೆಯ ಸಂಧಿ

---

ಸೂಚನೆ ॥ ಕುಶಲವರಿಗೆಱುಹಿದನು ಪ್ರಾಚೇ
ತಸನು ದಿವಿಜಮುನೀಂದ್ರನುಪ
ದೇಶಿಸಿದ ರಾಮಾಯಣ[1]ಸುಧಾಮಯಕಥನಕೌತುಕವ [1] ॥

ನಿಗಮತತಿ ನಿಲುಕದ ಗುಣತ್ರಯ
ಹೊಗದ ಮಾಯಾಸತಿಯ ಸೊಬಗಿನ
ಸೊಗ[2]ಸು[2] ಸೋಂಕದ [3]ಸಕಲ[3]ಸಮ್ಯಜ್ಞಾನಿಗಳ ಮತಿಯ
ಬಗೆಗೆ ಬಾರದ ಜನನಮರಣಾ
ದಿಗಳು ಹೊದ್ದದ ತೋಱಿ ತೋಱದ
ಜಗದ ದೇವರದೇವಸಿದ್ದನು ರಜತಶಿಖ[4]ರಿಯಲಿ[4] ೧

ಪರಮಪರಮೇಶಾನ ಘನತ
ತ್ಪುರುಷ ನಿರ್ಮಲವಾಮದೇವ
ಸ್ಫುರಿತ ಸದ್ಯೋಜಾತ ವಿಮಲಾಘೋರನಾಮಕದ
ಪರಮತತ್ವದ ಭಿತ್ತಿನೊಳಗಂ
ಕುರಗಳೈದಾದಂತೆ ತೋಱುವ
ಪರಮತೇಜೋಮಯನು ಮೆಱೆದನು ಪಂಚವಕ್ತ್ರದಲಿ ೨

ಶಿರದ ಚಂದ್ರನ ಭಾಳಲೋಚನ
ದುರಗಕುಂಡಲದಸಿತಕಂಠದ
ವರ[5]ಕ[5]ರಾಭಯಕರದ ಶೋಭಾಕರದ ತನುರುಚಿಯ
ನಿರುಪ[6]ಮಾಗಮ ನಿಗಮ[6] ಮಯಬಂ
ಧುರದ ಕರಿ ಶಾರ್ದೂಲಚರ್ಮಾಂ
ಬರದ ಹರನೆಸೆದಿರ್ದನಗಜಾಸತಿಯ ಮೇಳದಲಿ

---

[1] ಕಥಾಮೃತಸಾರ ಸಂಗತಿಯ (ಕ.ಣ). [2] ಡು (ಚ). [3] ವಿಮಲ (ಗ.ಚ)
[4] ರದಲಿ (ಕ.ಝ.ಟ.ಡ.ಣ). [5] ತ (ಝ.ಡ). [6] ಮಾಂಗದ ವಿಮಲ (ಗ) ಮಾಂಗದ ನಿಗಮ (ಟ).

ಸುರರು ವಸುಗಳು ಸಿದ್ಧವಿದ್ಯಾ
ಧರರು ಖಚರರು ಕಿನ್ನರರು ಕಿಂ
ಪುರುಷರುರಗರು [1]ವರ[1]ಮರುದ್ಗಣ ಯಕ್ಷ ರಾಕ್ಷಸರು
ಗರುಡ ಗಂಧರ್ವರು ದಿಶಾಧೀ
ಶ್ವರರು ದಿವಿಜಮುನೀಂದ್ರ ಮುಖ್ಯಾ
ಮರಕದಂಬಕವಿದ್ದುದೋಲಗದಲಿ ಮಹೇಶ್ವರನ ೪

ಶ್ರುತಿಗಳೇ ಕೈವಾರಿಸುವ ಮಾ
ಗತೆಯರಖಿಳಾಗಮ ಪುರಾಣ
ಪ್ರತತಿಯೇ ಪಾಠಕರು ನಿಜದಣಿಮಾದಿಗಳೆ ಚರರು
ಸ್ಮೃತಿಗಳೇ [2]ಕಳಕಳದ[2] ಕಂಚುಕಿ
ತತಿಗಳೆನಲೊಪ್ಪಿ[3]ರ್ದುದಾ[3] ಭಾ
ರತಿಯ ಹೊಗಳಿಕೆಯಲಿ ಸಭಾಸ್ಥಳವಾ ತ್ರಿಯಂಬಕನ ೫

ಆ ಸಮಯದಲಿ ಕೈಮುಗಿದು ಬಿ
ನ್ನೈಸಿದಳು ಭಾಳೇಕ್ಷ[4]ಣಂಗಾ[4]
ವಾಸುದೇವಸ್ತುತಿಪರಾಯಣೆ ಗೌರಿದೇವಿಯರು
ಕೇಶವಾದಿ ಸಹಸ್ರನಾಮವಿ
ಲಾಸದೊಳಗಧಿನಾಮಧೇಯದ
ಭಾಸುರಾನುಗ್ರಹರಹಸ್ಯವನರುಹಬೇಕೆಂದು ೬

ದೇವಿ ಕೇಳಾದಡೆ ಸಮಸ್ತ
ಸ್ಥಾವರದ ಜಂಗಮದ ಜಗತೀ
ಜೀವದಂತರ್ಯಾಮಿಯಹ ವಿಷ್ಣುವಿನ ನಾಮವನು
ಆವನುಪಮಿಸಬಹುದು ಹೊಗಳಿದು
ಠಾವುಗಾಣವು ಶ್ರುತಿಗಳಮಮ ಮ
ಹಾವಿಭುವಿನ ಮಹತ್ವ[5]ತತ್ವವನ[5]ರುವರಾರೆಂದ ೭

ಆ ಪರಾಪರವಸ್ತುವಿನ [6]ನಿಜ[6]
ರೂಪು ನಾಮದ [7]ಗಾ[7]ಢತರಮಹಿ
ಮಾಪಯೋಧಿಯ ನೆಲೆಯನರುವವರಾರು ಲೋಕದಲಿ

---

[1] ಮನು (ಕ). [2] ತತ್ಕರದ (ಜ.ಟ). [3] ದರು ಮಿಗೆ (ಗ), ರ್ದವಾ (ಜ.ಟ), ದುದು ಮಿಗೆ (ಡ). [4] ಣಗೆ ಶ್ರೀ (ಜ.ಝ.ಟ). [5] ವಿದನಿನ್ನು (ಕ). [6] ಗುಣ (ಚ). [7] ಗೂ (ಚ).

ಆ ಪುರಾತನ ಪುರುಷನಭಿಧಾ
ನೋಪಲಕ್ಷಣಲಕ್ಷಿತಗಳ ಕ
ಳಾಪರಚನೆಯ ಕಂಡೆನಗ್ಗದ ರಾಮನಾಮದಲಿ ೮

ಗಿರಿಜೆ ಕೇಳು ಸಹಸ್ರನಾಮದ
[1]ಸರಿ[1] ಕಣಾ ರಘುರಾಮಚಂದ್ರನ
ಪರಮಮಂಗಳನಾಮ ನಿರುಪಮನಿಗಮವಿಶ್ರಾಮ
ನಿರುತವಿದು ನಿಜವೆಂದು ಬಗೆ ನಿ
ರ್ಧರಿಸಿದೆವು ನಿಗಮಾರ್ಥದಲಿ ನಿನ
ಗುರುತರಾನುಗ್ರಹದ ಬೀಜಾಕ್ಷರವಿದೀಗೆಂದ ೯

ಹಾ ಮಹಾದೇವೆಂದು ಪುಳಕಿತ
ರೋಮಹರುಷಿತೆಯಾಗಿ ದೃಗುಯುಗ
ತಾಮರಸವನು ಮುಗಿದು ರಾಮನ ನೆನೆದು ಕಣ್ದೆರೆದು
ಆ ಮಹಾತ್ಮನ ಗುಣ [2]ಚರಿತ್ರೋ[2]
ದ್ದಾಮತೆಯನಾಜ್ಞಾಪಿಸೆಂದು ಸು
ಧಾಮರೀಚಿಧರಂಗೆ ಬಿನ್ನೈಸಿದಳು ಗಿರಿಜಾತೆ ೧೦

ಆದಡಾದರಿಸೆರಡನೆಯ ಯುಗ
ದಾದಿಯಲಿ ಕ್ರೌಂಚಾಟವಿಯಲಿ ಮ
ಹಾದುರಾತ್ಮವ್ಯಾಧನಿದ್ದನು ಚೋರವೃತ್ತಿಯಲಿ
ಆ ದಿವಾಂಗಣದಿಂ ಭರದ್ವಾ
ಜಾದಿಮುನಿಗಳು ಬರಲು ಕಂಡನು
ಹಾದಿಯಲಿ ಬಳಿಕಾ ಪ್ರಯಾಗಿಯ ಬದರಿಕಾಶ್ರಮದ ೧೧

ಅವರನುಗ್ರಹ[3]ದಿಂದ ತಪ[3] ಸಂ
ಭವಿಸಿತಾ ವ್ಯಾಧಂಗೆ ವಾರಿಜ
ಭವನ ದೆಸೆಯಿಂದಾಯ್ತು ಪರಮರುಷಿತ್ವವಾತಂಗೆ
ಅವತರಿಸಿದನು ಬಳಿಕ ಮುನಿಪುಂ
ಗವನು ವಲ್ಮೀಕದಲಿ ಹೆಸರಾ
ಯ್ತವನಿಯಲಿ ವಾಲ್ಮೀಕಿಮುನಿಯೆಂದಗಜೆ ಕೇಳೆಂದ ೧೨

---

[1] ಸಿರಿ (ಕ), ಪರಿ (ಟ). [2] ವ ಚರಿತೋ (ಕ). [3] ದಿಂ ತಪವು (ಕ).

ಆ ತಪೋಧನ ಬಳಿಕ ಮುನಿಸಂ
[1]ಜಾ[1]ತದಲಿ ಸೇರಿದನು ಸುಜನ
[2]ಖ್ಯಾ[2]ತನಾದನು ಸುಳಿ[3]ದವಿದಿರೊಳು[3] ಕ್ರೌಂಚಖಗಯುಗಳ
ಆ [4]ತಪೋ[4]ವರ್ಗಿಯಲೊರ್ವ ದುಷ್ಟಕಿ
ರಾತನವ ಕಂಡೆಸೆಯಲದಱೊ[5]ಳ್[5]
ಚೇತನಂ [6]ಬಡೆದೊದಱಿ ಕೆಡೆದುದು[6] ವಿಹಗಪತಿ ನೆಲಕೆ ೧೩

ಅರೆಮುಗಿದ ಲೋಚನದ ಸಂಪುಟ
ವರಳಿ ಚಲಿಸುವ ಚಂಚುಪುಟದು
ಪ್ಪರಿಸಿದಂಘ್ರಿಯು ಕೆದಱಿದೆಱಕೆಯು [7]ಬಿರಿತ[7] ತುಪ್ಪುಳಿನ
ಕೊರಳ ಮಿಡುಕಿನ [8]ಮಸೆಯ ಮುಖದಲಿ[8]
ಸುರಿವ ನೆತ್ತರ ಪತಿಯ ಸುತ್ತಲು
ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ ೧೪

ನೊಂದುದಲ್ಲಾ ಕ್ರೌಂಚಪತಗ ಪು
ರಂದರನು [9]ತಾನೆನುತ[9] ಮನದಲಿ
ನೊಂದು ನಯನ[10]ದೊಳೊಸರಿಸಿದನಶ್ರುಗಳ ಧಾರೆಗಳ[10]
ಒಂದು ನಿಮಿಷಕೆ ವಿಹಗಪತಿ ಬಳಿ
ಕೊಂದಿ[11]ದುದು ಮರಣದಲಿ[11] ಕೇಳರ
ವಿಂದಮುಖಿ[12]ಹಳವಿ[12]ಸಿದನಾ ಮುನಿನಾಥ ಮಱುಕದಲಿ ೧೫

ಶೋಕದಲಿ ಹಳವಿಸಲಿಕದು ತಾ
[13]ಶ್ಲೋ[13]ಕಪದ್ಧತಿಯಾಗಲಿಳಿದನು
ನಾಕದಿಂ ನಾರದನು ತನ್ಮುನಿವರನ ಸರಿಸದಲಿ
ಈ ಕುತೂಹಲರಚನೆಯನು ವಾ
ಲ್ಮೀಕಿಮುನಿಯಲಿ ಕಂಡು ಬಳಿಕಾ
ಶ್ಲೋಕ[14]ಸರಣಿಗೆ[14] ಶಿರವನೊಲದನು ನಾರದನು ನಗುತ ೧೬

---

[1] ಘಾ (ಕ.ಜ.ಝ). [2] ವ್ರಾ (ಗ.ಡ). [3] ದುದಿದಿರಲಿ (ಕ.ಜ.ಣ). [4] ತಳೋ (ಗ.ಡ). [5] ಳು (ಚ.ಝ.ಟ). [6] ಬಡುತೊದಱಿ ಕೆಡೆದುದು (ಕ.ಡ), ಬಿಡದೊದಱಿ ಬಿದ್ದುದು (ಚ.ಝ.ಟ). [7] ತಱೆದ (ಗ), ಬಿರಿದ (ಚ.ಜ), ಪಿರಿದ (ಡ). [8] ಜೀವಪವನನ (ಗ). [9] ಮುನಿನಾಥ (ಕ.ಗ.ಜ.ಡ). [10] ದಲೋಸರಿಸೂಸಿದ ವಶ್ರುಧಾರೆಗಳು (ಝ.), ದಲೊಸದು ಸೂಸಿದ ವಾರಿವಶ್ರುಗಳು (ಟ), ದರಾಗ ಲೊರಸಿದನಶ್ರುಧಾರೆಗಳ (ಣ). [11] ದನು ಮರಣದಲಿ (ಕ.ಗ), ದನು ಮರಣವನು (ಚ), ದುದು ಪುರಳೊದವಿ (ಜ). [12] ಶೋಕಿ (ಝ.ಟ). [13] ಶೋ (ಕ.ಚ.ಜ.ಝ.ಟ.ಣ). [14] ಶರಧಿಗೆ (ಚ.ಝ).

ಅಹುದಲೇ ವಾಲ್ಮೀಕಿಕವಿತೆಯ
[1]ವ[1]ಹಣಿ ಲೇಸೈ ಶೋಕಮುಖಸ
ನ್ನಿಹಿತ ತಚ್ಛ್ಲೋಕಪ್ರಬಂಧಸುಕಾವ್ಯ[2]ರಚನೆಯಲಿ[2]
ವಹಿಸಲೀ ಪದ್ಧತಿ ಪರಿಶ್ರುತ
ವಹುದು ಬಳಿಕೀ [3]ಲೋ[3]ಕದಲಿ ನಿನ
ಗಹುದು ಕೀರ್ತಿ ಪ್ರಥಮಕವಿಯೆಂದಜನ ಸಭೆಯೊಳಗೆ ೧೭

ಎಂದು ನಿಜವನು ತೋಱಿ ಮುನಿ ರಘು
ನಂದನೋಪಾಖ್ಯಾನವನು ಮುದ
ದಿಂದ ಸಂಕ್ಷೇಪದಲನುಗ್ರಹವಿತ್ತು ಹಂಸೆಯಲಿ
ಸಂದ [4]ನಾರದನತ್ತಲೀ[4] ಮುನಿ
ಕಂದೆಱವ ಮಾಡಿದನು ಕೇಳರ
ವಿಂದಮುಖಿ [5]ಲೋ[5]ಕದಲಿ ರಾಮಾಯಣಕಥಾಮೃತವ ೧೮

ಜಾತರಹಿತನು ಜನಿಸಿದನು ಖ
ದ್ಯೋತಕುಲದಲಿ ರಘುದಿಲೀಪ
ಖ್ಯಾತರೊಳಗಗ್ಗಳದ ದಶರಥನೃಪನ ಗರ್ಭದಲಿ
ಭೂತಳದ ದುರ್ಜನವಿತಾನವಿ
ಘಾತಿಗೋಸುಗವಗಜೆ ಕೇಳ್ ಪುರು
ಹೂತಮುಖ್ಯರ ದೂಱಿನಲಿ ರಾಮಾಭಿಧಾನದಲಿ ೧೯

ಬಾಲತನದಲಿ ತಾಟಕಿಯ ಗೋ
ನಾಳಿಯನು ಗೋಱಿದನು ಕದನದ
ಕೇಳಿಯಲಿ ಕಡುಗಲಿ ಸುಬಾಹುಪ್ರಮುಖ ರಾಕ್ಷಸರ
ಸೀಳಿದನು ಸಲಹಿದನು ಮುನಿಕುಲ
ಪಾಲ ಕೌಶಿಕನಧ್ವರವ ಪದ
ಧೂಳಿಯಲಿ ದೂಟಿದನಹಲ್ಯಾಸತಿಯ ದುಷ್ಕೃತವ ೨೦

---

[1] ರ (ಗ.ಟ.ಣ). [2] ಬಂಧದಲಿ (ಗ.ಡ). [3] ಶ್ಲೋ (ಗ), ಶೋ (ಡ), [4] ನಜಪುರಿಗತ್ತಲೀ (ಕ), ನಜಪುರಿಗತ್ತಲೀ (ಗ.ಜ). [5] ಶೋ (ಕ).

ಎರಡನೆಯ ನಮ್ಮುಗ್ರಚಾಪವ
ನೆರೆದ ನೃಪರಲಿ ಗೆಲಿದು ಸೀತೆಯ
ವರಿಸಿ ಭಾರ್ಗವನುರು ಭುಜಾದರ್ಪವನು ಪರಿಹರಿಸಿ
ಗುರುನಿರೂಪವ ಧರಿಸಿ ವನವನು
ಚರಿಸಿ ಚಂಡಖರಾ[1]ದಿಗಳ[1] ಸಂ
ಹರಿಸಿ ಕಡಲನು ಕಟ್ಟಿ ಗೆಲಿದನು ಕಲಿದಶಾನನನ ೨೧

ಭಾರವಿಳಿದುದು ಬಳಿಕ ವಸುಧಾ
ನಾರಿಗೊಱಗಿದ ಗೋಣು ಸಾಸಿರ
ನೇರಿತಾದವು ಫಣಿಪತಿಯು ಪದ್ಮಜ ಪುರಂದರರ
ಊರೊಳಗೆ ಗುಡಿಗಟ್ಟಿದವು ಘನ
ಭೂರಿಭುವನಜನೌಘ ಹರುಷದ
ವಾರಿಧಿಯಲೋಲಾಡಿದುದು ದಶಶಿರನ ಮರಣದಲಿ ೨೨

ಶರಣುಹೊಕ್ಕ ವಿಭೀಷಣನ ಪತಿ
ಕರಿಸಿ ಲಂಕಾರಾಜ್ಯವನು ಸರ
ಸಿರುಹಭವನಾಯುಷ್ಯಪರಿಯಂತಿತ್ತು ಕರುಣದಲಿ
ಸುರರನೆಲ್ಲರ ಸಲಹಿ ವಿಶ್ವಂ
ಭರೆಯ ಭಾರವನಿಳುಹಿ ಸುಜನೋ
ದ್ಧರಣ[2]ನೈದಿದನ[2]ಮಲತರ ಸಾಕೇತಪುರವರವ ೨೩

---

[1] ದ್ಯರನು (ಛ). [2] ರೈದಿದರ (ಚ.ಜ.ಟ.ಡ).

# ಮೂರನೆಯ ಸಂಧಿ

---

ಸೂಚನೆ ॥ ಮನುಮಹೀಶಾನ್ವಯದ [1]ಜನಪರ[1]
ಜನನವನು ವಾಲ್ಮೀಕಿ ಸೀತಾ
ತನುಜರಿಗೆ ವಿಸ್ತರಿಸಿದನು ಕುಶಲವಕುಮಾರರಿಗೆ ॥

ಈ ಕಥೆಯ[2]ನಾ[2] ದಿವಿಜಮುನಿ ವಾ
ಲ್ಮೀಕಿಗೆಱುಹಿದನಾ ಮುನಿಪನಿ
ಕ್ಷ್ವಾಕುಕುಲ ಕುಶಲವರಿಗೊರೆದನು ಬಹಳ ರಚನೆಯಲಿ
ಆ ಕಥೆಯ ಕೇಳೆಂದು ಸತಿಗೆ ಪಿ
ನಾಕಧರ ವಿಸ್ತರಿಸಿದನು ಬಳಿ
ಕಾ ಕಕುತ್ಸ್ಥಜಗಾದ ಮೇಲಣ [3]ಕಥೆಯ[3] ಕೌತುಕವ ೧

ಗಿರಿಜೆ ಕೇಳ್ ಪಟ್ಟಾಭಿಷೇಕೋ
ತ್ಕರುಷೆಯಾದುದು ಮೇಲೆ ವಸುಧೆಯ
ನರಪತಿಗಳೈತಂದು [4]ಕಂಡರು[4] ರಾಘವೇಶ್ವರನ
ಕರವನವರವರೊಡಬಡಿಕೆಯಲಿ
ತರಿಸಿಕೊಂಡು ಸಮಸ್ತ ಧರಣೀ
ಶ್ವರರಿಗಧಿಪತಿಯಾಗಿ ಮೆಱೆದನು ರಾಜತೇಜದಲಿ ೨

ಮಿಗಿಸಿದನು ರವಿರಾಜವಂಶಾ
ದಿಗಳ ರಾಯರ ರಾಜಧರ್ಮದ
ಸೊಗಸನಮಲಚರಿತ್ರದಲಿ ಪಾಲನೆಯಲೂರ್ವರೆಯ
ಅಗಜೆ ಕೇಳ್ ಕೆಲವಾನುದಿವಸಕೆ
ಚಿಗುರಿದುದು ದುರ್ವಾರ್ತೆಲತೆ ನಿಜ
ನಗರದಲಿ ಲಂಬಿಸಿತು ಕರ್ಣದೊಳಾ ಕಕುತ್ಸ್ಥಜನ ೩

---

[1] ರಾಯರ (ಝ.ಟ). [2] ನೀ (ಕ.ಜ.ಣ). [3] ಕಥನ (ಕ.ಜ.ಝ.ಟ.ಣ).
[4] ಕಂಡುದು (ಕ.ಜ.ಝ.ಟ.ಡ.ಣ).

ಏತಱಿರನು ಕಕುತ್ಸ್ಥಜನು ಕಾ
ಮಾತುರದಿನಸುರೇಂದ್ರ ಬನದಲಿ
ಸೀತೆಯನು ಕೊಂಡೊಯ್ದೆ ಬಿಡಲಾಱಿದೆ [1]ನಿಜಾನ್ವಯದ[1]
ಖ್ಯಾತಿಯನು ಕೆಡಿಸಿದನುಯೆಂಬೀ
ಮಾತು ಭದ್ರಕನಿಂದ ರಘುಸಂ
ಜಾತನಿದಿರಲಿ ಬಿದ್ದು[2]ದಗ್ಗದ ಕೀರ್ತಿಪಂಕ[2]ದಲಿ ೪

ಕೇಳಿ ಕಡುಸಿಗ್ಗಾಗಿ ಸಿಗುಱೆ
ದ್ವೇಳಿಗೆಯ ಚಿಂತೆಯಲಿ ಜಗದ ಜ
ನಾಳಿಗೀ ಪದ್ಧತಿ ತಿರಸ್ಕರಿಸುವುದಲೇ ಎನುತ
ಕೇಳಿಸಿದನೀ ನುಡಿಯನನುಜರ
ಮೇಳದಲಿ ಮೈತ್ರಾವರುಣಿ ಜಾಬಾಲಿ
ಗಳಲಿ ಸುಮಂತ್ರಮುಖ್ಯ ಮಹಾಪ್ರಧಾನರಲಿ ೫

ಲೋಕದುರ್ಜನರುಗಳ ರಸನಾ
ನೀಕ[3]ದು[3]ಪಹಾಸಕ್ಕೆ ತಾವಿ[4]ದು[4]
ಲೌಕಿಕ[5]ಕ್ಕಿದು[5] ದೂಷ್ಯವೆಂದವರುಗಳನೊಡಬಡಿಸಿ
ಲೋಕವಱಿಯಲು ಬಿಟ್ಟುಬಾ ವಾ
ಲ್ಮೀಕಿ[6]ಭವನದೊಳೆಂದು[6] ವಿಮಲೇ
ಕ್ಷ್ವಾಕುಕುಲಸಂಭವನು ಸೌಮಿತ್ರಿಗೆ ನಿರೂಪಿಸಿದ ೬

ಅವನಿಪನ ನೇಮದಲಿ ಬಯಕೆಯ
ನೆವದಿನಾ ಪತಿಭಕ್ತೆಯನು ಮುನಿ
ಭವನದಲಿ ಬಿಟ್ಟನು ಕಣಾ ಕೊಂಡೊಯ್ದು ಸೌಮಿತ್ರಿ
ಯುವತಿಯನು ತಾ[7]ಪವನು[7] ಮುನಿಸಂ
ತವಿಸಿ ಬಳಿಕಾ ಪುಣ್ಯಚರಿತೆಯ
ಭುವನಮಾತೆಯನುಪಚರಿಸಿಕೊಂಡಿರ್ದನೊಲವಿನಲಿ ೭

---

[1] ನಿಜಾಂಗನೆಯ (ಕ.ಝ.ಞ). [2] ದಾತನ ಕೀರ್ತಿಕಂಪ (ಕ.ಞ), ದಮ್ಮದ ಕೀರ್ತಿಪಂಥ (ಗ), ದಾ ದಕ್ಕೀರ್ತಿಪಂಕ (ಜ), ದಪ್ಪರ ಕೀರ್ತಿಪಂಕ (ಔ), ದದ್ದನು ಕೀರ್ತಿ ಪಂಕ (ಡ). [3] ದ (ಚ.ಜ.ಡ). [4] ದ (ಚ). [5] ಕೆ ಕಮ (ಕ), ಕೃತಿ (ಔ). [6] ಯಾತ್ರಮಕೆಂದು (ಝ), ಬನದೊಳಗೆಂದು (ಔ). [7] ವಿನಯ (ಚ).

ತಿಂಗಳೇಳರ ಗರ್ಭದಲಿ ರಘು
ಪುಂಗವನನಗಲಿದಳು ಮೇಲಣ
ತಿಂಗಳೆರಡಕೆ ಪೂರ್ಣವಾದುದು ಗರ್ಭವವನಿಜೆಯು
ಮಂಗಳಗ್ರಹತಾರೆ ಶುಭಲ
ಗ್ನಂಗಳಲಿ ಮುನಿಮಂದಿರದಲಿ ಕು
ರಂಗಲೋಚನೆ ಪಡೆದಳಿಬ್ಬರು ವರಕುಮಾರಕರ ೮

ಆ ಕುಮಾರರಿ[1]ಗಾಗಳಾ[1] ವಾ
ಲ್ಮೀಕಿ ವಿಸ್ತರಿಸಿದನು ವೈದಿಕ
ಲೌಕಿಕೋಕ್ತಿಗಳಿಂದ ನಿಜನಾಮಾಭಿರಂಜಕವ
ಲೋಕವಿಭು ಕುಶನೆಂದು ಮೊದಲು ವಿ
ವೇಕಿಸಿದನೆರಡನೆಯ ಶಿಶು ಶೋ
ಭಾಕಲಿತ ಲವನೆಂದು ಕರೆದನು ಕಾಂತೆ ಕೇಳೆಂದ ೯

ಆದವೆಂಟಬುದಂಗಳಿಬ್ಬರಿ
ಗಾ ದಿನಕೆ ತನ್ಮುನಿಪನುಪನಯ
ನಾದಿಕರ್ಮವ ರಚಿಸಿ [2]ಶ[2]ಸ್ತ್ರಾಭ್ಯಾಸಶಿಕ್ಷೆಯಲಿ
ವೇದಶಾಸ್ತ್ರಂಗಳಲಿ ತನ್ನೋ
ಪಾದಿಯನು ಮಾಡಿದನು ಸೀತಾ
ಹ್ಲಾದಕರ ದಿನಕರಕುಲದ ಕುಶಲವಕುಮಾರ[3]ಕರ[3] ೧೦

ಒಂದುದಿನ ಬಳಿಕವರು ಮುನಿಗಭಿ
ವಂದನಂಗೈದುಚಿತವಚನದ
ಲೆಂದರೆಲೆ ಮುನಿನಾಥ ಚಿತ್ತೈಸೆಮ್ಮವನು ಪಡೆದ
ತಂದೆಯಾರೆಮ್ಮನ್ವಯವದೇ
ನೆಂದು ಬಿನ್ನಹ ಮಾಡೆ ಮುನಿ ಸಾ
ನಂದದಲಿ ಹೇಳಲ್ಕೆ ತೊಡಗಿದನೀ ಮಹಾಕಥೆಯ ೧೧

ಜನಿಸಿದನು ಮಾನಸದಿನಬುಜಾ
ಸನನ ಪೂರ್ವದ ಸೃಷ್ಟಿಯಲಿ ನೂ
ತನವಿರಿಂಚಿ ಮರೀಚಿಮುನಿ ತನ್ಮುನಿಪನಿಂ ಬಳಿಕ
ಜನಿಸಿದನು ಕಶ್ಯಪನು ಕಶ್ಯಪ
ಮುನಿಯ ದೆಸೆಯಿಂದಾದುದೀ ಮೇ
ದಿನಿಯು ವಿಸ್ತರವೆಂದು ಮುನಿ ನುಡಿದನು ಕುಮಾರರಿಗೆ ೧೨

---

[1] ಗಾ ಮಹಾ (ಕ), ಗೊಲವಿನಲಿ (ಟ). [2] ಶಾ (ಗ.ಝ). [3] ರಿಗೆ (ಚ.ಝ.ಟ.ಡ).

ಆ ಮಹಾಮುನಿವರನ ಬಸುಱಿಲಿ
ತಾಮರಸಸಖನುದಿಸಿದನು ಬಳಿ
ಕಾ [1]ಮಹೋತ್ಪಲ[1]ಬಾಂಧವಂಗಾ ಮನುಮಹೀಪಾಲ
ಭೂಮಿಯಲಿ ಜನಿಸಿದನು [2]ನಿಗಮ[2]
ಸ್ತೋಮಕಾದಿಪ್ರಣವದವೊಲು
ದ್ದಾಮ ಕುಕ್ಷಿನೃಪಾಲ ಜನಿಸಿದನಾ ಮಹೀಪತಿಗೆ ೧೩

ಕೇಳಿದೈ ಕುಶ ಬಳಿಕ ಕುಕ್ಷಿನೃ
ಪಾಲನಿಂದಿತ್ತಲು ವಿಕುಕ್ಷಿನೃ
ಪಾಲನರಸಾದನು ಕಣಾ ಲವ ಕೇಳು ಭೂತಳಕೆ
ಮೇಲೆ ತನ್ನೃಪಗರ್ಭವರ ವರು
ಣಾಲಯದೊಳುದ್ಭವಿಸಿದನು ಭೂ
ಪಾಲಚೂಡಾರತ್ನ[3]ನ[3]ಮಳೇಕ್ಷ್ವಾಕುನಾಮದಲಿ ೧೪

ಆ ಪರಂಪರೆಯನ್ವಯದಲಿ ದಿ
ಳೀಪನೃಪ ಸಂಭವಿಸಿ ಸಪ್ತ
ದ್ವೀಪಕಧಿಪತಿಯಾದನಲ್ಲಿಂ ಮೇಲೆ ರಘುವೆಂಬ
ಭೂಪನಾಳಿದನವನಿಯನು ರಾ
ಜೋಪಲಾಲಿತ ಧರ್ಮಮಾರ್ಗದ
ಲಾ ಪರಂತಪಗಾದನಾತ್ಮಜನಜಮಹೀಪಾಲ ೧೫

ಅಜನೃಪಾಲಕನರಸುತನ ಭೂ
ಭುಜರ ಮಿಕ್ಕುದು ಪೂರ್ವದಮಳಾಂ
ಬುಜಸಖಾನ್ವಯದಮೃತಕರವಂಶಾಭಿಜಾತಕರ
ಭುಜಪರಾಕ್ರಮಚಕ್ರಿಯನು ದಿಗು
ವಿಜಯವಿಕ್ರಮಚಕ್ರಿಯನು ನೃಪ
ಸೃಜಿಸಿದನು [4]ನಿಜಮ[4]ಹಿಳೆಯಲಿ ದಶರಥಮಹೀ[5]ಪತಿಯ[5] ೧೬

ದಾಶರಥಿಸುತ [6]ಕೇಳ್ ದಧೀಚಿಯ[6]
ಕೋಸಲದ ನೃಪಸುತೆಯ ಮಗಧಮ
ಹೀಶತನುಜೆಯ [7]ಕೈಕೆಯಕ್ಷ್ಮಾ[7]ಪಾಲನಂದನೆಯ

---

[1] ಮಹಾಂಬುಜ (ಕ). [2] ಭುವನ (ಕ). [3] ವಿ (ಕ), ವ (ಗ). [4] ತನ್ಮ (ಚ). [5] ವರನ (ಕ). [6] ಕೇಳು ವಿಜಯದ (ಕ), ಕೇಳು ಬಳಿಕೀ (ಝ.ಟ). [7] ಕೈಕಯಕ್ಷಮ (ಕ), ಕೇಕಿಯಕ್ಷ್ಮಾ (ಗ).

ಆ ಸುತಂಗುಪ[1]ಯಮವ[1] ಮಾಡಿ ಮ
ಹೀಶ ಪಟ್ಟವ ಕಟ್ಟಿ ಸಾರ್ದನು
ವಾಸವನ ಗದ್ದುಗೆಯನಂದಿಂಗಜಮಹೀಪಾಲ ೧೭

ಬಳಿಕ ನಿಂದುದು ರಾಜ್ಯಲಕ್ಷ್ಮಿಯ
ವಿಲಸದಭಿನವತೇಜ ದಿಗುವಂ
ಡಲಪರೀತ ಪುರಂದರನ ವೈಭವಕೆ ಮಿಗಿಲೆ[2]ನಿಸಿ[2]
ಇಳೆಯೊಳಿನ್ನಾರಧಿಕರವನಿಪ
ತಿಲಕರಲಿ ಷೋಡಶನೃಪಾಲರ
ಲುಳಿದವರ ಹೇಳದಿರು ನಿಮ್ಮವೊಲೆಂದನಾ ಮುನಿಪ ೧೮

ಶಿಶುತನದಲಿ ಸಮಸ್ತವಿದ್ಯಾ
ವ್ಯಸನಿಗಳು ಯೌವನದೊಳನುಭವ
ವಿಷಯಿಗಳು ಮುಪ್ಪಿನಲಿ ಮುನಿಮಾರ್ಗಾನುವರ್ತಿಗಳು
ಅಸುಪರಿತ್ಯಾಗದಲಿ ಯೋಗದ
ಬೆಸುಗೆಗಳನುಳ್ಳವರು ಕೇಳೈ
ಕುಶನೆ ನಿಮ್ಮನ್ವಯದ ರಾಯರು ಲವನೆ ಕೇಳೆಂದ ೧೯

ಕುಲದಲಧಿಕರು ಕೀರ್ತಿಯಲಿ ವೆ
ಗ್ಗಳರು ಧರ್ಮಪಥಂಗಳಲಿ ಸ
ಮ್ಮಿಳಿತರಂಭೋರಾಶಿಪರಿವೃತ[3]ವಿಜಯ[3]ವಲ್ಲಭರು
ಬಲವಿರೋಧಿಸಹಾಯ[4]ಶೌರ್ಯಾ
ಕಲಿತರಿನಕುಲದವನಿಪಾಲಕ[4]
ತಿಲಕರವರಿಂದೀ ಮಹೀಪತಿ ಹತ್ತುಮಡಿಯೆಂದ ೨೦

ಚರಿಸುವುದು ರಥವೊಂದು [5]ವಾಗೀ
ಶ್ವ[5]ರನ ಪುರಿಗಿಂದ್ರಾಗ್ನಿಯಮಕ
ಬುರ್ಗ[6]ವರುಣ ವಾಯುವ್ಯ[6]ಧನದೀಶಾನ್ಯಪುರಿಗಳಿಗೆ
ಉರಗರಾಜನ ನಗರಿಗದಱಿಂ
ಧರೆಯೊಳಗೆ ಹೆಸರಾದುದಾ ಭೂ
ವರಶಿರೋರತ್ನಂಗೆ ದಶರಥನೆಂಬ ಗುಣನಾಮ ೨೧

---

[1] ನಯವ (ಕ). [2] ನಲು (ಚ). [3] ವಿಷಯ (ಕ), ಧಾತ್ರಿ (ಟ). [4] ಶೂರರು ನಲವಿನಿಂದಿನಕುಲದ ಭೂಮಿಪ (ಚ). [5] ವಾಣೀವ (ಕ). [6] ಸಮುದ್ರಾಧೀಶ (ಚ).

ತೆರುವರೀತಗೆ ಕಪ್ಪವನು ಸಾ
ಗರಪರೀತ ಸಮಸ್ತಪೃಥ್ವೀ
ಶ್ವರರು ಪುರುಹೂತಾದಿ ನಾನಾ ಲೋಕಪಾಲಕರು
ನರಭುಜಂಗಮರಾಯ[1]ರಾ[1] ದಶ
ಶಿರನು ತಪ್ಪಿಸಿ ಖಂಡೆಯದ ಮೈ
ಸಿರಿಯದೆಂತುಟೊ ನಿಮ್ಮ ದಶರಥಸಾರ್ವಭೌಮಂಗೆ ೨೨

ಹಗಲು ಸಂಧ್ಯಾರಾಗದೆಸಕದ
ಬಗೆಯ ವಿಭ್ರಾಂತಿಯಲಿ ನೀರಜ
ಮುಗಿವವಾಶಾಜನಿತ ದಾವಜ್ವಾಲೆಯೆಂದಳುಕಿ
ದಿಗಿಭವಂಜುವವರಿನ್ನೃಪರು ಮೈ
ದೆಗೆವರುಲ್ಕಾಪಾತಭೀತಿಯ
ಬಿಗುಹಿನಲಿ ಬಹಳಪ್ರತಾಪವದೆಂತೊ ದಶರಥನ ೨೩

ಶರಧಿಪರಿಧಾವಳಯದವನೀ
ಶ್ವರರ ಮಕುಟಮರೀಚಿಮಂಜರಿ
ಚರಣನಖಮುಕುರಂಗಳಲಿ ಬಿಂಬಿಸುವ[2]ವನವರತ[2]
ಅರಿಪಿಕಾರದಲಾವನೊರ್ವನ
ಶಿರವ ನೆಗಹುವನಿಲ್ಲವೇನ
ಚ್ಚರಿಯೊ ಮಹದುದಿತಪ್ರತಾಪ ಪತಂಗವಂಶಜನ ೨೪

ಜಲಧಿ ಮೊಗೆಯಲಿ ಮಹಿಯಲಿನಮಂ
ಡಲವು ಬೀಳಲಿ ಬಿಸುಡಲವನೀ
ತಳ[3]ವನಾಶಾದಂತಿ[3] ಧರೆಗೊರ್ಗುಡಿಸಲಮರಾದ್ರಿ
ಹಳಿವು ಹೊರದಾ ನೃಪ ಸುಭಾಷಾ
ಕಲಿತಸತ್ಯಕೆ ನಿಮ್ಮ ಭಾಸ್ಕರ
ಕುಲಲಲಾಮಂಗಾರು ಸರಿ ಸುರನರಭುಜಂಗರಲಿ ೨೫

ಧನಪತಿಯ ಸಿರಿ ವಾರಿಧರನಾ
ಹನನ ಭೋಗ ಸಮೀರಣನ ಬಲ
ವಿನನ ತೇಜ [4]ಸಮಾನ[4]ವಿತರಣ ಚಾರುಚಂದ್ರಮನ

---

[1] ರೊಳು (ಕ), ನಾ (ಗ.ಚ). [2] ನವರತುನ (ಕ), ನನವರತ (ಟ).
[3] ವನು ರಸಾತಳಕೆ (ಝ.ಟ). [4] ವನೂನ (ಗ.ಟ).

ವನಧಿಪನ ಗಾಂಭೀರ್ಯ ರವಿನಂ
ದನನ [1]ನಡವಳಿ[1] ಧರೆಯು ಸ್ಥೈರಣೆ
ಯಿನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ ೧೬

ಹುಸಿನುಸಿಳು ಡೋಳ್ಯಾಸ ಹಿಂಸಾ
ವ್ಯಸನವಾರಡಿ ಬಂದಿ ದಳದುಳ
ವಸುರಭಯ ದುರ್ಭಿಕ್ಷ ನಾನಾವರ್ಣ[2]ಸಮ್ಮಿಶ್ರ[2]
[3]ಹಿಸುಣ[3] ಧರ್ಮದ್ರೋಹ ರುಜೆ ಕೈ
ಮಸಕವಳಿವನ್ಯಾಯವೆಂ[4]ಬಿವ
ರೆಸಕ[4] ಹೊದ್ದ[5]ದಯೋಧಿಪನ ಧರಣೀತಳಾಗ್ರದಲಿ[5] ೧೭

ನಿಂದೆ ಹೊದ್ದದು ನಡೆವಳಿಗಳಲಿ
ಕುಂದು ಹೊರದುಬ್ಬ[6]ರದುಪಪ್ಲವ[6]
ಸಂಧಿಸದು ನೃಪಬಾಧೆ ಬಾಧಿಸದಧಿಕದುರ್ಭಯದ
ಬಂದಿಹೊಗದಾಸಱು ವಿತಾಳಿಸಿ
ನಿಂದಿರದು ನೆಲೆಗೊಳ್ಳದಾ [7]ಜನ[7]
ವೃಂದದಲಿ ಕಟ್ಟಾ[8]ಸೆ[8] ದಶರಥನೃಪನ ರಾಜ್ಯದಲಿ ೧೮

ಮುಳಿಯು[9]ರಿತರರ[9] ಸಿರಿಗೆ ಹರಣದ
ಲಳಿಯರಾ ಪರಮಾಯುವಿ[10]ನ[10] ಕ
ಟ್ಟಳೆಯೊಳಲ್ಲದೆ ನೋಡರನ್ಯವಧೂಜನಾವಳಿಯ
ಕಲಸರಘುಸಂ[11]ಹ[11]ತಿಯ ಸುಜನರ
ನಿಳಿಕೆಗಾಣರಸೂಯೆಯಲಿ ಮನ
ವೆಳಸರಲ್ಲಿಯ ವಿವಿಧವರ್ಣದ ವಿಷಯದಖಿಳಜನ ೧೯

ಇಳೆಯೊಳುಳ್ಳ ಸಮಸ್ತದೇಶಂ
ಗಳಿಗೆ ಮಂಗಳತರವಲೇ ಕೋ
ಸಲಮಹಾವನಿ [12]ಕೌ[12]ಸಲಾವತಿ ನೃಪ ಪುರಂಗಳಿಗೆ
ತಿಲಕನಲ್ಲಾ ರಾಯರೊಳಗ
ಗ್ಗಳನಲಾ ದಶರಥ ನೃಪಾಲಕ
ನೆಲೆ ರಘುಕ್ಷಿತಿಪಾಲಸುತ ಕೇಳೆಂದು ಮುನಿ ನುಡಿದ ೨೦

---

1 ದಳವೀ (ಕ). 2 ಸಂಕಾಶ (ಕ). 3 ಹಿಸುಣು (ಗ). 4 ಬೀ ಹೆಸರು (ಟ).
5 ದು ನೃಪನ ರಾಷ್ಟ್ರದ ಸುತ್ತುವಳಯದಲಿ (ಚ), ವು ನೃಪನ ರಾಜ್ಯದ ಸುತ್ತು ವಳಯದಲಿ (ಝ.ಟ). 6 ದಪಕ್ಷವ (ಝ.ಟ). 7 ಸಱು (ಗ). 8 ಜ್ಞೆ (ಚ).
9 ರೀತನ (ಚ.ಜ). 10 ಗೆ (ಚ). 11 ತ (ಗ). 12 ಕೌಂ (ಗ), ಕಂ (ಚ).

ಸುರನರೋರಗ ಭುವನಲಕ್ಷ್ಮಿಯ
ಸುರುಚಿರದ ಮುಕ್ತಾಫಲದ ಬಂ
ಧುರದ ಕಾಂಚೀದಾಮದಂತಿರೆ ಸಕಲ ವಿಭವದಲಿ
ಅರಸ ದಶರಥಚಕ್ರವರ್ತಿಯ
ಧರೆಯ ಪರಿವೃತಕೀರ್ತಿಲತೆ ವಿ
ಸ್ಫುರಿಸುತಿರ್ದುದು ಸಕಲ ಜನಪದ ಜನದ ಕಣ್ಮನಕೆ ೩೧

———

# ನಾಲ್ಕನೆಯ ಸಂಧಿ

ಸೂಚನೆ : ಲಲಿತ ಸಂತಾನಾಭಿವೃದ್ಧಿಯ
[1]ಬೆಳೆಗೆ[1] ಬಳಲುವ ಭೂಪತಿಗೆ ಕೈ
ಗೊಳಿಸಿದನು ಕಾಮ್ಯಾಧ್ವರವನು ವಸಿಷ್ಠ ಮುನಿರಾಯ

ಕೇಳಿದೈ ಕುಶ ನಿಮ್ಮ ಮುತ್ತಯ
ನಾಳುತಿರ್ದನಯೋಧ್ಯೆಯನು ಚಿರ
ಕಾಲವೊಂದಾನೊಂದುದಿನ ದರ್ಪಣದ ನೋಟದಲಿ
ತಾಳಿದನು ಚಿಂತೆಯನು ಸಂತತಿ
ಮೇಲೆ [2]ಮೈಗೊಡದಧಿಕ[2]ವಾರ್ಧಿಕ
ಕಾಲವಿಕೃತಾಕಲಿತಪಲಿತಜರಾತಿರೇಕದಲಿ ೧

ವ್ಯರ್ಥವಾಯ್ತುಕಟಕಟ ಜನ್ಮ ನಿ
ರರ್ಥವಾಯ್ತನ್ವಯದ ಸಿರಿ ಪರ
ಮಾರ್ಥನಾಪುತ್ರಸ್ಯ[3]ಲೋಕೋಸ್ತೀತಿ ಎಂಬುದಿದು[3]
[4]ಸಾ[4]ರ್ಥವಾಯ್ತೆನಗಧಿಕಸುಗತಿ
ಸ್ವಾರ್ಥಸಿದ್ಧಿಗೆ ಸಲ್ಲದವ[5]ನಿಗ
ನ[5]ರ್ಥಭಾಜನನಾದೆನೇ [6]ತಾನೆನುತ ಬಿಸುಸುಯ್ದ[6] ೨

ಮಕ್ಕಳಿಲ್ಲದ ಸಕಲಸಿರಿ ಶವ
ಕಿಕ್ಕಿದಮಳಾಭರಣವಿಭ್ರಮ
ಮಕ್ಕಳಿಲ್ಲದ ಸೊಬಗು ಪತಿಶೂನ್ಯಾಂಗನಾ ವಿಭವ
ಮಕ್ಕಳಿಲ್ಲದ ನಾರಿಯರು ನರ
ಕಕ್ಕೆ ಸರಿವರು [7]ಸಾಕಿದೇತಕೆ
ಯ[7]ಕ್ಕಟಾ ಕಡುಗೇಡಕೆಟ್ಟೆನು ಶಿವಶಿವಾ ಎಂದ ೩

---

[1] ನೆಲೆಗೆ (ಝ.ಟ). [2] ಮೇಲೈತಪ್ಪ (ಝ.ಟ.ಡ). [3] ಲೋಕಾಸ್ತಿತ್ವವೆಂಬುದನು (ಕ), ಲೋಕೋನಾಸ್ತಿಯೆಂಬುದಿದು (ಜ.ಟ.ಡ.ಣ), ಲೋಕಸ್ಥಿತಿಗಳೆಂಬುದಿದು (ಝ). [4] ಸ್ವಾ (ಕ.ಜ.ಟ.ಡ.ಣ). [5] ನುನಿರ (ಕ). [6] ತಾನೆಂದು ಚಿಂತಿಸಿದ (ಕ). [7] ನಾರಿಯರು ತಾನ (ಕ), ಗಡ ಮಹಾದೇವ (ಟ).

ಏನುಗತಿ ನಿಜವಂಶವಂಧ್ಯಾ
ಮಾನಿನಿಗೆ ಪತಿಯಾದೆನೇ ಗತ
ಸೂನುವಿವನೆಂದೆನ್ನ ಹೊಗಿಸರು ಸ್ವರ್ಗವನು ಸುರರು
ಏನಮಾಡುವೆನೇನು ದಿಕ್ಕೆನ
ಗೇನು ಹದನೆಂದಳಲಿ ಬಳಲುವ
ಹೀನ[1]ಹೃದಯ[1]ನನುಪಚರಿಸಲು ವಸಿಷ್ಠನೈತಂದ ೪

ಭೂಮಿಜಾಸುತ ಕೇಳ್ ವಸಿಷ್ಠಮ
ಹಾಮುನೀಂದ್ರನ ಕೂಡೆ [2]ಬಂದರು[2]
ವಾಮದೇವಮು[3]ನೀಶ[3] ಮುನಿಜಾಬಾಲಿಗಳು ಸಹಿತ
ವ್ಯೋಮಕೇಶ ವಿರಿಂಚಿ ಲಕ್ಷ್ಮೀ
ಧಾಮರಿವರೆನಗೆಂಬ [4]ಭಾವದ[4]
ಲಾ [5]ಮಹೀಪತಿಯೆಱಗಿದನು ಮುನಿವರರ[5] ಚರಣದಲಿ ೫

ನಿಮಿಸುತಾಸುತ ಕೇಳು ನಿಗಮ
ಕ್ರಮದಲಾ ಮುನಿವಂಶಲಕ್ಷ್ಮೀ
ರಮಣರನು ಸತ್ಕರಿಸಿದನು ಸನ್ಮಾನಪೂಜೆಯಲಿ
ದ್ಯುಮಣಿವಂಶಲತಾವಿಭಿನ್ನ
ಭ್ರಮೆಯ ಭೂಪನ ಕಂಡು ಕರುಣದ
ಮಮತೆಯಲಿ ಮಧುರೋಕ್ತಿಯಲಿ ನುಡಿಸಿದರು ನೃಪವರನ ೬

ಮೊಗದ ದುಗುಡವಿದೇನು ಮನದು
ಬ್ಬೆಗವಿದೇನನುತಾಪಭೇದ
ಸ್ಥಗಿತಜಾಡ್ಯದ ಜಂಜಡವಿದೇನೆಂದು ಬೆಸಗೊಳಲು
ಒಗುವ ಕಂಬನಿಗಳಲಿ ಕಂಠವ
ಬಿಗಿದ [6]ಸೆರೆ[6]ಗಳ ಸೇದುವಕ್ಕೆಯ
ವಿಗತಪರಿತೋಷಿತನು ಪಾವನತರರಿಗಿಂತೆಂದ ೭

ಸುತವಿಹೀನರಿಗಿಲ್ಲ ಗಡ ಸುರ
ಪತಿಯ ಭದ್ರಾಸನ ಮಹಾಕ್ರತು
[7]ತತಿಗಳೊಳ್ ಮಿಗೆ[7] ಸಲ್ಲರವರ್ಗಳು ಗಡ ಸುಶಾಸ್ತ್ರದಲಿ

---

[1] ಧೈರ್ಯ (ಟ). [2] ಬಳಿಕಾ (ಕ), ಬಂದುದು (ಟ). [3] ನೀಂದ್ರ (ಕ.ಟ).
[4] ನಾಮದ (ಟ). [5] ಮಹಿಪನೆಱಗಿದನು ತನ್ಮುನಿವರನ (ಟ). [6] ಸೆಲೆ (ಚ).
[7] ಪತಿಗಳೊಳಗೆ (ಕ), ಪತಿಗಳೊಳಗುಱೆ (ಟ).

ಗತಿಯುದಾವುದು ತನಗೆ ವಂಶೋ
ನ್ನತಿಯ ಹೆಚ್ಚುಗೆಗೇನು ಹದನೆಂ
ದತಿಶಯದ [1]ಶೋಕ[1]ದಲಿ ಕಂಬನಿದುಂಬಿದನು ಭೂಪ ೮

ಬಿಡದೆ ಬಂದಿನಕುಲದ ಸಿರಿಯಿಂ
[2]ದೆಡೆಹರಿಸಿತಿ[2]ಕ್ಷ್ವಾಕು ವಂಶದ
ಕಡಲು ಬಱತುದು ಬೇರುಬಿಟ್ಟುದು ರಘುಕುಲದ್ರುಮದ
ನಡವಳಿಯು ಗುಣವೋ ಪುರಾಕೃತ
ದೊಡಲ ದುಷ್ಕೃತಫಲವೋ ತನಗೆಂ
ದಡಿಗಡಿಗೆ ಮಱುಗಕ್ಕೆಯಲಿ ಮಱುಗಿದನು ನರನಾಥ ೯

ಹೊರೆದೆನಕಟಾ ತನುವನಿದ ಸೂ
ಕರನ ಶುನಕನವೋಲು ಕಾಮಾ
ತುರನವೊಲು ಕಂಗಾಣದಾದೆನು ಸುಗತಿ ಸಂಪದಕೆ
ಎರವಿಗನು [3]ತಾ[3]ನಾದೆನಿಹಪರ
ವೆರಡರಲಿ ಜೀವಾವಸಾನಕೆ
ಹರಹಿಕೊಂಬನಲಾ ಕೃತಾಂತನೆನುತ್ತ [4]ಬಿಸುಸುಯ್ದ[4] ೧೦

ಸಂತವಿಸು ರಾಜೇಂದ್ರ ಚಿತ್ತದ
ಚಿಂತೆಯಿದು ತಾನ್ಯೆಸಲೇ ನಿನ
ಗಂತಕನ ಭಯವಿಲ್ಲ ಸಾಕಾ ಮಾತದಂತಿರಲಿ
ಸಂತತಿಯ ಸೌಭಾಗ್ಯ ಸಿರಿ[5]ಯ ನಿ
ತಾಂ[5]ತಕಿದೆಲಾ ನಿನಗೆ ಸಪ್ತಸು
ತಂತು ನಿರುಪಮ ಪುತ್ರಕಾಮೇಷ್ಟಿ ಪ್ರಸಿದ್ಧಕದ ೧೧

ಇಷ್ಟವಹುದೆಲೆ ನೃಪತಿ ಕೇಳ್ ಕಾ
ಮೇಷ್ಟಿಯಲಿ ನಿನಗಾವ ನೆನಹೇ
ನೆಷ್ಟುದೊಡ್ಡಿತು ಬಿಡು ವೃಥಾಚಿಂತಾಮನೋವ್ಯಥೆಯ
ಕಷ್ಟವೃತ್ತಿಯ ನೃಪನೆ ನೀ ಸುರ
ವಿಷ್ಟಪದ ಸುರಪತಿಯ ಮಣಿಮಯ
ವಿಷ್ಟರದ ಸಿರಿ ಸೇರುವುದು ಸಂದೇಹವೇ[6]ನಿದಕೆ[6] ೧೨

---

[1] ಖೇದ (ಕ ಟ). [2] ದಡರಿಹೋಯ್ತು (ಕ). [3] ನಾ (ಕ). [4] ಶೋಕಿಸಿದ (ಟ). [5] ವೃತ್ತಾಂ (ಕ), ಯ ನಿಜಾಂ (ಜ). [6] ನೆಂದ (ಚ).

ಎಂದು ಮೂವರು ಮುನಿಗಳಜನೃಪ
ನಂದನನ [1]ದುರ್ಭರದ[1] ದುಗುಡದ
ದಂದುಗವನಪಹರಿಸಿ ಬಿಜಯಂಗೈದರಾಶ್ರಮಕೆ
ಕಂದ ಕೇಳ್ಳೈ ಬಳಿಕ ಪರಮಾ
ನಂದವನು ಪಡೆದಾ ಮಹಿಪನರ
ವಿಂದನಾಭನ ಭಜಿಸಿದನು ನಿಜಭಾವಶುದ್ಧಿಯಲಿ ೧೩

---

[1] ನಿರ್ಬಂಧ (ಕ).

# ಐದನೆಯ ಸಂಧಿ

**ಸೂಚನೆ :** ರಾಯ ದಶರಥನೃಪತಿಗೆಖಿಳೋ
ಪಾಯಕುಶಲ ಸುಮಂ[1]ತ್ರ[1]ಕನು ಮುನಿ
ರಾಯರಾಜಿತ ಋಷ್ಯಶೃಂಗನ ಕಥೆಯ ವರ್ಣಿಸಿದ

ಧರಣಿಜಾಸುತ ಕೇಳು ದಶರಥ
ಧರಣಿಪತಿ ರವಿಕುಲದ ಪಾರಂ
ಪರೆಯ ಪರಮಾಪ್ತಪ್ರಧಾನರ ಕರೆಸಿ ಮುನಿವರರ
ವರವಚೋಭಿಪ್ರಾಯ ಮತವಿ
ಸ್ತರಣವನು ಸಿದ್ಧಾರ್ಥಮುಖ್ಯರಿ
ಗೊರೆದು ನಿಮ್ಮಭಿಮತವದೇನೆಂದರಸ ಬೆಸಗೊಂಡ ೧

ಕ್ರತುವ ಕೈಕೊ ಜೀಯ ಸತ್ಯ
ವ್ರತ[2]ರಲಾ ನುಡಿ[2] ತಪ್ಪುವುದೆ ಮುನಿ
ಪತಿವಸಿಷ್ಠ[3]ನ[3] ವಾಮದೇವ ಮಹಾತಪೋಧನರ
ವಿತತ[4]ಕಾಮ್ಯಮಹಾ[4]ಧ್ವರಕೆ ದೀ
ಕ್ಷಿತನು ನೀನಾಗಖಿಳರಾಜ
ಪ್ರತತಿಯನು ಬರಿಸವೆವು ತರಿಸುವೆವಖಿಳವಸ್ತುಗಳ ೨

ಎಣಿಕೆಯಾವುದು [5]ಜೀಯ[5] ಧರ್ಮದ
ಕಣಿಯಲಾ ನೀ ನಿನ್ನ ಭಾಗ್ಯಕೆ
ತೃಣ ಕಣಾ ಸ್ವರ್ಗಾದಿಭೋಗದ ಸಕಲ ಸೌಭಾಗ್ಯ
ಗುಣಗಣಾಲಂಕೃತನ ಸುರಮುನಿ
ಗಣನತಾಂಘ್ರಿದ್ವಯನ ನಾರಾ
ಯಣನ ಕೃಪೆ ನಿನಗುಂಟೆನುತ ಕೊಂಡಾಡಿದರು ನೃಪನ ೩

---

[1] ತ (ಚ.ಜ.ಟ), ಈ ಪ್ರತಿಗಳಲ್ಲಿ ಎಲ್ಲಾ ಕಡೆಯೂ ಹೀಗೇ ಬರುತ್ತದೆ. [2] ರು ನುಡಿದುದು (ಕ). [3] ಸು (ಜ.ಡ.ಣ). [4] ವಾಕ್ಯಮಹಾ (ಕ), ಸುತಕಾಮ್ಯಾ (ಜ). [5] ನಿನಗೆ (ಜ).

ಬಳಿಕವರ ಮತದಿಂದ ಮನುಕುಲ
ತಿಲಕನತಿಸಂತೋಷದಲಿ [1]ನಿ
ಶ್ಚಲತೆಯಲಿ[1] ಕೈಕೊಂಡನಾ [2]ಕಾಮಿತ[2]ಮಹಾಧ್ವರವ
ಕಳುಹಿದನು ನಯದಲಿ ಸುಮಂತ್ರಕ
ನುಳಿಯೆ ಮಿಕ್ಕ ಮಹಾಪ್ರಧಾನಾ
ವಳಿಯನಾಪ್ತಾಳೋಚನೆಯಲಾ ಮಂತ್ರಿಗಿಂತೆಂದ ೪

ಎಲೆ ಸುಮಂ[3]ತ್ರ ಸು[3]ಮಂತ್ರಮುಖದಲಿ
ಫಲಿಸುವುದೆ ಸುತಲಾಭವನ್ವಯ
ಲಲಿತಲತೆ ಕುಡಿಗೊಂಬುದೇ ಕಾಮೇಷ್ಟಿಯಜ್ಞದಲಿ
ತೊಲಗಿ[4]ದೆಮ್ಮ[4]ನ್ವಯದ ರಾಜಾ
ವಳಿ[5]ಯೊಳಾದುದೆ[5] ಪುತ್ರಸಂತತಿ
ಸುಲಭವಹುದೇ ನಮಗೆನುತ ಬೆಸಗೊಂಡನಾ ಭೂಪ ೫

ಅರಸ ಕೇಳು ಸನತ್ಕುಮಾರನು
ಸರಸಿರುಹಸಂಭವನ ಸಭೆಯಲಿ
ಸುರಮುನೀಂದ್ರರ [6]ಮಧ್ಯದಲಿ[6] ನಿಮ್ಮನ್ವಯಾಗತದ
ಪರಿವಿಡಿಯ ರಘುವಂಶವನು ವಿ
ಸ್ತರಿಸಿದನು ವಿಮಳಾಗ್ನಿವರ್ಣನ
ನಿರುಪಮದ ಸಾಮ್ರಾಜ್ಯಪರಿಯಂತಾದಿಕಾಲದಲಿ ೬

ಮೇಲೆ [7]ತಾಂಡವಪಿ[7]ತನ ಶಾಪವಿ
ಶಾಲವಚನದ ಪುತ್ರಲಾಭಫ
ಲಾಳಿ ದೊರಕದೆ ಮಾಣದಿದು ತಾ [8]ಸುಪ್ರ[8]ಸಿದ್ಧವಲೆ
ಕೇಳಿ ಬಲ್ಲೆ[9]ನಿದಲ್ಲದ[9]ಖಿಳ ಸು
ರಾಳಿಗಳ ದೂಱಿನಲಿ [10]ಲಕ್ಷ್ಮೀ[10]
ಲೋಲ ನಿನ್ನುದರದಲಿ ಜನಿಸುವನೆಂದು ಪೂರ್ವದಲಿ ೭

---

[1] ನಿಶ್ಚಲತೆಯನು (ಚ), ಹೊಂ ಪುಳಿಸಿದನು (ಜ). [2] ಕಾಮ್ಯಕ (ಜ.ಡ). [3] ತಕ (ಕ), ತಸು (ಚ.ಜ.ಟ). [4] ನಿನ್ನ (ಕ). [5] ಯಲಿಹುದೇ (ಕ). [6] ಮುಂದೆಸೆಯ (ಚ). [7] ತಾಂಡವಸು (ಚ), ತಪಿಸುವಪಿ (ಟ), ತಂದಾಪಿ (ಡ). [8] ಶಾಸ್ತ್ರ (ಟ.ಡ). [9] ವಿದೆಲ್ಲವ (ಕ), ನಿದೆಲ್ಲವ (ಜ). [10] ವರಸಿರಿ (ಚ).

ಅದಱ[1]ನೀ ರವಿ[1]ವಂಶಲಕ್ಷ್ಮೀ
ಸುದತಿ ಗರ್ಭಿಣಿಯಾ[2]ಗದಿರಳೆಂ
ಬುದು[2] ಪುರಾತನ ಮುನಿ[3]ಸುಭಾಷಿತವವು ಯಥಾರ್ಥ[3]ವಲೆ
ವಿದಿತವೈದಿಕ ಲೌಕಿಕದ ಸಂ
ಪದದ ಸೌರಂಭಾತಿಶಯದ
ಭ್ಯುದಯದಲಿ ನಿನಗಾರು ಸರಿ ರವಿಕುಲದ ರಾಯರಲಿ ೮

ಅರಸ ಕೇಳ್ ಕಾಮ್ಯಾಧ್ವರಕೆ ಮುನಿ
ವರವಿಭಾಂಡುಕುಮಾರಕನ ನೀ
ಕರೆಸಿಕೋ ತನ್ಮು ನಿ[4]ವರನ[4]ನಾಚಾರ್ಯಭಾವದಲಿ
ವರಿಸು ವರಪಿಂಡಪ್ರಸಾದೋ
ತ್ಕರದಲಹರಾತ್ಮಜರು ಬಳಿಕಾ
ಹರಿಹರಬ್ರಹ್ಮಾಮರೇಂದ್ರರು ಪಾಡೆ ನಿನಗೆಂದ ೯

ಎನೆ ಧರಾಧಿಪನತುಳ ಹರುಷದ
ಹೊನಲಿನಲಿ [5]ಹೊದಱೆದ್ದು[5] ವಿಕಸಿತ
ವನರುಹಾಸನನಾಗಿ ನುಡಿದನು ವರಸುಮಂತ್ರಂಗೆ
ಮುನಿಯುದಾರಾ ಮುನಿಯ ಮಹಿಮೆಯ
ವಿನುತಚಾರಿತ್ರವನು ಬಲ್ಲಡೆ
ತನಗೆ ಹೇಳೆಂ[6]ದಾರ್ತಮಾನ[6]ಸನಾಗಿ ಬೆಸಗೊಂಡ ೧೦

ಅರಸ ಕೇಳಾದಡೆ ತಪೋಧನ
[7]ರರಸ[7] ಕಶ್ಯಪಮುನಿಯು ಬಲ್ಲೈ
ಸರಸಿರುಹಸಂಭವನ ಮಾನಸಪುತ್ರನೆಂಬುದನು
ಧರೆಯೊಳಗೆ ಬಳಿಕಾ ಮುನಿಪಗವ
ತರಿಸಿದನು ಶತಧೃತಿಯ ಸದೃಶೋ
ತ್ಕರ ವಿಭಾಂಡುಮುನೀಂದ್ರನೆಲೆ ರಾಜೇಂದ್ರ ಕೇಳೆಂದ ೧೧

---

[1] ನೀ ರಘು (ಚ), ನಿಮ್ಮಯ (ಟ.ಡ). [2] ಹಳೆಂದೆಂ ಬಿದು (ಚ). [3] ಸುಭಾಷಿತವದು ಯಥಾರ್ಥ (ಜ), ಸುವಾಚಿತ ವೇದ ಸಿದ್ಧ (ಟ.ಡ). [4] ಪತಿಯು (ಕ.ಜ.ಣ), ಯನೀ (ಚ). [5] ಹೊರೆಯೇಱ (ಚ). [6] ದೇಕಮಾನಿ (ಚ). [7] ಪರಮ (ಚ).

ಸುಳಿದಳೂರ್ವಶಿ ಸುರಪತಿತ್ವದ
ಬಳಕೆಯವರಿಗಸಾಧ್ಯವೆಂಬು
ಜ್ವಲತೆಯಲಿ ತನ್ಮನಿಪನಘಮರ್ಷಣದ ಸಮಯದಲಿ
ಕಳವಳಿಸಿದನು ಕಂಡು ಮನವನು
ನಿಲಿಸಲಾರಳವರಸ ಕೇಳು
ಚ್ಚಳಿಸಿದುದು ವಾರಿಯಲಿ ವೀರ್ಯ ವಿಭಾಂಡುಮುನಿವರನ ೧೨

ಜಲವನಿಂದ್ರಿಯ[1]ಗೂಡಿ[1] ತೃಷೆಗ
ವ್ವಳಿಸಿ ಬಂದು ಕುರಂಗಿ ಜಠರದೊ
ಳಳವಡಿಸಿದುದು ಬೆಳೆದು[2]ದದಱುದರದಲಿ[2] ಮುನಿವೀರ್ಯ
ಇಳುಹಿತವನಿಗೆ ಋಷ್ಯಶೃಂಗನ
ನೆಲೆ ಮಹೀಪತಿ ಕೇಳು ಮುನಿಪತಿ
ಸಲಹಿದನು ಸಾರಂಗಶೃಂಗಾಹ್ವಯದಿನಾ ಮುನಿಯ ೧೩

ಧರಣಿಪತಿ ಕೇಳೀಚೆಯಲಿ ಸುರ
ಪುರದ ಸಿರಿಯನು ಬಯಸಿ ಬಹಳಾ
ಧ್ವರವ ಕೈಕೊಂಡನು ಕಣಾ ರೋಮಾಂಘ್ರಿಭೂಪಾಲ
ಹರೆದುದೀ ವೃತ್ತಾಂತ[3]ವಮರೇ[3]
ಶ್ವರನ ಸಭೆಯಲಿ ರೋಮಪಾದನ
ಸಿರಿಗೆ [4]ಕಂಟಕ[4]ನಾದನಿಂದ್ರನವಗ್ರಹಂಗಳಲಿ ೧೪

ವರುಷ ಹನ್ನೆರ[5]ಡಬುಧಿಪರಿಯಂ
ತರ ನಿಲಲು[5] ಭಯದಿಂದ [6]ನಿಂದವು[6]
ವರಮಹಾಕ್ರತುಶತಗಳಿಗೆ ಹನ್ನೆರಡು ಬಳಿಕಿನಲಿ
ತರಣಿಯುಱುಬೆಗೆ ಧರಣಿ ಕಲ್ಪದ
ಹರನ ಭಾಳಾಂಬಕದ ಶಿಖಿ ಸೀ
ವರಿಸಿದಂತಾಯ್ತೇನನೆಂಬೆನು ನವಗ್ರಹಾಗಮವ ೧೫

ಹೊಳೆಗಳುಱೆ ಬತ್ತಿದುವು ನಿರ್ಜರ
ಜಲ[7]ವಡಂ[7]ಗಿದವಱತವಗ್ಗದ
ಕೊಳನು ಕೂರ್ಮನ ಬೆನ್ನಿಗಿಳಿದವು ಜಲತಟಾಕಗಳು

[1] ಕೂಡೆ (ಕ). [2] ದುದರದಲಂದು (ಕ). [3] ಪರಮೋ (ಚ). [4] ಸೀವರ (ಚ), ಸೀವಟ(ಟ). [5] ಡಾದವಂದಿಗೆ ಮರುಷಣದ(ಚ). [6] ನಿಂದುದು(ಚ). [7] ಗಳಡ(ಕ).

ಅಳಿದುಳಿದ ಜನಪದದ ಜನ ಕಳ
ವಳಿಸಿ ಕಂಗೆಟ್ಟಂಗಭೂಪನ
ಬಳಿಗೆ ಬಂದೊದಱಿದರು ದುರ್ಭಿಕ್ಷದ ಮಹಾಭಯವ ೧೬

ಮನ್ನಿಸಿದನವರುಗಳನತಿಸಂ
ಪನ್ನತೆಯ ಧನಧಾನ್ಯದಲಿ ಕರ
ಭಿನ್ನನಾದನು ತತ್ಪ್ರಜಾಕ್ಷೋಭಪ್ರವೃತ್ತಿಯಲಿ
ನನ್ನಿಕಾಱರ ದೇವ ಕೇಳ್ ಸಾ
ಕಿನ್ನೆನಗೆ ಸಾಮ್ರಾಜ್ಯಸುಖಸಂ
ಪನ್ನತೆಯ ಸೌಭಾಗ್ಯವೆಂದು ವಿರಾಗಮನನಾದ ೧೭

ಕರೆಸಿ ಮಂತ್ರಿಪುರೋಹಿತರ ಕೂ
ಡೊರೆದನೇಕಾಂತದಲಿ ಸಾಕೆನ
ಗರಸುತನ ಸಂಘಟಿಸಿದುದು ದುಷ್ಕೃತಪುರಾಕೃತದ
ಸುರರು ಮುನಿದರೊ ಧರ್ಮದೇವತೆ
ಪರಿ[1]ಭವಿ[1]ಸಿದಳೊ ಭಾಗ್ಯವಧು ವೊಗ
ದಿರುಹಿದಳೊ ಮಱೆಮಾತದೇಕೆಂದರಸ ಬಿಸುಸುಯ್ದ ೧೮

ಪರ[2]ರ ಸತಿಯುನನಂಗ[2]ರತಿಯಲಿ
ಬೆರಸಿತಿಲ್ಲ ಸಮಸ್ತಸುಜನರ
ಸಿರಿಗೆ ತಪ್ಪಿದುದಿಲ್ಲ ದೈವದ್ವಿಜರ ಪೂಜೆಯಲಿ
ಬರಡು ಮನವನು ಮಾಡಿತಿಲ್ಲಾ
ಧರಣಿ [3]ಕುಂದಿ[3]ದುದಿಲ್ಲ ಗುರುಹಿರಿ
ಯರಲಿ ಹೊದ್ದಿ[4]ದ ಪಾಪಫಲವಿನ್ನೆಂತುಟೋ ಎಂದ[4] ೧೯

ವಿನುತ ಸತ್ಯಸುಭಾಷಿತಕೆ ಪ್ರತಿ
ಮೊನೆಯ[5]ನೊಡ್ಡಿ[5]ದುದಿಲ್ಲ ಪರಿಪಾ
ಲನೆಯಲೂಣಯವಿದ್ದುದಿಲ್ಲ ಮದೀಯ ಜನಪದದ
ಜನಪಧರ್ಮದ ಪದ್ಧತಿಗೆ ಬಾ
ಧನೆಯ ಮಾಡಿದುದಿಲ್ಲಕಟ ತನ
ಗೊನೆದು [6]ಕೊಟ್ಟುದೆ ದೈವ ದುಷ್ಕೃತಫಲವನೀಗೆಂದ[6] ೨೦

---

[1] ಹರಿ (ಚ). [2] ಸತಿಯರಂಗಾಂಗ (ಟ.ಡ.ಣ). [3] ಗಳುಪಿ (ಕ). [4] ತು ಪಾಪಫಲವೆಂದರಸ ಚಿಂತಿಸಿದ (ಚ). [5] ಮಾಡಿ (ಕ). [6] ಕೊಟ್ಟುದೊ ದೈವ ದುಷ್ಕೃತ ಫಲವನೆನಗೆಂದ (ಕ), ಕೊಂಡುದೊ ವಿಧಿ ಪುರಾಕೃತ ಫಲವಿದೀಗೆಂದ (ಚ), ಕೊಂಡುದೊ ವಿಧಿ ಪುರಾಕೃತ ಫಲವನೀಗೆಂದ (ಜ), ಕೊಟ್ಟುದು ದೈವ ದುಷ್ಕೃತ ಫಲವನಿದನೆಂದ (ಝ).

ಎಂಬ ಸಮಯದಲಿಳಿದನಂಚೆಯ
ಲಂಬರದಿನಂಬರಮಣಿಪ್ರತಿ
ಬಿಂಬವೆನೆ ನಾರದನು ನೀತಿವಿಶಾರದನು ಬಳಿಕ
ಅಂಬರದ ಸಲಿಲದ ತುಷಾರಕ
ದಂಬಕದ [1]ಪತನ[1]ದಲಿ ಮುನಿಯ ಪ
ದಾಂಬುಜಕೆ ಚಾಚಿದನು ಮಣಿಶಿರವನು ಮಹೀಪಾಲ ೨೧

ದುಗುಡವೇಕೈ [2]ಭೂಪ ಬಿಡು[2] ಬಾ
ಧೆಗಳು ಬಳಿಸಲಿಸುವವೆ ಪೂರ್ವದ
ಯುಗದ ರಾಯರಿಗಗ್ಗಳನಲಾ ಗುಣಚರಿತ್ರದಲಿ
ಸೊಗಸದವರನು ಬಲ್ಲೆ ನಿನಗೆಂ
ದೊಗುವ ಕರುಣರಸಂಗಳಲಿ ಮುನಿ
ನೆಗಹಿ ನುಡಿದನು ರೋಮಪಾದಮಹಾಮಹೀ[3]ಶಂಗೆ[3] ೨೨

ಅರಸ ಕೇಳೈ ನಿನಗೆ ಸೇರುವ
ಸಿರಿಗೆ ಮುನಿದನು ಶಕ್ರ [4]ಶಕ್ರನ[4]
ಸಿರಿಗೆ ನೀ ನಿಲುವಂತುಟನು ನಿನ್ನಯ ಮನೋರಥದ
ಪರಿಯ ಕೇಳೈ ಋಷ್ಯಶೃಂಗನ
ಕರೆಸಿಕೋ ಪಟ್ಟಣಕೆ ಪಾಡಾ
ರರಸ ನಿನಗೆನೆ ಬಳಿಕ ಸುರನರನಾಗಲೋಕದಲಿ ೨೩

ಹರನು ಪೂರ್ವದಲಾ ಮಹಾಮುನಿ
ವರನ ಜನನದೊಳಿತ್ತ ವರವುಂ
ಟರಸ ಕೇಳ್ ದುರ್ಭಿಕ್ಷಡಾಮರಬಾಧೆಖೇದಗಳು
ಇರದವೊಲು ತನ್ಮುನಿಪನಿ[5]ದೂರ್
ರ್ವರೆಯೊಳಂತ[5]ದಱಿಂದ ನೀನಾ
ವರವಿಭಾಂಡಕಸುತನ ನಗರಿಗೆ ಕರೆಸಿಕೋಯೆಂದ ೨೪

ಕಳುಹು ಲಲನಾಜನವನಾ ಮುನಿ
ಕುಲಲಲಾಮನ ಬಳಿಗೆ ಸತಿಯರ
ಬಲೆಗೆ ಸಿಲುಕದ[6]ರಾರು[6] ತ್ರೈಮೂರುತಿಗಳೊಳಗಾಗಿ

---

[1] ಮಾರ್ಗ (ಚ). [2] ನಿನಗೆ ಮಿಗೆ (ಚ). [3] ಪತಿಗೆ (ಚ). [4] ನಾತನ (ಜ.ಟ.ಡ). [5] ಹರುಂಹರಿಯೊಳೀಗ (ಜ), ದೂರ್ವರೆಯೊಳೆಂದ (ಝ), ಹರುಂ ಹರಿಯೊಳೆಂದ (ಟ.ಡ). [6] ನಾರು (ಚ).

ನೆಲೆಯಿದೀಗೆನುತಾ ನೃಪಾಲನ
ತಿಳುಹಿ ತನ್ನೃಪನ ಸತ್ಕೃತಿಯ ಮಂ
ಗಳತೆಯನು ಕೈಕೊಂಡು ಹಾಯ್ದನು ಹಂಸೆಯಲಿ ಮುನಿಪ ೨೫

ರಾಯ ಕೇಳ್ಕೈ ಬಳಿಕಲಾ ಮುನಿ
ರಾಯನಾಜ್ಞೆಯಲಂಗಭೂಮಿಯ
ರಾಯನಬಲಾಜನವ ಕರೆಸಿದನವನಿಗುತ್ತಮದ
ನಾಯ[1]ಕಿಯರನು ನನೆಯ[1]ಚಾಪಶ
ರಾಯುಧನ ಮುಂಗುಡಿಯ ಸೇನಾ
ನಾಯ[2]ಕಿಯರನು[2] ನಗರದನುಪಮ ವಾರನಾರಿಯರ ೨೬

ಸುರಪುರದ ಸೂಳೆಯರ ಸೊಬಗಿಗೆ
ಬಿರುದನಿಕ್ಕುವ ಏಗಡನಳಕೂ
ಬರ ಜಯಂತ ವಸಂತ ಮನ್ಮಥ ಚಾರುಚಂದ್ರಮರ
ಮರುಳುಮಾಡುವ ವಿವಿಧ ವಿಟರನು
ಹುರುಳುಗೆಡಿಸುವ ನವ್ಯಯವ್ವನ
ಭ[3]ರದ[3] ವನಿತೆಯರೊಪ್ಪಿದರು ನರನಾಥನಿದಿರಿನಲಿ ೨೭

ಸತಿಸುತರ ಪಿತೃಮಾತೃಗಳ ಸಂ
ಗ[4]ತರ[4] ಸದ್ವಂಶಾಭಿಮಾನವ
ನತಿಗಳೆಸಿ ಮಕರಧ್ವಜನ ಮಾಯೆಯಲಿ ನೆಲೆಗೊಳಿಸಿ
ಚತುರಪುರುಷಚತುಷ್ಟಯ[5]ದ[5] ಸಂ
ತತನಿಯಾಮಕವೃತ್ತಿಗೊ[6]ಡರಿಸು[6]
ವತಿಮನದ ಚಪಳೆಯರು ಮೋಹಿ[7]ಸಿತರಸನಿದಿರಿನಲಿ[7] ೨೮

*ಮಜುಕದಲಿ ಮಾಯಾ ವಿಲಾಸದ
ನಿಱಿಸುಗಳ ನೋಟದಲಿ ನಟಣೆಯ
ತುಱುಬುಗಳ ತೋಳುಗಳ ಜಘನಸ್ಥಳದ ಚೆಲುವಿಕೆಯ
ಮಿಱುಪಿನಲಿ ತನುರುಚಿಯನಣದು
[8]ಬ್ಬಿಱಿವ ಹೊಗರಿನ[8] ಮುಸುಕುಗಳ ಮೇ
ಲ್ಸೆಱಗುಗಳ ಮೌಳಿಗಳ ಮಹಿ[9]ಳಾಜನ ವಿರಾಜಿಸಿತು[9] ೨೯

---

[1] ಕೀಯರ ಪುಷ್ಪ (ಕ). [2] ಕೀಯರ (ಕ). [3] ರಿತ (ಟ). [4] ತಿಯ (ಚ). [5] ವ (ಕ). [6] ದವಿಸು (ಕ). [7] ದರರಸ ಕೇಳೆಂದ (ಕ), ಸಿತರಸ ಕೇಳೆಂದ (ಡ). [8] ಬ್ಬರದ ಹೊಯ್ಲಿನ (ಚ). [9] ಳೆಯರೆಸೆದರಿದಿರಿನಲಿ (ಚ), ಮೆಯಲೆಸೆದ ನಿದಿರಿನಲಿ (ಟ).

* ಚ ಪ್ರತಿಯಲ್ಲಿ ೨೯ನೆಯ ಪದ್ಯ ೩೦ ನೆಯ ಪದ್ಯವಾದಮೇಲೆ ಬಂದಿದೆ. ಟ.ಡ.ಣ. ಪ್ರತಿಗಳಲ್ಲಿ ಪದ್ಯಕ್ರಮವು ೩೦–೨೯, ೩೨–೩೧ ಈ ರೀತಿ ಇದೆ.

ನಡೆಗಳಲಿ ಚೆಲುವಿನಲಿ ಚದುರಿನ
ನುಡಿಗಳಲಿ ಭಾವದಲಿ ಭಂಗಿಯ
ಕಡುಹಿನಲಿ ಕೈಮೆಯಲಿ ಮಾಯಾಮೋಹನಂಗಳಲಿ
ತೊಡಚಿಕೊಂಬ ಸಮಸ್ತವಸ್ತುವ
ನಡಕಿಕೊಂಬ ವಿದಗ್ಧಮುಗ್ಧೆಯ
ರುಡಿಗೆ[1]ಗಳ[1] ತೊಡಿಗೆ[2]ಗಳಲೆಸೆದರು[2] ರಾಯನಿದಿರಿನಲಿ ೩೦

ನೋಟದಲಿ ಮಾತಾಡಿ ಪುರ್ಬಿನ
ಬೇಟದಲಿ ಬೆಳ್ಮಾಡಿ ಕಲೆಗಳ
ಕೂಟದಲಿ ಕೀಳ್ಪಡಿಸಿ ಸರ್ವಸ್ವವನು ನೆಱೆಕವರಿ
ಗೋಟುಗೊಳಿಸುವ ಬಲ್ಮೆಗಳ ಬ
ಲ್ಲಾಟವಿಕ ಬಹುವಿಧದ ಮಾಯೆಯ
ಬೇಟಕಾತಿಯರೊಪ್ಪಿದರು ನರನಾಥನಿದಿರಿನಲಿ ೩೧

ಸರಸಸೂರುಳು ಗನ್ನಗರುವಿಕೆ
ಗರಗರಿಕೆ ಹುಸಿನುಸುಳು ವೈಸಿಕ
ಮುರುಹು ಮುಂದುಪಚಾರ ಠಕ್ಕು ವಿನೋದ ಬಱಿಮುನಿಸು
ಹುರಡು ಜಾಣುಮೆ [3]ಚಳಬಳಿಕೆ[3] ಚ
ಪ್ಪರಣೆ ವಂಚನೆ ನೇಹವೆಂಬೀ
ಪರಿ[4]ಯ ಮಾಯಾಮಯದ[4] ಮಹಿಳಾಜನ ವಿರಾಜಿಸಿತು ೩೨

ಜಾಣಱಿದು ಮನವಱಿದು ಸೊಬಗಿನ
ತ್ರಾಣವಱಿದೊಲವಱಿದು [5]ಕಾಮದ[5]
ಕೇಣವಱಿದಿಂಬಱಿದು ಸರ್ವಸ್ವಾಪಹಾರ[6]ದಲ[6]
ನಾಣುಗೆಡಿಸುವ ನಗೆಯ ನುಡಿಗಳ
ಜಾಣೆಯರು ಸಮರತಿಕಲಾ[7]ಸ
ತ್ರಾ[7]ಣೆಯರು ಬೇಡಿದರು ಬೆಸನನು ಬಳಿಕ ಭೂಪತಿಯ ೩೩

ಇತ್ತನವರಿಗೆ ನೇಮವನು ಮುನಿ
ಪೋತ್ತಮನ ತರಹೇಳಿ ಮಣಿಮಯ
ದುತ್ತಮಾಭರಣಂಗಳನು ಪರಿಪರಿಯ [8]ನಿವಸನವ[8]

---

[1] ಯ:ಲಿ (ಚ). [2] ಗಳಲೆಸೆದುದು (ಕ), ಯಲಿ ಮೆಱೆದರು (ಚ). [3] ಜಾಳ ವಿಕೆ (ಕ), ಚಾಳವಣೆ (ಜ). [4] ಪರಿಯ ಮಾಯೆಗಳ (ಜ.ಟ). [5] ಮನಸಿನ (ಚ). [6] ವನು (ಚ). [7] ಛಪ್ರಾ (ಕ). [8] ವಸ್ತುಗಳ (ಕ).

ಇತ್ತು ಪುಷ್ಪರಥಂಗಳಲಿ ಮಣಿ
ಮುತ್ತಿನಂದಣಗಳಲಿ ಹಯದಲಿ
ಮತ್ತಗಜಗಮನೆಯರ ಬೀಳ್ಕೊಟ್ಟನು ಮಹೀಪಾಲ ೩೪

*ಸಿತಗುಡಾಜ್ಯ ಸುಲವಣಕಟುವಿ
ಶ್ರಿತರಸಾದಿ ಸಮಸ್ತ[1]ರಸ[1]ಪೂ
ರಿತ ಸುಧೋಪಮಭಕ್ಷ್ಯಫಲಭೋಜ್ಯಾದಿ ವಸ್ತುಗಳ
ಕೃತಕ ಕುಶಲೋಪಾಯದಲಿ ಪರಿ
ಚಿತದ ಪಣ್ಯವಿಲಾಸಿನೀಜನ
ತತಿಯೊಡನೆ ಕಳುಹಿದನು ನೃಪ ಕೇಳಾ ಮಹೀಪಾಲ ೩೫

ತೆರಳಿತಿದು ಹರನೆಡೆಗೆ ನಡೆವಾ
ಸ್ಮರನ ಪಾಳೆಯದಂತೆ ನಡುಗಿದ
ರರಸ ಕೇಳು ಜಿತೇಂದ್ರಿಯರು ಮನ್ಮಥವಿರೋಧಿಗಳು
ಸರಕುದೆಗೆದುದು ಬೊಮ್ಮಚರಿಯದ
ಬೆರಳ ಜಪಗಳ ತಾಪಸರು ತರ
ಹರಿಸಿ ನಿಲುವವನಾವನೈ ತರುಣೀಜನಂಗಳಲಿ ೩೬

ಮೇದಿನೀಪತಿ ಕೇಳಿದೈ ಕಮ
ಲೋದರನು ಕಾಮಿನಿಯನೆದೆಯೊಳ
ಗಾದರಿಸಿದನು ಕಮಲಭವ ಜಗವಱಿಯೆ ನಂದನೆಯ
ಐದೆಯನು [2]ನೆಱೆಮಾಡಿಯರೆವೆ[2]
ಣ್ಣಾದನೀಶ್ವರನಿಂದ್ರಗಿಂದ್ರರ
ಹಾದಿಯದು ನಗೆಯಿತ್ತಣವರನು ಹೇಳಲೇನೆಂದ ೩೭

ನಡೆದುದೀ ಕಾಂತಾಜನಗಳು
ಗ್ಗಡದ ಪಯಣದ ಪಯಣಗತಿ[3]ಯಲಿ[3]
ಸಡಗರದ ಸೌರಂಭದಲಿ ಸನ್ಮೋಹನಂಗಳಲಿ
ಎಡೆಯ ಮುನಿಪನ ವೀಥಿಗಳ ವಂ
ಗಡವ ಕಳಿ[4]ಕಳಿದೈದಿದರು ಮುನಿ[4]
ಮೃಡವಿಭಾಂಡುಕುಮಾರಕನ ಕಮನೀಯತರ ವನವ ೩೮

---

[1] ಮಧು (ಕ.ಜ.ಝ). [2] ಮಾಡಿದನು ಅರೆವೆ (ಕ.ಜ.ಟ.ಡ), ಮಾಡಿದನು ಯರೆವೆ (ಝ). [3] ಗಳ (ಕ.ಜ). [4] ದೈದಿದರು ಮುನಿಕುಲ (ಚ).

* ಕ ಪ್ರತಿಯಲ್ಲಿ ೩೭ನೆಯ ಪದ್ಯವಾದಮೇಲೆ ೩೫ನೆಯ ಪದ್ಯಬಂದಿದೆ. ಟ.ಡ. ಪ್ರತಿಗಳಲ್ಲಿ ೩೫ನೆಯ ಪದ್ಯವಿಲ್ಲ.

ಭ್ರೂಲತೆಯ ಹದವಿಲ್ಲುಗಳ ಹೊಳೆ
ವಾಲಿಗಳ ಹೊದೆಗೋಲುಗಳ ನಳಿ
ತೋಳ ಬಡಿಗೋಲುಗಳ ಸೆಳ್ಳುಗುರ್ಗೊನೆಗಳಂಬುಗಳ
ಜಾಳವಣಿಗಳ ಬಲೆಯ ಠಕ್ಕಿನ
ಠೌಳಿಗಳ ತೋಹುಗಳ ನಗೆಗಳ
ಮೇಲುಮುದ್ದಿನ ಬೇಟೆಕಾತಿಯರೈದಿದರು ವನವ ೩೯

ಕರವಲೆಯ ಕಟಿಸೂತ್ರ ಪದನೂ
ಪುರ ನಿನಾದದ ಬೇಟವರೆಗಳ
ಸರಸಹಾಸ್ಯದ ಹಾಸಕದ [1]ವಹ[1]ಣಿಗಳ ವೈಸಿಕದ
ಸರಳಿಸುವ ಕುಕ್ಕುರಕದಂಬದ
ವಿರಚಿತಾ[2]ಡಂಬರದ ನವಶಾ[2]
ಬರಿಯರೈದಿದರರಸ ಕೇಳ್ ಮುನಿವ್ರುಗವನಾಂತರವ ೪೦

ಲಂಬಿಸುವ ಫಲಭರದ ರಸದಾ
ಳಿಂಬ ಖರ್ಜೂರಾಮ್ರ ಕದಳಿ ಕ
ದಂಬ ಕುರವಕ ತಿಲಕ ತೆಂಗು ತಮಾಲ ಪುನ್ನಾಗ
ಜಂಬು ಪನಸ ಮಧೂಕ[3]ತರು[3]ನಿಕು
ರುಂಬಕದ ಸುರನಂದನ ಪ್ರತಿ
ಬಿಂಬವೆನೆ ಬಗೆಗೊಳಿಸಿತನುಪಮಮುನಿತಪೋವಿಪಿನ ೪೧

ನಳಿನವಿಲ್ಲದ ಕೊಳನು [4]ನವ[4]ಶಾ
ಡ್ವಲಗಳಿಲ್ಲದ [5]ನೆಲನು[5] ಹೊಸಕೆಂ
ದಳಿರುದೋಱದ ಮರನು ಮಘಮಘಿಸದ ಸಮೀರಣನು
ಫಲಿತವಿಲ್ಲದ ಪುಷ್ಪಚಯ ಮ
ಕ್ಕಳುಗಳಿಲ್ಲದ ಖಗಮೃಗಾವಳಿ
ಮಳೆಗಳಿಲ್ಲದ ಮೇಘವಿಲ್ಲಾ ಬನದೊಳಾ ಮುನಿಯ ೪೨

ಗಿಳಿಯ ಗಿಡುಗನ ಕೂಟ ಮಱಗೋ
ಗಿಲೆಯ ಸಾಳ್ವನ ಸಖ್ಯ ಹರಿಕರಿ
ಕಳಭದುರುಬಂಧುತ್ವ ಫಣಿಮುಂಗುಲಿಯ ನಂಟುತನ

---

[1] ದಹ (ಕ), ಹವ (ಜ). [2] ಡಂಬರದ ವನಶಾ (ಚ), ಡುಂಬೊಲನು ನವಶಾ (ಜ). [3] ವರ (ಚ). [4] ವನ (ಕ). [5] ನನೆಯ (ಕ).

ಹುಲಿಯು ಹುಲ್ಲೆಯು ನೇಹ [1]ಬಿಱುಗ[1]
ತ್ತಲೆಯು ಬೆಳಗಿನ ಮೈತ್ರಿ ಮಧುರದ
ಹುಳಿಯು ಪರಿಸಂಬಂಧ[2]ವಿರ್ದುದು[2] ಬನದೊಳಾ ಮುನಿಯು ೪೩

* ಆಟವೇ ಮೃಗಗಣದೊಡನೆ ಸವಿ
ಯೂಟವೇ ವನಕಂದಫಲ ಕ
ಣ್ಣೋಟವೇ ಕಂಜಾಕ್ಷಕಾಮಾರಿಗಳ ಭಜನೆಯಲಿ
ಕೂಟವೇ ಯೋಗಾಂಗನೆ[3]ಯೊಳೀ[3]
ಪಾಟಿಯಿಂದಿಹ ಋಷ್ಯಶೃಂಗನ
ನಾಟವಿಕಕಾಮಿನಿಯರೈದಿದರರಸ ಕೇಳೆಂದ ೪೪

ಅರಸ ಕೇಳಾ ತರುಣಿಯರ ತನು
ಪರಿಮಳದ ಸೋಂಕಿನಲಿ ಸುತ್ತಲು
ಪರಿಮಳಿಸಿದುದು ತರು [4]ಸುತರಳಾ[4]ಪಾಂಗರೋಚಿಯಲಿ
ಮುರಿದುದಾ ಮರಗತ್ತಲೆಯು ಮೈ
ಸಿರಿ ಸುಗೀತಾಮೃತದ ಸವಿಗ
ಚ್ಚರಿಯರೊಲೈಸಿದರು ವರಕಾಂತಾಕದಂಬ[5]ದಲಿ[5] ೪೫

ಗತಿಗೆ ಕುಣಿದವು ಹಂಸೆ ಸಂಭಾ
ಷಿತದ ಮೃದುರವಕೊದಗಿದವು ಪರ
ಭೃತವಪಾಂಗಮರೀಚಿಚಂದ್ರಿಕೆಗಾ ಚಕೋ[6]ರಿಚಯ[6]
ಗತಪರಿಶ್ರಮವಾದವಧರಾ
ಮೃತಫಲಕೆ ಮನದಂದವರಗಿಳಿ
ರತಿಗೆ ಸೇವಕರಿಲ್ಲ[7]ವಾ[7]ದುದು [8]ಹೇಳಲೇನೆಂದ[8] ೪೬

---

[1] ನಸುಗ (ಕ), ಬಿಡುಗ (ಗ), ಬಲುಗ (ಜ). [2] ವಿದ್ದುವು (ಕ), ವೆಸೆದುದು (ಗ), ವಿದ್ದವು (ಜ). [3] ಯರಲಿ (ಗ.ಡ), ಯ ಪರಿ (ಜ.ಣ). [4] ಗಳವರಾ (ಗ), ಣ ತರಳಾ (ಚ), ನಿಕರವಾ (ಜ.ಝ), [5] ಕವ (ಗ.ಟ.ಣ). [6] ರಾಳಿ (ಚ). [7] ದಾ (ಕ.ಜ.ಣ). [8] ಭೂಪ ಕೇಳೆಂದ (ಗ).

* ಕ.ಗ.ಜ. ಪ್ರತಿಗಳಲ್ಲಿ ೪೪ನೆಯ ಪದ್ಯ ೪೭ನೆಯ ಪದ್ಯವಾದಮೇಲೆ ಬಂದಿದೆ. ಝ.ಟ.ಡ.ಣ ಪ್ರತಿಗಳಲ್ಲಿ ೪೫ನೆಯ ಪದ್ಯ ೪೬ನೆಯ ಪದ್ಯವಾದಮೇಲೆ ಬಂದಿದೆ.

ಮುನಿಪನಿದ್ದನು ಮುಗ್ಧತಾಪಸ
ಮುನಿಗಣದ ಮಧ್ಯದಲಿ ಸಮ್ಮೇ
ಳನದ ಪುಣ್ಯಮೃಗಾವಳಿಯ ಸೋಂಕಿನಲುಪಾಸನೆಯ
ವನರುಹಾಕ್ಷಧ್ಯಾನದಲಿ ಕೇ
ಳಿನಕುಲೇಶ್ವರ ತನ್ಮುನೀಶ್ವರ
ನನುವಱಿದು ಹೊದ್ದಿದರು ಹರಿವೇಖಲೆಯ [1]ಧಾಳಿ[1]ಯಲಿ ೪೭

ರಾಯ ಕೇಳ್ಕೈ ತಾಪಸಾಂಗದ
ನಾಯಕಿಯರದಱೊಳಗೆ ವರಕುಸು
ಮಾಯುಧನ ಖಂಡೆಯಕೆ [2]ತೆಕ್ಕವ[2] ಮುನಿಯ ಚರಣದಲಿ
ಮಾಯುದಭಿರಂಜನೆಯ ರಚಿತೋ
ಪಾಯದಲಿ ಗೋತ್ರಪ್ರವರ ಪರಿ
ಯಾಯದಲಿ ಪದಕೆಱಗಿದರು ಪಾವನ ತಪೋಧನನ ೪೮

ವಂದಿಸಿದ ಮುನಿವೇಷದಬಲಾ
ವೃಂದಕತಿಭಕ್ತಿಯಲಿ ಮುಗುಳಭಿ
ವಂದನಂಗೈದುಚಿತ ಸತ್ಕಾರೋಪಚಾರದಲಿ
ಕಂದಮೂಲಫಲಾದಿ ವಸ್ತುಗ
ಳಿಂದ ಮನ್ನಿಸಿ ನಮ್ಮೆಡೆಗೆ ನೀವ್
ಬಂದ [3]ಕಾರಣವೇ[3]ನೆನುತ ಬೆಸಗೊಂಡನಾ ಮುನಿಪ ೪೯

ನಾವಲೇ ನಿಮ್ಮಡಿಯ ಬಹಳ ಕೃ
ಪಾವಲಂಬನದಿಂದ ಕಾಮ್ಯಮ
ಹಾವಿಲಾಸಾಧ್ವರವ ಕೈಕೊಂಡೆವು ವಿನೋದದಲಿ
ನೀವು ಬಿಜಯಂಗೈ[4]ದಡಧಿಕೃತ[4]
ಪಾವನ[5]ರ[5]ಲೇಯೆಂದು ಕಪಟಕ
ಲಾವಿದೆಯರೊಡಬಡಿಸಿದರು ಗಮನವನು ಮುನಿವರನ ೫೦

ಜನಪ ಕೇಳ್ ಮುನಿವೇಷದಬಲಾ
ಜನ ತದೀಯ ಮುನೀಶ್ವರನ ಸೊಬ
ಗಿನಲಿ ಸೋಂಕಿನರೊಲುಮೆಯಲಿ [6]ವಿವಿಧೋಪಚಾರದಲಿ[6]
ವಿನುತ ಗಂಧಸುಮಾಲ್ಯ ಮಣಿಮಂ
ಡನ ನವಾಂಬರಗಳಲಿ ಚಿತ್ತವ
ನನುಕೊಳಿಸಿ ಕೈವಶಕೆ ತಂದರು ದಿವಸದಿವಸದಲಿ ೫೧

---

[1] ಚಾಳಿ (ಕ.ಝ.ಡ.ಣ). ರಚನೆ (ಜ). [2] ಮಣಿಯುವ (ಕ). [3] ಕಾರ್ಯವವೇ (ಕ). [4] ದದಧಿಕಕೃ (ಕ). [5] ವ (ಕ.ಖ). [6] ಸಮ್ಮೋಹನಂಗಳಲಿ (ಗ).

* ಸಾರಿದರು ಬಳಿಕುತ್ತಮದ ಶೃಂ
ಗಾರನಾರೀಜನ [1]ಮನೋಜನ[1]
ಕೂರ[2]ಲಗಿಗೊ[2]ಡಲೊಡ್ಡಿಸಿದರಾ ಮುಗ್ಧಮುನಿವರನ
ಆರು ಗೆಲಬಹುದರಸ ಕೇಳ್ ಕಾ
ಮಾರಿಗಸದಳ[3]ವ[3]ಬಲೆಯರ ಕ
ಣ್ಣೋರೆಗಳ ಕಾಲಾಟಕಳುಕದ[4]ರುಂಟೆ ಹೇಳೆಂದ[4] ೫೨

ಬಳಿಕಲಾ ಮುನಿವರನ ನಾನಾ
ಫಲಸುಭೋಜನ ಭಕ್ಷ್ಯದಲಿ ಸವಿ
ಗೊಳಿಸಿದರು [5]ಸೆಳೆದರು[5] ಮುನೀಂದ್ರನ ಮನವ ಮಾಯೆಯಲಿ
ಕಳವಳಿಸಿದವು ಕರಣವಿಂದ್ರಿಯ
ಗಳು ನಿತಂಬಿನಿಯರಲಿ ಸಿಕ್ಕಿದ
ನಲರುಗಣೆಯಣ್ಣನ ಘಡಾವಣೆಗಾ ವಿಭಾಂಡುಸುತ ೫೩

ಅಮೃತರಸಮಯ ವಿವಿಧಕಾವ್ಯ
ಪ್ರಮುಖನಾಟಕ ಭರತಮದನಾ
ಗಮ ರಸಾಲಂಕಾರ ರೂಪಕ ರಚಿತ ವಿದ್ಯೆಯಲಿ
ಅಮಿತಸೌಖ್ಯಕಥಾವಿನೋದದ
ಸಮತೆಯಲಿ ಭಾರತಿ ಕಳಾವಿ
ಭ್ರಮಕೆ ಗುರುವೆನಲೊಲಿಸಿ ಮೆಚ್ಚಿಸಿದರು ಮುನೀಶ್ವರನ ೫೪

ಬಳಿಕ ಸಕಲೇಂದ್ರಿಯಗಳುಬ್ಬಟೆ
ಬಲಿ[6]ದಪಿ[6]ವರುಪಚಾರದಲಿ ಹಿಂ
ದುಳಿದುದುಗ್ರತಪಃಪ್ರಭಾವದ ಬೆಳಗು [7]ನಿಮಿಷದಲಿ[7]
ಅಲಗನುಗಿದನು ಮದನ ಮಂದಾ
ನಿಲನು ಹುರಿಗಟ್ಟಿದನು ಕೈಚ
ಪ್ಪಳೆಯಲೊದಱಿದನಾ ವಸಂತನು ಮುನಿಪನಿದಿರಿನಲಿ ೫೫

* ಕ ಪ್ರತಿಯಲ್ಲಿ ೫೨ನೆಯ ಪದ್ಯ ೫೩ನೆಯ ಪದ್ಯವಾದಮೇಲೆ ಬಂದಿದೆ.

1 ವನಂಗನ (ಚ). 2 ಸಿಗೆಯೊ (ಚ). 3 ದ (ಕ. ಜ). 4 ರಾರು ಲೋಕದಲಿ (ಚ). 5 ಕೇಳಾ (ಚ) 6 ದವ (ಕ), ದಃದಿ (ಚ. ಜ). 7 ಬಳಿಸಲಸಿ (ಕ)

ಬಿದ್ದನಬಲಾಜನದ ಬಲೆಯೊಳ
ಗೊದ್ದುಕೊಳುತ ಮುನೀಂದ್ರನಂಗಜ
ನುದ್ದುರುಟುತನಕಾರು ಸರಿ [1]ಸುರನರಭುಜಂಗ[1]ರಲಿ
ತಿದ್ದಿತಾತನ ತಪಸು ಮಾಯೆಯು
ಮದ್ದಿನಲಿ ಮರುಳಾಗಿ ಮದನನ
ಹೊದ್ದಿದನು ಹೊಡಕರಿಸಲಱಿಯದೆ ಬಳಿಕಲಾ ಮುನಿಪ ೫೬

ಮಚ್ಚಿ ಮರುಳಾ[2]ದಾ[2] ಮುನೀಂದ್ರನ
ನುಚ್ಚಿ ತಂದರು ತರುಣಿಯರು ಬಳಿ
ಕಚ್ಚರಿಯು [3]ಕೇಳರಸ[3] ಬೆರಸಿದವಭ್ರವಂಬರವ
ಮುಚ್ಚಿಕೊಂಡವು ಮುರಿದು ನೇಸಱು
ಗಿಚ್ಚಿನಖಿಳಾಂಬುಧಿಯ ಜಲವನು
ಕಚ್ಚಿ ತಂದುಗುಳಿದವು [4]ರೋಮಾಂಘ್ರಿಪನ ಭೂಮಿಯಲಿ[4] ೫೭

ಅರಳಿತರಸನ ವದನ [5]ವದನದ[5]
[6]ಸಿರಿ ವಿಷಾದದೊಳದ್ದಳಮರೇ[6]
[7]ಶ್ವರನ ಮುನಿಪನ ಬರವಿನಲಿ ಬಳಿಕಾ[7] ಧರಾಧಿಪನ
ಧರೆಯು ಜನ ಸಂತೋಷಮಯುಸಾ
ಗರದೊಳದ್ದುದು ಹೇಳಲೇನದ
ನರಸ[8]ಕರ[8]ಸಾ ಮುನಿಯು ಸಿದ್ಧಿಗಸಾಧ್ಯವೇನೆಂದ ೫೮

ಪರಮಹರುಷದಲಾ ಮುನೀಂದ್ರನ
ನುರುತರೋತ್ಸವದಿಂದಲಾ ಪುರ
ದರಸನಿದಿರ್ಗೊಂಡೊಯ್ದು ಕೊಟ್ಟನು ತನ್ನ ನಂದನೆಯ
ಹರನುಮಾದೇವಿಯರವೊಲು ಮುನಿ
ವರನು ಶಾಂತಾದೇವಿ ಸಹಿತಾ
ಧರಣಿಪನ ಭವನದಲಿ ಬೆಳಗಿ[9]ದನಧಿಕ[9]ತೇಜದಲಿ ೫೯

---

[1] ವಿಲಯಾದಿ ದೇವ (ಗ.ಜ). [2] ದನು (ಚ). [3] ನೇನೆಂಬೆ (ಗ). [4] ರೋಮ ನೃಪಾಲ ಭೂಮಿಯಲಿ (ಕ), ರೋಮಪದಾವನಿಯೊಳಂದು (ಗ). [5] ವಮರೇ (ಚ), ದುತ್ಸವ (ಣ). [6] ಸಿರಿ ವಿರಾಮದಲಿತ್ತಲಮರೇ (ಗ), ಶ್ವರನ ವದನಶ್ರೀನಿತಂಬಿನಿ (ಚ), ಸಿರಿ ವಿಷಾದದಲದ್ದನಮರೇ (ಜ.ಡ.ಣ), ಸಿರಿ ವಿಷಾದದಲದ್ದಳಮರೇ (ಝ.ಟ). [7] ಧರಿಸಿದಳು ದುಗುಡವನು ಬಳಿಕಿನಲಾ (ಚ), ಶ್ವರನು ಮುನಿಪನ ಬರವಿನಲ ಬಳಿಕಾ (ಜ.ಡ.ಣ). [8] ಬರಿ (ಕ), ತರಿ (ಗ.ಝ.ಡ). [9] ಹನುದಿತ (ಚ).

ಬರಡು ಹಯನಹುದುಡಿದ ನೀರಸ
ತರು ಚಿಗುರ್ವವು ಬಂಜೆ ಗರ್ಭವ
ಧರಿಸುವಳು ಧನಧಾನ್ಯಗೋಧನಸಂಪದಾದಿಗಳು
ಭರಿತವಾಗಿಹವಾ ಮುನಿಪನಿಹ
ಧರಣಿಯಲಿ ನೀನಾ ಮುನೀಂದ್ರನ
ಕರಸಿ ಕ್ರತುವನು ನಡೆಸಿದರೆ ಸುತರಹರು ನಿನಗೆಂದ ೬೦

———

# ಆರನೆಯ ಸಂಧಿ

---

ಸೂಚನೆ: ಭೂಮಿಪತಿ ದಶರಥನು ಸುತಕಾ
ಮ್ಯಾಮಹಾಧ್ವರಕೆಂದು ತಂದನು
ರೋಮಪಾದನೃಪಾಲನಳಿಯನನಖಿಳ ವಿಭವದಲಿ

ಧರಣಿಜಾಸುತ ಕೇಳ್ ಸುಮಂತ್ರನ
ವರವಚೋಭಿಪ್ರಾಯವನು ನಿಜ
ಗುರುವಸಿಷ್ಠಂಗಱುಹಿ ತನ್ಮ ನಿವರನನುಜ್ಞೆಯಲಿ
ಪರಮಋಷಿವೈಭಾಂಡುಕನನ
ಧ್ವರಕೆ ತಹ ನೇಮವನು ಪಡೆದತಿ
ಹರುಷದಲಿ ಹರಿದಶ್ವಕುಲನು[1]ದ್ಯೋಗ[1]ಮನನಾದ ೧

ನೆಗಳ್ದ ಕಾರ್ಯಸ್ಥಿತಿಗೆ ಲಿಖಿತಾ
ಳಿಗಳನುಡುಗೊಱೆಸಹಿತಲರಸಾ
ಳುಗಳ ಕೈಯಲಿ ಕಳುಹಿದನು ನೃಪ ರೋಮಪಾದಂಗೆ
ತೆಗೆಸಿದನು ಬಳಿಕುತ್ತಮದ ತೊಡ
ವುಗಳ [2]ದಿವ್ಯ[2]ದುಕೂಲರತ್ನಾ
ಳಿಗಳ[3]ನನುಪಮ ಗಜಹಯಾದಿ ಸಮಸ್ತವಸ್ತುಗಳ[3] ೨

ಬಾರಿಸಿದ ಬಲುಹೊಱೆಯ ಬಂಡಿಗ
ಳೋರಣಿಸಿದವು ಪಯಣದಲಿ ಕ
ರ್ಪೂರ ಕಸ್ತುರಿ ಕುಂಕುಮದ ಪೆಟ್ಟಿಗೆಯ ಸಾಲಿನಲಿ
ಊರ ಹೊಱವಳಯದಲಿ ಗುಡಿಗೂ
ಡಾರ ಹೊಯ್ದುವು ಶುಭಮುಹೂರ್ತದ
ವಾರ[4]ತಿಥಿನಕ್ಷತ್ರದಲಿ ನರನಾಥ[4] ಹೊಱವಂಟ ೩

---

[1] ದ್ಗಮನ (ಗ). [2] ನಖಿಳ (ಗ), ನಿಖಿಳ (ಜ). [3] ಗಜಹಯಃ ಮುಖ್ಯ ನಾನಾ ವಸ್ತುನಿಚಯುವನು (ಚ), ನಿಭರಥ ಗೋ ಹಯಾದಿ ಸಮಸ್ತ ವಸ್ತುಗಳ (ಟ.ಡ.ಣ). [4] ನಕ್ಷತ್ರದಲಿ ದಶರಥರಾಯ (ಜ.ಡ).

ಸುಳಿದವಾರತಿ ಮುಂದೆ ವಿಪ್ರರ
ಕಳಕಳದ ಮಂತ್ರಾಕ್ಷತೆಯ ಕೈ
ಕೊಳುತ ಮಂಗಳಪಾಠಕರ ಬಹುವಾದ್ಯಘೋಷದಲಿ
ಘಳಿಗೆವಟ್ಟಲ ಜೀವಕೇಂದ್ರ
ಸ್ಥಳದ [1]ಶುಭಲಗ್ನ[1]ದಲಿ ಭೂಪತಿ
ಹೊಳಲ ಹೊರವಂಟನು ಸುಮಂತ್ರಾದಿಗಳ ಗಡಣದಲಿ ೪

ಮಣಿಮಯದ ಮುಕ್ತಾಫಲದ ಕೇ
ವಣದ ಕನಕದ ದಡ್ಡಿಬಿಗಿದಂ
ದಣವನೇರಿದರರಸಿಯರು ಮೂವರು ಮಹೀಪತಿಯು
ಕುಣಿವ ಕುದುರೆಯು ಹಣ್ಣಿದುರುವಾ
ರಣಘಟಾಳಿಯ ತೇರುಗಳ ತಿಂ
ಥಿಣಿಯು [2]ತೆರಳಿಕೆಯಿಂದ[2] ತೆರಳಿದನಾ ಮಹೀಪಾಲ ೫

ತಳಿತ ಪಾಲ್ಮರನೇರಿ ಪಿಂಗಲಿ
ಬಳಿದು ಬಾಯ್ದೊಂಡವು ಸರಾಗದಿ
ನೊಲಿದು ದಂಪತಿ [3]ತಾಱಿನಿತ್ತವು ಕೌರಿಯ ಹಕ್ಕಿಗಳು
ಸುಳಿದವೆಡದಲಿ ಹಂಗ ಬಲದಲಿ
ವಲಿಯಸೂಚಿತ ಪುತ್ರಲಾಭದ
ಫಲವಿಶೇಷಿತ ಶಕುನ ಹಿಗ್ಗಿಸಿತವನಿಪನ [4]ಮನವ[4] ೬

ಹರುಷಪುಳಕದ ಹರಹಿನಲಿ ಹಯ
ಕರಿ ವರೂಥ ಪದಾತಿ ಬಲಸಹಿ
ತರಿದಿಶಾಪಟಮಲ್ಲ ಬಂದನು ಪಯಣಗತಿಗಳಲಿ
ಪರಮಹೀತಳದಖಿಳಜನದು
ಬ್ಬರದ ದರುಶನ [5]ಕಾಣಿ[5]ಕೆಯನನು
ಕರಿಸುತನುಪಮವಿಷಯವೀಥಿಯ ನೋಡುತೈತಂದ ೭

ಹೇಳಲೇನದನಂಗಧರಣೀ
ಪಾಲನವನಿಯ ಸಿರಿಯ ಸೊಂಪಿನ
ಲೀಲೆಗಿದು ನೆಲೆವೀಡೆನಲು ಶೋಭಿಸಿತು ಸೊಗಸಿನಲಿ
ಶೈಲವೇ ಸುರಶೈಲ ಭೂರುಹ
ಜಾಲವೇ ಸುರಭೂಜ ಲಲಿತಲ
ತಾಳಿಯೇ ಸುರಲತೆ ಸುಧೇನುಗಳೈದೆ ಸುರಧೇನು ೮

---

[1] ಸುಮುಹೂರ್ತ (ಗ). [2] ಶಕುನಗಳಿಂದ (ಚ). [3] ತರವನಿತ್ತವು ಕ (ಗ), ತಾಱಿನಿತ್ತವು ಹ (ಚ). [4] ತನುವ (ಗ.ಜ). [5] ಗಾಡಿ (ಗ), ಗಾಣಿ (ಚ).

ವರವಸಂತನ ಬೀಡೊ ಮನ್ಮಥ
ಧರಣಿಪನ ದೆಖ್ಖಾಳಭೂಮಿಯೊ
ಪರಿಮಳಿತ ಪವಮಾನನಾಡುಂಬೊಲನೊ ಚಂದ್ರಮನ
ಹರವರಿಯೊ ವನದೇವತೆಯ ವಿ
ಸ್ತರವಿಹಾರವಿನೋದಕೇಳೀ
ನಿರತಿಶಯ ನಿಜಧರಣಿಯೆನೆ ನೆಱೆಮೆಱೆದುದಾ ಭೂಮಿ ೯

ನಗರ ಖರ್ವಡ ಖೇಡಗಳ ಹೆಂ
ಪುಗಳ ಶಾಖಾನಗ[1]ರಗಳ[1] ಸೊಂ
ಪುಗಳ ಸುಗ್ರಾಮಾಗ್ರಸಾರವ್ರಜದಲಂಪುಗಳ
ತೆಗೆದ ತೊಱೆಕಾಲುವೆಗಳುದ್ಯಾ
ನಗಳ ಕಳವುದ್ರಾಕ್ಷೆಧವಳೇ
ಕ್ಷುಗಳ ವನವೀಥಿಗಳನೀಕ್ಷಿಸುತರಸನೈತಂದ ೧೦

ಅರರೆ ಶಿವಶಿವ ಸಕಲ ಸಿರಿಯಲಿ
ಮೆಱೆವುದಿದು ತಾ ಋಷ್ಯಶೃಂಗನ
ಪರಮ ಮಹಿಮೆಯಲಾ ಮಹೀತಳವೆನುತ ನರನಾಥ
ಶಿರವನೊಲೆವುತ ರೋಮಪಾದನ
ಸಿರಿಯ್ಕ ಕೊಂಡಾಡುತ ಸುಮಿತ್ರನ
ಪುರಕೆ ಬಂದನು ಕೇಳಿದ್ಯೆ ಕಾಕುತ್ಸ್ಥನೃಪಸೂನು ೧೧

ರಾಯ ರಾಜಶಿರೋಮಣಿಯ ಕಟ
ಕಾಯ ಬಿಟ್ಟುದು ಬಳಿಕ ಕೊಟ್ಟಿಗೆ
ಲಾಯ ಗುಡಿ ಗೂಡಾರ ಸಹಿತ ಪುರೋಪಕಂಠದಲಿ
ಆಯತಃಪರಿಪೂರ್ಣತೇಜನ
ಮೇಯನನುಪಮ ರೋಮಪಾದನ
ಜೇಯ ದಶರಥನೃಪನನಿದಿಗೊಂಡೊಯ್ದು ನರಮನೆಗೆ ೧೨

ಹೇಳಲೇನದನಂದಿನುತ್ಸವ
ದೇಳಿಗೆಯ ವೈಭವವನುಭಯ ನೃ
ಪಾಲಕರ ಸೌಹಾರ್ದವನುಬಂಧದ ಸಘಾಟಿಕೆಯ
ಬಾಲೆಯರ ಹೊಂದಳಿಗೆಗಳ ಪಸು
ಗೂಳುಗಳ ಪಸರಿಕೆಯ ಮಣಿದೀ
ಪಾಳಿ ಸುಳಿದವು ಸರಸಿಜಪ್ರಿಯಕುಲಜನಿದಿರಿನಲಿ ೧೩

[1] ವಗದ (ಚ).

ಉಪಚರಿಸಿದನು ಬಳಿಕ ರಾಜಾ
ಧಿಪನ ವರರಾಜೋಪಚಾರದ
ವಿಪುಳ ಸತ್ಕಾರದಲಿ ನಿರುಪಮರೋಮಪಾದನೃಪ
ಅಪರಿಮಿತ ಸಂತೋಷದಲಿ ಭೂ
ಮಿಪನ ಗಮನವನಱಿದು [1]ನೃಪನಾ[1]
ತಪನಕುಲಜನ ಕೊಂಡು ಬಂದನು ಮುನಿಯ ಮಂದಿರಕೆ ೧೪

ಅರಸ ದಶರಥನಾ ವಿಭಾಂಡುಕ
ವರಕುಮಾರನ ಚರಣದಲಿ ತ
ನ್ನರಸಿಯರು ಸಹ ದೈನ್ಯವೃತ್ತಿಯ ಭಕ್ತಿಭಾವದಲಿ
ಉರುಳುವಶ್ರುಕಣಾಳಿಗಳ ಕಾ
ಹುರತೆಯಲಿ ಮೈಯಿಕ್ಕಿದನು ಸುತ
ವಿರಹಿತನ [2]ವಂಶಚ್ಯುತನ[2]ನುದ್ಧರಿಸಬೇಕೆಂದು ೧೫

ವಿತತಸುತಕಾಮ್ಯಾಧ್ವರದ ಸ
ತ್ಕ್ರತುವ ಕೈಕೊಂಡೆನು ಭವತ್ಕೃಪೆ
ಯತಿಶಯವು ತನಗಾಗೆ ತಾನೀ ಜಗಕೆ ಧನ್ಯನಲಾ
ಸುತವಿಹೀನನನುದ್ಧರಿಸಿ ಸಂ
ತತಿಯ ಕರುಣಿಸಬೇಕೆನುತ ಮುನಿ
ಪತಿಯ ಪದ[3]ಪದ್ಮದಲಿ ಮಗುಳಿಳುಹಿದನು ಮಣಿಶಿರವ[3] ೧೬

ಕರುಣರಸದುಬ್ಬರದಲರಸನ
ಶಿರವ ನೆಗಹಿ ನಯೋಕ್ತಿಯಲಿ ಮುನಿ
ಹರಸಿ ಸಂತಾನಾಭಿವೃದ್ಧಿಯ ಸಾರಸೌಖ್ಯತೆಯ
ಅರಸನನು ಮನ್ನಿಸಿ ಮನಃಪರಿ
ಸರದ ಖೇದವ ಬಿಡಿಸಿ ಕಾಮ್ಯಾ
ಧ್ವರಕೆ ಬಹೆನೆಂದಭಯವಿತ್ತನು ಋಷ್ಯಶೃಂಗಮುನಿ ೧೭

---

[1] ತಂದನು (ಕ), ಬಂದಾ (ಜ). [2] ನಚ್ಯುತನೆ ನೀ (ಕ). [3] ಪದ್ಮಕ್ಕೆ ಮಗುಳೆಱಗಿದನು ಭೂಪಾಲ (ಕ.ಝ), ಪದ್ಮದಲಿ ಮಗುಳಿಳುಹಿದನು ಮಸ್ತಕವ (ಗ), ಕಭಿನಮಿಸಿದನು ದಶರಥಮಹೀಪಾಲ (ಚ).

ವೀರ ಕೇಳೈ ನಿಮ್ಮ ದಶರಥ
ಧಾರುಣೀಶಂಗಭಿನವದ ಬೀ
ಡಾರವಾಯ್ತರೆದಿಂಗಳಿರ್ದನು ಮೇಲೆ ತತ್ಪುರದ
ಧಾರುಣೀಶನನುಚಿತವಚನಾ
ಸಾರದಲಿ ಸರ್ವಾಭರಣ ಮದ
ವಾರಣಾಶ್ವವರೂಥವಸನಗಳಿಂದ ಮನ್ನಿಸಿದ ೧೮

ಕರಸಿ ಮಂತ್ರಿನಿಯೋಗಿಗಳನಾ
ಪುರಜನಂಗಳನುಡುಗೊಱೆಗಳಲಿ
ಹಿರಿದು ಮನ್ನಿಸಿ ರೋಮಪಾದಮಹಾಮಹೀಪತಿಯು
ಪರಮಸತ್ಕಾರವನು ಕೈಕೊಂ
ಡರಸ ಮುನಿಪತಿಸಹಿತಯೋಧ್ಯಾ
ಪುರಿಗೆ ಬಂದನು ಬಹಳವಿಭವದಲಖಿಳಜನ [1]ನಲಿಯೆ[1] ೧೯

ಮುನಿಪತಿಯನವನೀಶ [2]ಗುರು[2]ಭಾ
ವನೆಯಲೇ ಪೂಜಿಸಿದ ಬಳಿಕರ
ಮನೆಯ ನಿಕಟಪ್ರಾಂತ್ಯದಲಿ ಬೀಡಾರವನು ರಚಿಸಿ
ಮುನಿಯ ಕಳುಹಿದು ಕರಸಿದನು ವರ
ಮುನಿವಸಿಷ್ಠನ ತನ್ಮುನೀಂದ್ರನ
ವಿನುತವಚನಾನುಜ್ಞೆಯಲಿ ಕೈಕೊಂಡನಧ್ವರವ ೨೦

———

[1] ಸಹಿತ (ಕ). [2] ಮುನಿ (ಕ.ಗ).

# ಏಳನೆಯ ಸಂಧಿ

ಸೂಚನೆ : ಭುವನಜನ ಘು[1]ಲ್ಲವಿಸೆ[1] ನಿರ್ಜರ
ನಿವಹ[2]ವ[2]ತಿಪರಿಣಮಿಸೆ ಯಜ್ಞ
ಪ್ರವರದಲಿ ಪಡೆದನು ಮಹೀಪತಿ ಪುತ್ರಪಿಂಡಕವ

ಧರಣಿಜಾಸುತ ಕೇಳು ದಶರಥ
ಧರಣಿಪತಿ ಕರಸಿದನು ನಾನಾ
ಧರಣಿಪರ ಧರ್ಮೈಕನಿಷ್ಠವಸಿಷ್ಠನಾಜ್ಞೆಯಲಿ
ವರುಷವರುಷದ ವರ್ತನೆಯ ವಿ
ಸ್ತರದ ವಸ್ತೂತ್ಕರವನವರಲಿ
ತರಿಸಿದನು ವರಪುತ್ರಕಾಮೇಷ್ಟಿಯ ಮಹಾಧ್ವರಕೆ ೧

ಕಾಣೆನಿನಶಶಿಕುಲದ ರಾಜ
ಶ್ರೇಣಿಯಲಿ [3]ತವದಶವರೂಥ[3]
ಕ್ಷೋಣಿಪಂಗೆಣೆಯಹ ನೃಪಾಲರನಖಿಳಲೋಕದಲಿ
ನಾಣೆಯುವರ್ಣಂದಿತ್ತರಾ ಗೀ
ರ್ವಾಣ [4]ಫಣಿ[4] ನರರಾಜರುದಿತ ಕೃ
ಪಾಣ ತೇಜೋವಿಭವವೆಂತುಟೊ ನಿಮ್ಮ ದಶರಥನ ೨

ಪುರವ ಹೊಗಿಸಿದುದಿಲ್ಲವಾ ಸುರ
ನರ ಭುಜಂಗಮರಿತ್ತ ಕಪ್ಪವ
ವರಸು[5]ವರ್ಣ ಸುರತ್ನ[5]ಕನ್ಯಾವಸನ ವಸ್ತುಗಳ
ಸರಯುವಿನ ತೀರದಲಿ ಯೋಜನ
ವೆರಡರಳತೆಯ ವಿಶ್ವಕರ್ಮೋ
ದ್ಧರಣ ರಮ್ಯಾಗಾರದಲಿ ಬಿಡಿಸಿದನು ಭೂಪಾಲ ೩

---

[1] ರ್ಲ್ಲೈಸೆ (ಗ.ಟ). [2] ಪ (ಕ), ಮ (ಗ), ತ (ಜ). [3] ಬಳಕೀಗ ದಶರಥ (ಝ.ಟ.ಡ). [6] ಪತಿ (ಟ.ಡ). [5] ರತ್ನಸುಧೇನು (ಚ).

ನಿರತಿಶಯ ಯಜ್ಞೋಪಕರಣದ
ಪರಿಪರಿಯ ಸಂಭಾರಚಯ ಗೋ
ಚರಿ[1]ಸಿದುದು ಪರಗುರು[1]ವಸಿಷ್ಠಮುನೀಂದ್ರನಾಜ್ಞೆಯಲಿ ೮

ಬರಸಿದವು ಬಳಿಕೋಲೆ ಮಣಿಹಾ
ಱರಿಗೆ ಹೇಳಿಕೆಯಾಯ್ತು [2]ಶಿಷ್ಟರ[2]
ಪರುಟವಿಸಿ ಕಳುಹಿದನು ಪಾವುಡ ಸಹಿತ ಪಾರ್ಥಿವರ
ಪುರಗಳಿಗೆ ಕೈಕಯ ಧರಾಧೀ
ಶ್ವರಗೆ [3]ಕಾಶೀ[3]ಪತಿಗೆ ನಿಮಿಕುಲ
ದರಸಗಾ ಮಗಧಂಗೆ ನಿರುಪಮರೋಮಪಾದಂಗೆ ೯

ಉಳಿದ ಚತು[4]ರಂಬುಧಿವೃತಾವನಿ[4]
ತಳದ ಭೂಪಾಲರಿಗೆ ದೂತರ
ಕಳುಹಿದನು [5]ಕೈಯೊಡನೆ ಗಾರ್ಗೇಯಾತ್ರಿ[5]ಮೊದಲಾದ
ಇಳೆಯೊಳುಳ್ಳ ಸಮಸ್ತ ಮುನಿಸಂ
ಕುಳಕೆ ಸದ್ವಿನಯಾಭಿನಮಿತಾಂ
ಜುಳಿಯ ಭಯಭಕ್ತಿಯಲಿ [6]ಭೂಪತಿ[6] ಬಿನ್ನವತ್ತಳೆಯ ೧೦

ಬಳಿಕ ನೆಲ ಶೋಧಿಸಿತು ಸವನ
ಸ್ಥಳಕೆ ಸುಮುಹೂರ್ತದಲಿ ವೈದಿಕ
ವಿಲ[7]ಸದಲಿ ವಿಧಿವಿಹಿತದಲಿ ಸರಯುವಿನ[7] ತೀರದಲಿ
ನಿಳಯಗಳು ನಿರ್ಮಿಸಿದವಧ್ವರ
ಲಲಿತ ಶಾಲಾವಳಿಯ ಸೌಧಾ
ವಳಿಯ ಸೌರಂಭದಲಿ ಶಶಿಸೂರ್ಯಪ್ರಭಾನ್ವಿತದ ೧೧

---

1 ಸುತಿರ್ದವು ವರ (ಚ), ಸಿದುದು ಮಿಗೆ ಗುರು (ಝ), ಸಿದುದು ಗುರು ವರ (ಟ.ಡ.ಣ). 2 ಶೇಷ್ಠರ (ಚ). 3 ಕೋಸಲ (ಚ). 4 ರಾಂಬುಧಿಯಲವನೀ (ಗ.ಜ.ಝ.ಣ), ರಾಂಬುಧಿವ್ರಜದ ಭೂ (ಟ), ರಾಂಬುಧಿವೃತದ ಭೂ (ಡ). 5 ಕೈಯೊಡನೆ ನಾರದನತ್ರಿ (ಕ), ಕೈಯೊಡನೆ ದಶರಥನತ್ರಿ (ಗ.ಝ), ಭೂಪಾಲ ಕೈಯೊಡನತ್ರಿ (ಜ), ಕರಸಿದನು ಕೈಯೊಡನತ್ರಿ (ಟ.ಡ). 6 ಕಳುಹಿದ (ಗ). 7 ಸಿತ ಸುವಿಧಿವಿಹಿತದಲಿ ಸರಯುವಿನ (ಕ), ಸಿತ ಸುವಿಹಿತದಲಿ ಸರಯೂನದಿಯ (ಚ).

ಕೇಳಿದ್ಕೆ ಕುಶ ಬಳಿಕ ಭೋಜನ
ಶಾಲೆ [1]ಪತ್ನೀಶಾಲೆಯೆಸೆವ ವಿ[1]
[2]ಶಾಲ[2] ಮಖಶಾಲಾಧಿ ನಾನಾ [3]ವಿವಿಧ[3] ಶಾಲೆಗಳ
ಸಾಲು ಮೆಱೆದವು ಸೊಗಸಿದವು ಸಂ
ಸ್ಥೂಲತರ[4]ವೇ[4]ದಿಗಳು ವಿಮಲವಿ
ಶಾಲ ವಿಪ್ರಸದಸ್ಸುಗಳು ಸಭೆಗಳು [5]ಧ[5]ರಾಧಿಪರ ೧೨

ಚಾರುತರ ಮಖವೆರಡರಮಳಾ
ಗಾರಮಂಟಪವಳಯದಲಿ ಕ
ರ್ಪೂರ ಧೂಳಿ[6]ಸಿತಿಕ್ಕಲದ ಮಾಲೆಗಳ ಮೌಕ್ತಿಕದ[6]
ತೋರಣಗಳುಪ್ಪರಿಸಿದವು ಬಿಂ
ಗಾರಿ ಬಿಗಿದವು ಬಹಳ ಕದಳೀ
ಸಾರ[7]ದಲಿ ಸಂಭ್ರಮಿಸಿದವು ಸೌಧಾಳಿ[7] ನಾಲ್ದೆಸೆಯು ೧೩

ತಳಿತ ಪಲ್ಲವ ಸತ್ತಿಗೆಯ ಹೊಂ
ಗಳಸಗಳ ಹೊದಱೆದ್ದ ಝಲ್ಲರಿ
ಗಳ ವಿಚಿತ್ರಾಂಬರದ ಮುತ್ತಿನ ಮೇಲುಕಟ್ಟುಗಳ
ನೆಲೆನೆಲೆಯ ಲೋವೆಗಳ ಮುಕ್ತಾ
ಫಲದ ಸಡಕಿನ ಸೂಸಕದ ಲಂ
ಬಳದ ಲಳಿಗಳ ಲಹರಿಯಲಿ [8]ರಂಜಿ[8]ಸಿದುದನವರತ ೧೪

ಸವೆದವೀಪರಿ ಸಪ್ತತಂತು
ಪ್ರವರದಧಿಕೃತರಚಿತ ನಾನಾ
ಭವನ ಭೂಮೀದೇವ ಭೂಭುಜ ವೈಶ್ಯ ಶೂದ್ರರಿಗೆ
ವಿವಿಧವರ್ಣಾಶ್ರಮರಿಗಾದವು
ಭವನ ಬಹಿರಾವರಣದಲಿ [9]ಮಖ[9]
ಸವನಸಾಧನ ವಸ್ತುಚಯ ಸೊಗಸಿದವು ನಿಮಿಷದಲಿ ೧೫

---

[1] ಯಂತರ್ವೇದಿ ಪತ್ನೀ (ಕ.ಟ.ಡ.ಣ), ಪತ್ನೀಶಾಲೆ ಸವೆದವಿ (ಗ). [2] ಶಾಲೆ (ಕ.ಟ.ಡ.ಣ). [3] ವಿಧದ (ಕ). [4] ವಾ (ಗ.ಜ). [5] ನ (ಕ.ಝ). [6] ಯಲಿಕ್ಕಿದವು ಮಾಲೆಗಳು ಮೌಕ್ತಿಕದ (ಗ), ಯನಿಕ್ಕಿದರು ಮೌಕ್ತಿಕದ ಮಾಲೆಗಳ (ಚ). [7] ಸೌರಂಭದಲಿ ಮೆಱೆದವು ಸೌಧ (ಗ.ಜ). [8] ಲಂಬಿ (ಚ). [9] ಮಿಗೆ (ಕ).

ಕೇಳಿಸಿತು ಬಳಿಕಖಿಳಪೃಥ್ವೀ
ಪಾಲಪಂಕ್ತಿಯನಶ್ವಮೇಧವಿ
ಶಾಲಸುತಕಾಮೇಷ್ಟಿಯಧ್ವರವಾರ್ತೆ ನಿಮಿಷದಲಿ
ಮೇಲೆಮೇಲುಬ್ಬರದ ಗಮನದ
ಜಾಳಿಯಲಿ ಬರುತಿರ್ದುದಂಬುಧಿ
ವೇಲೆಯಂತರ್ವಿಷಯದವನೀಪಾಲಸಂದೋಹ ೧೬

ಜನಕ ಕಾಶೀರಾಜ ಕೈಕಯ
ಜನಪನಂಗಾಧೀಶ ಮಗಧಾ
ವನಿ[1]ಯಪತಿ[1] ಮಾದ್ರೇಶ ಮಾಳವ [2]ಮರುಮಹೀ[2]ಪಾಲ
ವಿನುತಗುಜ್ಜರ ಗೌಳ [3]ಬರ್ಬರ[3]
ಜನಪದಾದಿ ಸಮಸ್ತನೃಪರೊ
ಗ್ಗಿನಲಿ ಬಂದುದು ಭಾಸ್ಕರಾನ್ವಯನಮಳ[4]ಪುರವರಕೆ[4] ೧೭

ಲಾಳ ಚೋಳ ವರಾಳ ಯವ ಬಂ
ಗಾಳ ಬಾಹ್ಲಿಕ ಬೋಟ ವರಪಾಂ
ಚಾಲ ಪುಷ್ಕರ ಪಾರಿಯಾತ್ರ ಕರೂಷ ಕಾಂಭೋಜ
ಗೌಳ[5]ಸಾಂಧ್ರ[5] ಕಳಿಂಗ ಕುರುನೇ
ಪಾಳ ನಿಷಧ ವಿದರ್ಭ ಧರಣೀ
ಪಾಲತತಿ ಸಂದಣಿಸಿದುದು ಸಾಕೇತನಗರಿಯಲಿ ೧೮

ಕುರುಮಹೀತಳದಮಳಭಾರತ
ವರುಷದನುಪಮ ರಮ್ಯಕದ
ಹರಿವರುಷ ವಿಷಯದಿಳಾವೃತದ ಕಿಂಪುರುಷಮಂಡಲದ
ನರಪತಿಗಳೈತಂದುದೇನ
ಚ್ಚರಿಯೊ ದಶರಥಸಾರ್ವಭೌಮಕ
ನರಸುತನದ ಮಹಾಮಹಿಮೆ[6]ಗಿನಕುಲಜ[6] ಕೇಳೆಂದ ೧೯

---

[1] ಪನಾ (ಗ.ಜ). [2] ಮರುತಭೂ (ಕ), ಮಹೀ ಭೂ (ಗ). [3] ಗರ್ಜಣ (ಗ), ಕೊಂಕಣ (ಟ). [4] ಪಟ್ಟಣಕೆ (ಕ). [5] ವಾಂಧ್ರ (ಕ). [6] ಮನುಕುಲಜ (ಕ.ಣ.), ಯನು ಲವನೆ (ಚ), ಯನು ಕುಶನೆ (ಟ.ಡ).

ನೆರೆದುದೈ ಬಳಿಕತ್ರಿ ಕಣ್ವಾಂ
ಗಿರಸ ಕಶ್ಯಪ ಕುಶಿಕಸುತ ಸುರ
ಗುರುತನೂಭವ ಗಾರ್ಗ್ಯ ಗೌತಮ ಜಹ್ನು ಜಾಬಾಲಿ
ಹರಿತ ಮಾರ್ಕಂಡೇಯ ಮೈತ್ರಾ
ವರುಣಿ [1]ಮುದ್ಗಲ[1] ಮುಖ್ಯಮುನಿಸಂ
ತರುಗಳಾ ಸೂರ್ಯಾನ್ವಯನ ಸಾಕೇತನಗರಿಯಲಿ ೨೦

ಚ್ಯವನ ದತ್ತಾತ್ರೇಯ ಭೃಗುಸಂ
ಭವ ಸುತೀಕ್ಷಣ ದೀರ್ಘತಪಗಾ
ಲವ ಮತಂಗ ಸುವತ್ಸ ಜೈಮಿನಿ ಕಂಕನುಪಮನ್ಯು
ರವಿಪಿತಾಮಹ ಮುನಿಮೃಕಂಡು
ಪ್ರವರ ಶೌನಕ ಮುಖ್ಯ ಮುನಿಪುಂ
ಗವರು ಬಂದರು ವರತಪೋಧನಗ[2]ಣದ[2] ಗಡಣದಲಿ ೨೧

ವಿವಿಧ ವಿದ್ವಜ್ಜನ ಸುಮಾಂತ್ರಿಕ
ನಿವಹ ಗಾಯಕ ಕಥಕ ನರ್ತಕ
ಕವಿ ವಿದೂಷಕ ವಾದಿ ವಾಗ್ಮಿ ಮಹೇಂದ್ರಜಾಲಕರು
ನವವಿನೋದಿ ವಿದಗ್ಧಜಟಿ ವೈ
ಷ್ಣವ ಕಪಾಲಿಕ ಬೌದ್ಧ [3]ಶೈವ[3]
[4]ಪ್ರವರ[4]ದಾನಾರ್ಥಿಗಳು ನೆರೆದುದು [5]ವಾಜಿಮೇಧ[5]ದಲಿ ೨೨

ಜಗದ ಜನಪದ[6]ದರ್ಥಿಗಳು ಶಿ[6]
[7]ಲ್ಪಿಗಳು[7] ಸರಸಸರಿಸೃಪಗಾ
ಹಿಗಳು ವಾಮನಬಧಿರಮೂಕಾಕ್ಷಮರುನೋಟಕರು
ಹೊಗಳಿಕೆಯ ಪರಿಪರಿಯ ಕೈವಾ
ರಿಗಳು ನೆರೆದುದು ನಿಮ್ಮಯೋಧ್ಯಾ
ನಗ[8]ರದಧಿ[8]ರಾಜೇಂದ್ರಚಂದ್ರಮನಶ್ವಮೇಧದಲಿ ೨೩

ತರುಣ ಕೇಳ್ಕೆ ತುರಗಮೇಧಾ
ಧ್ವರದ ಮೇಲಾರೈಕೆ ನಡೆದುದು
ಪರಮಋಷಿಜಾಬಾಲಿಗವನೀಶ್ವರ[9]ರ[9] ಮಾನ್ಯತೆಯ

---

[1] ಮೌದ್ಗಲ (ಕ.ಜ.ಟ.ಡ). [2] ಡಣ (ಕ). [3] ಮುಖ್ಯ (ಕ), ಮೂಕರ (ಗ). [4] ನಿವಹ (ಗ). [5] ರಾಜಮೇಧ (ಕ), ನೃಪನಯಾಗ (ಗ). [6] ದರ್ಥಿಗರು ಕ (ಕ), ದತಿಥಿಗಳು ಕ (ಗ), ದರ್ವಿಗಳು ಶಿ (ಟ.ಡ). [7] ಬ್ಬಿಗರು (ಕ.ಗ). [8] ರಿಯಲ (ಕ). [9] ನ (ಚ).

ಪರುಟವಣೆ ವಿಜಯಂಗೆ ಸೇರಿತು
ಧರಣಿಯಮರರ ದಕ್ಷಿಣೆಯ ವಿ
ಸ್ತರಣದೊಡೆತನ ಸಂದುದಧ್ವರದಲಿ ಸುಮಂತ್ರಂಗೆ ೨೪

ಕರೆಕರೆದು ಭೋಜನಕೆ ಭೂಮೀ
ಸುರರ [1]ನಿಲಿಸಿ ಸು[1]ಗಂಧಮಾಲ್ಯಾಂ
ಬರಸಮರ್ಪಣೆಗಾದುದೊಡೆತನವಾ ಜಯಂತಂಗೆ
ನೆರೆದ ಯಾಚಕಜನ[2]ರ[2] ಕರೆದುಪ
ಚರಿಸಿ ಮನ್ನಿಸುವನಿತುದೃಷ್ಟಿಯ
ಪರಿವಶ[3]ಕೆ[3] ಸಂದುದು ವಸಿಷ್ಠಮುನೀಂದ್ರನಾಜ್ಞೆಯಲಿ ೨೫

ಬಯಸಿ ಬೇಡಿದ ವಿವಿಧವಸ್ತು
ವ್ರಯಕೆ ಭಾರಕನಾದನಾ ಕೈ
ಕೆಯನೃಪಾಲಕಸುತ ಯುಧಾಜಿತು ಯಜ್ಞವಾಟದಲಿ
ನಿಯತದಧಿಘೃತದುಗ್ಧಗುಡಸಂ
ಚಯಕೆ ಸಂಬಾರಾದಿ ರಸನಿ
ರ್ಣಯಕೆ ಕಟ್ಟಧಿಕಾರ ಸಿದ್ಧಾರ್ಥಂಗೆ ನೆಲೆಯಾಯ್ತು ೨೬

[4]ಹೆಸರೆ[4]ನಿಪ ನಾನಾದಿಗಂತದ
ವಸುಮತೀಶರನುಚಿತವೃತ್ತಿಯ
ಲೊಸಗೆವಡಿಸುವ ಪರುಟವಣೆ ರೋಮಾಂಘ್ರಿಭೂವರನ
ವಶಕೆ ಸಂದುದು ಸಕಲಸೇನಾ
ವಿಸರ ವಿವಿಧಪ್ರಜೆಗಳನು ಮ
ನ್ನಿಸುವ ಕಟ್ಟಧಿಕಾರವಾ[5]ಯಿತು ಮಗಧ[5]ಭೂಪತಿಗೆ ೨೭

ಆದು[6]ದುಳಿದುಪ[6]ಮಂತ್ರಿಗಳಿಗುಳಿ
ದಾದ [7]ಸೇವೆಯ[7] ಪರುಟವಣೆ ಮೇ
ಲಾದುದಧಿವಾಸರ ನೃಪಾಲಂಗಾಗಮೋಕ್ತದಲಿ
ಆದಿನಾರಾಯಣನ ಶ್ರುತಿಸಂ
ವಾದಪಾರಾಯಣನ ಸುಜನಾ
ಹ್ಲಾದಸುಖಪೂರಣನನೊಲಿದರ್ಚಿಸಿದನಾ ಭೂಪ ೨೮

---

[1] ಬರಿಸುವ (ಕ). [2] ವ (ಕ). [3] ತಿ (ಚ). [4] ಹೊಸತೆ (ಕ.ಗ.ಜ.ಝ).
[5] ಯ್ತಾ ಮಗಧ (ಕ.ಜ.ಝ), ಯಿತು ಮಾದ್ರ (ಟ.ಡ.ಣ). [6] ದನುಪಮ (ಕ.ಝ.
ಟ.ಡ.ಣ), ದುಳಿದಿಹ (ಜ). [7] ಸೇನೆಯ (ಕ.ಝ), ಕೆಲಸದ (ಜ).

ತರುಣ ಕೇಳ್ ಮಱುದಿನದಲಮೃತೋ
ತ್ಕರಶುಭೋದಯ ಲಗ್ನದಲಿ ವಿ
ಪ್ರರ ಮಹಾಮಂತ್ರಾಭಿಪೂರಿತ ವಿವಿಧವಿಭವದಲಿ
ಅರಸಿಯರು ಸಹಿತುಲಿವ ಮಂಗಳ
ತರದ ತೂರ್ಯತ್ರಯದಲಿಭಕಂ
ಧರದಲೈತಂದಿಳಿದು ಹೊಕ್ಕನು ಯಜ್ಞಮಂಟಪವ ೨೯

ಕರೆಸಿದನು ಬಳಿಕಖಿಳಪೃಥ್ವೀ
ಶ್ವರರನನುಪಮ ತುರಗಮೇಧಾ
ಧ್ವರದ ಶಾಲಾವರಣ ಸೌಧಾವಳಿಯ ವಳಯದಲಿ
ಹರುಷದಲಿ ಕುಳ್ಳಿ[1]ದರು ಹರಿವಿ[1]
ಷ್ಟರಗಳಲಿ ಮಣಿಬಂಧುರದ ವಿ
ಸ್ತರದ ತತ್ಕಾಲೋಚಿತದ ವಿನಿಯೋಗಿಜನಸಹಿತ ೩೦

ಸಂದಣಿಸಿದುದು ಸಕಲಮುನಿಜನ
ವೃಂದವಾ ಕ್ರತುಕರ್ಮಶಾಸ್ತ್ರದ
ಛಂದಸಾಗಮ ಪರಿಣತರು ಪರಿಚಾರಕವ್ರಾತ
ಬಂದುದಾಕ್ಷಣ ಸವನ ಸಾಧನ
ದಿಂದ[2]ಲಾ ಕ್ರತುಶಾಲೆ ಸೊಗಸಾ
ಯ್ತಂ[2]ದಿನಂಬುಜಗರ್ಭನಾರಂಭಿಸಿದ ಮಖದಂತೆ ೩೧

ಕೇಳಿದೈ ರಘುವಂಶಲಕ್ಷ್ಮೀ
ಲೋಲಸುತ ಬಳಿಕಾ ಮಹಾಧ್ವರ
ಶಾಲೆಯಲಿ ವರವಾಮದೇವವಸಿಷ್ಠರುಚಿತದಲಿ
ಬಾಲಶಶಿಧರಸನ್ನಿಭನ ಮುನಿ
ಜಾಲಚಂದ್ರಪ್ರಭನ ಶಾಂತಾ
ಬಾಲ[3]ಕಿಯ[3] ವಲ್ಲಭನ ಮನ್ನಿಸಿದರು ನಯೋಕ್ತಿಯಲಿ ೩೨

ಎಸೆ[4]ದುದ[4]ಧ್ವರವೆರಡರಭಿಮುಖ
ವಸತಿಯುಭಿವಳಯದಲಿ ಸಂಪಾ
ದಿಸಿದ ಸಕಲದ್ರವ್ಯ[5]ವಾ[5] ಮುನಿವರನನುಜ್ಞೆಯಲಿ

---

[1] ರ್ದರುರುವಿ (ಕ). [2] ಕ್ರತುಶಾಲೆಗಳು ಸೊಗಸಿದವಂ (ಕ). [3] ಕೀ (ಗ.ಟ). [4] ದವ (ಕ). [5] ವನು (ಗ).

ಮಿಸುಪ ಕಾಂಚನಪಾತ್ರೆಗಳ ಪರಿ
ವಿಸರದಮಳಸುವರ್ಣಕುಂಭ
ಪ್ರಸರದಲಿ ತದ್ವಿಧಿವಿಹಿತ ಯಜ್ಞೋಪಕರಣದಲಿ ೨೩

ವರಕುಶಸ್ಥಂಡಿಲವುಲೂಖಲ
ಚರುಪುರೋಡಾಶಾಜ್ಯದರ್ಭಾಂ
ಕುರಸುವರ್ಣದ್ರೋಣಸ್ರುಕ್ಸ್ರುವ ವರತಿಲವ್ರೀಹಿ
ಬರುಹಿಯಿಧ್ಮಸಮಿತ್ಪ್ರಣೀತಾ
ವರಣಿ ಘೃತಪಾತ್ರಾದಿ ಮುಖಪರಿ
ಕರವ ಮೇಳೈಸಿದರು ತತ್ಕ್ರತುಕುಂಡವಳಯದಲಿ ೨೪

ಸುಳಿದು ಬಂದುದು ವಾಜಿ ಭೂಮಂ
ಡಲವನನುಪಮವೈದಿಕೋಕ್ತದ
ವಿಲಸದಲಿ ನೃಪಪತ್ನಿ ಜಾಗರದಲಿ ಮಹಾಹಯದ
ಬಳಿಯಲಿದ್ದ[1]ಳು[1] ಲಕ್ಷ್ಮಿ ಲಕ್ಷ್ಮೀ
ನಿಳಯನಮಳಧ್ಯಾನದಲಿ ವರ
ವಿಲಸಿತಾಧ್ವರಯೂಪತತಿ ರಂಜಿಸಿದವಿದಿರಿನಲಿ ೨೫

ಯೂಪಬಂಧ ತುರಂಗ ಪಶು ಮು
ಖ್ಯೋಪಪನ್ನ ಸಮಸ್ತಪಶುಶಮ
ನೋಪರಾಗ [2]ಪವಿತ್ರ[2]ಹುತ ಪರಮಾನ್ನ ಪೃಷದಾಜ್ಯ
ಸೋಪವೀತಾಮಿಕ್ಷೆ ಜುಹು ಸಮಿ
ಧೋಪಚರ್ಯಾಗ್ನಿಪ್ರಣೀತ
ಸ್ಥಾಪಿತ ಪ್ರಾಗ್ವಂಶದಧ್ವರಶಾಲೆ ಚೆಲ್ವಾಯ್ತು ೨೬

ಬಳಿಕ ಮಾರ್ಕಂಡೇಯ ಕಶ್ಯಪ
ಕಲಶಭವ ಚ್ಯವನಾಂಗಿರಸ ಮುನಿ
ತಿಲಕ ಕೌಶಿಕ ಯಾಜ್ಞವಲ್ಕ್ಯಪ್ರಮುಖ ಮುನಿಜನರ
ನಿಲಿಸಿದನು ಋತ್ವಿ[3]ಕ್ಪ್ರಪೂತ[3]
ಸ್ಥಳದ ವಿಮಲೋದ್ಗಾತೃಗಳ ಸ
ಮ್ಮಿಳಿತಲಲಿತಸ್ಥಾನಕದಲಜಸೂನು ಹರುಷದಲಿ ೨೭

---

[1] ರು (ಚ.ಜ). [2] ದಮಿಶ್ರ (ಗ). [3] ಕ್ಯಭೂತಾ (ಕ), ಕ್ಕುಪೂತ (ಟ).

ಕರೆದು ಮುನಿ ಸಾರಂಗಶೃಂಗನ
ನಿರವಿಸಿದನಾ ಪುತ್ರಕಾಮ್ಯಾ
ಧ್ವರದ ಬ್ರಹ್ಮತ್ವಕ್ಕೆ ತುರಗಾಧ್ವರಕೆ ತಾನಾದ
ಪರಮಯಜ್ಞವಿಧಾನ ವಿಹಿತೋ
ತ್ಕರಶ್ರುತಿಸ್ಮೃತಿ ಸಂಪ್ರ[1]ಸಾ[1]ರಣೆ
ಗಿರಿಸಿದನು ಪುಸ್ತಕವನಿತ್ತು ಮುನೀಂದ್ರ ನಿಜಸುತನ ೩೮

ರಾಜರುಷಿ ಜನಕನನು ಕಾಶೀ
ರಾಜನನು ಕೇಕೆಯನೃಪಾಲರ
ಯಾಜಮಾನ್ಯದ ಮಾನ್ಯತೆಯುಲಾ ಯಜ್ಞಶಾಲೆಯಲಿ
ಆ ಜನೇಶ್ವರ ನಿಲಿಸಿ ಮುದದಲಿ
ಪೂಜಿಸಿದನವರುಗಳ ಬಳಿಕ ಸ
ರೋಜಭವಭವನಂಘ್ರಿಯಲಿ ಚಾಚಿದನು ಮಸ್ತಕವ ೩೯

ಮುನಿ ಸುಪುತ್ರಾವಾಪ್ತಿರಸ್ತ್ವಿಂ
ದೆನುತ ನೆಗಹಿದನೊಸರ್ವ ಕರುಣದ
[2]ನನೆ[2]ವಳಯ ನಯಸಾರವಚನದಲರಸನಾನನವ
ಜನಪ ದೀಕ್ಷಿತನಾದನಾ ಮುನಿ
ವಿನುತವಚನದಲಾ ಹವಿರ್ಭೋ
ಜನದ ಬರ್ಹಿರ್ಮುಖರು ನೆರೆದುದು [3]ನೀರದಾಧ್ವದಲಿ[3] ೪೦

ದ್ಯುಮಣಿಕುಲ ಕೇಳ್ ಚೈತ್ರಸಿತಪಂ
ಚಮಿಯುಲುತ್ತರಪೂರ್ವವೇದಿಯ
ವಿಮಲಪುಣ್ಯಾಹದ ಮಹಾವಾಚನೆಯ ವಿಸ್ತರಿಸಿ
ಅಮಲತರ ಶ್ರುತಿಘೋಷದಲಿ ಭೂ
ರಮಣನಾ ಕ್ರತುಯಾಜಮಾನಾ
ಕ್ರಮವ ಕೈಕೊಂಡೆಸೆದನಾ ಮುನಿವರರ ಮಧ್ಯದಲಿ ೪೧

ಹೊದೆದ ಹರಿಣಾಜಿನದ ನವನೀ
ತದ ವಿಲೇಪದ ಋಷ್ಯಶೃಂಗನ
ವಿದಿತ ಕಳಕಳದಮಳಸೂಕ್ತದ ಸಂವಿಧಾನದಲಿ
ಉದಿತಮಂಗಳತೂರ್ಯರವದ
ಭ್ಯುದಯದಲಿ ವೇದೋಕ್ತವಿಧಿಮಾ
ರ್ಗದಲಿ ಮಾಡಿದರಮಲಮಖ ಪುರುಷಪ್ರತಿಷ್ಠಕವ ೪೨

[1] ಧಾ (ಕ). [2] ತನಿ (ಕ). [3] ಬಹಳ ನೆರವಿಯಲಿ (ಕ).

ವಿರಚಿತಾಗಮದಿಂದ ದರ್ಭಾಂ
ಕುರಪರಿಸ್ತರಣಾದಿ ಗಂಧೋ
ತ್ಕರಸುಪುಷ್ಪತಾಕ್ಷತೆಗಳಿಂದರ್ಚಿಸಿದರಾ ಶಿಖಿಯ
ಬರುಹಿಯಿಧ್ಮಸ್ರುವಗಳಿಂ [1]ಸ
ತ್ಕ[1]ರಿಸಿ ವಿಧಿಪೂರ್ವಕದಿ ಮಖ[2]ಬಂ
ಧುರತರೇಂ[2]ಧನದಿಂದ ಪಟುಗೊಳಿಸಿದರು ಹುತವಹನ ೪೩

ಸುತ್ತಲಾಹವನೀಯ ಗಾರುಹ
ಪತ್ಯ ದಕ್ಷಿಣವಹ್ನಿಗಳ ಮುನಿ
ಪೋತ್ತಮರು ಬಳಸಿದರು ತತ್ಕ್ರತುಪರಿಕರಂಗಳಲಿ
ಎತ್ತಿದರು ಹಯಮೇಧ ಮಖಮೂ
ಲೋ[3]ತ್ತ[3]ರದ ಮಂತ್ರಂಗಳನು ನಿಗ
ಮೋ[3]ತ್ತ[3]ರದ ತತ್ಪೂರ್ವಮೀಮಾಂಸಾಪರಿಶ್ರುತದ ೪೪

ಇದುವೆ ಸಿದ್ಧ[4]ವಿ[4]ದಲ್ಲ ನಿಶ್ಚಯ
ವಿದು ಶ್ರುತಿಸ್ಮೃತಿಗಳಲಿ ಬಿಡಿ ಸಾ
ಕಿದುವೆ ಸಾಮಾನ್ಯಪ್ರಯೋಗವಿದೀಗಶಾಸ್ತ್ರದಲಿ
ವಿದಿತ[5]ವಾಕ್ಯ[5]ಪರಿಗ್ರಹಣವಿಂ
ತಿದಱ ಮೇಲಿಲ್ಲೆಂಬ ಮುನಿತ
ರ್ಕದ ಘಡಾವಣೆ ಘಾಡಿಸಿದುದಾ ಯಜ್ಞಮಂಟಪವ ೪೫

ಬಳಿಕ ನಡೆದುದು ಮಂತ್ರ[6]ಮಂತ್ರಾ[6]
ವಳಿಗಳಲಿ ತತ್ಸಾಮಗಾನದ
ಕಳಕಳದ ನಿಗಮತ್ರಯಂಗಳ ನಿಶ್ಚಯಂಗಳಲಿ
ವಿಲಸದುದ್ಗಾತೃಗಳ ಮಂತ್ರಾ
ಕಲಿತಹೋತ್ರಧ್ವರಿಯು ರುತ್ವಿಜ
ರುಲುಹು ತಲೆದೂಗಿಸಿತು ನಭದ ಹವಿರ್ಭುಜಾವಳಿಯ ೪೬

---

[1] ಸಂಸ್ಕ (ಚ). [2] ಪರಿಕರಗಳಿಂ (ಚ). [3] ತ್ಕ (ಚ). [4] ವ (ಕ.ಗ).
ಕಾವ್ಯ (ಗ). [6] ತಂತ್ರಾ (ಕ.ಜ.ಝ.ಡ.ಣ).

* ಕ್ರತುಮುಖಸ್ವಾಹಾಯುಮಾನಾ
ಹುತಿಯವೌಷಟ್ಕೃತಿಯ ಸರ್ವಾ
ಹುತಿಯ ಸೌರಂಭಾತಿಶಯ ದಣಿಸಿದುದು ಸುರತತಿಯ
ಶತಮುಖಾದಿ ಸಮಸ್ತದೇವ
ಪ್ರತತಿ ತೇಗಿತು ತೃಪ್ತಿಯಲಿ ಭೂ
ಪತಿಯ ರಾಜಿತ ವಾಜಿಮೇಧದಲಣುಗ ಕೇಳೆಂದ ೪೭

ಬೀಳುವಾಹುತಿಗಳನು ಸವಿದುರಿ
ನಾಲಗೆಗಳುಬ್ಬೆದ್ದು ಕುಣಿದವು
ಮೇಲುಹವಿಗವ್ವಳಿಸಿ ಹರಹಿನಲಗ್ನಿಕುಂಡದಲಿ
ಹೇಳಲೇನದನಶ್ವಮೇಧದ
ಬೇಳುವೆಯ ಸಂಭ್ರಮ[1]ದ[1] ಧಾಳಾ
ಧೂಳಿಯಲಿ ತಿವಿದಾಡಿದವು ಜಿಹ್ವೆಗಳು ಹುತವಹನ ೪೮

[2]ಸಿಳಿಸಿಳಿ[2]ಧ್ವನಿ ಮಸಗೆ ತಿಲ ಹೆ
ಕ್ಕಳಿಸಿದವು ಝುಮ್ಮೆಂದು ಸಮಿಧಾ
ವಳಿಗಳಬ್ಬರಿಸಿದವು ಛಟಛಟಛಟ ನಿನಾದದಲಿ
[3]ಲುಳಿತ[3] ಘೃತಸಂಮಿಶ್ರಚರು ಪಟು
ಗೊಳಿಸಿ[4]ದುದು[4] ಪಶು ಹವಿಗೆ ಭುಗಿಲೆಂ
ದುಲಿದು ನಲಿದಾಡಿದನು ಹುತವಹನಶ್ವಮೇಧದಲಿ ೪೯

ತಳಿತು[5]ದೋ[5] ಪರಿಮಳಿತ ಧೂಮಾ
ವಳಿ [6]ವಿಯದ್ಭಾ[6]ಗದಲಿ ಸುರಸಭೆ
ಗಳಲಿ ಸರಸಿಜಸಂಭವನ ಪಟ್ಟಣದಲಾ ಧ್ರುವನ
ನಿಳಯದಲಿ ಲಂಬಿಸಿತು ಸುಧೆಯಲಿ
ಹೊಳಕೆಗಟ್ಟಿತು ಸುರಕುಜದ ಹಂ
ಬಲನು [7]ಬಿಡಿ[7]ಸಿತು ಸುರಪಶುವನೇಳಿಸಿತು ನಾಕದಲಿ ೫೦

ಕುಶನೆ ಕೇಳ್ಕೈ ತಣಿದುದಮರ
ಪ್ರಸರವಲ್ಲಿ ಸಮಸ್ತಭೂಸುರ
ವಿಸರವಿಲ್ಲಿ ಸುಭೋಜನದಲಿ ಸಮಸ್ತದಾನದಲಿ

---

[1] ವ (ಚ). [2] ಛಳಛಳ (ಕ). [3] ಉಳಿದ (ಕ). [4] ದವು (ಕ). [5] ದಾ (ಚ).
[6] ಯುಹವಿಭಾರ್ (ಕ). [7] ವ ಱ (ಕ,ಝ).

* ಚ ಪ್ರತಿಯಲ್ಲಿ ೪೭ನೆಯ ಪದ್ಯವಿಲ್ಲ

ಕುಶನನುಜ ಕೇಳ್ ಸಕಲಜನ ಹರು
ಷಿಸಿತು ಹಯಮೇಧದಲಿ ನಡೆದುದು
ವಸುಧೆಗಚ್ಚರಿಯೆನಲು ಮಖ ದಶರಥಮಹೀಪತಿಯ ೫೧

ಶ್ರುತಿಯ ಪೂರ್ವೋತ್ತರರಹಸ್ಯ
ಸ್ಮೃತಿಸುಮಾರ್ಗದ ತರ್ಕಶಾಸ್ತ್ರದ
ವಿತತವಿಮಲಧ್ಯಾನ ಜಡಿದುದು ಮುನಿಸದಸ್ಸಿನಲಿ
ಕೃತಿಸುವಾಕ್ಯ ವಿನೋದಪದಪ
ದ್ಧತಿ ಸುನರ್ತನ [1]ವಾದ್ಯಗೀತಾ[1]
ಮೃತಲಹರಿ ಲಳಿಮಸಗಿತಾಚೆಯುಲರಸು[2]ಹಂತಿ[2]ಯಲಿ ೫೨

ಆದುದೀಪರಿ ಸಕಲ ಸೌರಂ
ಭಾದಿವೈಭವದಿಂದಲಾ ಸುಕೃ
ತೋದಯನ ಹಯ ಸಪ್ತತಂತುನಿರಂತರಾಯದಲಿ
ಆದುದಾ ಕಾಮ್ಯಾಧ್ವರವು ಬಳಿ
ಕಾ ದಯಾಂಬುಧಿ ಮುನಿವಿಭಾಂಡುತ
ನೂದಯನ ಮಂತ್ರಾಭಿಪೂರಿತ ವಿಹಿತಸಾಂಗದಲಿ ೫೩

ಕ್ಷಿತಿಸುತಾಸುತ ಕೇಳು ಪೂರ್ಣಾ
ಹುತಿಯು ಸಮನಂತರದಲಾ ವಿ
ಶ್ರುತಸುತೇಜೋಮೂರ್ತಿ ಹೊಳೆದುದು ಯಜ್ಞಕುಂಡದಲಿ
ಶತಮುಖಪ್ರಮುಖಾದಿದೇವ
ಪ್ರತತಿಗಳ ಬಿನ್ನಹದ ಲಕ್ಷ್ಮಿ
ಪತಿಯುವೊಲು ಮೈದೋಱಿತಾಹವನೀಯಮಧ್ಯದಲಿ ೫೪

ಮಿಸುಪಕಾಂಚನ ಪಾತ್ರೆಯಲಿ ಪೂ
[3]ರಿ[3]ಸಿದ ಪರಮಾನ್ನವನು ಬೊಮ್ಮದ
ರಸದ ಪರಿಪೂರ್ಣವನು ಸತ್ವರಜಸ್ತಮೋಗುಣದ
ಎಸಕದಭಿ[4]ಗತ[4]ಪೂರ್ಣವನು ಸುಮ
ನಸರು ಜಯಜಯಯೆನಲು ಕರಯುಗ
ಬಿಸರುಹದಿನೊಲಿದಿತ್ತುದಾ ನಿಜಮೂರ್ತಿ ದಶರಥಗೆ ೫೫

---

[1] ಗೀತವಾದ್ಯಾ (ಚ). [2] ಪಂಗ್ತಿ (ಕ.ಝ). [3] ಜಿ (ಕ.ಟ.ಡ). [4] ಮತ (ಕ.ಜ.ಝ), ನವ (ಗ).

ಮೊರೆದವಮರರ ಭೇರಿ ಸುಮನಸ
ತರುಣಿಯರ ಕೈಯಿಂದ ಕುಸುಮೋ
ತ್ಕರಕದಂಬಕ ಸೂಸಿದವು ಶಿರದಲಿ ಮಹೀಪತಿಯ
ಸುರಮುನಿಗಳಾಘೋಷಿಸಿದರು
ಪ್ಪುರದ ಗುಡಿ ನೆಗಹಿದವು ನಗರಾಂ
ತರದಲೇನು ಕೃತಾರ್ಥನೋ ದಶರಥಮಹೀಪಾಲ ೫೬

ಅಡಗಿತಾ [1]ವರ[1]ಮೂರ್ತಿ ಕುಂಡದ
ನಡುವೆ ಬಳಿಕ ಮಹೀಶ ರೋಮಾಂಚದ
ಗುಡಿಯ ಪುತ್ರಫಲೋದಯದ ಪರಿತೋಷದುಬ್ಬಿನಲಿ
ಮಡದಿಯರು ಮೂವರಿಗೆ ಮುನಿಕುಲ
ಮೃಡವಸಿಷ್ಠನ ನೇಮದಲಿ ವಿಂ
ಗಡಿಸಿಕೊಟ್ಟನು ನೃಪತಿ ಪರಮೋದನವನುಚಿತದಲಿ ೫೭

ತರುಣ ಕೇಳ್ಕೈ ಭಾಗವೆರಡರ
ಲೆರಡುಭಾಗಂಗಳು ಸುಮಿತ್ರಾ
ತರುಣಿಗಾದವು [2]ಸೇರಿದವು[2] ಪೂರ್ಣಾಂಶಭಾಗೆಗಳು
ಹಿರಿಯರಸಿ ಕಿಱಿಯರಸಿಯವರಿ
ಬ್ಬರಿಗೆ ಮೂವರಿ[3]ಗಿಂತು[3] ನಾಲ್ಕರ
ಪರಿಗಣಿತ ಪರಮಾನ್ನ ಸಂಘಟಿಸಿದುದು ಭಾಗೆಯಲಿ ೫೮

ನೆನಹು ನಿರ್ವಿಘ್ನದಲಿ ನಡೆದುದು
ಮುನಿವಸಿಷ್ಠನ [4]ಕರುಣದಲಿ[4] ಬಳಿ
ಕನುಪಮಾಧ್ವರದವಭೃತಸ್ನಾನಾವಸಾನದಲಿ
ಮುನಿಗಳಿಗೆ ವಿಪ್ರರಿಗೆ ವಿದ್ವ
ಜ್ಜನಕೆ ವಿವಿಧಾಚಾರ್ಯಯಾಚಕ
ಜನಕೆ ಬೇಡಿದ ಧನವನಿತ್ತನು ದಣಿಯೆ ಧರಣೀಶ ೫೯

[5]ತಣಿದು[5]ದಖಿಳಸುವರ್ಣಮಣಿಭೂ
ಷಣ ಸುಕನ್ಯಾಧೇನು ಹಯ ವಾ
ರಣ[6]ವರಾಂ[6]ಬರ ವಿವಿಧ ವಸ್ತುವ್ರಜದ ದಾನದಲಿ

---

[1] ನಿಜ (ಚ). [2] ಬಳಿಕಲಾ (ಗ). [3] ಗಿತ್ತು (ಕ.ಜ.ಟ.ಡ). [4] ನುಜ್ಞೆಯಲಿ (ಗ). [5] ತಣಿಯ (ಕ), ದಣಿದು (ಚ.ಝ). [6] ನವಾಂ (ಜ), ಹಯಾಂ (ಡ).

ತಣಿಯದಾ[1]ದುದು[1] ಚಿತ್ತವಾ ದಿನ
ಮಣಿಕುಲೇಂದ್ರಂಗಮಮ ಘನವಿತ
ರಣದ ಶಕ್ತಿಯದೆಂತೊ ಸೀತಾಸೂನು ಕೇಳೆಂದ ೬೦

ಅರಸನಖಿಳದಿಗಂತದವನೀ
ಶ್ವರರನವರವರುಚಿತಮಾನ್ಯದ
ಪರಿವಿಡಿಯಲುಡುಗೊಱೆಗಳಲಿ ವಿನಿಯೋಪಚಾರದಲಿ
ಹಿರಿದುಮನ್ನಿಸಿ ಕಳುಹಿದನು ಸ
ತ್ಕರಿಸಿದನು ಪುರಜನವ ಸಮನಂ
ತರದಲೋಕುಳಿಯಾಯ್ತು ದಶರಥಸಾರ್ವಭೌಮಂಗೆ ೬೧

ಬಳಿಕ ಕನ್ನಡಿಕಳಸ ನೃತ್ಯದ
ಲಲನೆಯರ ಮಾಂಗಲ್ಯವಾದ್ಯದ
ಲಲಿತಘೋಷದ ಲಾಜದಧಿದೂರ್ವಾಕ್ಷತಾದಿಗಳ
ವಿಲಸದಭಿನವ ರವದ ಕಂಚುಕಿ
ಗಳ ಘಡಾವಣೆಗಳಲಿ ರಾಜಾ
ವಳಿಶಿರೋಮಣಿ ಹೊಕ್ಕನನುಪಮರಾಜಮಂದಿರವ ೬೨

---

[1] ತನ (ಚ).

# ಎಂಟನೆಯ ಸಂಧಿ

---

ಸೂಚನೆ: ರಾಜರಾಜಾಧೀಶನನುಪಮ
ರಾಜಪರಮೇಶ್ವರ ಮನುಕ್ಷಿತಿ
ರಾಜ ದಶರಥರಾಯ ಪಡೆದನು ಸುತಚತುಷ್ಟಯವ

ಪಿಂಡ ಬಲಿದವು ಬಳಿಕ ಮೂವರು
ಹೆಂಡರಿಗೆ ಕುಶ ಕೇಳ್ ನಿಧಾನವ
ಕಂಡ ಕಡುವಾರಿದ್ರನುತ್ಸವದಂತೆ ಕೋಸಲದ
ಮಂಡಲೇಶ್ವರನಿರಲು ಬಳಿಕಲ
ಖಂಡಚಿನ್ಮಯನಾದಿಲಕ್ಷ್ಮಿಯ
ಗಂಡನೆಸೆದನು ಕೇಳು ಲವ ಕೌಸಲೆಯ ಗರ್ಭದಲಿ ೧

ತೋರಿದವು ಗರ್ಭಗಳು ಶುಕ್ತಿಯ
ತೋರಿಕೆಯ ಮೌಕ್ತಿಕದವೊಲು ಮೈ
ದೋರಿದವು ಚಿಹ್ನಂಗಳಂಗದಲಂಗನಾತ್ರಯದ
[1]ಹೇ[1]ರಿದವು ಪರುಷವನು ತನು ನಗೆ
ದೋರಿದವು ಮುಖಕಮಲ ಕಾಂತಿಯ
ಬೀರಿದವು ಭುಜಲತೆಗಳಭಿನವಗರ್ಭದೇಳ್ಗೆಯಲಿ ೨

ನಡು ಪೊದಳ್ದವು ವರವಳಿತ್ರಯ
ವಡಗಿದವು ನಿಜರೋಮರಾಜಿಗ
ಳಡಗಿದವು ಮೈದೋರಿದವು [2]ಕೃತ್ರಿಮರ ತವಕದಲಿ[2]
ಪೊಡವರ್ ಪೀನಪಯೋಧರದ [3]ತುದಿ[3]
ಗಡೆಯ[4]ಲಕ್ಕುಡಿಸಿದವು ಗತಿ[4] ಬೆ
ಳ್ಪಡಸಿದವು ಮುಖಮಂಡಲ[5]ಗಳಾ[5] ಮಾನಿನೀತ್ರಯದ ೩

ತುಂಬಿದವು ನವಮಾಸ ಬಳಿಕ ನಿ
ತಂಬಿನಿಯರಿಗೆ ನಿರ್ಮಲಪ್ರತಿ
ಬಿಂಬ ಕಾಣಿಸಿತಾದಿನಾರಾಯಣನ ಮೂರುತಿಯ

---

[1] ತೋರ್ (ಕ.ಗ.ಝ). [2] ಮೋಹಕವು ಮಂಡಳಿಸಿ (ಡ). [3] ಮೇರ್ (ಡ).
[4] ಲಕ್ಕಾಡಿದವು ಅತಿ (ಗ). ಕಪ್ಪಡಸಿದವು ಮಿಗೆ (ಚ). ಲೊಟ್ಟುಡಿಸಿದವು ಗತಿ (ಟ).
[5] ದರಾ (ಗ.ಚ.ಡ).

ಅಂಬುಜಾನನೆ ಕೌಸಲೆಯು ಗ
ರ್ಭಾಂಬುನಿಧಿಯಲಿ ನಿಖಿಳದಿವಿಜಕ
ದಂಬ ಬಂದೋಲೈಸುತಿರ್ದುದು ದಿವಸದಿವಸದಲಿ ೪

ಕಂತುಸನ್ನಿಭ ಕೇಳು ಮೂವರು
ಕಾಂತೆಯರಿಗಾ[1]ದವು[1] ಕಣಾ ಸೀ
ಮಂತಸೌರಂಭಾತಿಶಯದುಬ್ಬರದ ವಿಭವದಲಿ
ಅಂತರಹಿತನ[2]ಪ್ರಮೇಯನ
ನಂ[2]ತಗುಣಗಣನಿಳಯ ಲಕ್ಷ್ಮೀ
ಕಾಂತನಾ ನೃಪಗೊಲಿದುದಕೆ ಬೆಱಗಾದನಬುಜಭವ ೫

ತರಣಿಯೇಕಾದಶದ ದಾನವ
ಗುರುನಿರೀಕ್ಷೆಯಲಿಂದುವಿನ ಶುಭ
ಕರದ ದೃಷ್ಟಿಯಲಾಂಗಿರಸ ಸೌಮ್ಯರ ಸುಕೇಂದ್ರದಲಿ
ಪರಮಚೈತ್ರದ ಶುದ್ಧನವಮಿಯ
ವರಪುನರ್ವಸುತಾರೆಯಲಿ ಹಿರಿ
ಯರಸಿ ಬೆಸಲಾದಳು ಭವಸ್ಥಿತಿಲಯವಿವರ್ಜಿತನ ೬

ಮಱುದಿವಸ ಪುಷ್ಯದಲಿ ಕೈಕಾ
ತರುಣಿ ಪಡೆದಳು ವಿಮಲವಿಶ್ವಂ
ಭರನ ಶಕ್ತಿತ್ರಯದೊಳೊಂದನು ಶುಭಮುಹೂರ್ತದಲಿ
ತರುಣಿ ಕೇಳುಳಿದಂಶವೆರಡನು
ನಿರತಿಶಯಲಗ್ನದಲಿ ಮಗಧೇ
ಶ್ವರನ ಸುತೆ ಪಡೆದಳು ಮಘಾನಕ್ಷತ್ರದುದಯದಲಿ ೭

ಭೋರನಬ್ಬರಿಸಿದವು ದಿವಿಜರ
ಭೇರಿಗಳು ದಿವದವನಿಯರಸುಗ
ಳೂರೊಳಗೆ ಗುಡಿಗಟ್ಟಿದ[3]ರು ಕುಡಿಯಿಟ್ಟ[3] ಹರುಷದಲಿ
ವೀರದಶರಥಸಾರ್ವಭೌಮನ
[4]ಪಾ[4]ರ ಸಂತೋಷಾಂಬುನಿಧಿ ಮಿಗೆ
ಮೇರೆದಪ್ಪಿದುದಾದಿನಾರಾಯಣನ ಜನನದಲಿ ೮

---

[1] ದುದು (ಕ.ಗ). [2] ನಪ್ರಮೇಯ ನಿತಾಂ (ಕ), ಮಹಿಮೆಗಧಿಕ ನಿತಾಂ (ಗ), ಮೇಯನಧಿಕನನಂ (ಟ.ಡ), ಮೇಯನಧಿಕಾನಂ (ಣ). [3] ರು ಗಡಿಗೆಟ್ಟ (ಗ), ವು ಕುಡಿಯಿಟ್ಟ (ಚ); ರು ಗುಡಿಯಿರಿದ (ಜ), ರು ಗುಡಿಯಿಟ್ಟು (ಣ). [4] ಸಾ (ಜ.ಝ.ಣ).

ಆದುದವರಿಗೆ ಬಳಿಕ ಲೌಕಿಕ
ವೈದಿಕದ ವೈಭವಗಳಲಿ ಭ
ದ್ರೋದಯದ ಭವಕರ್ಮ[1]ವಾ ಭವಹರಕುಮಾ[1]ರರಿಗೆ
ಮೇದಿನೀಸುರಮುಖ್ಯ ನಾನಾ
ಮೇದಿನಿಯ ಯಾಚಕರು [2]ಸಿರಿಯನು[2]
ಸಾಧಿಸಿದರಾ ಸಾರ್ವಭೌಮನ ಬಹಳದಾನದಲಿ ೯

ದಿವಸ ಹನ್ನೆರಡರಲಿ ಮಹದು
ತ್ಸವದಲಾ[3]ದವು[3] ನಾಮಕರಣ
ಪ್ರವರವಾ ನಾಲ್ವರಿಗೆ ಗುಣನಾಮಂಗಳಲಿ ಬಳಿಕ
ಅವನಿಜಾಸುತ ಕೇಳಿದೈ ನಿ
ಮ್ಮವನಿಜಾರಮಣಂಗೆ ರಾಮಾ
ಖ್ಯವನು ವಿಸ್ತರಿಸಿದರು ವೈದಿಕ[4]ವಿದಿತಕರ್ಮ[4]ದಲಿ ೧೦

ಭರತಲಕ್ಷ್ಮಣದೇವ [5]ತದನಂ[5]
ತರದಿ ಶತ್ರುಘ್ನಾಖ್ಯವನು ವಿ
ಸ್ತರಿಸಿದ[6]ನು[6] ಮಿಕ್ಕಾದ ಮೂವರು ರಾಜಪುತ್ರರಿಗೆ
ಭರಿತಭೋಜನ ದಕ್ಷಿಣೆಯಲಾ
ದರಿಸಿದ[7]ನು[7] ಗುರುಬಂಧುಜನ ಭೂ
ಸುರ[8]ರ ವಿಟ್‌ಶೂದ್ರಾದಿಗಳನುಚಿತದಲಿ ಭೂಪಾಲ[8] ೧೧

ಐಸೆ ಮತ್ತೇನೆಲೆ ತಪೋಲ
ಕ್ಷ್ಮೀಶ ಕೇಳೀ ರಾಮನಾ ಸ
ರ್ವೇಶನೆಂದೇ [9]ನೇಮಿಸಿದೆ ನಮಗಾ[9] ಮಹಾತ್ಮಂಗೆ
ಈಸು ನಿರ್ಬಂಧದಲಿ ಗರ್ಭಾ
ವಾಸದೊಳಗಿದ್ದುದಿಸಲೇಕೀ
ಯಾಸಜಿನ ಭವವೇಕೆನುತ ನುಡಿದರು ಕುಮಾರಕರು ೧೨

---

[1] ವಾ ಭವಕರ್ಮದೂ (ಗ), ವಾದುದು ಕರ್ಮದೂ (ಜ), ವೈಥವ ಹರಕುಮಾ (ಟ.ಡ). [2] ಹಿರಿಯರು (ಚ.ಜ). [3] ದುದು (ಗ.ಝ). [4] ಕರ್ಮವಿಹಿತ (ಕ), ವಿಹಿತಕರ್ಮ (ಜ.ಡ.ಣ). [5] ಸಮನಂ (ಕ.ಗ.ಜ.ಝ). [6] ರು (ಗ.ಝ.ಣ). [7] ರು (ಗ.ಜ). [8] ರಿಗಿತ್ತುಚಿತದಲ ಶೂದ್ರಾದಿಗಳ ಮನ್ನಿಸಿದ (ಗ.ಜ). [9] ಮನ್ನಿಸಿದೆವಾವಾ (ಚ), ನೇಮಿಸಿದೆ ನಿಮಗೀ (ಜ), ನೇಮಿಸಿದೆ ನೀನಾ (ಝ).

ನೀವು ಕೇಳುವ [1]ಕೃತವಿವೇಕದ
ಠಾವು ತಾನದು ಲೇಸು[1] ಜಗದ ಮ
ಹಾವಿಭುವಲಾ ವಿಷ್ಣುವಿಶ್ವವ್ಯಾಪ್ತನಾತಂಗೆ
ಈ ವಿಶೇಷವ್ಯವಹರಣೆ ಲೋ
ಕಾವಳಿಯ ಸುಜನರನು ಸಲೆಸಂ
ಭಾವನೋಚಿತದಿಂದ ಸಲಹಲಿಕಾಯ್ತುಲೇಯೆಂದ ೧೩

ಸುಜನರುಪಹತಿಗೊಡಬಡನು ನಾ
ಕಜರ [2]ಕ[2]ಷ್ಟವ ಸೈರಿಸನು ಗೋ
ದ್ವಿಜ ಮಹಾಮುಖಹವ್ಯಕವ್ಯದ್ವಿ[3]ಷರ[3] ವರ್ತನೆಯ
ಭಜಿಸಲೀಯನಿದೀಗ ಗರುಡ
ಧ್ವಜನ ಬಿರುದದಱಿಂದ [4]ದುಷ್ಟ[4]
ಪ್ರಜೆಯ [5]ಶಿ[5]ಕ್ಷೆಗೆ ಸುಳಿದನಲ್ಲದೆ [6]ಜನನ[6]ವಿಲ್ಲೆಂದ ೧೪

ಈತ ಸತ್ವರಜಸ್ತಮೋಗುಣ
ದಾತ ವಿಮಲಗು[7]ಣತ್ರಯಕ್ಕ ಮ[7]
ತೀತ ಮಾಯಾ[8]ಸಾರ[8] ಮಾಯಾದೂರ ನೋಡಲಿಕೆ
ಈತನನಿತಿನಿತೆಂದು ಯೋಚನೆ
ಗೇತಱಲಿ ಠಾವಿಲ್ಲ ಸತ್ವಗು
ಣಾತಿಶಯವೇ ಕಾಣಬಂದಿಹುದಣುಗ ಕೇಳೆಂದ ೧೫

ಅಹುದು ಮತ್ತೇನಿಳೆಯ ಜನ ನಿ
ಗ್ರಹವದಾ[9]ರವರಿಂದ[9] ಬಳಿಕೀ
ಮಹಿಗೆ ಬಂದ ವಿರೋಧವಾವುದು ಹೇಳಬೇಕೆನಲು
ವಿಹಿತ[10]ವೀ ವಿ[10]ಜ್ಞಾಪ್ತಿ ನಿಮಗೆಂ
ದಹತಪರಿತೋಷದಲಿ ಮುನಿವರ
ನಹಿಮಕರಕುಲಕೀರ್ತಿಕರನಂದನರಿಗಿಂತೆಂದ ೧೬

---

[1] ದತಿಪ್ರಯೋಜನ ಭಾವವಿದು ಲೇಸಹುದು (ಗ). [2] ನ (ಚ.ಟ.ಣ). [3] ಜರ (ಜ.ಟ.ಡ). [4] ಶಿಷ್ಟ (ಕ). [5] ರ (ಕ). [6] ಜನ್ಮ (ಕ.ಝ.ಟ.ಡ.ಣ). [7] ಣ ತ್ರಿತಯಾ (ಕ.ಗ.ಣ, ಣ ತೃತೀಯಾ (ಚ.ಡ), ಣಾದಿ ಮಾಯಾ (ಜ). [8] ತೀತ (ಗ), ಧಾರ (ಚ). [9] ವವನಿಂದ (ಕ.ಟ.ಣ), ವವರಿಂದ (ಜ). [10] ವಿವಿಧ (ಗ.ಡ), ವಿದಿತ (ಟ).

ಕಂದ ಕೇಳು ಹಿರಣ್ಯಲೋಚನ
ನೆಂದು ವೀರಹಿರಣ್ಯಕಾಸುರ
ನೆಂದು ಜನಿಸಿದರೊಂದು ಜನ್ಮದಲವರನಾಜಿಯಲಿ
ಕೊಂದನೊಬ್ಬನ ಸೂಕರನ ರೂ
ಪಿಂದಲೊಬ್ಬನ ನರಹರಿಯ [1]ರೂ[1]
ಪಿಂದ ಲಕ್ಷ್ಮೀಕಾಂತನಹಿತಕೃತಾಂತ[2]ನಾಜಿಯಲಿ[2] ೨೨

ಎರಡನೆಯ [3]ಜನ್ಮ[3]ದಲಿ ಜನಿಸಿದ
ಸರಿಯ ಕೇಳ್ಳೈ ಹೇಳುವೆನು ಸರ
ಸಿರುಹಗರ್ಭನ ಕೇಳಿ ಬಲ್ಲೈ ಶ್ರುತಿಗಳೂಹೆಯಲಿ
ಪರಮಮುನಿ [4]ಪೌಲ[4]ಸ್ತ್ಯನಾ ಸರ
ಸಿರುಹಗರ್ಭನ ಮಾನಸದಲವ
ತರಿಸಿದನು ತನ್ಮನಿಪಗಾದನು ವಿಶ್ರವಸು ಬಳಿಕ ೨೩

ಆ ಮುನಿಗೆ ಕುಲವಧುವಿನಲಿ ಕೀ
ರ್ತ್ಯಾಮನೋಹರ ರಾಜರಾಜ ಮ
ಹಾಮಹಿಮನುದಿಸಿದನು ಸಕಲೈಶ್ವರ್ಯಗಳು ಸಹಿತ
ವ್ಯೋಮಕೇಶನ [5]ಭಕ್ತಿಯಲಿ[5] ನಿ
ಸ್ಸೀಮನಾದನು ವಿಶ್ರವಸು ಬಳಿ
ಕಾ ಮಗನನೇ ಸಲಹಿಕೊಂಡಿರ್ದನು ಸರಾಗದಲಿ ೨೪

ತರುಣ ಕೇಳೀಚೆಯಲಿ ಲಂಕಾ
ಪುರದ ಸಿರಿ ಸೇರಿರ್ದುದಾ ಶಾ
ರ್ವರಿಯ ಪರಿ[6]ಯುಟ[6]ನಪ್ರಚಂಡ ಸುಮಾಲ್ಯವಂತಂಗೆ
ಹರಿಯ ವೈರದಲಳಿದರವರಿ
ಬ್ಬರು ಸಹೋದರರಾ ಮಹಾ[7]ಪುರ
ವರ[7] ಹರಪ್ರಿಯಗಾಯ್ತು ವಿಷ್ಣುವಿನಿಂದ ಪೂರ್ವದಲಿ ೨೫

---

[1] ಮಾ (ಕ). [2] ನಂದದಲಿ (ಜ.ಟ.ಡ), ನೊಲವಿನಲಿ (ಣ). [3] ಜನನ (ಚ). [4] ಪಪುಲ (ಕ.ಗ.ಝ.ಟ.ಡ). [5] ಸಖ್ಯದಲಿ (ಚ). [6] ಣಯ (ಟ.ಡ.ಣ). [7] ಸುರಪುರ (ಗ.ಜ).

ಹದನನಿದನಱಿ[1]ದೋಡಿ[1] ಬದುಕಿದ
ತ್ರಿದಶವೈರಿ ಸುಮಾಲ್ಯವಂತನು
ಪದವ ಭಜಿಸಿ ಪುಲಸ್ತ್ಯತನುಜಗೆ ತನ್ನ ನಂದನೆಯ
ಮದುವೆಯನು ಮಾಡಿದನು ಬಳಿಕಾ
ಸುದತಿಗಾದರು ಸುತರು ಖಳದಶ
ವದನನಗ್ಗದ ಕುಂಭಕರ್ಣನಿಶಾಟರವನಿಯಲಿ ೨೬

ಅವರು ಜಯವಿಜಯರುಗಳೆರಡನೆ
ಯವತರಣದವರೀಗ ಮೇಲು
ದ್ಭವಿಸಿದನು ಹರಿಭಕ್ತಭೂಷಣ [2]ವರ[2]ವಿಭೀಷಣನು
ಇವರು ಮೂವ[3]ರ[3] ಮೇಲೆ ಕೈಕಸೆ
ಗವತರಿಸಿದಳು ಮೃತ್ಯುರಾಕ್ಷಸ
ನಿವಹಕಗ್ಗದ ಶೂರ್ಪಣಖಿಯೆಂಬವಳು ಕೇಳೆಂದ ೨೭

ಬಳಿಕ ಮೆಚ್ಚಿಸಿದರು ತಪೋಸ
ಮ್ಮಿಳಿತಸೌರಂಭದಲಿ ಶಂಕರ
ಸಲಿಲಸಂಭವಭವರ ಬಹಳಾಯಾಸಮಾರ್ಗದಲಿ
ಇಳೆಯ ತಮ್ಮದ ಮಾಡಿಕೊಂಡ
ಪ್ಪಳಿಸಿದರು ಮಲತರಸುಗಳ ಕೈ
ಕೊ[4]ಳಿಸಿ[4] ಕಾದಿ ಕುಬೇರನನು ಹೊಱವಡಿಸಿದರು ಪುರವ ೨೮

ಆದುದವರಿಗೆ ಲಂಕೆ ದಿನದಿನ
ಕಾದುದಖಿಳೈಶ್ವರ್ಯವಭವನ
ನೈದಿ ಬದುಕಿದನಾ ಧನೇಶ್ವರ ಮೇಲೆ ಮಯನೆಂಬ
ಆದಿ[5]ತೇ[5]ಯವಿರೋಧಿಸುತೆ ಮಂ
ಡೋದರಿಯ ತಂದಿತ್ತನಾ ಕ್ರ
ವ್ಯಾಧಚಕ್ರೇ[6]ಶಂಗೆ[6] ಹೇಳುವುದೇನು [7]ಬಳಿಕೆಂದ[7] ೨೯

---

[1] ದೊಡನೆ (ಚ). [2] ನಾ (ಗ.ಚ). [3] ರು (ಕ.ಜ.ಝ.ಟ.ಣ). [4] ಳುತ (ಕ.ಟ.ಡ.ಣ). [5] ರವಿ(ಕ.ಟ.ಡ.ಣ). [6] ಶ್ವರಗೆ (ಕ.ಣ). [7] ಕೇಳೆಂದ (ಕ).

ಜನಿಸಿದನು ಬಳಿಕವಳ ಗರ್ಭದ
ಲನಿಮಿಷೇಂದ್ರವಿರೋಧಿ ಸೇರಿದು
[1]ದನುಗತದ[1] ಸಿರಿಯುವನ ದೆಸೆಯಿಂದಿಂದ್ರವೈಭವದ
ಮನುಜ ದನುಜಾಮರ ಮಹೋರಗ
ಜನ ತೃಣಪ್ರತಿಯಾಯ್ತು ದಶದಿ
ಕ್ಕನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ ೩೦

ಕಾದಿದನು [2]ಮೊದಲ[2]ಣ್ಣನಲಿ ಗತ
ವಾದುದಾತನ ಸೈನ್ಯ ಸೋಲದ
ಹಾದಿಯಲಿ ನಿಲಿಸಿದನು ಧನ[3]ಪನನಾ ಧನೇಶ್ವರನ[3]
ಸಾಧಿಸಿದ ಮಹದೈಶ್ವರ್ಯವನು
ಸೇದಿಕೊಂಡನು ಪುಷ್ಪಕವ ಮೇ
ಲಾ ದುರಾಗ್ರಹಿ ಧಾಳಿಯಿಟ್ಟನು ಧೂರ್ಜಟಿಯ ಗಿರಿಗೆ ೩೧

ತಡೆದುದಾ ಗಿರಿ ಗರುವ ಭಟನು
ಗ್ಗಡದ ದಿವ್ಯವಿಮಾನವನು ಖಳ
ಕಿಡಿಮಸಗಿ ಕಿತ್ತೆತ್ತಿದನು ಮೃತ್ಯುಂಜಯುನ ಗಿರಿಯ
ಮೃಡನಬಿದು ನಗುತೊತ್ತಲಾ ಗಿರಿ
ಯಡಿಯಲೇ ಕೈಸಿಕ್ಕಿಯಜ ನಡ
ನಡುಗಲೊದಱಿದನವನು ವರುಷಸಹಸ್ರಪರಿಯಂತ ೩೨

ಬಿಡಿಸಿದನು ಬಂದಜನು ಮೊಮ್ಮನು
ಹಡೆದ ಮಗನಿವನೆಂದು ವಂದಿಸಿ
ಮೃಡಗೆ ಬಳಿಕವ ಭಜಿಸಿದನು ಬಾಲೇಂದುಶೇಖರನ
ಪಡೆದನಾಯುಷ್ಯವನು ತನ್ನಲಿ
ಕೆಡದ ಮಹದೈಶ್ವರಿಯವನು ಬಲು
ಖಡುಗವನು ವರಚಂದ್ರಹಾಸಕವೆಂಬ ನಾಮಕದ ೩೩

---

[1] ಧನವಧಿಕ (ಕ.ಟ), ದನಘುವದ (ಣ). [2] ಬಳಿಕ (ಗ.ಟ). [3] ದನನಾ ದಶಾನನನು (ಚ).

ದೃಢತರದ ವರವಾಯ್ತು ಸಿರಿಯಾ
ಯ್ತು ಡೆವಱಿಯದುಬ್ಬರದ ಶೌರ್ಯದ
ಕಡಲು ಕೈವಶ[1]ವಾಯಿತೆಂದುಮ್ಮಹದ[1] ಗರ್ವದಲಿ
ಒಡನೆ ಧಾಳಿಯನಿಕ್ಕಿ ಶಕ್ರನ
ತುಡುಕಿ ತೇಜವ ಕೊಂಡು ವಹ್ನಿಯ
ನೆಡಹಿ ಕಾಣದೆ ದಳವುಳಿಸಿದನು ಧರ್ಮರಾ[2]ಜಂಗೆ[2] ೩೪

ಕಾಳಗಕೆ ನೆರೆದಖಿಳದೂತರ
ಧೂಳಿಗೆ[3]ದಱಿದು[3] ಮೃತ್ಯುವಿನ ಗೋ
ನಾಳಿಯಲಿ ಚಾಚಿದನು [4]ಚಾಪಳ[4]ಚಂದ್ರಹಾಸಕವ
ಕಾಲ ನಡುಗಿದನನಿತಱಲಿ ದಿ
ಕ್ಪಾಲತನವನು ಬಿಸುಟು ನಿರುತಿಯು
ಮೇಲೆ ಮೇಲಲ್ಲಿಂದ ನಡೆದಾಕರಿಸಿದನು ಧನವ ೩೫

ವರುಣ ಬಳಿಕೀ ಹದನ ಕೇಳುತ
ಶರಣುಹೊಕ್ಕನು ಕಾಯಬೇಹುದು
ಹರಣವನು ನೀನೆಂದು [5]ಕೊಟ್ಟನು ಸಕಲವಸ್ತುಗಳ[5]
ಕರುಣದಲಿ ಬಿಟ್ಟಾತನನು [6]ಮುಂ
ದ[6]ರುಣಪಟಪರಿಧಾನಶೌರ್ಯಾ
ಭರಣ ಧಾಳಿಯನಿಕ್ಕಲೋಡಿದನನಿಲ ಭೀತಿಯಲಿ ೩೬

ಗೆಲಿದ ನಾನಾ ಲೋಕಪಾಲಕ
ರೊಳು ಧನವ ನೆಱೆಕವರಿಕೊಂಡಿ[7]ಳಿ
ದಿಳೆಯ[7] ರಾಯರ ಬಾಯ್ಗಳಲಿ ಬೆರಳಿಡಿಸಿ ಶರಧಿಗಳ
ವಳಯದಖಿಳದ್ವೀಪಪತಿಗಳ
ತಲೆಗಳನು ಹೊಡೆದಲ್ಲಿ ತನ್ನ
ಗ್ಗಳೆಯ ಭೃತ್ಯರನಿರಿಸಿ ಬಂದನು ಮರುತನೃಪನೆಡೆಗೆ ೩೭

ಆ ಮರುತ್ತನ ಯಜ್ಞಕೈತಂ
ದಾ ಮರುದ್ಗಣ ಮುನಿಗಣಂಗ[8]ಳ[8]
ತೋಮರದ ತೋಟಿಯಲಿ [9]ಕೆದಱಿತು[9] ಕದನಕೇಳಿಯಲಿ

---

[1] ವಾದುದೆಂದುಮ್ಮಹದ (ಕ), ವಾಯಿತೆಂಬೀ ಮಹದ (ಗ), ವಾಯಿತೆಂದು ಮಹಾಂಧ (ಚ). [2] ಜನಲಿ (ಗ.ಡ.ಣ), ಯನಲಿ (ಟ). [3] ಡಹಿದು (ಚ). [4] ಚಾಪಟ (ಟ.ಡ), ಚೌಪಟ (ಣ). [5] ವ್ಯೆಯಿಕ್ಕಿದನು ಚರಣದಲಿ (ಗ). [6] ನಡೆದ (ಗ), ಬಳಿಕ (ಚ). [7] ಳೆಗಿಳಿದು (ಚ). [8] ಳು (ಚ.ಝ). [9] ಕನಲಿದ (ಝ), ಕೆದಱಿದು (ಟ.ಣ).

ಆ ಮಹೀಶನ ಗೆಲಿದು ನಿಮ್ಮಯ
ತಾಮರಸಸಖಕುಲದಯೋಧ್ಯಾ
ಭೂಮಿಪತಿಯನರಣ್ಯನಲಿ ತೊಡ[1]ಗಿ[1]ದನು ಸಂಗರವ ೩೮

ಕಾದಿದನು ಸಮಪಾಳಿಯಲಿ ಹದಿ
ನೈದುದಿನಪರಿಯಂತ ಸೋಲವು
ಮೇರೆನೀಶಂಗಾಗದಿರೆ ಮಾಯಾಭಿಯೋಗದಲಿ
ಕಾದಿ ಕೊಂದನು ತನ್ನೃಪನ ಬಳಿ
ಕಾದುದಗ್ಗದ ಶಾಪವಾತನಿ
ನಾ ದಶಗ್ರೀವಂಗೆ ರಾಕ್ಷಸಸಾರ್ವಭೌಮಂಗೆ ೩೯

ಕ್ಷಿತಿಸುತಾಸುತ ಕೇಳು ರಾಕ್ಷಸ
ಪತಿ ಬಳಿಕ ಬರುತಿರಲು ವೇದಾ
ವತಿಯ ಕಂಡನು ಸೋತನಾ ಕಾಮಿನಿಯ ರೂಪಿಂಗೆ
ಸತಿಗೆ ಬಳಿಕದು ಸೇರುವುದೆ ರಘು
ಪತಿಯು ಕೈಯಲಿ ರಣಮುಖದಲುಪ
ಹತಿ ನಿನಗೆ ಬರಲೆನುತ ಹೊಕ್ಕಳು ಹವ್ಯವಾಹನನ ೪೦

ಬಂದನಲ್ಲಿಂ ಮೇಲೆ ಜಯಮುಖ
ದಿಂದ ಲಂಕಾಪುರಿಗೆ ಸೇರಿತು
ಮಂದಿ ಹಿಂದಣ ರಾಕ್ಷಸೇಂದ್ರ[2]ರ[2] ಬಳಿಯ ಭಟ[3]ರುಗಳು[3]
ಕೊಂದ ಸುರನರಪತಿಗಳಬಲಾ
ವೃಂದ ಷೋಡಶಲಕ್ಷಭೋಗಕೆ
ಸಂ[4]ದರಾ[4] ದಿನಕಾ ನಿಶಾಚರಸಾರ್ವಭೌಮಂಗೆ ೪೧

ಗಿರಿಗಳಂಜುವ[5]ವಿ[5]ವನ ಕಾಣುತ
ಶರಧಿಗಳನವ ಹೇಳದಿರು ಶಂ
ಕರ ಸರೋಜಾಸನ ಸುರೇಂದ್ರಾದಿಗಳ ಕಂಪನವ
ತರುಣ ಹೇಳುವುದೇನು ದಾನವ
ಹರಸ ಹವಣೇನೆಂದಱಿಯೆ ಮಿ
ಕ್ಕರಿಗಳೀ ದಶಮುಖನ ಮಣಿಸಲು ತಕ್ಕ[6]ರಿ[6]ಲ್ಲೆಂದ ೪೨

[1] ಚಿ (ಕ), ಕಿ (ಗ). [2] ನ (ಗ.ಟ.ಣ). [3] ನಿಕರ (ಚ). [4] ದುದಾ (ಕ.ಗ). [5] ವ (ಕ.ಗ). [6] ರ (ಚ).

ಕ್ರತುಗಳಡಗಿದವಖಿಳಸುರರಾ
ಹುತಿಗಳಕ್ಕುಡಿಸಿದವು [1]ಕವ್ಯ[1]
ಸ್ಥಿತಿಗಳೋಸರಿಸಿದವು ಧಾರ್ಮಿಕರಳ್ಳಬಾಱುದರು
ಕ್ಷಿತಿಗೆ [2]ಬಲುಹೊಱೆಯಾಯ್ತು[2] ಬದುಕ್ಕುವ
ಗತಿಯು ಕಾಣದೆ ಸಕಲದೇವಪ್ರ
ತತಿ ನೆರೆದೈತಂದು ಕಂಡುದು ಕಮಲಸಂಭವನ ೪೩

ಆತನಾ ದೂಱಿಂದ ನಮುಚಿ ವಿ
ಘಾತಿಮುಖ್ಯ ಸಮಸ್ತಸುರಸಂ
ಜಾತ ಸಹಿತೈದಿದನು ವಿಬುಧವಿರೋಧಿಮರ್ದನನ
ಭೂತಪಂಚಕತತ್ವಮಯ[3]ನ ವಿ
ಧೂತ[3]ದುರಿತನ ದುಷ್ಟಭಯಜೀ
ಮೂತಪಟಲಸಮೀರಣನ ದುಸ್ತರಮಹಾಂಬುಧಿಯ ೪೪

ಅಬ್ಬರಿಸಿ ತೆರೆಮಸಗಿ ಗಗನವ
ಗಬ್ಬರಿಸಿ ತಳಮಳಲ ಮೊಗೆದೊಡೆ
[4]ದು[4]ಬ್ಬರಿಸಿ ಹೊಡಕರಿಸಿ ಹೊಯ್ದುತಳವನು ಭೋರ್ಗರೆದು
ಬೊಬ್ಬುಳಿಯ ಬೆಳುನೊರೆಗಳೊಟ್ಟಿಲಿ
ನೊಬ್ಬುಳಿಯನುಪ್ಪರಿಸುತುರವಣಿ
ಗೊಬ್ಬಿನಲಿ ಮದವೇಱಿ ಪಾಲ್ಗಡಲೆಸೆದುದಿದಿರಿನಲಿ ೪೫

ಉಳಿದುದೆಡೆಯಿಲ್ಲದೆ ನಭೋಮಂ
ಡಲ ಮಹಾದೇವೀತ [5]ಮುಳಿದಡೆ[5]
ವಿಲಯದಲಿ [6]ಬಿ[6]ಚ್ಚುವುದಲಾ ಬ್ರಹ್ಮಾಂಡಘಟವೆನುತ
ಒಲೆದು ಮೌಳಿಯನಬುಜಭವನಾ
ಜಲನಿಧಿಗೆ ಕೈಮುಗಿದು ಬಟ್ಟೆಯ
[7]ಗೆ[7]ಲಿದು ಬರ್ಹಿರ್ಮುಖರು ಸಹಿತೊಳ[8]ಹೊಕ್ಕನಂಬುಧಿಯ[8] ೪೬

ಕೇಳಿದೈಯೆಲೆ ರಾಜಸೂನು ಫ
ಣಾಳಿಧರನ [9]ಶರೀರ[9]ಶಯನನ
ಕಾಲಕರ್ಮಕ್ರಿ[10]ಯೆ[10] ಗತಾಗತದೂರನನುಪಮನ

---

[1] ಕಾವ್ಯ (ಕ.ಜ.ಟ.ಡ.ಣ). [2] ಹೊಱೆಬಲುಹಾಯ್ತು (ಕ.ಗ). [3] ನಿರ್ಧೂತ (ಟ.ಣ). [4] ನ (ಕ), ನು (ಗ.ಟ). ಗು, (ಝ). [5] ಮುಳಿದರೆ (ಚ), ಮುನಿದರೆ (ಟ.ಡ.ಣ). [6] ಬೆ (ಕ.ಟ.ಡ.ಣ). [7] ಬ (ಕ). [8] ಹೊಕ್ಕರಂಬುಧಿಯ (ಕ.ಡ). ಹೊಕ್ಕನರಮನೆಯ (ಟ). [9] ನಹೀಂದ್ರ, (ಕ). [10] ಯ (ಕ.ಟ.ಡ.ಣ).

ಆಲಯವು ಹದಿನಾ[1]ಱು[1]ಲಕ್ಷದ
ಮೇಲೆ ಸಾವಿರಯೋಜನವು ಬಳಿ
[2]ಯೋ[2]ಲಗದ ಸಂಭ್ರಮ[3]ವ ಹೊಗಳುವೆನೇನ ತಾನೆಂದ[3] ೪೭

ಉಸುರಲೇನದ ಕೋಟಿಸಂಖ್ಯೆಯು
ವಿಸರುಹಾಸನರಿದ್ದುದವರ
ಪ್ರಸರವಿದ್ದುದು ದಿವ್ಯರುಷಿಗಣವಿದ್ದುದಪರಿಮಿತ
ವಸುದಿಶಾ[4]ಧಿಪ[4]ರುದ್ರಗಣಸುಮ
ನಸವಧೂನಿಕುರುಂಬವಿದ್ದುದು
ನೊಸಲಕ್ಕೈಗಳಲಾದಿನಾರಾಯಣನ ಬಳಸಿನಲಿ ೪೮

ವರಸರಸ್ವತಿ ಶಕ್ತಿ ಮಾಹೇ
ಶ್ವರಿ ಮಹಾಗಾಯತ್ರಿ ವಿಶ್ವಂ
ಭರಿ ಕುಮಾರಿ ವರಾಹಿ ವೈಷ್ಣವಿ ದುರ್ಗಿ ಚಾಮುಂಡಿ
ಪರಮಸತಿಸಾವಿತ್ರಿ ಸಂಧ್ಯಾ
ತರುಣಿ ಮೊದಲಾದಖಿಳ ದೇವಿಯ
ರಿರವು ಕಾಣಿಸಿತಾದಿಲಕ್ಷ್ಮಿಯ ಸುತ್ತುವಳಯದಲಿ ೪೯

ಉಳಿವುದೊಂದೇವನ್ತು ಕಲ್ಪಂ
ಗಳಲಿ ಕಮಲಭವಾಮರೇಂ[5]ದ್ರಾ
ವಳಿಗಳಡಗುವುವಾ ಮಹಾತ್ಮನ[5] ಮನದ ನೆನಹಿನಲಿ
ತೊಲಗಿ[6]ದುದಕದ ಮೇಲೆ[6] ಮೆಲ್ಲನೆ
ಸುಳಿ[7]ವರಾ[7] ಬ್ರಹ್ಮಾದಿದೇವರು
ನಳಿನನಾಭನ ಮಹಿಮೆಗಾವುದು ಸೀಮೆ ಕೇಳೆಂದ ೫೦

ನಾರದನ ಸಂಗೀತವಪ್ಸರ
ನಾರಿಯರ ನರ್ತನ ಶ್ರುತಿಸ್ಮೃತಿ
ಯಾರುಭಟೆಯುಗ್ಗಡಣೆ ಪೌರಾಣಪ್ರಬಂಧಗಳ
ಸಾರತರಸಮ್ಮೋಹನದ ಕೈ
ವಾರ ಕೇಳಿಸಿತಬುಜಭವವ್ಯಂ
ದಾರಕರು ಜಯಜಯಜಯೆಂದುದು ಸಕಲ [8]ಸುರ ನಿಕರ ೫೧

---

[1] ಲ್ಕ (ಕ.ಣ). [2] ಕೋ (ಚ.ಜ). [3] ದ ಸಿರಿಯನು ಪೊಗಳಲೆನ್ನಳವೆ (ಚ), ವ ಹೇಳುವೆನೇನ ತಾನೆಂದ (ಝ.ಡ). [4] ಪಟ (ಕ.ಣ). [5] ದ್ರರ ನಿಲವುಗಳು ತಾವಡಗಿತಾತನ (ಚ). [6] ದೂರಕೆ ಮೆಲ್ಲ (ಕ), ದೂರದ ಮೇಲೆ (ಝ.ಟ.ಡ), ದೂರಕೆ ಮೇಲೆ (ಣ). [7] ದರಾ (ಕ.ಗ), ವರೀ (ಟ.ಡ). [8] ಜನ (ಕ), ಮುನಿ (ಝ).

ದೇವ ಜಯಜಯ ಸಕಲ[1]ದೇ[1]ವರ
[1]ದೇ[1]ವ ಜಯ ಶ್ರುತಿಕೋಟಿಕನ್ಯಾ
ಶ್ರೀವರನೆ ಜಯ ಜಯಜನಾರ್ದನ ಭಕ್ತಸುರಧೇನು
ದೇವರಿಪುಕುಲವಿಪಿನಪಟುತರ
ಪಾವಕಾಖಿಲಲೋಕರಕ್ಷಕ
ದೇವ ರಕ್ಷಿಸು [2]ನ[2]ಮ್ಮನೆನುತಡಗೆಡೆದುದಮರಗಣ ೫೨

ನೊಂದೆ[3]ವೈಯೆಲೆ[3] ದೇವ ಸುರಕುಲ
ಬಂದಿಕಾಱನ ಕೈಯಲಕಟಾ
ತಂದೆ ನೀ ನಮಗಲ್ಲವೇ ನಿಗಮಾಗಮೋಕ್ತಿಯಲಿ
ನೊಂದ ನೋವನು ಪರಿಹರಿಸಿ ಕೃಪೆ
ಯಿಂದ ಸಲಹುವ ದೇವರಾರೆಮ
ಗೆಂದು ಮೇಘಧ್ವಾನದಲಿ ಮೊಱೆಯಿಟ್ಟುದಮರಗಣ ೫೩

ಕೇಳಿದನು ಕಡುದೂಱುಕಾಱರ
ನಾಲಗೆಯ ರಚಿತೋಕ್ತಿಯನು ಕರು
ಣಾಳುಗಳ ಬಲ್ಲಹನು ನಿದ್ರಾಯೋಗಮುದ್ರೆಯಲಿ
ಆಲಿಗಳನರಳಿಚುತ ನಗೆಗಳ
ಮಾಲೆಗಳ [4]ತೆ[4]ರಳಿಚುತ ಕರೆ ಕ
ಟ್ಟಾಳಿಗದ [5]ಕಾತರರರನೆಂ[5]ದನು ಹರಿ ಸುಪರ್ಣಂಗೆ ೫೪

ಬಂದನಾ [6]ಸೌಪರ್ಣ[6] ಸುಮನಸ
ವೃಂದದೆಡೆಗಾ ಕಮಲಭವಸಂ
ಕ್ರಂದನಾದಿ ಸಮಸ್ತ ಸುರ[7]ಜನ ಮುನಿಜನವ್ರಜವ[7]
ತಂದು ನಿಲಿಸಿದನಬುಜನಾಭನ
ಮುಂದೆ ಕುಸುಮಾಂಜಲಿಗಳಲಿ ಮುದ
ದಿಂದ ಮೈಯಿಕ್ಕಿದರು ಭಯರಸಭರಿತಭಕ್ತಿಯಲಿ ೫೫

---

[1] ಜೀ (ಕ). [2] ತ (ಗ.ಚ). [3] ವಾವೆಲೆ (ಕ). [4] ಕೆ (ಕ.ಟ.ಡ). [5] ದೂತರನುಯೆಂ (ಕ). [6] ಪಕ್ಷೀಂದ್ರ (ಕ), ಗ ಸುಪರ್ಣ (ಗ.ಜ.ಝ). [7] ನರಜನ ಮುನೀಂದ್ರಜನ (ಕ), ಜನಮುನಿಜನವ್ರಾತ (ಝ), ನರಜನಮುನಿವ್ರಜವ (ಣ),

ಜಯಜಯಶ್ರೀಕಾಂತ ಲೋಕ
ತ್ರಯ ಕೃಪಾಕರ ಭಕ್ತವತ್ಸಲ
ಜಯಜಯಾಚ್ಯುತ ಜಯಸುರಾರ್ಚಿತ ಸಕಲಗುಣನಿಳಯ
ಜಯಜಗದ್ವಲ್ಲಭ ಜಗನ್ಮಯ
ಜಯಜಗದ್ರಕ್ಷಕ ಜನಾರ್ದನ
ಭಯ[1]ವಿದೂರನೆ[1] ದೇವ [2]ಸಲಹೆ[2]ನುತಿರ್ದುದಮರಗಣ ೫೬

ದೇವ ಕಾರುಣ್ಯಾಂಬುನಿಧಿ ಭೂ
ದೇವ ಸುಜನಜನೈಕವತ್ಸಲ
ದೇವ ದೇವೇಶ ಪ್ರಸಾದ ಸ್ನಿಗ್ಧಮುಖಕಮಲ
ದೇವ ಲಕ್ಷ್ಮೀಕಾಂತ ವರರಾ
ಜೀವಲೋಚನ ಸುಜನಜನಕರು
ಣಾವಲಂಬನ ಕಾಯಬೇಕೆಂದೊದಱಿತಮರಗಣ ೫೭

ಎದ್ದು ಬಿನ್ನೈಸಿದನು ಕಮಲದ
ಗದ್ದುಗೆಯ ಪರಮೇಷ್ಠಿ ದೈತ್ಯವಿ
ಮರ್ದನನೆ ಚಿತ್ತಾವಧಾನ ಕೃಪಾಬ್ಧಿಯವಧಾನ
ತಿದ್ದಿತೆಮ್ಮಯ ದೆಸೆ ದಶಾನನ
ನುದ್ಧುರುಟುತನದಿಂದ ನಾವ್ ಬಂ
ದಿದ್ದ ಹದನಿದು ಜೀಯ ರಕ್ಷಿ[3]ಸಬೇಕು ನೀವೆಂದ[3] ೫೮

ಶಿಶುವಿದೀ ಜಗವೀ ಜಗತ್ರಯ
ನಸಿವುತಿದೆ ಬಾಲ್ಯದಲಿ ನೆಱೆ ರ
ಕ್ಷಿಸುವ ದೇವರ ಕಾಣೆನಖಿಳಾಮ್ನಾಯ ದೃಷ್ಟಿಯಲಿ
ಉಸುರಲಮ್ಮೆನು ಜೀಯ ಸುರರಾ
ಯಸವ ಚಿತ್ತೈಸೂರ್ವರೆಯ[4]ಗಂ
ಗ[4]ಸವನವಧರಿಸೆಮಗೆ ಬಂದಿಹ ವಿಧಿಯ ಕೇಳೆಂದ ೫೯

---

[1] ವಿರೋಧನ (ಗ), ವಿರುದ್ಧನೆ (ಚ). [2] ಸರಣೆ (ಚ). [3] ಸಿ ಸಲಹಬೇಕೆಂದ (ಕ). [4] ಲುಬ್ಬ (ಚ).

ಮರುಳುತನದಿಂದಾ ದಶಾಸ್ಯಗೆ
ವರವನಿತ್ತೆನು ದೇವ [1]ತ್ರಾ[1]ನದ
ಪರಿಹರಿಸುವಡಶ[2]ಕ್ತ[2] ಭಕ್ತಾಧೀನ [3]ನೀನೆಂಬ[3]
ಬಿರಿದ [4]ಮೆಱೆವುದು[4] ಜೀಯ ಜೀವವ
ಹೊರೆಯ[5]ಲಾಱೆವು[5] ವೈರಿದಶಕಂ
ಧರನುಪದ್ರದಲೆಲೆ ಕೃಪಾಂಬೋನಿಧಿಯೆ ಕೇಳೆಂದ ೭೦

ಬರೆಯ ಬಲ್ಲೆನು ಬರೆದ ಬರಹವ
ನೊರಸಲಱಿಯೆನು [6]ಜಗದ ಭಾಳಾಂ
ತರದಲೀ ಸಚರಾಚರದ[6] ತತ್ಕರ್ಮಫಲವಿಡಿದು
ಬರೆದೆ ಧ್ರುವನ ಲಲಾಟದಲಿ ಮುಳಿ
ದೊರಸಿ ಬಿಸುಟೆ ಹಿರಣ್ಯಕನ [7]ನಿ[7]
ರ್ಭರದ ಭಾಳಾಕ್ಷರದ ಪಿಧಿಗೆ ವಿಧಾತ್ರ ನೀನೆಂದ ೭೧

ಸಿರಿಯುರಸ ಚಿತ್ತೈಸು ಹರಸುವ
ಗೊರವ[8]ನೀ ಶಿತಿ[8]ಕಂಠನೀ ಶಚಿ
ಯರಸ ಸೇವಕನೀ ಸಮೀರಣ ಬಂಧು ಬಾಣಸಿಗ
ಮರಳಿ ಮಾತೇನೀ [9]ಯಮನು[9] ಕಿಂ
ಕರನು ವಿಕ್ಕಿನ ವರುಣ ದಿಗಧಿಪ
ರಿರವ[10]ಚಿತ್ತೈಸಿ[10]ದರೆ ಪರಿಹಾಸಕವಲೇಯೆಂದ ೭೨

ಹುಸಿಯುನಾಡಲದೇನು ಗುರು ಜೋ
ಯಿಸನು ತುಂಬುರನಾರದರು ರಂ
ಜಿಸುವ [11]ವೇಣಿಕರೀ[11] ಮನೋಜವಸಂತರಾ ಖಳನ
ಬೆಸನಮಾಡುವ ದೂತರೀ ರವಿ
ಶಶಿಗಳೊಪ್ಪುವ ದೀವಟಿಗರೆಲೆ
ಯಸುರಹರ ಚಿತ್ತೈಸುಪಾಧ್ಯರು ನಾವಲೇಯೆಂದ ೭೩

---

[1] ನಾ (ಗ.ಜ). [2] ಕ್ತ್ಯ (ಚ.ಡ). [3] ನೆಂದೆಂಬ (ಕ.ಣ). [4] ಮಱೆದವು (ಚ). [5] ಲಱಿಯೆವು (ಕ.ಟ.ಡ.ಣ). [6] ಸಕಲಸಚರಾಚರದ ಧಾಳಾಂತರಗಳಲಿ (ಗ). [7] ದು (ಚ). [8] ನೀ ಶ್ರೀ (ಗ.ಡ.ಣ), ನಾ ಶಿತಿ (ಚ). [9] ಗಯಮ (ಕ.ಚ). [10] ಬಿತ್ತರಿಸಿ (ಗ), ಬಿನ್ನೈಸಿ (ಜ). [11] ವೇಣಿಕರಾ (ಕ), ವೈಣಿಕರೀ (ಜ.ಝ), ವೈಸಿಕರೀ (ಟ.ಡ.ಣ).

ಬಿಸಜಗರ್ಭನ ಬಿನ್ನಹಕೆ ಹರಿ
ನಸುನಗುತ ಕೃಪೆಯಲಿ ಕಟಾಕ್ಷದ
ರಸುಮೆಯನು ಸೂಸಿದನು ಸುರರ ವಿಷಾದರಜನಿಯಲಿ
ನಸಿದಿರಕ್ಕುಡಿಸಿದಿರಿ ನೊಂದಿರಿ
ಬಸವಳಿದಿರನುಗೆಟ್ಟಿರಖಿಳಾ
ಯಸಕೆ [1]ಸಂ[1]ದಿರಿ ಸೈರಿಸಿದಿರಿನ್ನಂಜಬೇಡೆಂದ ೭೪

ಸರಸಿಜಾಸನ ಕೇಳು ಸಂದುದು
ವರವವಗೆ ನಿನ್ನಿಂದ ದನುಜಾ
ಮರಭುಜಂಗವು ಮುಖ್ಯ ನಾನಾದೇವಯೋನಿಯಲಿ
ಮರಣಭಯವಿಲ್ಲೆಂದು ನೊಂದಿರಿ
ಹಿರಿದು ನೀವ[2]ದಱಿಂದ[2] ಮುಂದಣ
ಗರಿವಧಾಸಮಯಕ್ಕುಪಾಯವ ಕೇಳಿ ನೀವೆಂದ ೭೫

ನರರ ರೂಪಿಂದಾವು ವಿಶ್ವಂ
ಭರೆಯೊಳವತರಿಸುವೆವು ನೀವ್ ವಾ
ನರರ ರೂಪಿಂದುದಿಸುವುದು ಧರಣೀತಳಾಗ್ರದಲಿ
ಧುರದೊಳಹಿತ[3]ಖಳೋತ್ತಮರ[3] ದು
[4]ರ್ಧ[4]ರದ ಶಿರಖಂಡನವನೆ[5]ಮ್ಮಯ[5]
ಸರಳ ಮೊನೆಯಲಿ [6]ತೋಱಿಸುವೆವಿದ[6] ನಂಬಿ ನೀವೆಂದ ೭೬

ಎಂದವರ ಬೀಳ್ಕೊಡಲು ಚರಣ
ದ್ವಂದ್ವಕಾನತರಾಗಿ ಹರುಷದ
ಸಂದಣಿಯ ಸೌರಂಭದಲಿ ಬೀಳ್ಕೊಂಡರಾ ಹರಿಯ
ಕಂದ ಕೇಳ್ಕೈ ಜಾಂಬವ[7]ರ[7] ರೂ
ಪಿಂದ ತೋಱಿದನಬುಜಭವನು ಪು
ರಂದರನು ನೆಲೆಗೊಂಡನಂಗದನಂಗಶೋಭೆಯಲಿ ೭೭

---

[1] ಬಂ (ಕ ಜ.ಝ). [2] ವನಿಂದ (ಟ.ಡ.ಣ). [3] ಖಳಾಧಿಕನ (ಗ), ಖಳೋತ್ತಮನ (ಜ.ಝ.ಟ.ಡ). [4] ರ್ಧ (ಕ), ಬ್ಬ (ಟ). [5] ನ್ನಯ (ಕ.ಜ.ಟ). [6] ಖಂಡಿಸುವೆನಿದ (ಕ). [7] ನ (ಟ.ಡ.ಣ).

ತರಣಿ ಸುಗ್ರೀವಾಭಿಧಾನವ
ಧರಿಸಿ [1]ಜನಿಸಿದನೀ[1] ಚರಾಚರ
ಭರಿತ ಭುವನಪ್ರಾಣನಾ ಹನುಮಂತರೂಪಿನಲಿ
ಧರಣಿಯಲಿ ಮೈದೋಱಿದನು ಶಂ
ಕರನು ವೃಷಭಾಕಾರದಲಿ ಗೋ
ಚರಿಸಿದನು ಸುರರಾಜವರ್ಧಕಿ [2]ಬಳಿಕ ನಳನಾಗಿ[2] ೭೮

ಪವನಬಾಂಧವ ನೀಲನಾಮು
ಪ್ರವರದಲಿ ಜನಿಸಿದನು ಮೈಂದ
ದ್ವಿವಿದರಾದರು ಸುರಯಮಳರಗ್ಗಳಪರೇತಪತಿ
ಗವಯ ಗಜ ಶರಭಾದಿ ಪಂಚ
ಪ್ಲವಗರೂಪಿಂದುದಿಸಿದ[3]ನು[3] ಸಂ
ಭವಿಸಿ ಧನ್ವಂತರಿ ಸುಷೇಣಕನಾದನವನಿಯಲಿ ೭೯

ಉಳಿದಸುರಸಂದೋಹ ನಾನಾ
ಜಲಧಿಮಧ್ಯದ್ವೀಪಕುರುವಂ
ಗಳಲಿ ಕುಧರಾವಳಿಗಳಲಿ ಬಹುಕಾನನಂಗಳಲಿ
[4]ಬಲಿಮುಖರ ರೂಪುಗಳನವರುಱೆ
ತಳೆದರಾ[4]ಳ್ದನ ನೇಮದಲಿ ಕೇ
ಳಿಲೆ ಕಕುತ್ಸ್ಥಜಸೂನು ಹರಿಲೀಲಾವಿನೋದ[5]ವನು[5] ೮೦

ಮಾಯೆ ಮಂಥರೆಯಾಗಿ ದಶರಥ
ರಾಯಭವನವ ಸಾರಿದಳು ಫಣಿ
ರಾಯ ಲಕ್ಷ್ಮಣನಾಗಿ ಜನಿಸಿದನಿಂದಿರಾವನಿತೆ
ರಾಯಜನಕನ ಮಗಳೆನಿಸಿ ವಸು
ಧಾಯುವತಿಯಿಂದುದಿಸಿದಳು ನಾ
ರಾಯಣನು ರೂ[6]ಪಿ[6]ಸಿದನನುಪಮ ರಾಮನಾಮದಲಿ ೮೧

ಇದು ಕಣಾ ಜಗದೀಶ್ವರನ ಜನ
ನದ ಜಗದ್ವ್ಯಾಪಾರಜವನಿಕೆ
ಯುದಿಸಿ ತೋಱಿದನೆಂಬುದಿದು ಮಿಥ್ಯಾಪ್ರಪಂಚವಲೆ

---

[1] ದನು ಬಳಿಕಾ (ಕ). [2] ನಳನ ರೂಪಿನಲಿ (ಗ), ಬೞಕ ನಳನಾದ (ಜ.ಟ.ಡ.ಣ). [3] ರು (ಕ.ಜ.ಟ.ಡ). [4] ಬಳಲ ಬಲಿಮುಖರೂಪುಗಳ ನೆಱೆ ತಳೆದರಾ (ಕ), ಬಲಿಮುಖರ ರೂಪಿನಲಿ ಮಿಗೆಕಂಗೊಳಿಸಿತಾ (ಗ), ಬಲಬಲೀಮುಖ ರೂಪುಗಳ ನೆಱೆ ತಳೆದರಾ (ಣ). [5] ಕವ (ಕ.ಗ.ಜ.ಟ.ಣ). [6] ಹಿ (ಗ.ಜ.ಝ.ಣ).

ತುದಿಮೊದಲು ನಡುವೆಂಬ ಲಯದ
ಭ್ಯುದಯವೆಂಬ ವಿಕಾರಗಳು ಸೋಂ
ಕದ ಸನಾ[1]ಥನಿ[1]ಗಾಯ್ತು ಲೀಲೆ ಮನುಷ್ಯರೂಪಿನಲಿ ೭೨

ಒಡಲೊಳಬುಜಭವಾಂಡಕೋಟಿಯ
ನಡಗಿಸಿಪ್ಪ ಮಹಾಮಹಿಮಗಾ
ಯ್ತುಡ[2]ಕ ತೊ[2]ಟ್ಟಿಲಲಮಳನಿಗಮಾಳಿಗಳು ಬೆಱಗಾಗೆ
ನುಡಿಗಗೋಚರದಮಳಬೊಮ್ಮದ
ಕಡುಹು ನಿಂದುದು ಜೋಗುಳದಲವ
[3]ಗಡೆಯ ದೇ[3]ವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ ೭೩

ಎತ್ತ ಹೋದು[4]ದೊ[4] ಹಸಿವು ತೃಷೆಹೊಗ
ದುತ್ತಮದ ಮಹಿಮಾತಿಶಯ ಹಸಿ
ದತ್ತು ಮೊಲೆವಾಲಿಂಗೆ ಮೊಗ[5]ಸುವಡಿದು ವಿ[5]ಚಿತ್ರವಲ
ಎತ್ತಲಹಿಪತಿ[6]ಗೂರ್ವರೆಗೆ[6] ವಿಹ
ಗೋತ್ತಮಂಗರಿದೆನಿಸಿಕೊಂಬನ
ನೆತ್ತಿದರು ವನಿತೆಯರು ಬೆಱಗೇನಲ್ಲವೇಯೆಂದ ೭೪

ಜಲರುಹಾಸನ ಮುಖ್ಯ ದಿವಿಜಾ
ವಳಿಗಳಿಂದೋಲೈಸಿಕೊಂಬ
ಗ್ಗಳದ ವಿಭವದ ದೈವವಾ ನರವಿಭುವಿನೋಲಗದ
ಕೆಳದಿಯರ ಕೈಸನ್ನೆಗಳ ಮೈ
ವಳಿಯ ಮಾತಿಂಗೇಳ್ವ ಕುಳ್ಳಿರು
ವಳವಡಿಕೆ ಬಲ್ಲರಿಗೆ ಬೆಱಗೇನಲ್ಲವೇಯೆಂದ ೭೫

ನೆಲನನಳೆವಂದೀ ಮಹಾದಿಗು
ವಳೆಯವೀ ಕುಲಪರ್ವತಗಳೀ
ಜಲನಿಧಿಗಳೀ ಗಗನವೀ ಬ್ರಹ್ಮಾಂಡ ಪವಣಿಸಿದ
ವಿಲಸಿತದ ವಿಭುವಿಂಗೆ ದಟ್ಟಡಿ
ಬಳುಕುನಡೆ ಮೆಲ್ನಡೆಗಳೆಂಬಿವು
ತಿಳಿವವರ ಮನಸಿಂಗೆ [7]ಮಱೆ ತಾ[7]ನಲ್ಲವೇಯೆಂದ ೭೬

---

[1] ಥಂ (ಕ), ಥನ (ಚ). [2] ಕುದೊ (ಕ), ಗುದೊ (ಚ.ಟ). [3] ಗಡದ ದೈ (ಕ), ಗಡದ ದೇ (ಣ). [4] ದು (ಚ.ಟ). [5]ಯಿಸುವುದಿದು (ಕ), ಸುವುದಿದು ವಿ (ಜ). [6] ಕೂರ್ವರಿಗೆ (ಕ.ಜ), ಯೊರ್ವನಿಗೆ (ಚ). [7] ಬೆಱಗೇ (ಕ).

ಜಗದ ಜೀವರ ಯಂತ್ರಮಯಹಾ
ಹೆಗಳನಾಡಿಸಿ ತೋರ್ಪ[1]ನಾಟಕಿ[1]
ಮಗುವುತನದಲಿ ಬಾಲಕರ ಕೇಳೀಕಲಾಪದಲಿ
ಸೊಗಸುವುದು ಸೋಜಿಗವಲಾ ಶ್ರುತಿ
ನಗುವುದಕೆ ಸಂದೇಹವೇನೆಲೆ
ಮಗನೆ [2]ಕೇಳ್ ಮಾಯಾಚರಿತಕಿದು ಸೊಬಗಲೇ[2]ಯೆಂದ ೭೭

ಆದಿಬೊಮ್ಮಕೆ ಮಗುವುತನ ಸಂ
ಪಾದಿಸಿತುಯೆಂಬುದು ಮೃಷಾಪರಿ
ವಾದವಿದು ಬಲ್ಲವರಿಗಜ್ಞರ ಮಾತದಂತಿರಲಿ
ಮೇದಿನಿಯು ಭಾರಾಪಹರಣವಿ
ನೋದವಿದು ಮಾಯಾಪ್ರಪಂಚನ
ಹಾದಿಗರಿಗಿದು ಸಿದ್ಧವೆಂದೇ ತೋಱುತಿ[3]ಹುದೆಂದ[3] ೭೮

ಅಱಿಯಬಂದುದೆ ನಿಮಗೆ ಮಾಯೆಯ
ಮಱೆಯ ಮಾನವನೆಂದು ಮಗುಳಿ
ನ್ನಱಿಸಲಿಲ್ಲವಲೇ ಮನಸ್ಸಿನ ಸಂಶ[4]ಯಂಗಳನು[4]
ತೆಱಹುಗೊಟ್ಟುದೆ ನಿಮಗೆನಲು ಪದ
ಕೆಱಗಿದರು [5]ಬಳಿಕವರು[5] ಮುನಿ ಬಳಿ
ಕುಱುವ ರಘುರಾಜೇಂದ್ರಚರಿತವ ಹೇಳಲನುಗೈದ ೭೯

ಹೊಳೆಹೊಳೆವ ನಿಡುಗಂಗಳಿನ ಥಳ
ಥಳಿಪ ಕದಪಿನ ಕೋಮಲಾಧರ
ದೆಳನಗೆಯ ಬಾಯ್ದೆಱೆಯ ಮಿಱುಗುವ ದಂತಪಂಗ್ತಿಗಳ
ಸುಳಿಗುರುಳ [6]ಸೊಂಪೊಗೆವ[6] ನೀಲೋ
ತ್ಪಲನಿಭಾಂಗದ ಮುದ್ದುಮುಸುಡಿನ
ಚಲುವವೇವರ ದೇವನೆಸೆದನು ಬಾಲ[7]ಕೇಳಿ[7]ಯಲಿ ೮೦

ದಿವಸ ದಿವಸಕೆ ಬಾಲಶಶಿ ಹೆ
ಚ್ಚುವವೊಲನುಜರು ಸಹಿತ ಲಕ್ಷ್ಮೀ
ಧವನು ಹೆಚ್ಚಿದನಿಳೆಯ ನಾಡಾಡಿಗಳ ನರರಂತೆ

---

[1] ನಾಟಕ (ಕ.ಝ). ನಟನೀ (ಗ). [2] ಮಾಯಾಚರಿತ ಸೊಬಗೇನಲ್ಲವೇ (ಕ.ಟ). ಮಾಯಾಚರಿತ್ರನ ಸೊಬಗಲಾ (ಙ). [3] ದೆಯೆಂದ (ಗ.ಚ). [4] ಮದ ಬೀದಿ (ಗ.ಜ.ಟ.ಡ). [5] ಮಗುಳವರು (ಗ), ಭಕ್ತಿಯಲಿ (ಙ). [6] ಸೊಂಪುಗಳ (ಗ.ಜ.ಡ), ಸೊಂಪ್ಪೇಗೆವ (ಚ). [7] ಲೀಲೆ (ಚ).

ಅವನಿಜಾಸುತ ಕೇಳು ಮಹದು
ತ್ಸವದಲುಪನಯನಪ್ರಪಂ[1]ಚುಗ
ಳ[1]ವರಿಗಾದವು ವಿದಿತವೈದಿಕಲೌಕಿಕಂಗಳಲಿ ೮೧

ಮೇಲೆ ನಿರುಪಮವೇದಶಾಸ್ತ್ರವಿ
ಶಾಲವಕ್ತೃಗಳಾದರಲ್ಲಿಂ
ಮೇಲನುಗ್ರಹವಾಯ್ತು ಮುನಿಪ ವಸಿಷ್ಠನಿಂ ಬಳಿಕ
ನಾಲುವರು ನಂದನರಿಗವನೀ
ಪಾಲತೇಜೋರಾಜಿಮಿಗೆ ಸ
ಮ್ಮೇಳವಿಸಿದುದು ಮೆಱೆದುದವರಭ್ಯುದಯ ದಿನದಿನಕೆ ೮೨

ವರುಷ [2]ಹನ್ನೆರಡ[2]ರಲಿ ಗಜರಥ
ತುರಗದೇರಾಟದಲಿ ಗದೆ ಮು
ದ್ಗರ ಕೃಪಾಣ ಶರಾಸನಾದಿ ಸಮಸ್ತ ಶಸ್ತ್ರದಲಿ
ಸರಿ ಸುರೋರಗನರರೊಳಿಲ್ಲೆಂ
ಬುರುತರಪ್ರೌಢಿಗಳಲುಬ್ಬಿಸಿ
ದರು [3]ಧು[3]ರಂಧರರಾಜತೇಜವಲಖಿಳಜನಮನವ ೮೩

— — —

[1] ಚಕವಿ (ಕ.ಜ.ಟ.ಡ.ಣ), ಚುಗಳಿ (ಗ)　[2] ಹದಿನಾಱು (ಕ.ಝ.ಟ.ಡ.ಣ).
[3] ಪು (ಝ.ಟ.ಡ.ಣ).

# ಒಂಬತ್ತನೆಯ ಸಂಧಿ

---

ಸೂಚನೆ : ರಾಯ ದಶರಥನೆಡೆಗೆ ಮುನಿಕುಲ
ರಾಯ ಕೌಶಿಕ ಬಂದು ಯಜ್ಞವ
ಕಾಯಲೊಡಗೊಂಡೊಯ್ದ[1]ನತಿಬಲ[1] ರಾಮಲಕ್ಷ್ಮಣರ

ವಿಮಲಮತಿ ಕುಶ ಕೇಳು ಸಿದ್ಧಾ
ಶ್ರಮದೊಳಿದ್ದನು ಸಕಲಮುನಿಕುಲ
ಕಮಲಮಿತ್ರನು [2]ಮುನಿಪ[2] ವಿಶ್ವಾಮಿತ್ರನೀಚೆಯಲಿ
ಅಮರರಿಪು ಮಾರೀಚ ಘನವಿ
ಕ್ರಮಸುಬಾಹುಗಳೆಂಬ ರಾಕ್ಷಸ
ರಮಣರಾ ಮುನಿಮುಖಕೆ ಕಂಟಕರಾದರಡಿಗಡಿಗೆ ೧

ಮುನಿ ಬಳಿಕ ಬಲುಚಿಂತೆಯಲಿ ಗತ
ದನುವನವರಿಗೆ ಕಾಣಲಱಿಯದೆ
ವನಜಗರ್ಭನ ಸಾರಿ ಬಿನ್ನಹಮಾಡಿದನು ಹದನ
ಮುನಿಪ ಕೇಳಿದಕೇಕೆ ಭಯ ಗೋ
ಮಿನಿಯಪತಿ [3]ರುಂ[3]ಹರಿಯ ಭಾರವ
ನೊನೆಯಲುದಿಸಿದನಹನೆ ದಶರಥರಾಯಭವನದಲಿ ೨

ಕೊಂಡುಹೋಗಾ ವಿಬುಧರಿಪುವೇ
ತಂಡಪಂಚಾನನನ[4]ನಾಹವ[4]
ಚಂಡಚಟುಳ ಪರಾಕ್ರಮನ ಮಾಯಾತ್ರಿವಿಕ್ರಮನ
ಕಂಡ ಬಗೆಯಿದು ಬೇಗ ಹೋಗೆನೆ
ಮಂಡೆಯನು ಮಣಿದಿಳಿದನವನೀ
ಮಂಡಲಕೆ ಮುದದಿಂದ ವಿಶ್ವಾಮಿತ್ರಮುನಿರಾಯ ೩

ಕರೆಸಿ ಋಷಿವರ್ಗವನು ಮುನಿಜನ
ವೆರಸಿ ಸಿದ್ಧಾಶ್ರಮವನುಳಿದು
ಬ್ಬರದ ವಿವಿಧ ವನಾಳಿಗಳ ವಿಷಯಾಂತರಾಳಗಳ

---

[1] ನುಪಮ (ಕ). [2] ವಿಮಲ (ಗ.ಜ.ಝ.ಣ). [3] ಗಂ (ಗ.ಚ.ಜ.ಡ). [4] ರಾಘವ (ಗ.ಜ).

ಗಿರಿಸರಿತ್ಸಂಕುಲವ ಕಳಿಕಳಿ
ದರಿವಿಜಯ ದಶರಥಮಹೀಶನ
ಧರಣಿಯನು ಸಾರಿದನು ಸಂತೋಷದ ಸಘಾಡದಲಿ ೪

ಬರಬರಲು ತತ್ಕೋಸಲದ [1]ರುಂ[1]
ಹರಿ ವಿರಾಜಿಸಿತಮವು ಹರಹಿನ
ಹರಿವ ಹೊಳೆಗಾಲುವೆಯ ಕೆಱೆದುಂಬುಗಳ ನೀರುಗಳ
ತೆರಳಿಕೆಯ ತದ್ಗ್ರಾಮನಿಕರದ
ಸಿರಿಯ ಶಾಲೀವನದ ವನದು
ಬ್ಬರದ ಧವಳೇಕ್ಷುಗಳನನುಪಮನಂದ[2]ನಂಗಳಲಿ[2] ೫

ಹಲಸು ಖರ್ಜೂರಾಮ್ರಕುಲ ಮಾ
ದಲ ಮಧೂಕ ಕ್ರಮುಕ ದಾಡಿಮ
ತಿಲಕ ಕುರವಕ ಜಂಬು ಜಂಭೀರಪ್ರಕೀರ್ಣಗಲಿ
ನೆಲನು ಕಾಣ[3]ಸದೀ[3]ಕ್ಷಿಸಿದ ದೆಸೆ
ಗಳಲಿ ಹೂದೋಟಗಳ ಹರಹಿನ
ವಳಯವೆಡಬಲವೀಥಿಯಲಿ ಕಾಣಿಸಿದವಾ ಮುನಿಗೆ ೬

ಅಂಗಜಾಂತಕನಾಲಯದವೊಲು
ಮಂಗಳಾನ್ವಿತಮಯ ಹಿರಣ್ಯಕ
ಭಂಗ[4]ನಂತರ್ಗ್ಯ[4]ಹದವೊಲು ಲಕ್ಷ್ಮೀವಿಲಾಸಮಯ
ತುಂಗತೇಜೋಭರಿತ ಪರಮಪ
ತಂಗಮಂಡಲದಂತೆ ಗೋಕುಲ
ಸಂಗಮಯವೆನಲೆಸೆದುದಗ್ಗದರಾಷ್ಟ್ರ ಕೋಸಲದ ೭

ಬಂದನಾ ಮುನಿ ನೋಡುತಜನೃಪ
ನಂದನನ ಲಲಿತೋಪವರ್ತನ
ವೃಂದವನು ತಲೆದೂಗುತಡಿಗಡಿಗ[5]ಧಿಕ[5] ಹರುಷದಲಿ
ತಂದೆ ರಾಜ್ಯವನಾಳನೇ ಪೌ
ರಂದರಾವನಿಗಿನಿತು ಸೊಬಗಿ
ಲ್ಲೆಂದು ಸಕಲಗ್ರಾಮವನು ಕಳಿಕಳಿದು ನಡೆತಂದ ೮

---

[1] ಗಂ (ಚ). [2] ನಾದಿಗಳ (ಚ. ಸಿತೀ (ಕ.ಟ.ಡ). [4] ನುನ್ನತಗ್ಯ (ಕ.ಗ.ಜ). [5] ತುಳ (ಗ.ಜ.ಝ.ಟ.ಡ).

ಪರಿಧಿಪರಿವೃತ ರವಿಯವೊಲು ನಿಜ
ಪರಿಧಿಪರಿವೃತ ನಗರವೆಸೆದುದು
ತರುಣ ಕೇಳ್ಕೈ[1]ಕಂಗಳಿಗೆ ದೂರದಲಿ ಕೌಶಿಕನ[1]
ಮರಕತದ ಮಾಣಿಕದ ಚಾವಿಾ
ಕರದ ಚಟುಳಪ್ರಭೆಯ ಶಾಲಾ
ವರಣದಲಿ [2]ಮುಖಶಾಲೆಗಳ ಸೌಧಗಳ ಸೊಂಪಿನಲಿ[2] ೯

ಮುರಿಮುರಿದು ಕೊತ್ತಳದ ಕೋಟೆಯ
ತರತರದ ಮುಗಿಲಟ್ಟಳೆಯ ವಿ
ಸ್ತರದ ವಿಮಲ[3]ಸ್ಫಟಿಕ[3]ಬದ್ಧರದಾಳುವೇರಿಗಳ
ಪರಿಪರಿಯ ಮಣಿಕನಕಮಯದು
ಪ್ಪರಿಗೆಗಳ ಸಾಲಿನಲಿ ಸುರಪನ
ಪುರವನಣಕಿಸುತಿರ್ದುದಾ ಸತ್ಯಾವತೀನಗರ ೧೦

ಹೊಳಲು ಹೊಸರೀತಿಯಲಿ [4]ಮಿಗೆ[4]ಕಂ
ಗೊಳಿಸುತಿರ್ದುದು ಮುನಿಪತಿಗೆ ಹೊಱ
ವಳಲ ರಮ್ಯೋದ್ಯಾನವೆಸೆದುದು ಚೈತ್ರರಥದಂತೆ
ನಲಿವ ಕಿನ್ನರಮಿಥುನದಲಿ ಮಿಗೆ
ಗಳಹುವರಗಿಳಿವಿಂಡಿನಲಿ ಹೆ
ಕ್ಕಳಿಪ ಕೋಗಿಲೆಗಳಲಿ ಮೊರೆವಳಿಕುಳದ ಮೇಳದಲಿ ೧೧

ಹೊರೆದ ಮಕರಂದದ ತುಷಾರದ
ಪರಿಮಳದ ಪಸರಿಕೆಯ ಕುಸುಮೋ
ತ್ಕರದ ನಸುಮಿಡಿಗಾಯಿ ಕಸುಗಾಯ್ ದೋರೆಗಾಯಿಗಳ
ಬಿರಿದೊಗುವ ಬಂಬಲಿನ ಸೋನೆಯ
ಪರಿಯ ಪಕ್ವಫಲಾಳಿಗಳ ಬಂ
ಧುರ[5]ರಸಾಳ[5]ಪ್ರಮುಖಭೂಜದಿನೆಸೆದುದುದ್ಯಾನ ೧೨

ಬೀಗಿ ಬೆಳೆದೆಲೆವಳ್ಳಿಗಳ ಸಲೆ
ತೂಗಿ ತೊನೆವಡಕೆಗಳ [6]ಕೊನೆಯಲಿ[6]
ಬಾಗಿ ಬಳುಕುವ ಬಾಳೆಗಳ ಫಲಭರದ ತೆಂಗುಗಳ

---

[1] ದೂರದಲಿ ಕಂಗಳಿಗೆ ಕೌಶಿಕನ (ಕ.ಣ), ಕಂಗಳಿಗೆ ಕೌತುಕದಿ ಮುನಿವರನ (ಗ). [2] ಸೌಧಗಳ ಮುಖಶಾಲೆಗಳು ತೋಱದುವು (ಚ). [3] ಪ್ರಭೆಯ (ಚ.ಝ). [4] ಸಲೆ (ಕ), ತಾ (ಟ). [5] ದಶಾಲ (ಕ.ಟ.ಡ). [6] ಕೊನೆಗಳ (ಚ), ಗೊನೆಯಲಿ (ಝ.ಟ.ಡ), ಗೊನೆಗಳ (ಜ).

ಸೋಗೆಗಳ ಸುಳಿವುಗಳ ಕಪಿಗಳ
ಲಾಗುಗಳ ಲಂಘನೆಯುಲಿಸೆದುದು
ಪೂಗಣೆಯನಾಡುಂಬೊಲನವೊಲು ತತ್ಪುರೋದ್ಯಾನ　　೧೩

ಮರಕತದ ನೆಲಗಟ್ಟುಗಳ ಹಿಮ
ಕಿರಣಕಾಂತದ ನೆಲೆನೆಲೆಯ ಬಂ
ಧುರದ ಘನಸೋಪಾನಗಳ ಕೇಳೀಮನೋಹರದ
ಸರಸಿಗಳ [1]ಮಣಿಸೌಧಗಳ[1] ವಿ
ಸ್ತರದ ವಿವಿಧಸುರತ್ನ[2]ಹೇಮೋ
ತ್ಕ[2]ರದ ಕೃತಕಾದ್ರಿಗಳಲೊಪ್ಪಿ[3]ದುದಾ ಪು[3]ರೋದ್ಯಾನ　　೧೪

ಸರಸಿಗಳ ಪುಣ್ಯೋದಕದಲಘು
ಮರುಷಣಂಗೈದಬ್ಜಕುಸುಮೋ
ತ್ಕರ ಪರಾಗ ವಿಲೇಪನಾಂಗದಿನಳಿಕದಂಬಕದ
ವರಚತುಸ್ವರದಮಳ ನಿಗಮೋ
ತ್ಕರದ [4]ತದ್ವನಸಂಚರದ[4] ಪರಿ
ಸರದ ಪಾವನಪರಮಮುನಿಯಪ್ಪಿದನು ಕೌಶಿಕನ　　೧೫

ಬಾರಿಸಿದ ಸರಣಿ[5]ಶ್ರಮೋದ್ಭವ[5]
ವಾರಿ ತನುಗತವಾದವಂಗಮ
ನೋರಥದಲುಬ್ಬಿದುದು ವಿಶ್ವಾಮಿತ್ರಮುನಿವರನ
ಪೌರಜನವಿಭಹಯ ವರೂಥದ
ಸಾರಥಿಯ ಪಥವಿಡಿದು ನಗರ
ದ್ವಾರವನು ಸಾರಿದನು ಸಮ್ಮೇಳದಲಿ ಮುನಿ[6]ನಾಥ[6]　　೧೬

---

[1] ಸೌಧಂಗಳಲಿ (ಕ.ಚ). [2] ತತಿಬಂಧು (ಗ.ಜ). [3] ತು ತತ್ಪು (ಚ).
[4] ತತ್ವದ ಪಂಚಮದ (ಗ), ತತ್ಪದಸಂಚರದ (ಚ), ವನಸಂಚರದ ತತ್ (ಜ.ಝ).
[5] ಶ್ರಮೋದಕ (ಕ), ಪ್ರಮದ್ಭವ (ಗ), ಪ್ರಮೋದ್ಭವ (ಝ.ಡ). [6] ಜನದ (ಗ), ವರರ (ಜ.ಣ).

ಸಗರರಂದು ಮಹಾಧ್ವರಾಶ್ವವ
ಜಗವೆರಡರಲಿ ನೋಡಿ ಕಾಣದೆ
ಬಗಿದಿಳೆಯ [1]ತಂದಿಳಿದ[1] ಿತಳದ್ವಾರ[2]ವೋ ಪುರದ[2]
ಅಗಳೊ ರವಿಯೆಡೆಯಾಟಕಿಕ್ಕಿದ
ಗಗನಸೀಮೆಯೊ ಕೋಟೆಯೋಯೆನು
ತಗಡುರಾಜಮುನೀಂದ್ರ ಹೊಗಳುತ ಹೊಕ್ಕನಾ ಪುರವ ೧೭

ಪಳುಕಿನಜುಯೆಲಿ ಬಿಗಿದ ಬೀದಿಯ
ನೆ[3]ಲನ[3] ನಿಳಯಶ್ರೇಣಿಗಳನು
ಜ್ವಲಿಪ ಚಂದ್ರೋಪಲದ ಘನಸೋಪಾನಪಂಗ್ತಿಗಳ
ಬಳಿಬಳಿಯು ಸೌಧಾಳಿಗಳ ಹೊಂ
ಗಳಸಗಳ ಹೊದಱಿನ ಪತಾಕಾ
ವಳಿಯು ಪಸರದಿನೆಸೆದುದಾ ಪುರ ಮುನಿಯ ಕಣ್ಮನಕೆ ೧೮

ಪರಿಪರಿಯ ವಸ್ತೂತ್ತ್ಕರದ ವಿ
ಸ್ತರದ ವಿವಿಧವರ್ಣಿಗ್ವರರ ಖಂ
ಧುರದ ಬಹಳಿತ ಸೂರ್ಯವೀಥಿಯ ಸೋಮವೀಥಿಗಳ
ಪುರನಿತಂಬಿನಿಯರ ವಿಲಾಸದ
ನಿರುಪಮಾಲಯ ವೀಥಿಗಳ ಮುನಿ
ವರನು ನೋಡುತ ಬಂದು ಹೊಕ್ಕನು ನೃಪಸಭಾಸ್ಥಳವ ೧೯

ಧರಣಿಪತಿ ಮುನಿಸಾರ್ವಭೌಮನ
ಬರವ ಕಾಣುತ ದಿಮ್ಮನುರುವಿ
ಷ್ಟರವನಿಳಿದಿದಿರ್ವಂದು ವಿನಮಿತನಾಗಿ ಕೈಗೊಟ್ಟು
ಅರಮನೆಗೆ ತಂದರ್ಘ್ಯಪಾದ್ಯೋ
ತ್ಕರವಿಧಾನದಿನಾ ಮುನಿಯ[4]ನುಪ
ಚ[4]ರಿಸಿ ಬಿಜಯಂಗೈದ ಹದನೇನೆಂದು ಬೆಸಗೊಂಡ ೨೦

ಬಂದೆವಾವ್ ಕೇಳ್ಕೆ ಸ್ವಕಾರ್ಯದ
ಕುಂದುಹೆಚ್ಚಿನ ಕೊಱತೆಗಳು ನಿ
ನ್ನಿಂದ ನಮಗೆ ಸುಸೂತ್ರವಹವೆಂಬೀ ವಿಚಾರದಲಿ

---

[1] ನುಚ್ಚಳಿಸಿ (ಚ), ಲಿಂದಿಳಿದ (ಜ.ಝ.ಡ). [2] ಷೋ ವೋಣು (ಗ), ಗೋಪುರದ (ಚ). [3] ಲೆಯ (ಚ.ಟ). [4] ಸತ್ಕ (ಗ.ಚ.ಜ).

ಇಂದಿಗೀನೆಲೆಗಾವನ್ಯೆ ನಿ
ನ್ನಿಂದ [1]ತೇಜಿಷ್ಠರು[1] ಮಹೀಶರೊ
ಳೆಂದು ಕೊಂಡಾಡಿದನು ಮುನಿ ದಶರಥಮಹೀಪತಿಯ ೨೧

ಜನಪ ಕೇಳ್ಳೆ [2]ಕೇ[2]ಳಬೇಕೆಂ
ಬಿನಿತು ತಾನುಪಚಾರ ನಿನ್ನಯ
ಜನಪಧರ್ಮದ ಸಕಲನೀತಿಯ ಸಾರಸಂಗ್ರಹವ
ಮನು ಪುರೂರವ ಕಾರ್ತವೀರ್ಯಾ
ರ್ಜುನ ಹರಿಶ್ಚಂದ್ರಾದಿ ರಾಯರ
ನೆನ[3]ಹ ನೆಱೆ[3]ಮಾಣಿಸಿದೆ ಮಾತಿನ್ನಾವುದೆಮಗೆಂದ ೨೨

ಹಸನು ವರ್ಣವಿಭೇದಪ[4]ದ್ಧತಿ
ಸಸಿನ[4] ವೈದಿಕಮಾರ್ಗ ನಿನ್ನಲಿ
ವಸುಮತೀಪತಿ [5]ಕೇಳು ಜನ[5]ಪಾಲನೆಯ ಪರಿ ಲೇಸು
ಹುಸಿಕವತೆ ಕಳವಳಿವು ಕೊಲೆ ಕ
ರ್ಕಶತೆ ಮುಖ್ಯೋಪದ್ರವಿವು ಮಿಗೆ
ಮಿಸುಕಲಮ್ಮವು ನಾವು ಹೇಳುವುದೇನು ನಿನಗೆಂದ ೨೩

ಅರಸ ಕೇಳ್ಳೆ ಧರ್ಮ ನಾಲುಕು
ಚರಣದಲಿ ನಿಂದಿದೆ ಮಹೀನಿ
ರ್ಜರರ ನಿರುಪಮ ಹವ್ಯಕವ್ಯಸ್ಥಿತಿಸುರೇಶ್ವರ[6]ನ[6]
ವರಸಭಾಮಂಡಲದೊಳಗೆ ವಿ
ಸ್ತರಣವಾಗಿಹುದಗ್ನಿಹೋತ್ರಾ
ಚರಿತ[7]ಕಾವುದು ಕೊಱತೆಯೆಲೆ[7] ನರನಾಥ ಕೇಳೆಂದ ೨೪

ಈಸು ದಿನ ನಮ್ಮಗ್ನಿಹೋತ್ರಕೆ
ಮೀಸಲಳಿಯದೆ ನಡೆದುದೀಗ ವಿ
ನಾಶಕರವಾಯ್ತು ದಱಿನಾದುದು ಬರವು ನಮಗೆನಲು
ಐಸಲೇ ನಿಮಗಾದ ಚಿಂತೆ[8]ಯಿ[8]
ದೇಸುದೊಡ್ಡಿತು ಬೆಸಸಿ ಮಾಡುವೆ
[9]ನೀಸು[9] ಮಾ[10]ತಿಲ್ಲೆಲೆ[10] ಮುನೀಶ್ವರ ನಂಬಿ ನೀವೆಂದ ೨೫

---

[1] ಬಲವಂತರು (ಕ), ತೇಜಿಷ್ಠನು (ಟ.ಡ). [2] ಹೇ (ಗ). [3] ಹುವನು (ಗ.ಟ), ಹುಗಳ (ಜ.ಝ). [4] ದವತಿ ಹಸನು (ಕ.ಝ.ಣ), ದ್ಧತಿ ಹಸನು (ಗ). [5] ಕೇಳ್ ಪ್ರಜಾ (ಕ.ಗ.ಜ.ಣ). [6] ರ (ಗ.ಜ.ಟ). [7] ಕೊಬ್ಬರೆ ಹೊಱಗು ನಾವ್ (ಕ.ಝ.ಣ), ಕೊಬ್ಬರೊಳೊರೆಲೆ (ಗ.ಜ). [8] ಯು (ಗ.ಚ). [9] ನಾಶೆ (ಟ.ಡ.ಣ). [10] ತೇಕೆಲೆ (ಕ.ಜ.ಝ).

ಪೊಡವಿಪತಿ ಕೇಳ್ ನಿಗಮನಿಕರಗ
ಳೆಡಹಿ [1]ವಾ[1]ಚಿಸಿದಡೆಯುಂ ನಿ[2]ನ್ನ[2]ಯ
ನುಡಿಗೆ ಹೊದ್ದದು ಹಳಿವು ಮನುವಿಡಿದಿಂದುಪರಿಯಂತ
ನುಡಿದು ನೋಡು[3]ವೆವಾವು[3] ನಮ್ಮಯ
ನುಡಿಯ ನೀ ಪಾಲಿಸಿದಡದು ಮ್ಮೈ
ಗೊಡುವ ಭಾಗ್ಯದ ಬೆಳಸಲೇ ನಮಗೆಂದನಾ ಮುನಿಪ ೨೬

ನಾವು ಬೇಡುವ ವಸ್ತು ವಾಹನ
ವಾವು[4]ದದ[4] ಕೇಳರಸ ರಾಘವ
ದೇವನನು ಕೊಡು ಕಡೆಯ ಮಾತಿದು ಯಜ್ಞರಕ್ಷಣೆಗೆ
ಭೂವಧೂವರ ಕೇಳಿದೈ ಸಂ
ಭಾವನೋಚಿತವಿನಿತಲೇ ಮ
ತ್ತಾವುದಕೆ ನಿರ್ಬಂಧಿಸುವರಲ್ಲೆಂದನಾ ಮುನಿಪ ೨೭

ಎಲೆ ಕುಶನೆ ಕೇಳ್ ಮುನಿಪನುತ್ತರ
ದಲಗು ಬೆನ್ನಲಿ ಮೂಡಿದುದು ಹೆಡ
ತಲೆಗೆ ಸಾರ್ದುದು ಜಿಹ್ವೆ ಕಳವಳಿಸಿ[5]ದವು[5] ಕರಣಚಯ
ಒಳಗುಗವದುದು ತಾಪದಲಿ ಮು
ಮ್ಮುಳಿತನಾದನು ಮುಂದುಗಾಣದೆ
ಹಲವನೆಣಿಸುತ ಹರುಷಗೆಟ್ಟಿಂತೆಂದನಾ ಮುನಿಪ ೨೮

ಐಸಲೇ ಮುನಿನಾಥ ರಾಮನ
[6]ದೈ[6]ಸರವನತ್ತುಂಬ ಹರೆಯದ
ಶೈಶವನ ಕೈಯಿಂದ ಸಲಹಿಸಿಕೊಂಬುದೇ ಯಜನ
ಸೂಸದಿರಿ ನೀವ್ ನಗೆಯನಿದಕೇ
ನೈಸಲೇ ಮಖಪರಿಕರವ ಮೇ
ಳೈಸಿ ಮಱೆಮಾತೇ[7]ಕೆ[7] ರಕ್ಷಿಸುವೆನು ಮಹಾಧ್ವರವ ೨೯

ನಗೆಯ ಸೂಸುವಡಾವು ಲೋಕದ
ಹಗರಣಿಗರೇ ಕೇಳಿದೈ ನೃಪ
ಮಗುವು ರಾಘವನೆಂದು ತಪ್ಪಿಸಿ ನುಡಿ[8]ದ[8] ನುಡಿ ನಿನಗೆ

---

[1] ನಾ (ಗ.ಚ). [2] ಮ್ಮ (ಕ.ಜ.ಡ.ಣ). [3] ವ ನಾವು (ಕ.ಝ.ಟ.ಡ.ಣ), ವವಾವು (ಗ). [4] ದನು (ಗ.ಜ.ಝ.ಣ). [5] ದುದು (ಗ.ಜ.ಝ). [6] ದೇ (ಗ.ಜ.ಡ). [7] ನು (ಕ.ಗ.ಝ.ಟ.ಣ). [8] ವ (ಗ.ಟ.ಣ).

ನಿಗರವೇ ರಘುನಾಥ ನಾಡಾ
ಡಿಗಳ ನರನೇ ಮರುಳಲಾ ನಿ
ನ್ನಗಡುತನವನು ಬಲ್ಲೆನದು ಕೊಳ್ಳದು ಕಣಾಯೆಂದ ೩೦

ಧುರದೊಳಿಂದ್ರನ ಸದೆಬಡಿ[1]ದು[1] ಶಂ
[2]ಬ[2]ರನ ಸಮರವ ಗೆಲಿದೆನೆಂಬೀ
ಬಿರುದ ಬಿಡು ಕೇಳರಸ ದಿಗ್ವಿಜಯದ ಪರಾಕ್ರಮ[3]ವ[3]
ಹುರುಳು ನಿನಗುಂಟೆಂ[4]ಬುದದ[4] ಕೆಲ
[5]ಕಿರಿಸು[5] ವೀರಸುಬಾಹುಮಾರೀ
ಚರುಗಳಾರೆಂದಱಿಯಲಾ ನರನಾಥ ಕೇಳೆಂದ ೩೧

ಕಳುಹುವ[6]ಡೆ[6] ನೃಪ ಕೇಳು ರಾಮನ
ಕಳುಹು ಕಳುಹದೊಡೆಮ್ಮ ನೀಕ್ಷಣ
ಕಳುಹು ಕಾವವರುಂಟು ಯಜ್ಞವನಿಳೆಯೊಳರಸುಗಳು
ಹೊಳೆದು ನುಡಿವರಸಲ್ಲವೆಂದಾ
ನೊಳಗನಱಿಯದೆ ಬಂದೆ[7]ನ್ನೈಸಿದ[7]
ಕಳುಕಲೇತಕೆ [8]ತೂಗದಿರ್ದಡೆ ತೋಟಿಯೇಕೆಂದ[8] ೩೨

ಮುಸುಡ ಕಂಡೆನು ಹಲವು ಕಾಲಕೆ
ಶಿಶುಗಳಿವದಿರ ನಿಮ್ಮ ಕೃಪೆಯಲಿ
ಹಸುಳೆಗಳಲಾ ಹರಿಬವನು ನೀವೆಂದ ಹಗೆಗಳಲಿ
ಎಸಗಬಲ್ಲರೆ ಕಂಡ ರತುನವ
ಬಿಸುಡಿಸಲು ಬೇಡಯ್ಯ ರಕ್ಕಸ
ರಸಮರಣದೊಳಗುಳಿಯಬಲ್ಲರೆ ತಂದೆ ಹೇಳೆಂದ ೩೩

ಉಳಿಯಬಲ್ಲರೆ ರಕ್ಕಸರ ಕೊಳು
ಗುಳದೊಳಗೆ [9]ಕದನಕ್ಕೆ[9] ಕಂದನ
ಕಳುಹಬಹುದೇಯೆಂದು ಕರುಣವ ತೋಱಿ ನುಡಿದೆಯಲ
ಉಳಿವುದೀ ನಿಜವಸ್ತುವೀ ಜಗ
ದಳಿವಿನಲಿ ಮಿಕ್ಕಾದ ವಸ್ತುಗ
ಳಳಿ[10]ವವೀತನಿನೀತನಾ[10]ರೆಂದಱಿಯಲಾಯೆಂದ ೩೪

---

[1] ದೆ (ಕ.ಗ.ಝ.ಡ). [2] ಕ (ಕ.ಗ.ಜ). [3] ದ (ಕ.ಗ.ಝ.ಟ). [4] ಬಡದು (ಗ), ಬರದು (ಜ), ಬುದಿದು (ಝ). [5] ಕಿರಲಿ (ಗ.ಜ.ಝ.ಟ.ಡ.ಣ). [6] ರೆ (ಕ.ಚ.ಜ.ಝ.ಟ.ಣ). [7] ವ್ಮೈಯಿದ (ಗ), ವ್ಮೈಸಿದ (ಜ.ಝ). [8] ತೂಗದಿರ್ದಡೆ ತೋಟಿಯೋಯೆಂದ (ಗ.ಚ), ಬಿರಿದ ಬಿಟ್ಟಡೆ ತೋಟಿಯಿರ್ಲ್ಲೆಂದ (ಝ), ತೂಗದಿರ್ದಡೆ ತೋಟಿಯೇನೆಂದ (ಡ.ಣ). [9] ತರಹರಿಸಿ (ಝ). [10] ದವೀತನ ನೀನದಾ (ಕ.ಚ), ವವೀತನೊಳೀತನಾ (ಟ.ಡ).

ಮರುಳೆರಸ ಕೇಳೀತ ಮಾಯಾ
ನರ ಕಣಾ ಮಗನಲ್ಲ ನಿಖಿಳಾ
ಮರರ ದೂಱಿಂದೀತ ನಿರ್ಮಿಸ್ದ ತರಣಿವಂಶದಲಿ
ಧರೆಯ ಭಾರವನಿಳುಹಲೆಂದವ
ತರಿಸಿದನು ಜಗದಖಿಳದೇವರಿ
ಗರಸಲಾ ನಿನಗಕಟ ಮಗನೇ ಮರುಳೆ ಹೋಗೆಂದ ೩೫

ಅಜನ ರೂಪಿಂದಖಿಳ ಲೋಕವ
ಸೃಜಿಸುವನು ಸಲಹುವನು ಗರುಡ
ಧ್ವಜನ ರೂಪಿಂದಳಿವನಗ್ಗದ ರುದ್ರರೂಪಿನಲಿ
ಭಜಿಸಿ ನೆರೆಯರು ನಾರದಾದ್ಯರು
ನಿಜವನೀತನನೀತ ನಿನಗಾ
ತ್ಮಜನೆ ಹೋಗೆಲೆ ಮರುಳೆ ನೀನಾರೀತನಾರೆಂದ ೩೬

ಈ ಹಸುಳೆ ಹಿಂದಖಿಳೆಯುಗದಲಿ
ರೂಹಸಿದನುರು ಮತ್ಸ್ಯ ಕೂರ್ಮ ವ
ರಾಹ ನರಹರಿ ವಟು ಪರಶುಧರನಾಗಿ ಲೀಲೆಯಲಿ
ಗಾಹು ಬೇರಿಹುದೀ ಜಗದ ಮೈ
ಗಾಹಿಗೋಸುಗ ಜನ್ಮವೆಂಬಿವು
ಚೋಹವೈಸಲ್ಲದೆ ವಿಚಾರಿಸೆ ಮಗನೆ ನಿನಗೆಂದ ೩೭

ಕಾಣವೀತನನಱಿಸಿ ನಿಗಮ
ಶ್ರೇಣಿಗಳು ಸಿದ್ಧಾಂತವಿದು ಪರ
ಮಾಣುಗತನ ಮಹತ್ವವನು ನಿರ್ಣೈಸಿ ನೆರೆಯುವಲ
ಸ್ಥಾಣು ಕಮಲಜರಱಿಕೆಗಳ ಸ
ತ್ರಾಣವೇತಱಿವರಸ ಕೇಳ್ ಸರಿ
ಗಾಣೆ ನಿನಗೀ ದೈವವೊಲಿದುದಕೆಂದನಾ ಮುನಿಪ ೩೮

ತಂದೆ ನೀನಹೆ[1]ನೆಂಬ[1] ಹಮ್ಮನು
ತಂದುಕೊಳದಿರು ನಿಮ್ಮ ಗುರುವಿನ
ತಂದೆಯಯ್ಯನು ತಪ್ಪ[2]ದೇಯೆಂಬೀಸು[2] ನಿಶ್ಚಯವ

---

[1] ಯೆಂಬ (ಕ.ಗ). [2] ದಿದಕೆಂದೀಸು (ಕ), ದಿದುತಾನೀಸು (ಝ), ದಿದ ಕೆಂಬೀಸು (ಟ.ಡ).

ಹಿಂದು ಮುಂದಹೆ ಕೇಳಿಕೋ ನಾ
ವೆಂದ ಮಾತನು ಕುಲವಿಡಿದು ಬಳಿ
ಸಂದ ನಿಮ್ಮಯ ಗುರುವಸಿಷ್ಠನನೆಂದನಾ ಮುನಿಪ ೩೯

ಸೆರೆಗಳಾಕಿದವಾ ನರೇಂದ್ರನ
ಕೊರಳನಾ ಮುನಿನಾಥ ನುಡಿದು
ತ್ತರಕೆ ಮಾಱುತ್ತರವ ಕಾಣದೆ ಮನದ ಮಱುಕದಲಿ
ಗುರುಮುಖಾಂಬುಜವನು ನಿರೀಕ್ಷಿಸೆ
ಬೆರಳ ಸನ್ನೆಯಲಾ ಮುನಿಪ ನಿ
ರ್ಧರಿಸಿದನು ನಿಜವೆಂದು ಕಳುಹಿನ್ನಂಜಬೇಡೆಂದ ೪೦

ಗುರುನಿರೂಪವಲಂಘ್ಯ[1]ವೆಂದನು[1]
ಕರಸಿ [2]ಕರೆದನು[2] ಮಗನನೀ ಮುನಿ
ವರನ ಕೃಪೆ ನಿನಗಾಯ್ತು ಪಾಲಿಸು ಮುನಿಪನಧ್ವರವ
ತೆರಳು ನೀನೆಂದೆಂಬ ವಚನಾಂ
ತರದೊಳೊಸರಿದವಶ್ರುಜಲ ನಿ
ರ್ಭರದ [3]ಬೆಱಗಿನ ಧೀವಶದೊಳಿರ್ದುದು ಸಭಾ[3]ಸ್ಥಾನ ೪೧

ನಮಿಸಿ ತಂದೆಗೆ ಗುರುವಸಿಷ್ಠನ
ಸುಮುಖತೆಯ ಹರಕೆಯನು ಕೈಕೊಂ
ಡಮಿತವಿಕ್ರಮ ನಿಷುಧಿಚಾಪಕೃಪಾಣವನು ಧರಿಸಿ
ಗಮಿಸಿದನು ಮುನಿಯೊಡನೆ ಹರುಷೋ
ದ್ಗಮದಲಾತನ ಬೆಂಬಳಿಯಲಾ
ಕ್ರಮದಿನಾ ಸೌಮಿತ್ರಿ ಕಳುಹಿಸಿಕೊಂಡನಾ ನೃಪನ ೪೨

ಬೀಳುಕೊಂಡನು ಮುನಿ ಬಳಿಕ ಭೂ
ಪಾಲಕನ ಹರುಷದಲಿ ತನ್ನೃಪ [illegible]
ಬಾಲಕರು ಸಹಿತಲ್ಲಿಗಲ್ಲಿಗೆ ನೆರೆದ ಪೌರಜನ
ಜಾಳಿಸುವ ಕಂಬನಿಗಳಲಿ ಬಿಱು
ನಾಲಿಗೆಯ ಬೈಗುಳಲಿ ಮುನಿಯನು
ಕೀಳುನುಡಿ[4]ಯಲಿ ಜಱೆವುತಿರ್ದುದು[4] ಜಱೆದು ಜನಪತಿಯ ೪೩

---

[1] ವೆನ್ನದೆ (ಕ), ವೆಂದೇ (ಟ). [2] ಕಳುಹಿದ (ಕ). [3] ಬೆಱಗಿನ ಬೆರವಸ ದೊಳಿರ್ದುದು ನೃಪ (ಕ), ಬೇವಸದಿಂದ ಬೆಱಗಿನೊಳಿರ್ದುದಾ (ಗ). [4] ಯಲಿ ನುಡಿವುತಿರ್ದುದು (ಕ.ಜ.ಝ.ಡ), ಗಳ ಜಡಿದು ನುಡಿದುದು (ಗ).

ಪುರವ ಹೊಱವಂಟಾ ಮುನಿಪನಾ
ತರಣಿಕುಲಜರು ಸಹಿತ ಬಂದನು
ಸರಯುವೆಂಬ ತರಂಗಿಣಿಗೆ ನಿಜಭಾವಶುದ್ಧಿಯಲಿ
ಪರಮನಿಷ್ಠೆಯಲಾ ಮುನಿಪನಘ
ಮರುಷಣಾದಿ ಸಮಸ್ತಕರ್ಮಾಂ
ತರವ ವಿರಚಿಸಿಕೊಟ್ಟನವರಿಬ್ಬರಿಗನುಗ್ರಹವ ೪೪

ಹರಿಹರಬ್ರಹ್ಮಾಮರೇಂದ್ರಾ
ದ್ಯರ ಹೆಸರ ದಿವ್ಯಾಸ್ತ್ರಮಂತ್ರವ
ನೊರೆದನಾಚಮನೀಯಸಾಂಗೋಪಾಂಗಮುದ್ರೆಯಲಿ
ವರವನಿತ್ತನು ಶಸ್ತ್ರದುಪಸಂ
ಹರಣವನು ತನುರಕ್ಷಣೆಯ ವಿ
ಸ್ತರದ ದಿವ್ಯತನುತ್ರಮಂತ್ರವನಾ ಕುಮಾರರಿಗೆ ೪೫

---

# ಹತ್ತನೆಯ ಸಂಧಿ

ಸೂಚನೆ : ತುಂಗಭುಜಬಲನಹಿತಮದಮಾ
ತಂಗಕಂಠೀರವನು ರಾಮನ
ಭಂಗದಲಿ ತಾಟಕಿಯ ಗೆಲಿದೊಲಿಸಿದನು ಜಯವಧುವ

ಕಂದ ಕೇಳ್ಮೈ ಮುನಿ ಬಳಿಕ ಮುದ
ದಿಂದ ಸರಯುವ ದಾಂಟಿ ದಶರಥ
ನಂದನರು ಸಹಿತೈದಿದನು ಘನಘೋರಕಾನನವ
ದಂದಶೂಕಮಹೋಗ್ರಖಗಮೃಗ
ದಿಂದ ಮಿಗೆ ಕಪ್ಪಗಿವ ಕತ್ತಲೆ
ಯಿಂದ ಬೀಱಿತು ಭಯವನಾ ರಘು[1]ರಾಜಪುತ್ರರಿಗೆ[1] ೧

ಮುನಿಪ ಚಿತ್ತೈಸೀ ಭಯಂಕರ
ವನವಿದಾರಾಶ್ರಮವು ಗಮಿಸುವ
ಡನಿಮಿಷರಿಗಳವಲ್ಲ ಹೆಸರೇನೀ ಮಹಾವನದ
ಎನೆ ಸುರೇಂದ್ರನು ಪೂರ್ವದಲಿ ವೃ
ತ್ರನ ವಿ[2]ದಾರಿ[2]ಸೆ ಬಂದುದಾತಗೆ
ಜನಿತಕಲ್ಮಷ[3]ದೋ[3]ಷವಾ ದಿನಕೆಂದನಾ ಮುನಿಪ ೨

ಕಲು[4]ಷವದ[4]ನಪಹರಿಸಲಾಖಂ
ಡಲನ ಬಳಿಗಜ ಬಂದು ಗಂಗಾ
ಜಲದಲಭಿಷೇಕವನು ಮಾಡಿದನಾ ಸುರೇಂದ್ರಂಗೆ
ಬಳಿಕಲಾ ಜಲವಿಳಿಯಲೀ ವನ
ಕಲುಷಕಾನನವಾಯ್ತು ಭಾರಿಯ
ಬಳರಿಗಾಶ್ರ[5]ಯ[5]ವಾಯ್ತು ನಮ್ಮಾಶ್ರಮಕೆ ಹಗೆಯಾಯ್ತು ೩

---

[1] ರಾಮನಿದಿರಿನಲಿ (ಕ). [2] ಭಾಡಿ (ಗ.ಜ), ಚಾರಿ (ಟ). [3] ರೋ (ಕ.ಟ.ಡ). [4] ಷಿತವ (ಕ.ಟ.ಡ). [5] ಮ (ಗ.ಜ.ಝ.ಟ.ಣ).

ಈ ವನದೊಳಿಹರಪ್ರತಿಮ ವೀ
ರಾವತಾರರು ಕಲಿಸುಬಾಹುವಿ
ಭಾವರೀಚರ ಘೋರಮಾರೀಚಾದಿ ರಾಕ್ಷಸರು
ಠಾವು ಬಿಡಿಸಿದು ಕೇಳಿದ್ಯೆ ರಾ
ಜೀವಲೋಚನ ನಿರ್ಭಯಾಂಗದ
ಧೀವಸವು [1]ಧುರಕಿ[1]ರಲೆನುತ ನಡೆತಂದನಾ ಮುನಿಪ ೪

ಸುಳಿದುದಾ ಕಾಂತಾರಮಧ್ಯ
ಸ್ಥಳಿ[2]ದೊಳಗೆ[2] ನರಗಂಧ ನಾಸಾ
ವಳಯುದಲಿ ನೈಶಾಟಕುಲದಾಟವಿಕ ತಾಟಕಿಯ
ಸುಳಿವವರು ನರರೆನ್ನ ಪುಣ್ಯದ
ಫಲವಲಾ ಮರ್ಝು ಭಾಪೆನುತ ಮೈ
ಯೊಲಹಿನಲಿ ಮನವುಬ್ಬಿ ನಿಂದಿದಳಧಿಕಹರುಷದಲಿ ೫

ಏಳಲೆದ್ದುದು ಶಾಕಿನೀಜನ
ಜಾಲ ಪಾಯವಧಾರೆನುತ ವಿಕ
ರಾಳಮುಖಿ ನಡೆತಂದಳದ್ಭುತರೌದ್ರರೂಪಿನಲಿ
ಮೇಲೆ ಸುಳಿವಸುರಾಂಗನಾಜನ
ಜಾಲವಾಚರಿಸಿತ್ತು ಬಿದ್ದವು
ತೋಳ[3]ಗಾಳಿಗೆ[3] ತರುಕದಂಬಕ[4]ವವಳ ಗಮನದಲಿ[4] ೬

ಜವನ ಜನನಿಯೊ ಮೇಣು ಲಯಭೈ
ರವನ ಭಗಿನಿಯೊ ವಿಲಯಕಾಲದ
ಶಿವನ ಸಖಿಯೋ ಸವತಿಯೋ ಸಂವರ್ತಮೃತ್ಯುವಿನ
ಇವಳ ಕೆಣಕಿದು ಜೀವದಲಿ ಬದು
ಕುವ [5]ಭವಬ್ರಹ್ಮಾಮರೇಂದ್ರರ[5]
ಹವಣು ಹುಸಿಯೆಂದೆಂಬವೊಲು ನಡೆತಂದಳಿದಿರಿನಲಿ ೭

---

[1] ನಿಮಗಿ (ಜ), ಮನಕಿ (ಝ). [2] ದಲಾ (ಗ.ಜ.ಝ.ಟ), ದೊಳಾ (ಡ). *'ಚ' ಪ್ರತಿಯಲ್ಲಿ ೬ನೆಯ ಪದ್ಯವು ೭ನೆಯ ಪದ್ಯವಾದನಂತರ ಬಂದಿದೆ. [3] ಘಾತಿಗೆ (ಚ). [4] ವಾ ನಿಶಾಚರಿಯ (ಕ). [5] ಹರಬ್ರಹ್ಮಾದಿದೇವರ (ಚ), ಭವಬ್ರಹ್ಮಾದಿ ದೇವರ (ಡ.ಣ).

ಅದೆ ಬರವು ತಾಟಕಿಯು [1]ನೋಡೈ[1]
ಕದನಕರ್ಕಶರಾಮ ರಣದ
ಭ್ಯುದಯ[2]ಲೀಲಾ[2]ರಂಭವಿದು ಭೂಭಾರ ಭಂಜನೆ[3]ಗೆ[3]
ಹೆದಱದಿರು ಚಿತ್ತದಲಿ ಬಾಣವ
ಹೆದೆಗೊಳಿಸು ರಕ್ಕಸಿಯ ಜೀವವ
ನೊದೆದುಹಾಯ್ಕೆಂದೆನಲು ನಗುತಿಂತೆಂದನಾ ರಾಮ ೮

ಹೆಂಗುಸಿವಳಿವೆಳಸುವನುಚ್ಚುವು
ದಂಗವೇ ಕ್ಷತ್ರಿಯರಿಗೆಮ್ಮ ಪ
ತಂಗಕುಲದರಸುಗಳು ನಗದಿಹರೇ ಸುರೇಂದ್ರನಲಿ
ಭಂಗಬಡಿಸಿಯೆ ಬಿಡುವುದೇ ಭಟ
ರಂಗ ಬೆಸಸದಿರಿನಿತನೆನೆ ಮುನಿ
ಪುಂಗವನು ನಸುನಗುತಲಾ ರಘುನಾಥಗಿಂತೆಂದ ೯

ಎಲೆ ಕಕುತ್ಸ್ಥಜ ಕೇಳು ಲೋಕವ
ಹಿಳಿವಳಿವಳಂದದಲಿ ಹಿಂದಣ
ಬಲಿಯ ತಂಗಿ [4]ಬಳಿಕ್ಕ ದೂರಾಯ್ತು[4]ವಳ ದೆಸೆಯಿಂದ
ಬಲವಿರೋಧಿಗೆ ಕೇಳಿದ್ಯೆ ಕಡು
ಗಲಿಯೆ ಗೆಲಿದನು ಶಕ್ರನವಳನು
ಕೊಲೆಗೆ ಕೊಕ್ಕರಿಸಿದನೆ ಕಾಲಗ್ರೀವ ಮೃತ್ಯುವಿನ ೧೦

ಧರೆಗೆ ಕಂಟಕರಾದವರ ಸಂ
ಹರಿಸುವುದೆ ನೃಪನೀತಿ ಸುಜನರ
ನಿರತಿಶಯ [5]ಪಾಲಿ[5]ಸುವುದೆ ಕ್ಷತ್ರಿಯರ ಧರ್ಮಕಣ
ನಿರುತವಿದು ಪರಮಾರ್ಥದಲಿ ಸಂ
ಹರಿಸು ಸಂದೇಹವನು ಮನದೊಳ
ಗಿರಿಸದಿರು ರಕ್ಕಸಿಯನೆನೆ ಹೂಡಿದನು ಮಾರ್ಗಣವ ೧೧

---

[1] ನೋಡೆಲೆ (ಗ.ಜ.ಝ.ಡ.ಣ). [2] ಕಿದು ಪ್ರಾ (ಕ), ಕದನಾ (ಟ), ರಚನಾ (ಣ). [3] ಯ (ಗ.ಜ.ಝ). [4] ಯಪಳಿಯಮಾತಾಯ್ತು (ಕ). [5] ರಕ್ಷಿ (ಝ.ಟ).

ಮುಟ್ಟವಿಸಿ ಬಹ ರಕ್ಕಸಿಯನವರ
ಗಟ್ಟಿ ನಿಂದನು ಮುಂದೆ ಸೆಣಸುವ
ದಿಟ್ಟಿದಿವಿರಲಿ ಸುಳಿವ ಸಿಡಿಲಂದದಲಿ ಘರ್ಜಿಸುತ
ಇಟ್ಟಣಿಸಿ ನಗುತವಳು ರಾಮನ
ನೆಟ್ಟವಿಸಿ ಮುಂಬರಿದು ಮುನಿಪನ
[1]ತೊಟ್ಟು[1]ಳಕೆಯಲಿ ಬಾಚಿದಳು ಬಾವಳ[2]ಪೇಟಕವ[2] ೧೨

ತೊಲಗು ತೊತ್ತಿನಮಗಳೆ ಮುಟ್ಟದಿ
ರೆಳೆಯ ವಿಬುಧರ ನಿನ್ನ ಗಂಟಲ
ಬಳೆಯ ಬಿಡಿಸುವ ಮೃತ್ಯುವಿದೆ ನೋಡಿತ್ತ ತಿರುಗೆನುತ
ಹೊಳೆವ ಹೊಂಬರಹದ ಸುರೇಖೆಯ
ತಳವದಸ್ತ್ರದಲವಳ ಹಸ್ತವ
ಕಳಚಲೆಚ್ಚನು ಭೂತಗಣ ಬೆರತೋರದೆ ಭೀತಿಯಲಿ ೧೩

ಸಿಡಿದು ಹಾರಿದ ಹಸ್ತಮುಜುಬಗೆ
[3]ಬುಡಸಹಿತ ಬಲುಮರ ಧರಾತಳ
ಕುಡಿದು ಬಿದ್ದವು ಕರಗಿ ಬಂದನದರುಣಧಾರೆಯಲಿ
ಗಿಡುಲತಾಳಿ ವಸಂತದಲಿ ತಳಿ
[4]ರೊಡದ[4]ಶೋಕೆಯ ಧಾತನಗಲಕೆ
ಪಡೆದವಮರವಿಮಾನತತಿ ಕೆಂಪಾದಪಶ್ರದಲಿ ೧೪

ತರುಣ ಕೇಳ್ಕೆ ಬಳಿಕಲಾ ಬಳ
ತರುಣೆ ತವಕದಲಬ್ಬರಿಸುತು
ಬ್ಬರದ ಕೋಪದಲೆಡದ ಕೈಯಲಿ ಝಡಿವುತಾಯುಧದ
ಪರಿಘರಿನೆ ಹಲುದಿನುತ ನೋಡಾ
ತರುವಲಿಯ ಸಾಹಸವನೆನುತಾ
ಸುರದ ರೋಷಾವೇಶದಲಿ ಝಡಿದಿಟ್ಟಳಿನಕುಲನ ೧೫

ಅವಳ ತೂಲದ ಶಿಬಿಯುಲಾ ವನ
ನಿವಹ ಸೀಕರಿಯಾಯ್ತು ತಾರೆಗ
ಳವನಿಗು[5]ದುರಿ[5]ದವರಳ ತಪಿಸಿತು ಬಿಂಬ ದಿನಮಣಿಯು

[1] ತುಟ್ಟ (ಡ). [2] ದ ಪೇಟ್ಟಿದಲಿ (ಮು.ಡ). [3] ಗಿಡು (ಕ). [4] ತೊಡದ (ಕ), ತೊಡವೆ (ಚ), ರೊಡದ (ಖ). [5] ದಳ (ಗ.ಡ).

ಅವನಿ ಹೊಗೆದುದು [1]ಸಕಲ[1]ಮುನಿಪಟು
ನಿವಹ [2]ಶಿವಶಿವಯೆಂದುದಿದ[2] ನಿ
ಮ್ಮವರು ಕೇಳುವರೇ ವಿಚಿತ್ರವ ಕೇಳಿರೈಯೆಂದ ೧೬

ಶೂಲವಿದ್ದುದು ನಭ[3]ದ[3] ಲಯದ ಕ
ಪಾಲಹಸ್ತನ ಕರದ[4]ಲಾಜೆಯು[4]
ತೋಳು ಕಾಣಿಸಿತಾ ಕೃತಾಂತನ ಬಳಿಯ[5]ಲಿಸುಗೆಯಲ[5]
ಹೇಳಲೇನದನವಳು ಮೋಘದ
ಜಾಳಿಯಲಿ ಮಳೆಗಱೆದಳರುಣಜ
ಲಾಳಿ ಹೊನಲಿಡಲಬ್ಬರಿಸುತಾಸುರವಿಕಾರದಲಿ ೧೭

ಆವ ಬಲುಬಿಲು ಜಾಣತನದ ಮ
ಹಾವಿಚಿತ್ರಪ್ರೌಢಿಯೋ ದಿಟ
ದೇವನಲ್ಲಾ ಮೇಲೆ ದೈತ್ಯಾಂತಕನಲಾ ರಣಕೆ
ಆವು[6]ದರಿದಾತಂಗೆ[6] ಗಗನದ
ದೇವತತಿ ಕೊಂಡಾಡೆ ತಲೆ ಘನ
ರಾವದಲಿ ನೆಲಕುರುಳಲೆಚ್ಚನು ಘೋರತಾಟಕಿಯ ೧೮

ಕೆಡೆದುದಾ ತಲೆ ರಕುತ ಮುಂಡದೊ
ಳೊಡೆದು ಹಾಯ್ದುದು [7]ಬಳಲಿ ನೆಲದಲಿ
ಕೆಡೆದುದ[7]ವಳ ಶರೀರ ಹೊರಳಿತು ಜಾವಪರಿಯಂತ
ಹೊಡೆದವಮರರ ಭೇರಿ ಹೂವಿನ
ನಿಡುಸರದ ಸೋನೆಗಳ ದಿವಿಜರ
ಮಡದಿಯರು ಸೂಸಿದರು ರಘುಕುಲನುತ್ತಮಾಂಗದಲಿ ೧೯

ಪುಳಕಚಯದುಬ್ಬಿನಲಿ ಮುನಿಕುಲ
ತಿಲಕ ಬಿಗಿಯಪ್ಪಿದನು ನೀಲೋ
ತ್ಪಲನಿಭಾಂಗನ [8]ನಿಖಿಳದೇವೋತ್ತಮನ [9]ನಿರುಪಮನ[9]
ನಳಿನನಾಭನ ಮಂಗಳಶ್ರೀ
ನಿಳಯ ತೊರವೆಯ ರಾಯನನು ಹೆ
ಕ್ಕಳದ ಹರುಷದಲುಬ್ಬಿ ಕುಣಿದುದು ಮುನಿಜನಸ್ತೋಮ ೨೦

---

[1] ನಿಖಿಳ (ಕ.ಜ.ಝ.ಡ), ಕೂಡೆ (ಗ). [2] ಮುರೆ ಹಾಯೆಂದುದೀ (ಗ), ಶಿವಧಾಯೆಂದುದಿದು (ಚ.ಡ.ಞ). [3] ದಿ (ಚ). [4] ಲಸುರೆಯು (ಕ). [5] ಮುಸಲವನೆ (ಕ). [6] ದರಿದಿವಗೆಂದು (ಕ), ದಿವಗರಿದೆಂದು (ಝ). [7] ಬಳಿಕನೆಲದಲಿ ಕೆಡದುದ (ಕ.ಗ), ಬಳಲನೆಲಕೊಗ್ಗುರ್ಡಿಸಿತ (ಚ.ಡ). [8] ನ (ಗ,ಝ.ಚ.ಡ). [9] ರಾಘವನ (ಜ).

# ಹನ್ನೊಂದನೆಯ ಸಂಧಿ

ಸೂಚನೆ : ಧುರದೊಳಸುರಸುಬಾಹುಮಾರೀ
ಚರನು ಗೆಲಿದು ಮುನೀಂದ್ರನಮಲಾ
ಧ್ವರವ ರಕ್ಷಿಸಿ ಪಡೆದನುನ್ನತಕೀರ್ತಿಯನು ರಾಮ

ಕಳಿದರಿವರೆಲೆ ಕೇಳು ಕುಶ ತ
ತ್ಕಲುಷಕಾಂತಾರವನು ತನ್ಮುನಿ
ತಿಲಕ ಹೊಕ್ಕನು ಬಳಿಕ ಘನಪಾವನತಪೋವನವ
ಲಲಿತಪುಣ್ಯಮಹೀಜಕುಲಮಂ
ಜುಳಲತಾಸೌರಭ್ಯಕುಸುಮೋ
[1]ಚ್ಚ[1]ಳಿತಚಲಿತಸಮೀರನುತವಿಶ್ರುತಮಹಾಶ್ರಮವ ೧

ಶ್ರುತಿಗಳುಚ್ಚರಣೆಗಳ ಪಿಕಸಂ
ತತಿಯ ಸೋಪನ್ಯಾಸಮಯ ವಿ
ಶ್ರುತಶುಕಾಳಿಯ ಸಕಲಶಾಸ್ತ್ರಧ್ವನಿಯ ಕಿನ್ನರರ
ನುತತಪೋನುಷ್ಠಾನವಿಧಿಸಂ
ಸ್ಥಿತ[2]ವನೇ[2]ಚರಚಯದ ಶೋಭಾ
ನ್ವಿತ ತಪೋವನ ಕಣ್ಗೆ ಕೌತುಕವಾಯ್ತು ರಘುಪತಿಯ ೨

ಕೇಳಿದನು ರಘುವಂಶಲಕ್ಷ್ಮೀ
ಲೋಲನೀ ವನವಾರದೆಂದು ವಿ
ಶಾಲವಿಜ್ಞಾವಿನುತ ವಿಶ್ವಾಮಿತ್ರಮುನಿವರನ
ಹೇಳಿದನು ಬಳಿಕರಿವಿರೋಧದ
ಬೇಳುವೆಯ ಸುರವಲ್ಲಭನ ಕ
ಟ್ಟೂಳಿಗದ ಕಶ್ಯಪಮುನೀಂದ್ರನ ಪೂರ್ವಸಂಗತಿಯ ೩

ರಾಮ ಕೇಳಿದಱುಂದಲದಿತೀ
ಭಾಮಿನಿಗೆ ಜನಿಸಿದನು ಹರಿ ವರ
ವಾಮನಾಕೃತಿಯಿಂದ ದೈತ್ಯಬಲೀಂದ್ರನಧ್ವರ[3]ದ[3]
ಹೋಮವನು ಕೆಡಿಸಿದನು ಬಳಿಕೀ
ಭೂಮಿಯನು ಕೊಂಡಾಗಲಾ ಸು
ತ್ರಾಮಗೊಡರಿಸಿದಂದವನು ವಿರಚಿಸಿದನಾ ಮುನಿಪ ೪

[1] ತ್ಸ (ಗ.ಜ.ಟ), ದ್ದ (ಚ). [2] ದ ವನ (ಗ). [3] ವ (ಕ.ಜ.ಝ.ಡ).

ವನವಿದೆಮಗಾಯ್ತೆಂದು ಕಶ್ಯಪ
ಮುನಿಯ ವಚನ[1]ದಲೆಲೆ[1] ಮಹೀಪತಿ
ತನುಜ ಕೇಳ್ ತಪವೀ ತಪೋವನದೊಳಗೆ ಸಿದ್ಧಿಪುದು
ಎನುತ ಮುನಿ ಹೊಕ್ಕನು ತಪೋಧನ
ವಿನುತಶಾಲಾಂತರವನಾಕ್ಷಣ
ಮುನಿಜ[2]ನವ[2] ಕರೆಸಿದನು [3]ವರನಾನಾತಪೋವನದ[3] ೫

ನೆರಹಿದನು ಮಖಸಾಧನದ ಪರಿ
ಪರಿಯ ಸಕಲದ್ರವ್ಯವನು ವಿ
ಸ್ತರಣವಾದವು ಯಜ್ಞಶಾಲಾವೀಥಿಗಳು ಬಳಿಕ
ಚರುಪುರೋಡಾಶಾಜ್ಯದರ್ಭಾಂ
ಕುರಸಮಿತ್ಕುಶತಿಲಗಳಲಿ ಗೋ
ಚರಿಸಿತಾಹವನೀಯವೈದಿಕಲೌಕಿಕೋಕ್ತಿಯಲಿ ೬

[4]ವ[4]ರಿಸಿದನು ಮುನಿನಾಥ ಬಳಿಕ
ಧ್ವರಿ[5]ಗಳನು[5] ರುತ್ವಿಜರನಧ್ವರ
ಪರಮವೈಭವದಿಂದ ನಡೆದುದು ದಿನಚತುಷ್ಟಯವ
ಬರಿಸಿ[6]ದುದು[6] ಬರುಹಿಮುರ್ಖರನು
ಬ್ಬರದ ಹೋಮದ ಧೂಮವಿತ್ತಲು
ನೆರವುತಿ[7]ರ್ದುದು[7] ರಕ್ಕಸರು ಬೇಱೊಂದು ತಾಣದಲಿ ೭

ನಡೆವುತಿರ್ದುದು ಹೋಮವೀಯು
ಗ್ಗಡದ ಸುರಸಂದೋಹ ತವಕಿಸಿ
ತೊಡನೊಡನೆ ಗುಮ್ಮಿದುದು ಗಾವಳಿ ಗಗನ[8]ದಳತೆಯಲಿ[8]
ತುಡುಗುಣಿಗ[9]ಳ[9]ವದಿರು ನಭೋಗ್ರಕೆ
ಸಿಡಿದು ಹವಿಗೊಂಬಮರನಿಕರದ
ಹೆಡಕ ಬಾರಿಸಿ ಬಾಚುತಿ[10]ರ್ದರು[10] ಬಾಯ ತುತ್ತುಗಳ ೮

---

[1] ದಿಯೆಲೆ (ಕ), ದಿನೆಲೆ (ಗ.ಣ), ವಿದೆಲೆ (ಝ). [2] ನಂಗಳ (ಕ.ಟ.ಡ). [3] ನಾನಾ ತಪೋಧನರ (ಕ.ಟ), ಮುನಿ ನಾನಾ ತಪೋವನದ (ಗ.ಝ), ಮುನಿ ಪತಿಯಾ ತಪೋಧನರ (ಜ), ನಾನಾ ತಪೋವರರ (ಡ), ಮುನಿ ನಾನಾ ತಪೋ ಧನರ (ಣ). [4] ಬ (ಗ.ಡ), ಕ (ಝ). [5] ಯರನು (ಜ.ಣ), ಯುಗಳ (ಝ). [6] ದರು (ಕ), ದನು (ಝ). [7] ರ್ದರು (ಕ.ಗ.ಟ). [8] ವಳಯದಲ (ಗ.ಚ). [9] ಳ (ಕ.ಗ.ಝ.ಣ). [10] ರ್ದುದು (ಗ.ಚ.ಝ).

ಬೊಬ್ಬೆಯಾದುದು ಬಳಿಕ ಸುಮನಸ
ರೊಬ್ಬುಳಿಯ ಚೂಣಿಯಲಿ ಮುನಿಗಳು
ಬೆಬ್ಬಳಿಸಿದರು ಬಿಸುಟರಾಹುತಿಗಳನು [1]ದೆಸೆದೆಸೆಗೆ[1]
ಇಬ್ಬರಿವರಾ ಮುನಿ[2]ಗಳುಪಹತಿ
ಯು[2]ಬ್ಬೆಯನು ಸೈರಿಸುವರೇ ಬಿಡ
ದೆಬ್ಬಿಸಿದರಂಬುಗಳನಾ ರಾಕ್ಷಸ ಕದಂಬದಲಿ ೯

ಅಣುಗ ಕೇಳ್ಕೆ ನಿಮ್ಮವರ ಮಾ
ರ್ಗಣೆಗಳುಬ್ಬರಿಸಿದವು ಗಗನಾಂ
ಗಣವ ಗಬ್ಬರಿಸಿದವು ಹರಿವರುಣಾದಿ ನಿರ್ಜರರ
ಉಣಿಸಿಗಡಹಾಯ್ದಸುರರಟ್ಟೆಯ
ಕುಣಿಸಿದವು ಕಡಿದಲೆಯಲಮರರ
ನುಣಿಸಿದುವು ನಲಿದಾಡಿಸಿದವಾ ನಾರದಾದಿಗಳ ೧೦

ಎಲೆಲೆ ಕಣೆಗಳಿವೆಲ್ಲಿಯವೊ ಕ
ಗ್ಗೊಲೆಯ ಕಾಹುರರಾರೊ ಹೊಯ್ ಹೊಯ್
ತಲೆಯ ಕಡಿ ಕೊಲ್ಲೆನುತ ಕವಿದುದು ಕೂಡೆ ಖಳನಿಕರ
ತಲೆಗೆದಱಿ ತೆಗದೋಡುವವುರಾ
ವಳಿಯನುಱೆ ಸದೆಬಡಿದು ಸರಿಸದ
ಲಳಿದರಧ್ವರದೆಡೆಗೆ ಕಡುಗದ ಕೈಯ ನೆಗಹಿನಲಿ ೧೧

ಕೆದಱಿತಧ್ವರಿಯಾದಿ ಋತ್ವಿಜ
ರದುಭುತದ ಭೀತಿಯಲಿ ಗಡ್ಡದ
ಮುದುಕರಲುಗುವ ತಲೆಯ ಕೈಕಾಲುಗಳ ಕಂಪನದ
ಬೆದಱಿ[3]ನಲಿ[3] ಬಿಸುಟಾಹುತಿಗಳನು
[4]ಗದಗದಿಸಿ[4] ಕಂಗೆಟ್ಟು [5]ಹಾಯ್ದರು[5]
ಹೊದಕೆ ದಂಡು ಕಮಂಡಲವ ಬಿಸುಟಖಿಳ ದೆಸೆದೆಸೆಗೆ ೧೨

ಖವಖವಿಸುತವರಿಬ್ಬರಾ ಮುನಿ
ನಿವಹಕಭಯವಕೊಡುತ ಸಂಧಿಸಿ
ಸವರಿದರು ಸವ್ಯಾಪಸವ್ಯದಲೌಕುವ[6]ತ್ರಿಬಲರ[6]

---

[1] ತಮತಮಗೆ (ಕ.ಚ). [2] ಯುವ್ಯಾಕುಲದು (ಗ), ಕುಲದ ಭಯದು (ಜ), ಗಳಾಹುತಿಯು (ಡ). [3] ಡರು (ಕ.ಗ.ಜ.ಝ.ಟ.ಣ). [4] ಕದಬದಿಸಿ (ಚ.ಣ), ಗದಬದಿಸಿ (ಟ). [5] ಹಾಯ್ದುದು (ಕ.ಜ.ಝ.ಟ.ಣ). [6] ರಿಭಟರ (ಕ), ತಿಭಟರ (ಝ).

ಜವನ ಕವತೆಯೊ ಮೇಣು ಲಯಭೈ
ರವನ ಕಾಲ್ದುಳಿಯೋಯೆನಲು ನಿ
ಮ್ಮವರು ಮೆಱೆದರು ಕಲಿಕೆಗಳ ಕೌತುಕದ ರಣರಸವ ೧೩

ಶಿಶುಗಳೇನವರಮವು ಮಾಯಾ
ಶಿಶುಗಳಲ್ಲಾ ಕೇಳಿ[1]ದೈ[1] ಸಲೆ
ಸಸಿದ [2]ತಲೆಗಳಲ[2]ಡಗಿತಭ್ರದ್ಯೋತಮಂಡಲವ
ಬಸಿದು ಬೀಳ್ವ [3]ಕಬಂಧ[3]ದಲಿ ಹೆಣ
ವಸರವಾದುದು ನೆಲನಿದೆಲ್ಲಿಯು
ವಿಷಮವೀರರೊ ಮಝುಯೆನುತ ಮಾರೀಚ ಬೆಱಗಾದೆ ೧೪

ಇವರಿದಾರೋ ಶಕ್ರ ಶಿಖಿ ಯಮ
ಪವನ ಧನದೀಶಾನ್ಯರೊಳಗೀ
ಹವಣಿನಧಟರ ಕಾಣೆನಾಹವದಂ[4]ಗ[4] ಲೇಸೆನುತ
ರವಿಯ ಬಿಂಬಕೆ ಲಂಬಿಸುವ ರಾ
ಹುವಿನವೋಲು ಸುಬಾಹು ಕಲಿರಾ
ಘವನ ಸರಿಸದೊಳೌಕಿ ಕರೆದನು ಕೋಲ ಸರಿವಳೆಯ ೧೫

ತಪನಕುಲಜರು ಕೇಳಿರೈ ರಣ
ನಿಪುಣನಲ್ಲಾ ರಾಮನಾ [5]ಕೋ[5]
ಣಪನ ಕೋದಂಡವನು ಖಂಡಿಸಿದನು ಶರಾಳಿಯಲಿ
ಕುಪಿತಖಳ ಬಳಿಕುಬ್ಬಿ ದಿವಿಜಾ
ಧಿಪಸುದತ್ತ ಮಹಾಯುಧದಲಾ
ಕಪಟನಾಟಕಸೂತ್ರಧಾರನನಿಟ್ಟು ಬೊಬ್ಬಿಱಿದ ೧೬

ಭುಗುಭುಗಿಲ್‌ಭುಗಿಲೆಂದು ಭೋರ್ಗರ
ದುಗುಳಿದವು ಬಲುಗಿಡಿಯ[6]ನುರಿ ನಾ[6]
ಲಗೆಯ ನಿಗುರಿನಲಲಗುಗ[7]ಳು[7] ಬಳಿಕಾ ಮಹಾಯುಧವ
ಬಗೆವನೇ ನಿಮ್ಮಯ್ಯ ನಗುತಾ
ಶುಗ[8]ಮಹಾಸ್ತ್ರ[8]ದೊಳರಿಯ ಕೈದುವ
ನಗಲಿಸುತ ಕೊಂಡಡಱಿತಂಬರಕವನ ಮಸ್ತಕವ ೧೭

---

[1] ರ್ೈ (ಕ.ಟ). [2] ರಳೆಯಂತ (ಕ), ರಳೆಯಿಂದ (ಝ.ಡ). [3] ಕದಂಬ (ಕ.ಝ.ಡ.ಣ). [4] ದ (ಕ.ಚ). [5] ಕೌ (ಚ.ಝ). [6] ರುರಿನಾ (ಕ.ಜ), ನಿಡುನಾ (ಗ). [7] ಳ (ಕ.ಜ.ಝ). [8] ಸಖಾಸ್ತ್ರ (ಗ.ಣ), ಸಹಸ್ರ (ಯ.ಟ.ಡ).

ಧಿಂಡುಗೆಡೆದುದು ನೆಲಕೆ ರಕ್ಕಸ
ಧಿಂಡೆಯ[1]ನ[1] ರೌಕುಳದ ರಕುತದ
ಮುಂಡವೀ ಕೌತುಕವನಾ ಮಾರೀಚ ದೂರದಲಿ
ಕಂಡು ತಾಪಸವೇಷವನು ಕೈ
ಕೊಂಡು ಕೊಲೆಗಂಗೈಸಿ ಕದನೋ
ದ್ದಂಡರಾಮನ ಬಳಿಗೆ ಬಂದನು ದೈನ್ಯಭಾವದಲಿ ೧೮

ಕಾದುಕೊಳ್ಳೈ ರಾಜಸೂನು ಮ
ಹಾದಯಾಂಬುಧಿ ರಕ್ಷಿಸೈ ಕರು
ಣೋದಯನೆ ವಿಪ್ರಪ್ರಿಯನೆ ಧಾರ್ಮಿಕನೆ ಗುಣಯುತನೆ
ಈ [2]ದುರುಳ ನೈ[2]ಶಾಟರಸುಗೊಳ
ಲೈದಿಬರುತಿಹರೆಂದು ಬಹ ಮಾ
ಯಾದುರಾತ್ಮನ ಕಂಡು ಮುನಿ ಕಾಕುತ್ಸ್ಥಗಿಂತೆಂದ ೧೯

ತೊಡು ಮಹಾಸ್ತ್ರವನಿವಗೆ ಕಪಟದ
ತೊಡಹದವನಿವ ವಿಪ್ರನಲ್ಲಿವ
ಮೃಡಸರೋಜಭವಾದ್ಯರನು ಲೆಕ್ಕಿಸುವನಲ್ಲ ಕಣ
ಕೆಡಹುವನು ಮಾಯೆಯಲಿ ಮಲತು
ಗ್ಗಡದ ವೀರರನಿವನ ತಲೆಯನು
ಕಡಿದುಹಾಯ್ಕೆಂದೊದಱಿದನು ದೂರದಲಿ ಮುನಿನಾಥ ೨೦

ಆದ[3]ಡೆಯು[3] ಬ್ರಹ್ಮವನು ಮಱೆಗೊಂ
ಡೈದಿದರ ವಧಿಸುವುದು ಲೌಕಿಕ
ವೈದಿಕದ ಮತವಲ್ಲ ಮನುಕುಲದವರ ಪಥವಲ್ಲ
ಹೋದ ಮೈಯಲಿ ಹೋಗಲೆನುತ ಕೃ
ಪೋದಯನು ನಗುತನಿಲಶರದಿಂ
ದೂದಿದನು ಜಲ[4]ನಿಧಿಯ[4] ತೆಂಕಣತೀರಕಾ ಖಳನ ೨೧

ಬಳಿಸರಳ ಸಂಧಾನದಲಿ ಬಳಿ
[5]ಕುಳಿಕಲಿನ ರಕ್ಕಸರ[5] ಜವಪುರ
ದೊಳಗೆ ಹೊಗಿಸಿದನೊಡನೆ ಹವ್ಯಸುಭೋಜನಕೆ ಸುರರ

---

[1] ರ (ಕ.ಗ.ಚ.ಣ). [2] ದುರಾತ್ಮನಿ (ಕ.ಜ.ಟ.ಡ.ಣ). [3] ರೆಯು (ಚ.ಝ.ಡ). [4] ಧಿಯಲಿ (ಚ). [5] ಕುಳಿದ ರಕ್ಕಸಪಡೆಯ (ಚ), ಕಳುಕಿದೀ ರಕ್ಕಸರ (ಝ).

ನಿಲಿಸಿದನು ನಿರ್ವಿಘ್ನದಲಿ ಮುನಿ
ತಿಲಕನಧ್ವರ ಸಾಂಗವಾದುದು
ಸುಲಭವಾಯ್ತವಭೃತಮಹೋತ್ಸವವಾ ಮುನೀಂದ್ರಂಗೆ ೨೨

ಮುನಿಗಳುತ್ಸಾಹಿಸಿದರಬುಜಾ
ಸನ ಸುರೇಂದ್ರಾದಿಗಳು ಜಯಜಯ
ನಿನದದಲಿ ಸೂಸಿದರು ಸುಮ್ಮಾನದಲಿ ಪೂಮಳೆಯ
ತನುಪುಳಕದುಬ್ಬುಗಳಲಾಲಿಂ
ಗನವ ಮಾಡಿದನೊಲಿದು ತೊರವೆಯ
ವಿನುತ ವೀರಾಗ್ರಣಿಯ ವಿಶ್ವಾಮಿತ್ರಮುನಿರಾಯ ೨೩

---

# ಹನ್ನೆರಡನೆಯ ಸಂಧಿ

ಸೂಚನೆ : ನೆರೆದುದಖಿಳದಿಗಂತದವನೀ
ಶ್ವರರು ವಿಶ್ವಾಮಿತ್ರಮುನಿ ರಘು
ವರರು ಸಹಿತ್ಯೈತಂದರವನಿಜೆಯ ಸ್ವಯಂವರಕೆ

ಕೇಳಿದೈ ಕುಶ ಬಳಿಕ ರಘುನೃಪ
ಬಾಲಕರಿಗಾ ಕುಶಿಕ[1]ನಂದನ[1]
ಕೋಲಗುರುವಾದನು ಕಣಾ ಕೇಳೈ ಕುಶಾನುಜನೆ
ಭಾಳನೇತ್ರನ ವರದ ಗರುಡಿಯ
ಚಾಳಿಯೆನಿತುಂಟನಿತನಿವರಲಿ
ಮೇಳವಿಸಿದನು ಮೇಲೆ ತಿಂಗ[2]ಳು ದಿವಸಕಾ[2] ಮುನಿಪ ೧

ಕಲಿತರಿವರಾ ಮುನಿಯ ಶಿಕ್ಷೆಯ
ಸುಲಭತೆಯಲಖಿಳಾಸ್ತ್ರಶಸ್ತ್ರದ
ವಿಲಸದಭಿರಂಜ[3]ನೆಯ[3]ನಲ್ಲಿಂಮೇಲೆ ಮುನಿಪತಿಯ
ಬಳಿಗೆ ಬಂದರು ಜನಕಭೂಪನ
ಬಳಿಯ ಮಣಿಹಾಱರು ಮಹಾಮಂ
ಗಳೆಯ ವಿಮಲವಿವಾಹಪತ್ರಿಕೆಸಹಿತ ಪಹಿಲದಲಿ ೨

ಪರಮಹರುಷದೊಳಾ ಮುನಿಪನಾ
ಪರಿಸಿ ಬಳಿಕ ವಿದೇಹಭೂಪನ
ಚರರ ಕಳುಹಿದ ಮನದೊಳನು[4]ವರಿ[4]ಸಿದನು ಜಾನಕಿಯ
ನರಚರಿತ್ರದ ರಾಮ[5]ಭ[5]ದ್ರಗೆ
ಪರಿಣಯುವ ಮಾಳ್ಪುಜ್ಜುಗವ ನಿ
ರ್ಧರಿಸಿ ಪಯಣೋದ್ಯೋಗಮನನಾದನು ಸರಾಗದಲಿ ೩

ಶುಭಮುಹೂರ್ತದೊಳಾ ತಪೋಧನ
ವಿಭು ಸರಾಗದಿನರ್ಕವಂಶ
ಪ್ರಭವರುಗಳೊಡಗೂಡಿ ಹೊಱವಂಟನು ನಿಜಾಶ್ರಮವ

[1] ತನುಜನು (ಚ). [2] ಳು ದಿನದೊಳಾ (ಕ), ಳದಿವಸವಾ (ಚ), ಳದಿವಸದಲಿ (ಟ.ಡ). [3] ಕವ (ಕ.ಜ.ಣ). [4] ವದಿ (ಚ), ಸರಿ (ಣ). [5] ಚಂ (ಕ.ಟ).

ಇಭ ಶರಭ ಶಾರ್ದೂಲ ಹರಿ ಸೈ
ರಿಭ ಕುರಂಗ ವರಾಹ ಸೇವಿತ
ದಭಿನವದ ಕಾನನವ ಕಳಿದೈದಿದರು ಕೌಶಿಕೆಯ ೪

ಆ ಮಹಾನದಿ ಮೆಱೆದುದುಭಯದ
ಸೀಮೆಗಳನೊ[1]ದ[1]ದುರುತರಂಗ
ಸ್ತೋಮದುಬ್ಬರದಬ್ಬರದ ಸಲಿಲಪ್ರವಾಹದಲಿ
ತಾಮರಸ ಕಲ್ಹಾರ ಕೈರವ
ಕೋಮಲದ್ರುಮಷಂಡ ಗುಲ್ಮಲ
ತಾಮರಾಳರಥಾಂಗಬಕಕಾರಂಡಶೋಭೆಯಲಿ ೫

ಕೇಳಿದರೆ ಹೇಳಿದನು ಮುನಿ ಮಖ
ಪಾಲಕಂಗೆ ತದೀಯ ನದಿಯಾ
ಮೂಲಕೂಲದ ಸಂಗತಿಯ ಕುಶಿಕಕ್ಷಿತೀಶ್ವರನ
ಸ್ಥೂಲವಂಶಪರಂಪರೆಯ ಭೂ
ಪಾಲಕರ ಜನನವನು ತನ್ನ ವಿ
ಶಾಲಚರಿತವನಾ ನದಿಯನುತ್ತರಿಸಿದನು ಬಳಿಕ ೬

ಕ್ಷೋಣಿಜಾಸುತ ಕೇಳು ವಿಪಿನ
ಶ್ರೇಣಿಗಳ ಕೆಲಕೆಲವ ಕಳಿದ
ಕ್ಷೀಣಶೌರ್ಯರುಸಹಿತ ಬರೆ ಮುಂದೊಂದು ತಾಣದಲಿ
ಸ್ಥಾಣುನಿಕಟಜಟಾಕಲಿತಗೀ
ರ್ವಾಣನದಿಗೆಣೆಯೆನಿಪ ನಿರುಪಮ
ಶೋಣಭ[2]ದ್ರನ[2] ಕಂಡು ಕೌಶಿಕಮುನಿಯ ಬೆಸಗೊಂಡ ೭

ಈ ವಿಪುಳ [3]ನದ[3]ರಾಜನನ್ವಯ
ವಾವುದೆನೆ ಕೌಶಿಕೆಗೆ ಗಂಡನು
ಭಾವನೆಮಗಹನೀತ [4]ಸತಿ[4] ನದಿಯಾಗೆ ನದನಾಥ
ದೇವ ರಾಘವ ಕೇಳೆನುತ ಮುನಿ
ನಾವೆಯಿಂದುತ್ತರಿಸಿ ಹಲವು ವ
ನಾವಳಿಯ ಕಳಿದೈದಿದರು ಗಂಗಾತರಂಗಿಣಿಯ ೮

---

[1] ಡ (ಚ.ಟ). [2] ದ್ರೆಯ (ಜ.ಝ.ಟ). [3] ನದಿ (ಕ.ಜ.ಟ). [4] ಸರಿ (ಚ).

ಶ್ರುತಿಸಮಾಜತರಂಗಮಯಪೂ
ರಿತ ಸುಫೋಪಮ ಸಲಿಲಮಯಸಂ
ಭೃತ ಸುಮುಕ್ತಾಫಲನಿಭೋತ್ಕರ [1]ಸೈಕತಾ[1]ಳಿಮಯ
ಕೃತಜಗತ್ಪಾವನಮಯ ಪ್ರ
ಚ್ಯುತ ಭವಾಖಿಲದುರಿತಮಯ ಶೋ
ಭಿತೆಯ ಸುಮನಸ್ತುತೆಯ ಕಂಡನು ರಾಮ ಜಾಹ್ನವಿಯ ೯

ಹರಿಪದಾಬ್ಜಪರಾಗಪೂರಿತ
ಪರಿಮಳಾಲಂಕೃತೆಯ ಶಶಿಶೇ
ಖರಜಟಾಘಟಪಟಲತಟಸಂಘಟಿತ ವಿಸ್ಫುಟೆಯ
ಸುರನರೋರಗಭುವನಪಾವನ
ತರಚರಿತ್ರೆಯನಜನಿಜೋನ್ನತ
ಕರಕಮಂಡಲಮಂಡಿತೆಯ ಕಂಡನು ರಘುಪ್ರಭವ ೧೦

ಎಲೆ ಮುನೀಶ್ವರ ನದಿಗಳೊಳಗ
ಗ್ಗಳದ ನದಿಯೆಂಬಂತೆ ಮತಿ ನೆಱೆ
ನಿಲುಕುತಿದೆ ಚಿತ್ತದಲಿ ಮುನಿ ಕೇಳೀ ಮಹಾನದಿಯ
ವಿಲಸದಭಿರಂಜ[2]ಕದ[2] ಜನನ
ಸ್ಥಳವಿಡಿದು ಬಂದಾ ಪ್ರಸಂಗವ
ತಿಳುಹಬೇಕೆನೆ ಬಳಿಕ ವಿಶ್ವಾಮಿತ್ರನಿಂತೆಂದ ೧೧

ತರುಣ ಕೇಳಾದಿಯಲಿ ಸಗರನ
ಸಿರಿಗೆ ಸೇರದೆ ಶಕ್ರನಾ ಕ್ರತು
ತುರಗವನು ಕದ್ದೊಯ್ದು ಕಪಿಲಮುನೀಂದ್ರನೊತ್ತಿನಲಿ
ಇರಿಸಿದನು ಪಾತಾಳದಲಿ ಬಳಿ
ಕಟಿಸಿ ಕಂಡರು ಸಗರನಂದನ
ರುರಿಯೊಳದ್ದರು ಮುನಿಯ ಧಿಕ್ಕರಣೆಯ ವಿಘಾತಿಯಲಿ ೧೨

ಧಗಧಗಿ[3]ಸಿದ[3]ಱುವತ್ತುಸಾವಿರ
ಸಗರರಮ ಸಂಸ್ಕಾರಮುಖದಲಿ
ತೆಗೆಯಲೋಸುಗ ತಪ[4]ದಲ[4]ದ್ದನು ಕಮಲಗರ್ಭಂಗೆ

---

[1] ಶೀಕರಾ (ಕ.ಜ). [2] ನೆಯ (ಡ). [3] ಸುವ (ಕ.ಝ.ಣ). [4] ವನಿ (ಟ.ಢ.ಣ).

ಮಿಗೆ ಭಗೀರಥನಿಳುಹಿದನು ಸುರ
ಜಗತಿಯಿಂ ಪಾತಾಳಕೀ ತ್ರೈ
ಜಗಕೆ ಮಾತೆ ಕಣಾ [1]ಹರಿಸ್ಮರಹರರು ಹೊಱತಾಗಿ[1] ೧೩

ರಾಮ ಕೇಳೀವ್ಯೋಮನದಿಯು ಮ
ಹಾಮಹಿಮೆಗವಧಿಯನು ಕಾಣೆನು
ಸೋಮಧರನೇ ಬಲ್ಲನಲ್ಲದೆ ಬೇಱೆ ಮಾತೇನು
ಕಾಮಿಸಿದ ಫಲವಹುದು ನೆನೆದರಿ
ಗೀ ಮರುತ್ಪಥಗಾಮಿನಿಯುನೆನು
ತಾ ಮುನಿಪ ಬರೆ ಸೊಗಸಿದುದು ಸು[2]ಮ[2]ತಿಯ ಜನಸ್ಥಾನ ೧೪

ನಗರವಿದು ತಾನಾರದೆಂದಾ
ಗಗನಮಣಿಕುಲ ಕೇಳೆ ಹೇಳಿದ
ನ[3]ಘವಿದೂರಕದ[3]ರಿಯುಮಾನ್ವಯದರಸು ಶೃಂಜಯನ
ನಗರವಿದು ತಾ ರಾಮ ಕೇಳೀ
ನಗರದಧಿಪತಿ ದಶರಥನ ದಾ
ಯಿಗನು ಧರೆಯಿದು ನಿಮಗೆ ಸಲುವುದೆನುತ್ತ ನಡೆತಂದ ೧೫

ನೋಡುತಾ ನಗರವನು ಮಿಗೆ ಕೊಂ
ಡಾಡುತಾ ರಾಷ್ಟ್ರವನು ಪಥಿಕರು
ಗೂಡಿ ಬರೆಬರೆ ಕಾಣಿಸಿದುದಾಶ್ರಮವು ಗೌತಮನ
ಮೂಡದಬುಜದ ಸರಸಿಯಂತಿನ
ನಾಡದಂಬರದಂತೆ ಜೋಕೆಯು
[4]ಜೋಡೆಯು[4] ವ್ರತದಂತೆ ಬನವಿರೆ ಕಂಡು ಬೆಸಗೊಂಡ ೧೬

ಇದು ಕಣಾ ರಘುನಾಥ ಕೇಳ್ ಪೂ
ರ್ವದಲಿ ಗೌತಮನೆಂಬ ಮುನಿಪನ
ಸದನವಾ ಮುನಿಸತಿಗೆ ಮನವಿಕ್ಕಿದನು ಸುರನಾಥ
ಮದನನಾರ್ಗೊಳ್ಳಿದನು ಸಂಭೋ
ಗದಲಿ ಸಿಲುಕಿದನಿಂದ್ರ[5]ನಾತನ[5]
ಸದೆದು[6]ದೀ[6] ಮುನಿಶಾಪ ರೂಪಾಯ್ತಂಗವಬಲೆಯರ ೧೭

---

[1] ಹರೀತವಿಧಾತೃಹೊಱಗಾಗಿ (ಕ.ಝ), ಹರಿಹರಸ್ಮರರು ಹೊಱತಾಗಿ (ಣ).
[2] ಗ (ಗ.ಜ). [3] ಗರಿಕವಲಾದ (ಕ.ಜ.ಣ), ಘವಿದೂರಕನ (ಟ.ಡ). [4] ಜೋಡಣೆ (ಚ.ಟ.ಡ), ಜಾಡಿಯ (ಜ). [5] ನಿಂದ್ರನ (ಕ.ಜ.ಝ.ಣ). [6] ದಾ (ಚ).

ಪರ[1]ವಧೂವ್ಯಸನದಲಿ ಕೆಡರಾ
ರ[1]ರಸ ರಾಘವ ಕೇಳು ಕೆಟ್ಟುದು
ಪುರುಷತನವಿಂದ್ರಂಗಹಲ್ಯಾದೇವಿ ಶಿಲೆಯಾಗಿ
ಧರಿಸಿದಳು ನಿಜತನುವನಾ ಪ್ರ
ಸ್ತರವಿದೀಗಾ ಸತಿಗೆನುತ ಹ
ತ್ತಿರಕೆ ಬರೆ ರಾಮಾಂಘ್ರಿರಜವಾವರಿಸಿತಾ ಶಿಲೆಯ ೧೮

ಗುರುಕಟಾಕ್ಷ ನಿರೀಕ್ಷೆಯಲಿ ದು
ಸ್ತರಭವಾಂಬುಧಿ ಬರವವೊಲು [2]ರವಿ[2]
ಕಿರಣದವಲೋಕನದೊಳಡಗುವ ತಿಮಿರ[3]ಲತೆಯಂತೆ[3]
ಪರಮಪುರುಷನ ದೃಷ್ಟಿಪಾತ[4]ದಿ
ನಿ[4]ರದೆ ಸಂಚಿತಸಕಲದುಷ್ಕೃತ
ಹರೆದುದಿಸಿದಳು ಶಿಲೆಯ ಮಧ್ಯದೊಳಬಲೆ ಗೌತಮನ ೧೯

ನರವಿನೋದವಿಚಿತ್ರಲೀಲಾ
ಚರಿತವಿಷ್ಣು ತ್ರಾಹಿ ವಿಶ್ವಂ
ಭರಭವಾರಿ ತ್ರಾಹಿ ಸರ್ವೇಶ್ವರ ಸದಾನಂದ
ಕ್ಷರರಹಿತನಕ್ಷಯನನಾ[5]ಹತ[5]
ಹ[6]ರ[6]ವಿರಿಂಚಾತ್ಮಕ ಪರಾಪರ
ಪರಮಗುಣನಿಧಿ ಜಯಜಯೆಂದೆಱಗಿದಳು ಚರಣದಲಿ ೨೦

ನೆನೆದರಖಿಳಭವಾಂತರಂಗಳ
ನೆನೆಯಬಾರದ ಘೋರಪಾತಕ
ಜಿನುಗುವವು ತಾನೆಂಬ ಶ್ರುತಿಮತ ಸಿದ್ಧವಾಯಿತಲ
ನೆನಹದಲ್ಲದೆ ನಿನ್ನ ಪದದರು
ಶನದ ಭಾಗ್ಯವು ತನ್ನೊಳಾದುದು
ಘನಮಹಿಮ ನಮೊಯೆನುತ ಕೈಮುಗಿದಿರ್ದಳಾ ಕಾಂತೆ ೨೧

ಲಲನೆಯಾಕೆ[7]ಯ[7]ದಾರೆನಲು ಮುನಿ
ತಿಲಕ [8]ಬಳಿಕಾ[8] ಜ್ಞಾನಮಯ ನಿ
ರ್ಮಳಸದಾನಂದೈಕರೂಪಂಗತುಳಹರುಷದಲಿ

---

[1] ಮ ದುರ್ವ್ಯಸನಕ್ಕೆ ಸಿಲುಕದನ (ಝ), ವಧೂವ್ಯಸನಕ್ಕೆ ಸಿಲುಕದ ಡ (ಡ), ವಧೂಸಂಗದಲಿ ಕೆಡರಾರ (ಣ). [2] ಹಿಮ (ಝ.ಟ.ಡ.ಣ). [3] ದಂದದಲಿ (ಚ). [4] ದಲಿ (ಚ), ದಿಯಿ (ಟ). [5] ಮಯ (ಚ). [6] ರಿ (ಚ). [7] ಯಿ (ಕ.ಣ). [8] ನಮಳ (ಕ).

ತಿಳುಹಿದನು ತತ್ಸತಿಯ ಶಕ್ರನ
ಕಲುಷಕೃತಸಂಗತಿಯನಾವುದು
ಸುಲಭವಾಗದದುಂಟೆ ನಿನ್ನ ಕೃಪೋದಯದೊಳೆಂದ ೨೨

ಬಂದನಾ ಸಮಯದಲಿ ಗೌತಮ
ನಿಂದಿರೇಶ[1]ನ[1] ಮನುಜವೇಷ[2]ದ[2]
ಸಂದ ಸಮ್ಯಜ್ಞಾನಮುಖದಲಿ ನಮಿಸೆ ಬಳಿಕವರ
ಒಂದುಗೂಡಿ ಕೃತಾರ್ಥ[3]ರಿವರಿ[3]
ನ್ನೆಂದು ಕೌಶಿಕ[4]ನವರನಾ ದಳ[4]
ಮಂದಿರದಲೇ ನಿಲಿಸಿ ಬಂದರು ಮಿಥುಳೆಗೊಲವಿನಲಿ ೨೩

ಮುನಿಯ ಬರವನು ಕೇಳ್ದು ಮಿಥುಳಾ
ವನಿಯಪತಿ ಮಹದುತ್ಸವದಲಾ
ಮುನಿಯನಿದಿರ್ಗೊಂಡೊಯ್ದು ಸತ್ಕರಿಸಿದನು ಭಕ್ತಿಯಲಿ
ತನುಜ ಕೇಳ್ಕೆ ಬಳಿಕ ಗೌತಮ
ತನುಜ ರಾಜಪುರೋಹಿತನು ತ
ಜ್ಜನಪಗೊರೆದನು ವಿಮಲವಿಶ್ವಾಮಿತ್ರಸಂಗತಿಯ ೨೪

ವರವಸಿಷ್ಠ ವಿವಾದವನು ಭೂ
[5]ವ[5]ರರುಷೀಶ್ವರನಾದ ಬಹಳಾ
ಶ್ಚರಿಯದುಗ್ರತಪಃಪ್ರಭಾವವನಾ ತ್ರಿಶಂಕುವಿಗೆ
ಸುರಪುರವ ಬೇಱಿಭ್ರದಲಿ ವಿ
ಸ್ತರಿಸಿದಾಖ್ಯಾನವನು ಜನಕಂ
ಗೊರೆದು ಕೊಂಡಾಡಿದನು ಕೌಶಿಕನನು ಶತಾನಂದ ೨೫

ಮುನಿಗೆ ಬೀಡಿಕೆಯಾಯ್ತು ಮಿಕ್ಕಿನ
ಮುನಿಗಳೈತಂದರು ಸಮಸ್ತಾ
ವನಿಯ ನೃಪರೊಗ್ಗಾಯ್ತು ವರ ವೈದೇಹನಗರದಲಿ
ವಿನುತ ಮಖಮಂಟಪ [6]ವಿರಾಜಿಸಿ[6]
[7]ತ[7]ನುಪಮಾಧ್ವರ ಪರಿಕರದ ಸಾ
ಧನವ ಮೇಳೆಸಿದರು ದೀಕ್ಷಿತನಾದನಾ ಜನಕ ೨೬

---

[1] ನು (ಚ). [2] ದಿ (ಚ). [3] ರಹಿರಿ (ಚ). [4] ನಾ ರುಷಿಯನಾ (ಕ.ಡ).
[5] ಸು (ಗ.ಜ.ಝ.ಣ). [6] ವ ವಿರಚಿಸಿ (ಕ), ಪು ರಂಜಿಸಿ (ಝ). [7] ದ (ಗ.ಚ).

ಕುಶನೆ ಕೇಳ್ಕೈ ನಿಮ್ಮ ಮುತ್ತಯ
ದಶರಥನು ಮಾಡಿದ ಮಹಾಧ್ವರ
ದೆಸಕಕಿದು ಹೊಯ್‌ಕೈಯೆನಲು ಮಾಡಿದನು ಸತ್ಕ್ರತುವ
ಕುಶನನುಜ ಕೇಳ್ ನಿಮ್ಮ ಪಿತನ
ಶ್ವಶುರನಲ್ಲಿಂ [1]ಬಳಿಕ[1] ಜವ್ವನ
ದೆಸಕ ತಲೆದೋಱಿದುದ ಕಂಡನು ನಿಮ್ಮ ಜನನಿಯಲಿ ೨೭

ನಾರದನ ಪೂರ್ವದ ವಚೋವಿ
ಸ್ತಾ[2]ರದಾ[2]ಭಿಪ್ರಾಯವಱಿದು ಕು
ಮಾರಿಗುಚಿತೋದ್ವಾಹವೈಭವದ ಸ್ವಯಂವರಕೆ
ಭೂರಿಭುವನದ ಭಾಗಧೇಯರ
ಭೂರಮಣರನು ಬರಿಸಿದನು ಮಿತಿ
ಮೇರೆಯಿಲ್ಲ[3]ದ[3] ನೃಪರು ನೆರೆದುದು ಜನಕನಗರಿಯಲಿ ೨೮

ಅಂಗ ಮರು ಕಾಂಭೋಜ ಸಿಂಧು ಕ
ಳಿಂಗ ಬರ್ಬರ ಚೀನ ಬೋಟ [4]ಕು[4]
ರಂಗಮುಖ ಖರ್ಪರ ಕರೂಷ [5]ವರಾಳ[5] ನೇಪಾಳ
ವಂಗ ಕೈಕೆಯ ಗೌಳ ಗುರ್ಜರ
ಸಿಂಗಳ ದ್ರವಿಳಾಂಧ್ರಮುಖ್ಯ ಧ
ರಾಂಗನಾ ವಲ್ಲಭರು ಸಂದಣಿಸಿದುದಸಂಖ್ಯಾತ ೨೯

ಪುರದ ಬಹಿರಾವರಣ ಸೀಮಾಂ
ತರದ ಸಂವೇಶದಲಿ ಬೀಡಾ
ಯ್ತುರಸುಮನ್ನೆಯ ಮಂಡಲೇಶ್ವರ ಸಾರ್ವಭೌಮರಿಗೆ
ದೊರೆಗಳಿಗೆ ದೋರ್ವಳರಿಗವನೀ
ಸುರರಿಗಾ ವಿಟಶೂದ್ರ [6]ಮೊದಲಾ[6]
ದರಿಗೆ ಮಿಕ್ಕಿನ ವಿವಿಧ ವರ್ಣಾಶ್ರಮಜನಂಗಳಿಗೆ ೩೦

---

[1] ಮೇಲೆ (ಕ.ಟ.ಡ). [2] ರಸಾ (ಗ), ರಿತಾ (ಝ.ಣ). [3] ದೆ (ಕ.ಜ.ಟ.ಡ). [4] ತು (ಗ.ಝ.ಣ). [5] ಹಮ್ಮೀರ (ಝ). [6] ಮೇಲಾ (ಕ).

ನಗರವಿದ್ದುದು ಶರಧಿಸುತ್ತಿದ
ನಗದವೊಲು ನಾನಾ ದಿಗಂತದ
ಬಗೆಯ ಭಾರಿಯ ಬಹಳ [1]ನರ[1]ಸಾಗರದ ಮಧ್ಯದಲಿ
ಸೊಗಸಿದುದು ಬಳಿಕಿತ್ತ ಜನಕನ
ಮಗಳ ವಿಮಳೋದ್ವಾಹ ವೈಭವ
ದೊಗುಮಿಗೆಯ ಸೌರಂಭದತಿಶಯವಖಿಳರಚನೆಯಲಿ ೩೧

———

1 ಜನ (ಕ).

# ಹದಿಮೂರನೆಯ ಸಂಧಿ

ಸೂಚನೆ : ವಿರಚಿಸಿದರುದ್ವಾಹಶೋಭಾ
ಕರದಲಂಕಾರದಲಿ ಮಿಥಿಳಾ
ಪುರವನಖಿಳವಿಚಿತ್ರವಿಭವದ ವಿವಿಧ ರಚನೆಯಲಿ

ಕೇಳಿದೈ ಕುಶ [1]ನೆರೆದ[1] ಪೃಥ್ವೀ
ಪಾಲರಿಗೆ ವಿಪ್ರರಿಗೆ ಮಣಿಮಯ
ದಾಲಯಂಗಳು ಸವದವೈಗಾವುದದಚಿಳತೆಯಲಿ
ಕೇಳು ಲವ ತದ್ವಳಯದಲಿ ಪರಿ
ಪಾ[2]ಳಿಯಾಯಿ[2]ತ್ತಖಿಳ ಭೋಜನ
ಜಾಲಕವರವರುತ್ತಮಾಧಮಮಧ್ಯಮಂಗಳಲಿ ೧

ಬಲಿದುದನಿತಕೆ ಕೋಟೆ ಪರಿ[3]ಖಾ[3]
ವಳಯ ರಚನೆಯಲಾಳುವೇರಿಯ
ಹುಲಿಮುಖದ ಮುಗಿಲಟ್ಟಳೆಯ ಸಾಲುಗಳ ಸೊಗಸಿನಲಿ
ಬಲುಭಟರ ಕಾಹಿನಲಿ ಸುರರಿಗೆ
ನಿಲುಕಲಸದಳವೆಂಬವೊಲು ಕಂ
ಗೊಳಿಸಿದುದು ಬಳಿಕಾ ಸ್ವಯಂವರ ಭದ್ರಮಣಿಭವನ ೨

ರಚಿಸಿದರು ಬಳಿಕೀಚೆಯಲಿ ಮಣಿ
ಖಚಿತದರ್ಪಣ ಕಲಶಕುಶಲೋ
ಪಚಿತ [4]ವಿದ್ರುಮ[4] ವಿಲಸಿತಾಲಂಕಾರ ತೋರಣದ
ಪ್ರಚುರತರದುಪ್ಪರಿಗೆಗಳ ಹಿಮ
ರುಚಿ[5]ಯ[5] ವೀಥಿಯ ಸೂರ್ಯವೀಥಿಯ
[6]ಲ[6]ಚಲಸಂಪದದಿಕ್ಕೆಯೆನೆ [7]ಮಿಥಿಳಾಮಹಾಪುರವ[7] ೩

ಗುಡಿಯ ಪಲ್ಲವ ಝುಲ್ಲರಿಯ ಬೆಳು
ಗೊಡೆಯ ಮಿಳಿರ್ವಪತಾಕೆಗಳ ಪರಿ
ವಿಡಿಯ ಮುತ್ತಿನ ಸೂಸಕದ ಸಡಕುಗಳ [8]ಸೀಗುರಿಯ[8]

---

[1] ಬಳಿಕ (ಚ). [2] ಳಯವನಿ (ಕ). [3] ಘಾ (ಕ.ಝ.ಟ). [4] ವಿಭ್ರಮ (ಕ.ಚ.ಟ). [5] ರ (ಚ). [6] ದ (ಕ.ಜ.ಣ). [7] ನಾನಾವಿಚಿತ್ರದಲಿ (ಗ), ವಿರಚಿಸಿದರಾ ಪುರವ (ಣ). [8] ಸೆಡಕಿನಲಿ (ಗ), ಸಂಪದದ (ಜ).

ಇಡಿದ ಮಣಿಮಯಕಳಸದಿಂದೆಸೆ
ವೆಡಬಲದ ಸೌಧಗಳಲವನಿಯ
ತೊಡಿಗೆಯೆನೆ ರಂಜಿಸಿತು ಪುರವಾ ಜನಕಭೂಪತಿಯ ೪

ಹೊರೆದ [1]ಕತ್ತುರಿ[1] ಸಾರಣೆಯ ನವ
ಪರಿಮಳದ ಪನ್ನೀರ ಚಳೆಯದ
ಪರಿಸರದ ಕುಂಕುಮದ ನಿಡು[2]ಗಾ[2]ರಣೆಯ ಕರ್ಪುರದ
ಪರಿಪರಿಯ ಕಡೆಸಾಲಪರಿವಿ
ಸ್ತರದ ಧೂಪದ ಧೂಮಗಂಧೋ
ತ್ಕರ[3]ಸಮುದ್ರದೊಳದ್ದನೊಲ್ಲದೆ ಪಥವ[3] ಪವಮಾನ ೫

ಇಳಿದುದೋ ಸುರರಾಜಭವನ
ಸ್ಥಳದ ಸಿರಿ ಸೀತಾವಿವಾಹೋ
ಜ್ಜ್ವಲ ಮಹಾಮಂಟಪದ ರೂಪವ ಧರಿಸಿ [4]ಧರೆಗೆನಲು[4]
ಹೊಳೆವ ಹೇಮಸ್ತಂಭರ[5]ಚಿತಾ[5]
ಕಲಿತ ರತ್ನಪ್ರಭೆಯ ಚಂದ್ರೋ
ಪಲದ ಬಿತ್ತಿಯಲೆಸೆದುದಭಿನವಭದ್ರಮಣಿಭವನ ೬

ಹೇಳಲೇನದ ಮಂಟಪದ ಚೌ
ಮೂಲೆಯಗಲದ ಲಾಮಚದ ಬ
ಲ್ಲಾಳದಡ್ಡಿಯ ಬಹಳರತ್ನ[6]ವಿತಾನದುಬ್ಬ[6]ರದ
ಮೇಲುಕಟ್ಟಿನ ಮಲಯಜ[7]ಸ್ಥಂ[7]
ಬಾಳಿಗಳ ಮಣಿಪುತ್ರಿಕೆಯ ಸಮ
ಪಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ ೭

ಬಿಗಿದ ಬಿಂಗಾರಿಗಳ ಮಿಸುನಿಯ
ಜಗ[8]ಲಿ[8]ಗಳ ಮರಕತದ ಸೋಪಾ
ನಗಳ ಸುತ್ತಣ ಸಾಲಭಂಜಿಕೆಗಳ ವಿಲಾಸದಲಿ
ಸೊಗಸಿತಾ ಮಂಟಪ [9]ಹಿಮಂತನ[9]
ಮಗಳ ಮದುವೆಯ ಮಂಟಪಕೆ ತ
ದ್ವಿಗುಣವೆನೆ ತೊಳತೊಳಗಿ ಬೆಳ[10]ಗುವ[10] ಬಹಳ ತೇಜದಲಿ ೮

---

[1] ಕಸ್ತುರಿ (ಕ.ಜ.ಝ). [2] ಸಾ (ಝ.ಡ). [3] ಸಮುದ್ರದೊಳದ್ದನಲ್ಲದೆ ಪಥವ (ಕ.ಝ.ಟ.ಡ.ಣ), ದ ನಿಧಿಯೊಳಗದ್ದು ನಡೆಯುಡುಗಿದನು (ಜ). [4] ತೋ ಧರಣಿ (ಚ.ಟ). [5] ಚನಾ (ಚ.ಟ). [6] ವಿಲಾಸದುಬ್ಬ (ಕ), ವಿಲಾಸದುಪ್ಪ (ಚ), ವಿತಾನಚಪ್ಪ (ಡ). [7] ಲಸಂ (ಕ), ದ ಸಂ (ಗ.ಝ.ಟ). [8] ತಿ (ಚ). [9] ಹಿಮಾದ್ರಿಯ (ಕ.ಝ). [10] ಗಿತು (ಚ.ಟ).

ಮಘಮಘಿಪ ಮಲಯಜದ ಸಾರದ
ಸೊಗಯಿಸುವ ಸರಸಿಗಳ ಪನ್ನೀ
ರುಗಳ ಹೊಕ್ಕರಣೆಗಳ ಸಾದುಜವಾಜಿ ಕಸ್ತೂರಿಯ
ಝುಗಝುಗಿಪ ಹೊಂಬೆಸೆದ ರಂಜಣಿ
ಗೆಗಳ ನವಕರ್ಪೂರದ ತವಲಾ
ಯಿಗಳ ತಿಂಥಿಣಿ ಮೆಱೆದುದಲ್ಲಿಯ ಸುತ್ತುವಳಯದಲಿ ೯

ತುಡುಕಿ ತೂಳುವ ಸೂತ್ರಯಂತ್ರದ
ಗಡಣದಲಿ ಗತಿಗೊಂಡು ಬೇಡಿ[1]ತ[1]
ಕೊಡುವ ಮಣಿಪುತ್ರಿಕೆಗಳೆಸೆದವು ವಿವಿಧ ರಚನೆಯಲಿ
ಅಡಕಿ ತುಂಬುವ ಹೇಮಘಟದು
ಗ್ಗಡದ ಹೊಂದೋಣಿಗಳ ಹಂತಿಯ
ಸಡಗರದ ಸೌರಂಭವೆಸೆದುದು ಸುತ್ತುವಳಯದಲಿ ೧೦

ಎಸೆದುದನುಪಮ ರಚನೆಯಲಿ ಮಣಿ
ವಿಸರಖಚಿತವಿವಾಹಕಾಂಚನ
ವಸತಿ ಬಳಿಕೀ ವಾರ್ತೆಯನು ಕೇಳಿ[2]ತು ಸುರವ್ರಾತ[2]
ಪಶುಪತಿ ಬ್ರಹ್ಮೇಂದ್ರ ಶಿಖಿ ಯಮ
ನಸುರ ವರುಣ ಸಮೀರ ಶಿವಸಖ
ರೊಸಗೆವರೆಗಳ ಹೊಯ್ಸಿ ಹೊದ್ದಿದರಂಬರಸ್ಥಳವ ೧೧

ಹೊಯ್ಸಿದನು ಡಂಗುರವ ಜನಕಮ
ಹೀಶನಾ ನೆರೆದಖಿಳ ವಸುಧಾ
ಧೀಶರರಮನೆಗಳಲಿ ವೈದೇಹಿಯನು ವರಿಸುವಡೆ
ಈಶದತ್ತ ಮಹೋಗ್ರತರ ಬಾ
ಣಾಸನವ ತೆಗೆದೇಱಿಸುವ ಬಲು
ಸಾಸಿಗ[3]ರು[3] ಬಹುದೆಂದು ಸೂರ್ಯಾಸ್ತಮಯ ಸಮಯದಲಿ ೧೨

ಕೇಳಿಸಿದುದಾ ವಿಮಲಮನುಕುಲ
ಮೌಳಿ[4]ಗಾ[4] ಡಂಗುರದ ದನಿ ಮುನಿ
ಪಾಲಕನನಾ ರಾಮನಾ ವೃತ್ತಾಂತ[5]ವಿವರಣವ[5]

---

[1] ದ (ಗ.ಚ). [2] ನಿತು ಸುರಜಾಲ (ಕ.ಝ.ಟ.ಡ). [3] ಳು (ಕ.ಜ.ಝ).
[4] ಯನು (ಗ.ಜ.ಝ.ಣ). [5] ಸಂಗತಿಯ (ಕ).

ಕೇಳಿದರೆ ಹೇಳಿದನು ಹರಿಹರ
ರಾಳುತನದತಿಶಯವನಾ ದಿವಿ
ಜಾಳಿಯಿಂದಜನಿಂದ ಸಂಘಟವಾದ ಸಂಗತಿಯ ೧೩

ಆರು ಹೀನೋತ್ತಮರು ಸರಿಮಿಗಿ
ಲಾರು ಸತ್ವದೊಳೆಂದು ದಿವಿಜರ
ವೀರಭಟರೀಕ್ಷಿಸಿದರಬ್ದ ಸಹಸ್ರಪರಿಯಂತ
ಹೋರಿದರು ಸರಿಸದಲಿ ಸಾಹಸ
ತೀರದಿರೆ ಬಳಿಕಬುಜಭವ ವೃಂ
ದಾರಕೋತ್ತಮರೆಱಗಿದರು ಹರಿಹರ ಪದಾಬ್ಜದಲಿ ೧೪

ಮನದ ಸಂಶಯವಡಗಿತಿಬ್ಬರ
ವಿನುತ ಮೂರ್ತಿಯನೇಕಭಾವದ
ಲನುಕರಿಸಿದರು ವಿಶ್ವರೂಪ ವಿರೂಪಲೋಚನರ
ಧನುವೆರಡು ಬಳಿಕಿದ್ದವಂದಿನ
ದಿನದಲಿಬ್ಬರ ವಶದಲವು ಬಳಿ
ಕಿನಲಿ ಸೇರಿದವಿಬ್ಬರಿಗೆ ಕೃತಯುಗದ ಸೀಮೆಯಲಿ ೧೫

ರಾಮ ಕೇಳಾ ಶಾರ್ಙ್ಗಧರನು
ದ್ದಾಮವೈಷ್ಣವ ಚಾಪವದು ಮುನಿ
ರಾಮಗಾದುದು ಭೃಗುವಿಡಿದು ಜಮದಗ್ನಿಯಿಂ ಬಳಿಕ
ಸೋಮಧರ ಕೋದಂಡವದು ನೃಪ
ಸೋಮ ನಿಮಿ ಮೊದಲಾಗಿ ಬಂದುದು
ಭೂಮಿಪತಿ ಜನಕಂಗೆ ಕೇಳ್ ಕಾರ್ಮುಕದ ಸಂಗತಿಯ ೧೬

ಈ ಮಹಾಧನು ಮೈಗೊಡುವುದಾ
ವ್ಯೋಮಕೇಶಂಗಲ್ಲದಿರೆ ಲ
ಕ್ಷ್ಮೀಮುಖಾಂಬುಜತರಣಿಗೊಲಿವುದು ಮಿಕ್ಕ ನಿರ್ಜರರ
ಕೈಮೆಗೊದ[1]ಗುವುದಲ್ಲದ[1]ಭಿನವ
ರಾಮನಾಹವಭೀಮ ಮಂಗಳ
ನಾಮ ತೊರವೆಯರಾಯ ನರಹರಿಗೆಂದು ಮುನಿ ನುಡಿದ ೧೭

---

[1] ಗದು ಗೆಲವನ (ಗ).

# ಹದಿನಾಲ್ಕನೆಯ ಸಂಧಿ

ಸೂಚನೆ : ರಾಯಜನಕನುದಗ್ರಹರಚಾ
ಪಾಯುಧವನೊಡ್ಡಿದನು ಕಮಲದ
ಳಾಯತಾಕ್ಷಿಯ ನಿಲಿಸಿದನು ಬರಿಸಿದನು ಭೂಭುಜರ

ಎಲೆ ಕಕುತ್ಸ್ಥಜಸೂನು ಕೇಳ್ ಮುನಿ
ತಿಲಕ ವಿಶ್ವಾಮಿತ್ರನಾ ರಘು
ಕುಲಶಿರೋಮಣಿ ರಾಘವಂಗಾ ಚಾಪಸಂಗತಿಯ
ತಿಳುಹಿದನು ತೀರಿದುದು ತಮದೊ
ಬ್ಬುಳಿತ ಚಂದ್ರನ ತಾರಕಿಯು ಮ್ಯೆ
ವೆಳಗು ಮಸುಳಿದವಳಲು[1]ತಿರ್ದವು[1] ಜಕ್ಕವಕ್ಕಿಗ[2]ಳು[2] ೧

ರಜನಿಯೆಂಬ ಮದೋತ್ಕಟದ ದಿ
ಗ್ಗಜದ ಕುಂಭಸ್ಥಳಕೆ ಮೋಹಿದ
ವಿಜಿತಬಲನಂಕುಶದ ತಲೆಮಾಣಿಕವಿದೆಂಬಂತೆ
ಗಜ[3]ಗಲಿ[3]ಸಿತಿನಬಿಂಬ ಮೂಡಲು
ಗಜಬಿದವು ಬಳಿಕಖಿಳವಾದ್ಯ
ವ್ರಜ ವಿದೇಹನೃಪಾಲನುಪ್ಪವಡಿಸಿದನೊಲವಿನಲಿ ೨

ವಿನುತ ಸಂಧ್ಯಾವಂದನಾದಿಯ
ನನುಕರಿಸಿ ವಿಶ್ವಂಭರಾಮರ
ಜನವನುರುಸನ್ಮಾನದಾನಂಗಳಲಿ ಸತ್ಕರಿಸಿ
ಅನುಜವೀರಕುಶಧ್ವಜನುಸಹಿ
ತನುಪಮೋತ್ಸವದಿಂದ ನಡೆತಂ
ದನು [4]ಸ್ವಯಂ[4]ವರ ಮಂಟಪಕೆ ಮಂತ್ರಿಗಳ ಗಡಣದಲಿ ೩

ಕರೆಸಿದನು ಬಳಿಕಖಿಳಪೃಥ್ವೀ
ಶ್ವರರನಾ ಕನ್ಯಾಸ್ವಯಂವರ
ಪರಮನಿಳಯಕೆ ಪೂರ್ವಸೂಚಿತ ಸಕಲ ಭೂಮಿಪರ

---

[1] ನಿಂದವು (ಗ.ಜ.ಝ.ಡ), ನಿಂದುದು (ಟ.ಣ). [2] ಳ (ಗ.ಜ.ಟ.ಡ.ಣ).
[3] ಬಜಿ (ಚ). [4] ಪತಿಂ (ಗ).

ನೆರೆದುದುದಧಿಪರೀತಪೃಥ್ವೀ
ಶ್ವರರು ಬಳಿಕವರುಚಿತವಱಿದಾ
ದರಿಸಿ ಹರಿವಿಷ್ಟರಗಳಲಿ ನಿಲಿಸಿದನು ಭೂಪಾಲ ೪

ಜನಪರಾ ಕಾಲೋಚಿತದ ಪರಿ
ಜನಸಹಿತ ಕುಳ್ಳಿದರು ಸಿಂಹಾ
ಸನಗಳಲಿ ಸೌಹಾರ್ದಸೌಖ್ಯದ ಸುಪ್ರಮೋದದಲಿ
ತನುಜ ಕೇಳಾ ಸಮಯದಲಿ ರಘು
ತನುಜರುಗಳೊಡಗೂಡಿ ಬಂದನು
ವಿನುತವಿಶ್ವಾಮಿತ್ರನಾ ಪಾರ್ಥಿವಸಭಾಸ್ಥಳಕೆ ೫

ಸಾಲಸೌಧಂಗಳಲಿ ಪೃಥ್ವೀ
ಪಾಲರಿ[1]ರ್ದುದು[1] ತರಣಿಕಿರಣವ
ನೇಳಿಸುವ ಮಣಿಭೂಷಣಂಗಳ ಬಹಳ ತೇಜದಲಿ
ಬಾಲರಿವರೊಡಗೂಡಿ ಮುನಿಗಳ
ಮೇಳದಲಿ ಕುಳ್ಳಿದನು ವಿಮಲವಿ
ಶಾಲ ವೇದಿಕೆಯಲ್ಲಿ ವಿಶ್ವಾಮಿತ್ರಮುನಿರಾಯ ೬

ವರಸುಧಾಮನ ಕೈವಿಡಿದು ಬಳಿ
ಕರಸನುಗ್ಗಡಣೆಯ ನಿನಾದದ
ಲರಸುಹಂತಿಯ ನೋಡುತವರವರುಚಿತವೃತ್ತಿಯಲಿ
ಕರವ ಮುಗಿವುತ [2]ವಿನಮಿತರನಾ
ದ[2]ರಿಸುತವನೀಸುರಕದಂಬಕೆ
ಶಿರವ ಬಾಗುತ ಭದ್ರಪೀಠಕೆ ಬಂದನೊಲವಿನಲಿ ೭

ವಸುಮತೀಶನ ನೇಮದಲಿ ಬಳಿ
ಕಸಮಲೋಚನ ಚಾಪವನು ಪೂ
ಜಿಸಿದರಾಗಮವಿಧಿವಿಹಿತನಿಯಮೋಪಚಾರದಲಿ
ಪಶುಪತಿಸ್ತವದಿಂದ ವಾದ್ಯದ
ವಿಷಮನಿಸ್ವನದಿಂದ ರುಧಿರಾ
ಮಿಷ[3]ರಸೋದ[3]ನದಿಂದ ಕುರಿಕೋಣಗಳ ಬಲಿಗಳಲಿ ೮

---

[1] ದ್ದರು (ಝ.ಟ). [2] ನಮಿತನಂಗೀಕ (ಗ), ನಮಿತಜನಕಾದ (ಚ).
[3] ದ ಸಾಧ (ಕ.ಡ), ನವೋದ (ಗ).

ಬಂದುದಾ ಧನುವಾ ಸ್ವಯಂವರ
ಮಂದಿರಕೆ ಮುರಜಾನಕಧ್ವನಿ
ಯಿಂದ ಮದನವಿರೋಧಿಮಂತ್ರೋಪಾಸ್ತಿ[1]ಯಲಿ[1] ಬಳಿಕ
ಇಂದುಧರನಾರಾಯಣರಿಗೇ
ನೆಂದು ತೋರ್ಪುದನಱಿಯೆ ವಿಲಯದ
ದಂದಶೂಕನ ಮೂಡಿಗೆಯೊಲಿರ್ದುದು ನೃಪಾಲರಿಗೆ ೯

ಜನಕನೃಪ ಬಳಿಕುತ್ಸವದಿ ತ
ನ್ನನುಜ ವೀರಕುಶಧ್ವಜನ ಕರ
ದನುಪಮತ್ರೈಲೋಕ್ಯಕನ್ಯಾನೂನರತ್ನವನು
ವನಜಭವಭವಮುಖ್ಯಸುರಮಾ
ನಿನಿಯರಧಿಕವಿಲಾಸವಿಭ್ರಮ
ಘನಯಶೋರತ್ನವನು ತಾ ಹೋಗೆಂದು ನೇಮಿಸಿದ ೧೦

ಆ ಕುಶಧ್ವಜನಧಿಕಹರುಷೋ
ದ್ರೇಕದಲಿ ನಡೆತಂದನಾ ಲೋ
ಕೈಕನಾಥೆಯ ವಿಶ್ವಮಾತೆಯ ಭುವನಪೂಜಿತೆಯ
ಶ್ರೀಕಮಲೆಯೆಡೆಗಂತರಂಗದ
ಲಾ ಕುಮಾರಿಗೆ ನಮಿಸಿ ತೋಳ್ಗಳೊ
ಳೌಕಿ ತೊಡೆಯಲಿ ಕುಳ್ಳಿರಿಸಿ ಮಾನಸದೊಳಿಂತೆಂದ ೧೧

ರಮಣರಿನ್ನಾರಹರೊ ಲಕ್ಷ್ಮೀ
ರಮಣನಲ್ಲದೆ ನೆರೆದ ಪೃಥ್ವೀ
ರಮಣರೀ ಕನ್ನಿಕೆಗೆ ಸದೃಶವೆ ಶಿವಮಹಾದೇವ
ಕಮಲಭವನಿನ್ನಾರನೀಕೆಗೆ
ಸುಮುಖರನು ಮಾಡುವನೊಯೆನುತವೆ
ಕಮಲಮುಖಿಯರ ಕರೆದು ಸಿಂಗರಿಸಲು ನೇಮಿಸಿದ ೧೨

ತರಿಸಿ ಹೊಸ[2]ಹಸೆಮಣೆ[2]ಯೊಳಗೆ ಕು
ಳ್ಳಿರಿಸಿ ಕಮಲಾಕ್ಷಿಯರು ಪೂರಿತ
ಪರಿಮಳದ ತೈಲವನು [3]ಮೊ[3]ಗದು ಮನೋಭವನ ಪಿತನ

---

[1] ಯಿಂ (ಕ.ಟ). [2] ಮಡಿಹಸೆ (ಝ). ಹಸೆವಡಿ (ಪ). [3] ತೆ (ಟ).

ಅರಸಿಯಾಗೆಂದೊಸಗೆವರೆಗಳ
[1]ಸರಭ[1]ಸದ ಸೌರಂಭದಲಿ ನೇ
ಪರಿಸಿದರು ಸೆಳ್ಳುಗುರ್ಗಳಲಿ ಶಶಿಮುಖಿಯ ಸಿರಿಮುಡಿಯ ೧೩

ಧಿರುರೆ ಪಾಯವಧಾರೆನಲು ಸತಿ
ಯರ ಸಮೇಳದಲಬಲೆ ಮಣಿಬಂ
ಧುರದ ಹಾವುಗೆಯಿಂದ ಬಂದಳು ಮಜ್ಜನದ ಮನೆಗೆ
ತರುಣಿಯರ [2]ಕರಕಲಶ[2]ಸಲಿಲೋ
ತ್ಕರದಿ ಮಜ್ಜನ ಮಾಡಿ ವಿಮಲಾಂ
ಬರವನುಟ್ಟೈತಂದಳವನಿಜೆ ಮಾತೃಮಂದಿರಕೆ ೧೪

ಸ್ಮರನ ಸೌಭಾಗ್ಯದ ಯಶೋಮಂ
ಧಿರೆಯ ಮನ್ಮಥಬೀಜಮಂತ್ರಾ
ಕ್ಷರೆಯ ಮನಸಿಜಶಾಸ್ತ್ರಸಾರಸ್ವತೆಯ ಸುಲಲಿತೆಯ
ಸುರುಚಿರಾಭರಣಂಗಳಿಂ ವಿ
ಸ್ತರಸುಗಂಧಾಮೋದಕುಸುಮೋ
ತ್ಕರಗಳಿಂದಬಲೆಯರಲಂಕರಿಸಿದರು ಶಶಿಮುಖಿಯ ೧೫

ಚರಣಕಾಂತಿಗಳಿಂದ ನೂಪುರ
ಗುರುನಿತಂಬದಿ ಕಾಂಚಿ ಕೋಮಲ
ಕರದಿ ಕಂಕಣ ಬೆರಳಿನಿಂದುಂಗುರವು ಕೊರಳಿಂದ
ಸರದ ಮುತ್ತುಗಳೋಲೆ ಕದಪಿಂ
ದಿರದೆ ಮೆಱೆದವು ಸ್ಮರಕರಾಗ್ರ
ಸ್ಫುರಿತಚಾಪಕಳಾಪಶರದಭಿಮಾನದೇವತೆಯ ೧೬

ಹೊಳೆಹೊಳೆವ ತನುಕಾಂತಿಯಲಿ ಗಜ
ಗಲಿಸಿದವು ಹೊಂದೊಡವುಗಳು ಥಳ
ಥಳಿಸಿದವು ಮುತ್ತುಗಳು ದಂತಪ್ರಭೆಯ ಲಹರಿಯಲಿ
ಸುಲಲಿ[3]ತಾಧರ[3]ರಾಗದಿಂದು
ಜ್ವಲಿಸಿದವು ಮಾಣಿಕ್ಯಚಯವಾ
ರಳವು ಹೊಗಳುವಡಬುಜಗಂಧಿಯ ವಿಮಲವಿಭ್ರಮವ ೧೭

---

[1] ಭರವ (ಕ.ಝ.ಟ.ಡ). [2] ಕರಕಲತ (ಕ), ಕೈವಿಡಿದು (ಚ), ಕರಕಮಲ (ಝ). [3] ತಾಂಗದ (ಕ.ಝ.ಟ.ಡ).

ಕುಶನೆ ಕೇಳವನಿಜೆಯುನಭಿವ
ರ್ಣಿಸುವಡೇತಱ ಮತಿಗಳೆಮ್ಮವು
ರಸನೆಸಾಸಿರದಹಿಪಗರಿದುಳಿದವರ ಪಾಡೇನು
ಕುಶನನುಜ ಕೇಳಾ ದಿವಾರಿಜ
ವಸತಿಯಲ್ಲಾ ಮೇಲೆ ನಿರುಪಮ
ಕುಸುಮಶರನಂಬಿಕೆಯಲಾ ಕೌತುಕ[1]ವ[1]ದೇನೆಂದ ೧೮

ಆದಿಮಾಯಾಮಹಿಮೆಯನು ಕ್ಷೀ
ರೋದಧಿಯ ನಂದನೆಯನಗ್ಗದ
ಮೇದಿನೀಸಂಭವೆಯ [2]ನರ[2]ಭಾಮಿನಿಯ ರೂಪಕದ
ಆದಿಶಕ್ತಿಯ ಜಾತರಹಿತೆಯ
ವೇದಮಾತೆಯ [3]ವಿಷ್ಣುವನಿ[3]ತೆಯ
ನಾದರದಿನಬಲೆಯ[4]ರು ಸಿಂಗರಿಸಿದರು ಹರುಷದಲ[4] ೧೯

ಎತ್ತಿದರು ಬಳಿಕಾರತಿಯ ಹೊಸ
ಮುತ್ತುಗಳ ಸೇಸೆ[5]ಯನು ಪರಿಕಲ[5]
ಸುತ್ತ ಹರಸಿದರಖಿಳವಿಪ್ರಸುವಾಸಿನೀನಿಕರ
ಇತ್ತರವನೀದೇವಮಾಂತ್ರಿಕ
[6]ರು[6]ತ್ತಮದ ಜಂಭೀರಫಲವನು
ಮತ್ತಭದ್ರಮದೇಭಕಂಧರಕಡರಿದಳು ಸೀತೆ ೨೦

ಒಡನೆ ಚಾಮರ ಸೀಗುರಿಯ ಕ
ನ್ನಡಿಯ ಕಾ[7]ಳಂ[7]ಜಿಯ ಸುಗಂಧದ
ಹಡಪದಬಲೆಯರೇಱಿದರು ಬೆಂಬಳಿಯಲಾ ಗಜವ
ಎಡಬಲದ ಕರಿತುರಗರಥವಂ
ಗಡದ ದಂಡಿಗೆಗಳ ವಿಲಾಸದ
ಕಡುಚೆಲುವಮುಗುದೆಯರು ಬಳಸಿದರವನಿನಂದನೆಯ ೨೧

---

[1] ವಿ (ಕ.ಣ). [2] ನಾ (ಕ), ವರ (ಣ). [3] ವಿಶ್ವಭರಿ (ಗ). [4] ರ ಸಿಂಗರಿಸಿದರು ಚಿತ್ರವಲ (ಗ), ರಲಂಕರಸಿದರು ಹರುಷದಲ (ಜ), ರಲಂಕರಿಸಿದರು ಜಾನಕಿಯ (ಝ), ರು ಸಿಂಗಾರಿಸಿದರೊಲವಿನಲಿ (ಡ). [5] ಯನು ಪರಿಕರಿ (ಕ) ಗಳ ಸಡಗರಿ (ಗ), ಯನು ಪರಗಲಿ (ಚ.ಜ). [6] ದು (ಗ.ಜ.ಝ.ಟ.ಡ). [7] ಳಾಂ (ಗ.ಜ.ಝ.ಟ).

ನುಡಿಯ ಚದುರಿನ ಭ್ರೂವಿಲಾಸದ
ಕುಡಿತೆಗಂಗಳ ಪರಿಮಳಾಂಗದ
ಪೊಡರ್ವಜಘನದ ಕಠಿಣತರಪೀವರಪಯೋಧರದ
ಮುಡಿಯಸೊಬಗಿನ ಸಣ್ಣನಡುವಿನ
ಬೆಡಗಿನಭಿನವರಸದ ಭಾವದ
ಕಡುಹುಕಾತಿಯರೈದಿದರು ಮುಂ[1]ಗುಡಿ[1]ಯಲವನಿಜೆಯ ೨೨

ಚಾರುತರಮಣಿಮಯದ ಮುಕ್ತಾ
ಹಾರಗಳ ಥಳಥಳಿಸುವ ಶ್ರುತಿ
ಪೂರಗಳ ಮೂ[2]ಗು[2]ತಿಯ ಮುತ್ತಿನ [3]ಬೊಟ್ಟು[3] ಬೈತಲೆಯ
ವೀರಮುದ್ರಿಕೆ ಕಡಗ ಕಂಕಣ
[4]ಸಾರತರಮಣಿಕಾಂಚಿ ನೂಪುರ[4]
ಭೂರಿಭೂಷಣದಂಗನೆಯರೈದಿದರು [5]ಮುಂಗುಡಿಯ[5] ೨೩

ನೋಟದಲಿ ಮದನಾಸ್ತ್ರವೆದೆಯಲಿ
ನಾಟಿದವು ವಿಟರುಗ[6]ಳ[6] ಹುಬ್ಬಿನ
ಬೇಟದಲಿ ಬೆಂಡಾದರಗ್ಗದ ನಿರ್ಜಿತೇಂದ್ರಿಯರು
ದಾಟಬಗದವು ವೀರ[7]ಕಲೆ[7] ನಗೆ
[8]ದಾಟಿ ಮನ್ಮಥ[8]ವಿರಹಿಗಳ [9]ದಿ
ಕ್ಕಾಟವಿರೆ[9] ಜನ ಮಗ್ನರಾದರು ನಡೆಯ ಮುಱುಕದಲಿ ೨೪

ವಾರಿರುಹವದನೆಯರ ವಿಭ್ರಮ
ಸಾರತರಸೊಬಗಿಂಗೆ ಸುಮನೋ
ನಾರಿಯರು ನಾಚಿದರು ನಳಕೂಬರಜಯಂತಕರು
ಬಾರಿಸಿದ ಮೋಹನಗಳಲಿ [10]ಸಂ[10]
ಸಾರವನು ಬಯಸಿದರು ನರರವಿ
ಕಾರವಿಭ್ರಮ[11]ಚೇತ[11]ರಾಯ್ತು ಳಿದಮರಸಂದೋಹ ೨೫

---

[1] ಗಡೆ (ಡ). [2] ಕು (ಗ.ಜ.ಝ). [3] ಬಟ್ಟು (ಕ.ಚ). [4] ದೋರಣದ ನೂಪುರದ ಕಾಂಚಿಯು (ಟ.ಡ). [5] ಜಾನಕಿಯ (ಗ). [6] ಳು (ಕ.ಝ.ಟ), [7] ಕೆಳೆ (ಗ.ಡ). [8] ಬೇಟ ಮನ್ಮಥ (ಕ), ನಾಟಮನ್ಮಥ (ಗ), ದಾಟಿದುನ್ಮದ (ಝ.ಣ). [9] ಮಿಕ್ಕಾಟವಿಕ (ಕ.ಜ.ಝ.ಣ). [10] ಸಲೆ (ಚ). [11] ಚಿತ್ರ (ಕ.ಜ.ಝ.ಣ).

ಸಂದಣಿಸಿತೀಪರಿಯು ನಾರೀ
ವೃಂದವಾ ಜನಕಕ್ಷಿತೀಶನ
ನಂದನೆಯು ಬಳಸಿನಲಿ ಬಹಳವಿಶಾಲವಿಭವದಲಿ
ವಂದಿಗಳ ಹೊಗಳಿಕೆಯ [1]ಸರಭಸ
ದಿಂದ[1] ಮುಂಗುಡಿಗಹಳೆಗಳ ರವ
ದಿಂದ ರಾಜಕುಮಾರಿ ಬಂದಳು ರಾಜಬೀದಿಯಲಿ ೨೬

ಕುಸುಮಶರನುಗ್ಘಡಣೆ ಕೈವಾ
ರಿಸುವ ಚೈತ್ರನ ಹೆಂಪು ಕೆಲಸಾ
ರಿಸುವ ಬಂಧುರಗಂಧ ಮಂದಾನಿಲನ [2]ಭರವಸಿಕೆ[2]
ಸಸಿಯ ಹೊಗಳಿಕೆ ಬಿರಿ[3]ದನುಚ್ಚಾ
ರಿ[3]ಸುವ ರತಿಯು ವಿಲಾಸ ಮಿಗೆ ಕಾ
ಣಿಸಲು ನಡೆತಂದಿಳಿದಳಿಭವನು ಸಭೆಯೊಳವನಿಪರ ೨೭

ಲವನೆ ಕೇಳೈ ಜಯಜಯೆಂದುದು
ದಿವಿಜಯುವತೀ [4]ಜಾಲ[4] ಬಹಳೋ
ತ್ಸವವ ಧರಿಸಿದಳಗಜೆ ನಮಿಸಿದಳಬುಜಭವನರಸಿ
ಅವನಿಜೆಯು ಸಂದರುಶನವು ಸಂ
ಭವಿ[5]ಸಲಮರರು ಭಕ್ತಿಭಾವದ[5]
ಸವಡಿಗೈಗಳಲಿರ್ದರಾನತರಾಗಿ ಗಗನದಲಿ ೨೮

ಆನೆಯಿಂದಿಳಿದಾದಿಮಾಯಾ
ಮಾನಿನಿಯ ಮಂಗಳೆಯನಾ ಜನ
ಕಾನುಜನು ಕೈಗೊಟ್ಟು ತಂದನು ನೃಪಸಭಾಸ್ಥಳಕೆ
ಆ ನಭದ [6]ನಿಖಿಳಾಮರೌಘ[6]ವಿ
ಮಾನದಿಂದಿಳಿದೋರಣಿಸಿದುದು
ಮಾನನಿಧಿ ಬಳಿಕವನಿಜೆಗೆ ತೋಱಿಸಿದನವರುಗಳ ೨೯

---

[1] ಸೌರುಥದಿಂದ (ಕ), ಸಂಭ್ರಮದಿಂದ (ಜ.ಝ), ರಥನಗಳಿಂದ (ಟ.ಡ). [2] ಸಂಭ್ರಮವು (ಗ), ಸಂಭವಿಕೆ (ಚ), ಸರಭಸಿಕೆ (ಜ.ಣ), ರಭಸಿಕೆಯ (ಟ.ಡ). [3] ದುಗಳನುಬ್ಬಿ (ಕ), ದನುತ್ಸಾದಿ (ಗ), ದನುತ್ಸಾಹಿ (ಜ.ಣ). [4] ಸ್ತೋಮ (ಕ.ಜ.ಝ). [5] ಸಿತೆಮಗೆಯು ಭಕ್ತಿಭಾವದ (ಕ), ಸಿದಮರರು ಭಕ್ತಿಭಾವದ (ಗ), ಸಿದಮರರು ಭಕ್ತಿವಾದದ (ಚ). [6] ನಿರ್ಜರರು ದಿವ್ಯ (ಚ).

ದೇವಿ ನೋಡೀತನು ಭವಾನೀ
ದೇವಿಯರಸನು ಗುಹಗಣಪವು
ಖ್ಯಾವಧೂತಪ್ರಮಥಗಣವಿದೆ ನೋಡು ನೀನವರ
ತೀವಿಕೊಂಡಿದೆ ಮುಂದೆ ವರರಾ
ಜೀವಭವಸನಕಾದಿಗಳು ಸುರ
ದೇವಮುಖ್ಯಸಮಸ್ತರಿವರನು ನೋಡು ನೀನೆಂದ ೩೦

ತರುಣಿ ನೋಡೀಚೆಯಲಿ ರಮ್ಯಕ
ಹರಿವರುಷ ಕಿಂಪುರುಷ ಭಾರತ
ವರುಷ ಕುರುವರುಷಾದಿ ನಾನಾ ಧಾರುಣೀಶ್ವರರ
ಹರಿತ ಕಶ್ಯಪ ಕಣ್ವ ಚ್ಯವನಾಂ
ಗಿರಸ ಕೌಶಿಕಮುಖ್ಯ ಮುನಿಸಂ
ತರುಗಳಿದೆ ಮಿಕ್ಕಾದ ನರರಿದೆ ನೋಡು ನೀನೆಂದ ೩೧

ಇವರೊಳಾರಲಿ ಚಿತ್ತನಿನಗು
ಳ್ಳವರನಂಗೀಕರಿಸು ನೋಡಿದೆ
ಭುವನಮೂಱಿರ ರೂಪು ಸಿರಿಸೌಭಾಗ್ಯ [1]ಶೌರ್ಯದಲಿ[1]
ವಿವಿಧಗುಣಸಂಪನ್ನರಿದೆಯೆನ
ಲವರವರ ಪಂಗ್ತಿಗಳನೊಯ್ಯನೆ
ನವವಿಲಾಸಪ್ರೌಢಿಯಲಿ ನೋಡಿದಳು ನಳಿನಾಕ್ಷಿ ೩೨

ಮಗಳ ಗಂಡನು ಶಿವನು ಬೊಮ್ಮನು
ಮಗನು ಮಿಕ್ಕಿನ ಸುರರು ಬಂಟರು
ಬಗೆವಡಮ[2]ಲ[2]ಬ್ರಹ್ಮಋಷಿಗಳು ನಿರ್ಜಿತೇಂದ್ರಿಯರು
ಜಗದರಸುಗಳು ನರರು ತೊರವೆಯ
ನಗರದಧಿಪತಿ ಗಂಡನೆಂದೊಗು
ಮಿಗೆಯು ಹರುಷದಲಬಲೆ ಬಂದಳು ಜನಕನಿದ್ದೆಡೆಗೆ ೩೩

———

[1] ಶೌರಿಯುದ (ಕ.ಜ.ಣ). [2] ರ (ಕ.ಝ.ಡ.ಣ).

# ಹದಿನೈದನೆಯ ಸಂಧಿ

---

ಸೂಚನೆ: ಭೂಪತಿವ್ರಜಗರ್ವಸರ್ವ
ಸ್ವಾಪಹರ ಹರಧನುವನಾ ನರ
ರೂಪಿನಬುಜಾಂಬಕನು ಗೆಲಿದೊಲಿಸಿದನು ಜಾನಕಿಯ

ತರುಣ ಕೇಳಾ ಜನಕಭೂಪತಿ
ಪರಮಸಂತೋಷದಲಿ ಸೀತಾ
ತರುಣಿಯನು ತೆಗೆದಪ್ಪಿ ತವಗದಮೇಲೆ [1]ಕುಳ್ಳಿ[1]ರಿಸಿ
ನೆರೆದ ರಾಯರೊಳಾವನೀ ಶಶಿ
ಧರನಚಾಪವನೇಱಿಸಿದ ಭೂ
ವರನ ವರಿಸೆಂದಿತ್ತನಾ ಮಂದಾರ ಮಾಲಿಕೆಯ ೧

ಬಳಸಿದರು ಬಳಿಕವನಿಜೆಯನೂ
ರ್ಮಿಳೆಮಹಾಮಾಂಗಲ್ಯಕನ್ಯಾ
ಕುಲಶಿರೋಮಣಿ[2]ಮಾಳವಿ ಶ್ರುತ[2]ಕೀರ್ತಿಯೆಂಬವರು
ಹಲವು ಪರಿಚರಿಯಕದ ಸೇವಾ
ಲಲನೆಯರು ಪರಿವೇಷ್ಟಿಸಿದರು
ಜ್ವಲಸು[3]ಕಾಂತಾ[3]ಜನದ ತಿಂಥಿಣಿ ಕಾಣಲಾಯ್ತೆಂದ ೨

ಅಗಿದು ಹೊಳೆವಕ್ಷಿಗಳ ಮಱಿಮೀ
ನುಗಳ ವಿಕಸಿತವದನಕಂಜಾ
ಳಿಗಳ ಕುಂತಳಭರದ ಭೂರಿಭ್ರಮರ[4]ವಿಭ್ರಮದ[4]
ಯುಗಪಯೋಧರಚಕ್ರವಾಕದ
ನಗೆಯ ಲಾವಣ್ಯಾಂಬುರಸದು
ಬ್ಬು[5]ಗಳ[5] ಬೊಬ್ಬುಳಿ[6]ಕೆಗಳ[6] ಕಾಂತಾಸರಸಿ ರಂಜಿಸಿತು ೩

ಮೊಳಗಿದವು ನಿಸ್ಸಾಳತತಿ ನಿಮಿ
ಕುಲಶಿರೋಮಂಡನನ ಸನ್ನೆಯ
ಲುಲಿವ ಕಂಚುಕಿಗಳ ಘಡಾವಣೆಯಲಿ ನೃಪಾಲಚಯ

---

[1] ನಿಂದಿ (ಜ.ಝ.ಟ). [2] ಮಾಂಡವಿ ಶ್ರುತ (ಕ), ಮಾಳವ ಶ್ರುತಿ (ಚ). [3] ಲಲನಾ (ಕ.ಗ.ಜ.ಣ). [4] ಸಂಕುಲದ (ಕ), ವಿಶ್ರುತದ (ಝ). [5] ಳಿಯ (ಚ), ರದ (ಟ). [6] ಗಳಲಿ (ಚ.ಟ).

ಗಳದಕಪ್ಪಿನ ಗರುವದೇವನ
ಬಲುಶರಾಸನವಿದ್ದೆಡೆಗೆ ಹೆ
ಕ್ಕಳಿಸಿ ಹೊದ್ದಿದರುದಿತಮದದುಬ್ಬಿನ ವಿಲಾಸದಲಿ ೪

ಹಾರ ಕುಂಡಲ [1]ಕಟಕ[1] ಮಣಿಕೋ
ಟೀರಭಾರದ ಭೂರಿವೆಳಗಿನ
ಘೋರಘೋಷದ ಖಡೆಯ ಹೀರಾವಳಿಯ ಸೊಗಸುಗಳ
ಧಾರುಣೀಶ್ವರರೊಬ್ಬರೊಬ್ಬರು
ಹೋರಿದರು ಬಿಲ್ಲನಲಿ ಬಯಕೆಯ
ಭಾರಣೆಯ ಬಯಲಾಸೆಯಲಿ ಬಾಹುಪ್ರತಾಪದಲಿ ೫

ನಿಷಧನಳ್ಳೆಗಳಾಡಿದವು ಬಾ
ರಿಸಿತು ಬಳಲಿಕೆ ಚೈದ್ಯನೃಪಗು
ಬ್ಬಸವು ಬಲುಹಾಯ್ತಂಗಪತಿಗೆಚ್ಚಱಿಕೆ ಬ[2]ಡವಾ[2]ಯ್ತು
ವಿಷಮವೀರಯುಧಾಜಿತುವಿನಾ
ಯಸವನೇವೇಳುವೆನು ಚಿಕ್ಕನ
ವಸುಮತೀಶರ ಪಂಗ್ತಿಯಲಿ ಬಲುಬಿಲ್ಲ ಬವರದಲಿ ೬

ಚೋಳ ಹಿಮ್ಮೆಟ್ಟಿದನು ಹಿಂದಕೆ
ಲಾಳ ಸರಿದನು ಹಿಂಗಿದನು ಬಂ
ಗಾಳ ಬೆಂಗೊಟ್ಟೋಡಿದನು ಪಾಂಡ್ಯನು ಪಲಾಯನವ
ಓ[3]ಲಗಿ[3]ಸಿದನು ಬಾಹ್ಲಿಕನು ಪಾಂ
ಚಾಲ ಸಿಂಧು ಕಳಿಂಗ ಮರು ನೇ
ಪಾಳದರಸರು ಸರಸಕೊಳಗಾದರು ಸಖೀಜನದ ೭

ಕರೆಕರೆದು ಕಡುಚಪಳೆಯರು ಚ
ಪ್ಪರಿಸಿ ನಾಚಿಸಿದರು ನೃಪಾತ್ಮಜೆ
ಗರಸರಾಗಲು ಬಂದವರ ಮೋಱೆಗಳ ನೋಡೆನುತ
ಅರೆನಗೆಯ ಬಿಱುನಗೆಯ ನಗೆಗಳ
ಹೊರಳಿಗಳಲಡಬಿದ್ದು ಕೈದಾ
ವರೆಯ [4]ಕಮಲಂ[4]ಗಳಲಿ ತೆವರಿದರಿಟ್ಟು ಭೂಭುಜರ ೮

---

[1] ಮಕುಟ (ಕ.ಜ). [2] ಯಲಾ (ಕ.ಝ). [3] ಲೈ (ಕ.ಗ), ಲವಿ (ಚ).
[4] ತಾವರೆ (ಕ.ಗ.ಣ).

ಕಂಡು ಬಳಿ[1]ಕದನು[1]ಳಿದ ಮನ್ನೆಯ
ಮಂಡಳಿಕ ಸಾವಂತರೇಳದೆ
ದಂಡಿಸಿದರಲ್ಲಲ್ಲಿಯೇ ಬಿಲ್ಲಿಗೆ ನಮೋಯೆನುತ
ಗಂಡುಗಲಿ ರಾವಣನು ರಾಕ್ಷಸ
ತಂಡಸಹಿತಾ ಸಮಯದಲಿ ನೃಪ
ಮಂಡಳಿಯ ಬಳಿಗಿಳಿದನನುಪಮವರವಿಮಾನದಲಿ ೯

ಎದ್ದು ನಿಂದಿದುದಮರಗಣ[2]ವಜ[2]
ಹೊದ್ದಿ ಹರಸಿದನೀಶನಂಘ್ರಿಗೆ
ಬಿದ್ದವನನಪ್ಪಿದನು ಸಾರ್ದರು ನೃಪರು ಕೆಲಬಲಕೆ
ದೊದ್ದೆಗರು ರಕ್ಕಸನ ಕಾಣುತ
ಕದ್ದುಹಾಯ್ದರು ಜನಕ ಚಿಂತೆ[3]ಯ
ಲಿ[3]ದ್ದನವ ನಡೆತಂದನುಗ್ಘಡಣೆಯ ನಿನಾದದಲಿ ೧೦

ತೊಡ[4]ರ[4] ಝುಣಝುಣರವದ ಸುರರು
ಗ್ಘಡದ ಬಿರುದಿನ ಬಾವುಲಿಯ ಕ
ಪ್ಪಿಡಿದಕಾಯದ ಕುಡಿವಱಿವ [5]ಬೆಳಗುಗಳ ದಾಡೆ[5]ಗಳ
ಇಡಿದ ಮಣಿಮಕುಟಗಳ ಝುಳಪಿನ
ಖಡುಗಹಸ್ತದ ಶೋಣಿತಾಂಬರ
ದುಡಿಗೆಯಗ್ಗದ ರಾಯರಕ್ಕಸನೈದಿದನು ಧನುವ ೧೧

ಬೆದಱಿದರು ಕಂ[6]ಡ[6]ವನ ರೂಪನು
ಹೊದಱಿದಲೆಗಳ ಹೊತ್ತಚೋಹದ
ಮದದಗರ್ವದ ಗಾಢಗಮನದ ಭೂತ[7]ವಲೆಯೆನುತ[7]
ಸುದತಿಯರು [8]ಗಡಗಡನೆ[8] ನಡುಗಿದ
[9]ರ[9]ದುರಿ [10]ಸಿರಿಮೊಗವನು[10] ಮಹೀಸುತೆ
ಹೆದಱಿದ[11]ಳು[11] ಹೇರಾಳಚಿಂತೆ[12]ಯಲಾ ವಿದೇಹನೃಪ[12] ೧೨

---

[1] ಕಿನ್ನ (ಕ.ಟ), ಕಿನಲು (ಜ), ಕಿದನು (ಝ.ಡ.ಣ). [2] ನಜ (ಕ.ಜ.ಝ.ಡ). [3] ಯೊಳ (ಕ.ಜ.ಟ). [4] ರು (ಕ.ಟ.ಣ). [5] ದಾಡೆಗಳ ಬೆಳಗು (ಕ.ಜ.ಝ.ಡ). [6] ಡಿ (ಕ.ಝ.ಟ.ಡ). [7] ವಲೆಯೆಂದು (ಕ), ನಿವನೆಂದು (ಗ), ವೋಯೆಂದು (ಟ.ಡ). [8] ಗದಗದನೆ (ಗ.ಚ), ನಡನಡನೆ (ಜ), ದಡದಡನೆ (ಟ.ಡ), ಥರಥರನೆ (ಣ). [9] ಳು (ಣ). [10] ದಳು ಮೊಗವನು (ಗ), ಸಿರಿಮುಡಿಯನು (ಚ). [11] ನು (ಗ.ಚ.ಣ). [12] ಯೊಳಿರ್ದನಾ ಜನಕ (ಜ), ಯೊಳದ್ದನಾ ಜನಕ (ಟ).

ಖಳನಿವನು ಪೂರ್ವದಲಿ ರಜತಾ
ಚಲವನಪಗತಭೀತಿಯಲಿ ಕರ
ತಳದ[1]ಲಜಗವಪಾ[1]ಣಿಸಹಿತೆತ್ತಿದನು ಜಗವಱಿಯೆ
ಅಳುಕದಿರದೀ ಧನುವಿವಂಗು
ಜ್ವಲನಿವಿಶ್ವರವಂಶಮುಕುರಕೆ
ಕಿಲುಬುದೋ[2]ಱದಲೇ[2] ಮಹಾದೇವೆನುತ ಚಿಂತಿಸಿದ ೧೩

ಧನುವಿದೆಲ್ಲಿಯದೆಲ್ಲಿ ನಾರದ
ಮುನಿಯ ವಚನವದೆಲ್ಲಿ ಮರುಳಾ
ದೆ[3]ನು[3] ಮಹೀಶರ ನೆರಹಿ ಮಗುಳಿನ್ನೇನುಗತಿ ತನಗೆ
ವನಜವೆತ್ತಲು ಗರಳಮಯಜೀ
ವನವಿದೆತ್ತಲು ಧೇನುವೆತ್ತಲು
ಜನಿತಕೋಪದ್ವೀಪಿಯೆತ್ತಲು ಶಿವಶಿವಾಯೆಂದ ೧೪

ವಿಪುಳಮತಿಕುಶ ಕೇಳು ಲಂಕಾ
ಧಿಪನು ಬಂದನು ಬಿಲ್ಲೆಡೆಗೆ ನಮ
ಗುಪಕರಿಸಿದುದಲಾ ಮಹೀಶರ ಗೆಲಿದ ಕೋದಂಡ
ಕೃಪೆಯಲೆನುತುಮ್ಮಹದಿನಾ ಕೋ
ಣಪಕುಲಾಗ್ರಣಿ ಬಯಲಮೋಹ
ದ್ವಿಪವನೇಱದನರೆನಿಮಿಷವಾಸುರವಿಕಾರದಲಿ ೧೫

ನಿಂದಿದನು ಬಳಿಕವನು ಬಿಲ್ಲಿನ
ಮುಂದೆ ಬಳಿಸಂದಸುರನಿಕರವ
ಹಿಂದಣಿಗೆ ಹಿಮ್ಮೆಟ್ಟಿಸುತಲೀ[4]ಕ್ಷಿಸುತಲೆಡಬಲನ[4]
ಮಂದಹಾಸದಿನಾ ಕರಾಗ್ರದ
ಚಂದ್ರಹಾಸವ ಸೂತಗಿತ್ತರ
ವಿಂದವದನೆಯ ನೋಡಿ ಚಾಪಕೆ ನೀಡಿದನು ಕರವ ೧೬

ನೃಪ ತಿರಸ್ಕಾರಾಪಹಾಸ್ಯದ
ಚಪಳೆಯರ ನುಡಿಯುಡಗಿದವು ಭೂ
ಮಿಪರ ಭುಜಬಲಮಾನಹಾನಿಯು ಕೋಪ ಕೊಂಕಿದವು
ವಿಫಲವಾದುದೆ ಜನಕಭೂಪನ
ತಪದಫಲವೆಂದಿಷ್ಟಜನ ನಿ
ರ್ಲಪಿತಚಿಂತಾಭರದಲಿರ್ದುದು ಬೆರಳ ಬೆಱಗಿನಲಿ ೧೭

---

[1] ರಾ ಜಗಪ್ರಾ (ಕ), ವನಜಗವಪಾ (ಚ), ಲಾಜಗತ್ಪ್ರಾ (ಣ). [2] ಱುದುದೇ (ಚ), ಱುತಲೇ (ಗ). [3] ನೆ (ಕ.ಗ.ಝ.ಣ). [4] ಸಿದನೆಡಬಲವ (ಕ), ಸುತರೆಡಬಲವ (ಚ), ಸಿದನೆಡಬಲನ (ಡ.ಣ).

ನೋಡಿ ಬಳಿಕಾ ವಿಬುಧವಂಶವಿ
ಭಾಡ ಕೈಯಿಕ್ಕಿದನು ನಿಧಿಯನು
ಕೂಡಿಕೊಂಡಿಹ ಕಾಳಸರ್ಪನ ತುಡುಕುವಂದದಲಿ
ಗಾಢಮುಷ್ಟಿಯೊಳ್ಕಿ [1]ಬಿಡದ[1]
ಲ್ಲಾಡಿಸಿದನಾ ಧನುವನದು ಕೈ
ಗೂಡದಿರೆ ಕೈದೆಗೆದು ಬಾಹಪ್ಪಳಿಸಿ ಬೊಬ್ಬಿಱಿದ ೧೮

ಬಲಿದು ಮಕುಟಾವಳಿಯ ಶೋಣಿತ
ಪಳಿಯು ರಕ್ಕಸದೇಶಿಯಲಿ ಬಿಗಿ
ದೆಳೆವ ಹಾಹೆಯನೋಜೆಗೊಳಿಸಿಕ್ಕಲಿಸಿ ಪದಯುಗವ
ಅಳುಕದಂದು ಹರಾದ್ರಿಯನು ಕಿ
ತ್ತಿಳೆಯನಗಲ[2]ಸುವಂತೆ[2] ಬಾಹಾ
ಲುಳಿತ[3]ಬಲ[3]ನೆತ್ತಿದನು ನೆಲನೊಲದಾಡಲೆಡಬಲಕೆ ೧೯

ಒದದುಕೊಂಡವು ಜಲಧಿ ಗರಳವ
ನುದುಗಲಿಸಿದನು ಫಣಿಪ ಕೂರ್ಮನ
ಹೃದಯ [4]ಬಿ[4]ಚ್ಚಿತು ಬಿಗುಹು ಸಡಿಲಿದವಾ ಕುಲಾದ್ರಿಗಳ
ಅದುರಿತಂಬರವಬುಜಜಾಂಡದ
ತುದಿ[5]ಯು ತುಟ್ಟಿ[5]ಸಿತೀ ದಶಾಸ್ಯನ
ಪದವಿಘಾತಿಗೆ ಪೂತು ಮಝು ಭಾಪೆಂದುದಮರಗಣ ೨೦

ಮೃಡಸರೋಜಭವಾದಿಸುರರು
ಗ್ಘಡಿಸೆ ರಕ್ಕಸರಾಯನೆತ್ತಿದ
ನೊಡನೆ ಬೊಬ್ಬಿಱಿದವುಕಿದನು ಮೊಳಕಾಲಲಾ ಧನುವ
ತುಡುಕಿ ತಿರುವನು ತೀವ್ರಚಾಪದ
ಹೆಡಕೆಗೊಯ್ದನು ಕೂಡೆ ರಕ್ಕಸ
ಗಡಣವಾಯೆಂದಬ್ಬರಿಸಿದುದು ಹರೆಯ ಹೊಯ್ಲಿನಲಿ ೨೧

ಆಗಲಿವ[6]ಗಹಳೆಂದು[6] ಜನಕನ
ಬೈಗುಳಿನ ಬಾಯ್ಗಳಳಿ ನಗೆಗಳ
ಲಾಗಿನಲಿ ಲಳಿಯೇಱಿತವನೀಪಾಲಸಂದೋಹ

---

[1] ಝುಡಿದ (ಗ.ಜ.ಝು.ಟ). [2] ಸಿದಂತೆ (ಗ.ಜ.ಣ). [3] ಖಳ (ಝು.ಟ.ಡ).
[4] ಬೆ (ಕ.ಗ.ಜ). [5] ತುಟಾರಿ (ಕ.ಗ.ಜ.ಣ). [6] ಳವಗೆಂದು (ಕ), ಗಹುದೆಂದು (ಗ.ಜ), ಗವಳೆಂದು (ಝು), ನಹನೆಂದು (ಡ).

ತಾಗಿದಂಜಿಕೆಯಿಂದ ಚಿಂತಾ
ಸಾಗರ[1]ದೊಳದ್ದನು[1] ವಿದೇಹ[2]ನ[2]
ಯಾಗಭೂಮಿಯುಮಗ[3]ಳ[3] ಮಱುಗಿತು ಮಾನಿನೀ [4]ನಿವಹ[4] ೨೨

ಅಳುಪಲಾ[5]ರಂತರವು[5] ಜಗದ
ಗ್ಗ[6]ಳದ[6] ದೈವದ ಸೊಮ್ಮಿಗಸುರನ
ನಿಳಿಕೆಗೊಂಡುದು ಚಾಪ ಚಪ್ಪರಿಸಿತು ಚಡಾಳತೆಯ
ಕಳವಳಿಸಿದವು ಕರಣ ಕಂಗಳ
ಬಳಸಿದುದು ಬಲುತಿಮಿರ ಕರತಳ
ವಲುಗಿದವು ಕಾತರಿಸಿದವು ಕಾಲ್ಗಳು ದಶಾನನನ ೨೩

ಉಳಿದುದೈ[7]ಯೆವೆ[7]ಮಾತ್ರಕಾ ಬಿಲು
ಗೊಲೆಯ ತಿರುವಿನ ಕೂಟ ಮೇಲಕೆ
ನಿಲುಕದಾದುದು ಕೊಂಡ ಗಮನದ ಮನದ ಪರಿತೋಷ
ಫಲಿಸಲಱಿಯದ ಕಾರ್ಯದಲಿ ಹಂ
ಬಲಿಸಿ ಕೆಡುವವನಂತೆ ಕೆಡೆದನು
ಬಿಲುಸಹಿತ ಬರ್ಹಿರ್ಮುಖರ ವನಿತೆಯರು ಗಹಗಹಿಸೆ ೨೪

ಕಂಡು ಕಿಱುನಗೆಗಳಲಿ ರಾಯರ
ತಂಡವಿದ್ದುದು ಮಂದಹಾಸದ
ಮಂಡೆಗಳ ಮುರಿವುಗಳ ಮುಸುಕಿನಲಿರ್ದುದಮರಗಣ
ಗಂಡುಗಲಿರಾವಣಗೆ ಬಿಲ್ಲಿನ
ದಂಡೆಯನು ಹಾಯ್ಕಿದಳೆ ನಿಜದೋ
ರ್ದಂಡದಂಗನೆಯೆನುತ ಗುಹಿಲಿಕ್ಕಿತು ಸಖೀನಿವಹ ೨೫

ದೆಸೆದೆಸೆಗೆ ಸಿಡಿದವು ಕಿರೀಟ
ಪ್ರಸರ ಹರಿದವು ಹಾರವೆದೆಯಲಿ
ಬಸವಳಿದು ಬಿಲ್ಲುಗುಳಿಸಿತು ರುಧಿರವನು ವದನದಲಿ
ರಸದಲಂಪಟಕಿಕ್ಷುವನು ಖಂ
ಡಿಸಲು ಸಿಲುಕಿದ ನಾಲಗೆಯು ಗಂ
[8]ಗಸದ[8] ನರಿಯವೊಲಿರ್ದನಾ ಬಿಲ್ಲಡಿಯಲಸುರೇಂದ್ರ ೨೬

---

[1] ದಲದ್ದಳು (ಕ), ದೊಳದ್ದಳು (ಗ.ಟ.ಡ), ದೊಳಿದ್ದನು (ಜ.ಝ). [2] ಜೆ (ಕ.ಣ). [3] ಳು (ಕ.ಗ.ಜ.ಝ.ಡ), ಳೆ (ಣ). [4] ನಿಕರ (ಕ.ಗ.ಣ). [5] ರಿಂಗಳವು (ಗ). [6] ಳಿಯ (ಚ.ಜ). [7] ತುಸು (ಕ), ಜವೆ (ಗ.ಚ). [8] ಗಸೆಯ (ಗ.ಜ.ಟ.ಡ).

ಹಾಯೆನುತ ಹರಿತಂದು ರಕ್ಕಸ
ನಾಯಕರು ಹಿಡಿದುಗಿದರಾ ಚಾ
ಪಾಯುಧವನಂದಸುರಬಲ ಮಂದರವನುಗಿದಂತೆ
ಬಾಯ ಮಿಡುಕಿನ ಬಳಲುಗಂಗಳಿ
ನಾಯುವಿನ ತೆಗೆಬಗೆಯ ರಕ್ಕಸ
ರಾಯನನು ಕೊಂಡೊಯ್ದು ಬೀಸಿದರಾಲವಟ್ಟದಲಿ ೨೭

ನಳಿನಭವಶಂಕರರು ಪೂರ್ವದ
ಲೊಲಿದುಕೊಟ್ಟ ವರಂಗಳಿಂದವ
ನುಳಿದನಲ್ಲದೆ ಬಿಲ್ಲುಬಿದ್ದಸುತೊಲಗದವರಾರು
ಬಳಿಕ ಕೇಳ್ಕೆ ಕುಶನೆ ಸೀತೆಯ
ಕಳವಿನಲಿ ಕೊಂಡೊಯ್ವೆನೆಂದವ
ನಳಿದಲಜ್ಜೆಯಲೈದಿದನು ಲಂಕಾಮಹಾಪುರವ ೨೮

ಬಳಿಕ ಜನಕನ ನಂದನೆಯ ಹಂ
ಬಲನು ಬಿಟ್ಟರು ನೆರೆದಿಳಾಮಂ
ಡಲದ ರಾಯರು ಬೈದು ಭಂಗಿಸುತಾ ವಿದೇಹಜನ
ಬಲೆಯನೊಡ್ಡಿದನಿವನು ಲುಬ್ಧಕ
ತಿಲಕನೋ ನೃಪರುಷಿಯೊ ಸಾಕಿವ
ನೊಳಗೆ ಮಾತೇಕೆನುತ ಮಿಗೆ ಮೊಱೆದೆದ್ದರಲ್ಲಲ್ಲಿ ೨೯

ನಿಲಿಸು ರಾಯರ ನಾರದನ ನುಡಿ
ಬಳಲಿಕೆಯ ತಂದು[1]ದೆ[1] ಮಹಾಧನು
ಸುಲಭವೇ ಸಾಕಿನ್ನು ಕುಳ್ಳಿರಿಸಿವರನುಚಿತದಲಿ
ಎಲೆ ಕುಶಧ್ವಜ ಕೇಳು ಸೀತೆಯ
ನೊಲಿಸಲೀ ಪಾರ್ಥಿವರು ಯೌವನ
ಕುಲವಿಭವವಿಭ್ರಮದಲೆಂದನುಜಂಗೆ ನೇಮಿಸಿದ ೩೦

ಧನುಪರೀಕ್ಷೆಯುಗೊಡವೆಬೇಡೀ
ಜನಕಜೆಯನೊಲಿಸುವುದು ಕುಲಯೌ
ವನವಿಲಾಸವಿಚಿತ್ರವೈಭವದಿಂದ ನೀವೆಂದು
ಜನಪರಲಿ ಸಾಱಿಸಿದನಾ [2]ಮತ[2]
ದನುನಯುವನಂಗೀಕರಿಸಿ ನೃಪ
ಜನ ಸರಾಗದಿನಂತರಿಸಿ ಕುಳ್ಳಿರ್ದರಲ್ಲಲ್ಲಿ ೩೧

[1] ದು (ಗ.ಜ.ಡ.ಣ). [2] ಮನ (ಕ.ಝ.ಟ.ಡ.ಣ)

ಎಲೆ ಕುಶಧ್ವಜ ನಂದನೆಯನಂ
ದಳವನೇೞ[1]ಸಿ ತೋೞಸೀ[1] ನೃಪ
ಕುಲಶಿರೋಮಣಿಗಳನು ತನ್ನಯ ಮನಕೆ ಹತ್ತುವರ
ತಳದುಕೊಳಲಿದು ಕೃತಸಮಯವಿ
ನ್ನಲಸಿಕೆ[2]ಯಿದೇಕೆಂದು[2] ನುಡಿವೀ
ಕಳವಳವ ಕೇಳ್ದದಟಮುನಿಪತಿ ರಾಮಗಿಂತೆಂದ ೩೨

ಏಳು ಸೀತೆಯ ವರಿಸು[3]ವಡೆ ತೆಗೆ[3]
ಭಾಳನೇತ್ರನ ಧನುವ ಬೇಗೆನೆ
ಮೇಲು ಮೊಗದುಬ್ಬಿನಲಿ ನಿಂದಿದ್ದನು ಸರಾಗದಲಿ
ಬಾಲನೇ ನರನಾಟಕದ ಸಿರಿ
ಲೋಲನಲ್ಲಾ ಬೆಱಗದೇನು ವಿ
ಶಾಲಮತಿ ಕುಶ ಕೇಳು ಬೀಳ್ಕೊಂಡನು ಮುನೀಶ್ವರನ ೩೩

ವರಪಯೋನಿಧಿಮಧ್ಯದಿಂದವ
ತರಿಸುವಮೃತಾಂಶುವಿನವೊಲು ಮುನಿ
ವರರ ಮಧ್ಯದೊಳಿದ್ದನಾ ರಘುನಾಥನೊಲವಿನಲಿ
ಪರಮವಿಭವಕೆ ವಿಭ್ರಮಕೆ ಸರ
ಸಿರುಹಭವ ಮನ್ಮಥರು ಲೋಕಕೆ
ದೊರೆಗಳವರಿಗೆ ಪಿತನಲಾ ಪಡಿಗಟ್ಟಲೇನೆಂದ ೩೪

ಚರಣನಖದೀಧಿತಿಯ ಪೀತಾಂ
ಬರದ ದಿವ್ಯವಿಭೂಷಣದ ಭಾ
ಸುರಶರೀರದ ಹೊಗರ ಹೊಸಜವ್ವನದ ವಿಭ್ರಮದ
ಪರಮತೇಜೋಮಯನು ಮಾಯಾ
ನರನು ಬಂದನು ನೆರೆದ ಪೃಥ್ವೀ
ಶ್ವರಸಭಾಮಧ್ಯದಲಿ ಬೆಱಗಾಗಿರೆ ಸಮಸ್ತಜನ ೩೫

---

[1] ಸು ಕಾಣಿಸೀ (ಜ.ಟ.ಡ). [2] ಯದೇಕೆಂದು (ಕ.ಜ), ಯದೇನೆಂದು (ಚ).
[3] ಮಿಗೆ ತೆಗೆ (ಕ), ತೆಗೆನಡೆ (ಚ).

ಸುರರಿಗೀಶ್ವರನಂತೆ ಧರಣೀ
ಸುರರಿಗಮಲಬ್ರಹ್ಮದವೊಲಿತ
ರರಿಗೆ ರಾಜಕುಮಾರನಂ[1]ದದಿ ನಿ[1]ಖಿಳರಾಯರಿಗೆ
ಧರೆ[2]ಗ[2]ಧೀಶ್ವರ[3]ನಾಗಿ[3] ಮಾನಿನಿ
ಯರಿಗೆ ಮನ್ಮಥನೆಂಬವೊಲು ಗೋ
ಚರಿಸಿದನು ಗರುವಾಯಿಯಲಿ ಗಜಗತಿಯ ಗಮನದಲಿ ೩೬

ಈತನಹನವನಿಜೆಗೆ ವರರೂ
ಪಾತಿಶಯದಲಿ ಹರೆಯದಲಿ ಭಾ
ವಾತಿರೇಕದಲದಟಿನಲಿ ನಿಜರಾಜತೇಜದಲಿ
ಈತ ಚಾಪವ ಗೆಲಲಿ ಗೆಲದಿರ
ಲೀತನೇ ಸಾಕೆಂಬ ಘನಸಂ
ಪ್ರೀತಿ[4]ವಚನದೊಳಿ[4]ರ್ದರಬಲೆಯರಧಿಕಹರುಷದಲಿ ೩೭

ಲಲಿತರಾಮನ ಮೂರ್ತಿಯನು ಕಂ
ಗಳಲಿ ಬಿಗಿಯಪ್ಪಿದರು [5]ಸುರತಾ[5]
ಕಲಿತದನುರಾಗಪ್ರಪಂಚದ ಸಕಲಕಲೆಗಳಲಿ
ಬಳಸಿದರು ಭಾವಕಿಯರಂಗಜ
ನಲಗಿಗೊಡ್ಡಿದ ಮೈಯನೊಯ್ಯನೆ
ಸುಳಿಸಿದಳು ಸುಮ್ಮಾನದಲಿ ಕಡೆಗಂಗಳನು ಸೀತೆ ೩೮

ಮುಸುಕಿತಭ್ರುವನಮರತತಿ ತಾ
ಪಸರು ತವಕಿಸಿ ನಿಂದಿದರು ನೆಱೆ
ಮುಸುಕಿಕೊಂಡುದು ಸಕಲಪೃಥ್ವೀಪಾಲಸಂದೋಹ
ಕುಸುಮಮಾಲೆಯ ತಿರುಹುತೆತ್ತಿದ
ಮುಸುಡಿನರೆನೋಟದಲಿ ಲಜ್ಜೆಯ
ಬೆಸುಗೆಯಲಿ [6]ನೆಱೆ[6]ನೋಡುತಿರ್ದಳು ಸೀತೆ ರಘುಪತಿಯ ೩೯

ಬಂದು ನಿಂದಿದನೀತನಾ ಬಾ
ಲೇಂದುಧರನೆರಡನೆಯ ಬಿಲ್ಲಿನ
ಮುಂದೆ ಮುರಿದೀಕ್ಷಿಸಿದನವನೀಸುತೆಯ ಸಿರಿಮೊಗವ

---

[1] ತಿರಲ (ಕ), ದದಿನ (ಗ), ದದಲ (ಜ). [2] ಯ (ಗ.ಚ). [3] ನೆನಲು (ಕ.ಝ), ನಂತೆ (ಜ). [4] ರಚನೆಯಲಿ (ಕ). [5] ಸರಸಾ (ಕ.ಝ). [6] ಮಿಗೆ (ಚ).

ಸಂದಣಿಸಿದ ಸಮಸ್ತಸುರನರ
ವೃಂದ ಕಂಡುದೊ ಕಾಣದೋಯೇ
ನೆಂದಖಿಯೆನೇಱಿಸಿದ ಧನುವಿದ್ದುದು ಕರಾಗ್ರದಲಿ ೪೦

ಎಳೆಯ ಕಬ್ಬಿನಕೋಲ [1]ವನ[1]ಕರಿ
ಕಳಭ ಕರದಲಿ ಮುಱಿವವೊಲು ನಿಱಿ
ನಿಳಿಲು ನಿಟಿಲೆಂಬಬ್ಬರಣೆ ಗಬ್ಬರಿಸೆ ದಿಗುತಟವ
ಸೆಳೆದನಾಕರ್ಣಾಂತಪರಿಯಂ
ತಲಘುಬಲರಘು[2]ನಾಥ[2]ನಿಕ್ಕಡಿ
ಗಳೆದುದಾ ಬಲುಬಿಲ್ಲು ಬೆದಱಿಲು ಹೃದಯ ಭಾರ್ಗವನ ೪೧

ಪಸರಿಸಿದ ಪರಿತೋಷದುಬ್ಬಿನ
ಮುಸುಡಕಾಂತಿಯ ಕಾಂತನಂಘ್ರಿಯ
ಸಸಿನದಲಿ ಥಾಳಿಸುವಪಾಂಗದ ಪಾಂಗಿನಗ್ಗಳದ
ನಸುನಗೆಯ ಸಿರಿಮೊಗದ ಲಜ್ಜಾ
ರಸದ ಸೊಬಗಿನ ಸೀತೆ ಸುರಕುಜ
ಕುಸುಮಮಾಲೆಯನಿಕ್ಕಿದಳು ರಘುರಾಮ[3]ಚಂ[3]ದ್ರಂಗೆ ೪೨

ಉಕ್ಕಿದುದು ಹೆಱೆಗಂಡ ಕಡಲಿನ
ಹೆಕ್ಕಳದವೊಲು ಹರುಷರಸದಳ
ವಿಕ್ಕಿದುದು ಸತ್ಕುಲಲತಾಂಕುರ ಜನಕಭೂಪತಿಯ
ಒಕ್ಕರಂಬುಜದಲರನಮರರ
ಢಕ್ಕಡೆಯರಾನಕದ ದನಿ ದಶ
ದಿಕ್ಕನುಬ್ಬಿಸೆ ರಘುಪತಿಯ ಸಿರಿಮುಡಿಯ ಸರಿಸದಲಿ ೪೩

ಉಗಿದಡಾಯುಧ ವೀರಸುಭಟಾ
ಳಿಗಳು ದಶರಥಸಾರ್ವಭೌಮನ
ಮಗನ ಮುಸುಕಿದರಂಗರಕ್ಷಣೆ[4]ಗರಸನಾಜ್ಞೆಯಲಿ[4]
ಹೊಗುವಡೆಡೆಯಿಲ್ಲೆನಿಪ ಹರುಷದ
ಹೊಗರಿನಲಿ ಹೊಱೆಯೇಱಿ ನೃಪದಂ
ಡಿಗೆಯಲಿವರನು ಕೊಂಡುಬಂದನು ರಾಜಮಂದಿರಕೆ ೪೪

---

[1] ನವ (ಚ.ಜ.ಡ). [2] ರಾಮ (ಚ). [3] ಭ (ಚ.ಣ). [4] ಗಾ ಕ್ಷಣಾರ್ಧದಲಿ (ಗ.ಜ.ಝ.ಡ).

ಹರೆದುದಾಕ್ಷಣ ನೆರೆದ ಪೃಥ್ವೀ
ಶ್ವರರು ಪದ್ಮಭವಾದಿದೇವರು
ಸರಿದರಾ ಸಮಯದಲಿ ವಿಶ್ವಾಮಿತ್ರ [1]ನಡೆತಂದು[1]
ಅರಸ ಕೇಳೀತಗಳು ಭೂವಿಾ
ಶ್ವರದಶಸ್ಯಂದನನ ನಂದನ
ರರಿಕೆಯಿದು ನಿನಗೆನುತ ಸರಿದನು ಮುನಿ ನಿಜಾಶ್ರಮಕೆ ೪೫

ಅಹುದು ಮತ್ತೇನೆಮ್ಮ ವಂಶಕೆ
ಮಿಹಿರವಂಶದ ಕೊಳುಕೊಡೆಗೆ ನಿ
ರ್ವಹಿಸಿತೇ ಸಂಬಂಧ ನರಕೇಸರಿಯ ಕರುಣದಲಿ
ಬಹಳಭಾಗ್ಯರು ನಾವಲೇಯೆನು
ತಹತ ಪರಿತೋಷದಲಿ ನೃಪ ಮೇ
ಲಹ ಮಹೋತ್ಸವಕೊಡನೆ ನೆನೆದನು ಬೀಯಗರ ಬರವ ೪೬

---

[1] ನೈತಂದು (ಕ), ಮುನಿ ಬಂದು (ಝು.ಟ).

# ಹದಿನಾರನೆಯ ಸಂಧಿ

———

ಸೂಚನೆ : ರಾಯ ಜನಕನು ಜಗದರಾಯರ
ರಾಯ ರಘುನಂದನರಿಗಬುಜದ
ಳಾಯತಾಂಬಕಿಯರನು ಕೊಟ್ಟನು ಕರೆಸಿ ದಶರಥನ

ಬರೆಸಿದ[1]ವು[1] ಬಳಿಕು[2][ಪಯುಮದ][2] ವಿ
ಸ್ತರದ ಪತ್ರಿಕೆ[3]ಗಳು[3] ಸುಧಾಮನ
ವರಶತಾನಂದನ[4]ನ[4] ತೆರಳಿಸಿದನು ಮಹೀಪಾಲ
ತರುಣ ಕೇಳೈ ಕುಶನೆ ಗಜರಥ
ತುರಗ[5]ಪಾಯ[5]ದಳಸಹಿತ[5]ಯೋಧ್ಯಾ
ಪುರಿಗೆ ಪಯಣೋದ್ಯೋಗರಾದರು ಜನಕನಾಜ್ಞೆಯಲಿ ೧

ಅಱುಹಿದರು ಮಣಿಹಾಱಿರವರಿ
ಬ್ಬರ ಬರವಿನಾಸ್ಥಿತಿಯನರಸಂ
ಗರಸನಾಜ್ಞೆಯಲೆತ್ತಿದವು ಗುಡಿ ಪುರದೊಳಗಲದಲಿ
ಧರಣಿಪತಿಯೋಲಗದ ಸಮಯವ
ನಱಿದು ನಡೆತಂದಾ ಸುಧಾಮನು
ಚರಣಕಾನತನಾಗಿ ಕೊಟ್ಟನು ಬಿನ್ನವತ್ತಳೆಯ ೨

ಅರಸ ಬಳಿಕಾ ಜನಕಮಂತ್ರೀ
ಶ್ವರನನುಚಿತಪ್ರೀ[6]ತಿ[6]ವಚನದಿ
ಹಿರಿದುಮನ್ನಿಸಿ ತನ್ನ ನಿಜಸಿಂಹಾಸನಾಗ್ರದಲಿ
ಕರೆದು ಕುಳ್ಳಿರಿಸಿದನು ಮಿಕ್ಕಿನ
ವರಶತಾನಂದಾದಿಗಳನುಪ
ಚರಿಸಿ ಬಳಿಕಾ ಮಂತ್ರಿಗಿಂತೆಂದನು ಮಹೀಪಾಲ ೩

---

[1] ರು (ಕ), ನು (ಚ). [2] ಪಮಯದ (ಕ.ಗ.ಜ.ಣ), ತ್ತ್ಮದ (ಚ), ಭಯ ಮತ (ಝ.ಟ.ಡ). [3] ಗುರು (ಕ), ಗಳ (ಛ). [4] ನು (ಗ), ರ (ಚ.ಝ). [5] ಪಯುದಳಸಹಿತ (ಕ.ಟ.ಡ.ಣ), ದಳಸಹಿತವರ (ಗ.ಜ). [6] ಯ (ಗ.ಚ.ಡ.ಣ).

ಕುಶಲನೇ ಜನಕಕ್ಷಿತೀಶನು
ಕುಶಪತಾಕನು ಹದುಳಿಗನೆ ತ
ದ್ವಸುಮತೀಶನ ಬಂಧುಗಳು ಸುಕ್ಷೇಮಿಗಳೆಯೆನಲು
ಕುಶಲ[1]ರ[1]ವರ್ಗಳು ಜೀಯ ದೇವರಿ
ಗೊಸಗೆಯಾದ ವಿವಾಹಪತ್ರಿಕೆ
ಯೆಸಕವನು ಚಿತ್ತೈಸಿಯೆನಲೋದಿ[2]ದರು ಲೇಖನವ[2] ೪

ಸ್ವಸ್ತಿ ಶ್ರೀಮದ್ರಾಜರಾಜಸ
ಮಸ್ತಗುಣರಾಜಿತಸಹಸ್ರಗ
ಭಸ್ತಿವಂಶಲಲಾಮ ಸಕಲನೃಪಾಲಮಣಿಮಕುಟ
ಮಸ್ತಕಾಂಘ್ರಿಸರೋಜ ಸೂನೃತ
ವಿಸ್ತರಣ ಸಾಕೇತಪುರವಿ
ನ್ಯಸ್ತವೈಭವನೃಪಗೆ ಬಿನ್ನಹ ಜನಕಭೂಪತಿಯ ೫

ರಾಯ ಚಿತ್ತೈಸಖಿಳನೃಪರ ವಿ
ಡಾಯಿಗೆಡಿಸಿದ ಚಂದ್ರಧರಚಾ
ಪಾಯುಧವ ಗೆಲಿದೊಲಿಸಿದನು ರಘುನಾಥನವನಿಜೆಯ
ಈಯಶೇಷಮಹೋತ್ಸವದ ಸು
ಶ್ರೇಯ[3]ವನು[3] ಕೈಕೊಂಡು ಬಂಧುನಿ
ಕಾಯಸಹಿತೈತಹುದೆನುತ ವಾಚಿಸಿ[4]ದುದಾ[4] ಲಿಖಿತ ೬

ಏನಿದೆತ್ತಣ ಸುದ್ದಿ ಪರಮ ತ
ಪೋನಿಧಿಯ ಮಖಪಾಲನೆಗೆ ಮ
ತ್ಸೂನುಗಳು ಗಮಿಸಿದರು ಮೇಲಿದು ಚೋದ್ಯಗಲೇಯೆನುತ
ಮಾನನಿಧಿ ಮನದನುಗತದ ಸು
ಮ್ಮಾನದಲಿ ಕೇಳಿದನು ಗೌತಮ
ಸೂನುವನು [5]ಹೊಗ[5]ಳಿದನು ಮುನಿ ಮೇಲಣ ಕಥಾಂತರವ ೭

ಮುನಿಪ ವಿಶ್ವಾಮಿತ್ರಮಖಪಾ
ಲನೆಯ ಗೌತಮಮುನಿವರನ ಮಾ
ನಿನಿಯ ಶಾಪವಿಮೋಚನವನರ್ಧೇಂದುಶೇಖರನ

---

[1] ವ (ಚ.ಝ.ಟ). [2] ದವು ಲಿಖಿತಾರ್ಥ (ಕ.ಣ), ದರು ಲಿಖಿತವನು (ಜ.ಝ), ಸಿದವಾ ಲಿಖಿತ (ಡ). [3] ಸವ (ಕ.ಗ.ಝ.ಟ.ಣ). [4] ದವಾ (ಗ.ಟ.ಡ.ಣ). [5] ಹೇ (ಜ.ಟ.ಡ

ಧನುಪರಿಚ್ಛೇದವ ಧರಾನಂ
ದನೆಯು ಪಾಣಿಗ್ರಹಣದುಜ್ಜುಗ
ದನಿತ ಪೇಳ್ದಿಚ್ಚಯಿಸಿದನು ಮೇಲಣ ಮಹೋತ್ಸವವ ೮

ಹರುಷಲತೆ ಲಂಬಿಸಲಿಕವರನು
ಪಿರಿದು ಮನ್ನಿಸಿ ಬೀಡಿಕೆಯ ಮಂ
ದಿರಗಳಿಗೆ ಬೀಳ್ಕೊಟ್ಟನುಚಿತೋಕ್ತಿಯಲಿ ಮಱುದಿವಸ
ಪರುಟವಿಸಿದ[1]ರು[1] ಪಯಣವನು ತ
ತ್ಪುರದ ಹೊಱವಳಯದಲಿ ಗುಡಿಯು
ಪ್ಪರಿಸಿದವು ಮಾಂಗಲ್ಯತೂರ್ಯತ್ರಯದ ರಭಸದಲಿ ೯

ತೆಗೆಸಿದನು ಭಂಡಾರದಲಿ ಝಗ
ಝಗಿಪ ರತ್ನಾಭರಣವಸನಾ
ದಿಗಳನಖಿಳಸುಗಂಧಕನ್ಯಾಭೂಷಣಾ[2]ವಳಿಯ[2]
ಅಗಣಿತದ ಪೆಟ್ಟಿಗೆಯ ಹೊರೆಯಾ
ಳುಗಳ ಸಂದಣಿ ನೂಕಿದುದು ಸರ
ಕುಗಳಸದಳದ ಭಂಡಿಗಳು ಭಾರಿಸಿದವಿಳೆ ಝಡಿಯೆ ೧೦

ಗಳಿತಹಾಳಿತ[3]ಧಾ[3]ಳಿತದ ನಿ
ರ್ದಳಿತ ನಾನಾಧಾನ್ಯಗುಡತಂ
ಡುಲಘೃತಾದಿ ಸಮಸ್ತ ಸಂಭಾರಗಳ ಹೇಱುಗಳ
ಹಲವುಕೊಟ್ಟಿಗೆ ದಿಟ್ಟಿ ನೆಲಕೊಂ
ಬಳತೆಯಲಿ [4]ನೆಲೆಗೊಂಡವಂದಂ[4]
ದಳದ ಸಾಲಿಟ್ಟಣಿಸಿತಂತಃಪುರಪುರಂಧ್ರಿಯರ ೧೧

ಇರಿಸಿ ದೃಷ್ಟಿಜಯಂತರನು ಪುರ
ಕರಸ ರಥವೇಱಿದನು ನೃತ್ಯದ
ತರುಣಿಯರ ಹರಿವಾಣದಾರತಿಗಳ ವಿಲಾಸದಲಿ
ಗುರು ವಸಿಷ್ಠ ಸುಮಂತ್ರ ಭರತಾ
ದ್ಯರು ಸುಹೃಜ್ಜನ ಪೌರಜನದು
ಬ್ಬರದ ಸೌರಂಭದಲಯೋಧ್ಯಾಪುರವ ಹೊಱವಂಟ ೧೨

[1] ನು (ಕ.ಜ.ಝ.ಡ). [2] ದಿಗಳ (ಝ.ಟ.ಡ). [3] ಡೂ (ಜ.ಝ.ಟ.ಡ).
[4] ಕಡೆಗೊಂಡವ್ವೆಯಂ (ಕ), ನಡೆಗೊಂಡವ್ವೆಯಂ (ಗ.ಝ), ನೆಲೆಗೊಂಡುದ್ವೆಯಂ (ಟ.ಡ).

ಮಣಿಮಯದ ದಡ್ಡಿಗಳು ಹೊನ್ನಂ
ದಣವ ಮುಸುಕಿದವರಸಿಯರ ಭಾ
ರಣಿಯು ಕಂಬಿಯು ಕಂಚುಕಿಗಳುಗ್ಘಡಣೆ ಘಾಡಿಸಲು
ಕುಣಿವ ಕುದುರೆಯು ಹಣ್ಣಿದುರುವಾ
ರಣ ವರೂಥ ಪದಾತಿಯಲಿ [1]ನಿ[1]
ಬ್ಬಣವ ಹೊಱವಂಟನು ಮಹೀಪತಿ ಸಕಲವಿಭವದಲಿ ೧೩

ಸೀತೆಯಣುಗರು ಕೇಳಿರ್ದೈದಿಗು
ಜಾತ ಜರಿಯಲು ಝಡಿವ ವಾದ್ಯ
ವ್ರಾತದಲಿ ನಿಮ್ಮರಸ ಪಯಣದಮೇಲೆ ಪಯಣದಲಿ
ಚಾತುರಂಗದ ಚಟುಳಚರಣೋ
ದ್ಧೂತರಜವುಪ್ಪರಿಸಲಾ ಝಷ
ಕೇತನನ ಚೈತ್ರನ ವಸಂತಕ್ರೀಡೆಯೆನೆ [2]ನಡೆದ[2] ೧೪

ದಿವಸಹದಿನೈದಕ್ಕೆ ಸಾರಿದ
ರಿವರು ಜನಕನ ಪಟ್ಟಣವನು
ತ್ಸವ ಮಿಗಲು [3]ಬಳಿಕಾ ವಿದೇಹನೃಪಾಲ[3] ದಶರಥನ
ಯುವತಿಯರ ನರ್ತನದ ಕಹಳಾ
ರವದ ಕನ್ನಡಿ ಕಲಶದಭಿನವ
[4]ದವಿರಳೋ[4]ತ್ಸವದಿಂದಿದಿರ್ಗೊಂಡೊಯ್ದನೊಲವಿನಲಿ ೧೫

ಮಾಡಿದ[5]ರ[5]ಮನೆ [6]ಜನ್ನಿ[6]ವಾಸದ
ಬೀಡಿಕೆಗಳಾದವು ಬಳಿಕ್ಕೆಡೆ
ಯಾಡಿದರು ಪರಿಚಾರಕರು ಸಚಿವರು ಪುರೋಹಿತರು
ಮೋಡಗಂಡಂಬುಧಿಯು ಹರುಷದ
ಘಾಡಣೆಯಲಿ ಸುಧಾಮ ಸಹಭವ
ಗೂಡಿ ಬಂದನು ಜನಕ ದಶರಥರಾಯನರಮನೆಗೆ ೧೬

ತವಕದಿಂದಿದಿರೆದ್ದು ಜನಕನ
ನವನಿಪತಿ ತಕ್ಕೈಸಿ ಮಹದು
ತ್ಸವದಿನಾತನ [7]ನಿಲಿಸಿ[7]ದನು ಸಿಂಹಾಸನಾರ್ಧದಲಿ

---

[1] ದಿ (ಕ.ಣ). [2] ನಥವ (ಗ.ಜ.ಝ.ಟ.ಡ). [3] ಬಳಿಕ ವಿದೇಹನು ನೃಪತಿ (ಕ), ವೈದೇಹನಾಗಾ ನೃಪತಿ (ಗ), ಬಳಿಕಾ ವಿದೇಹಜನೊಲದು (ಚ), ಬಳಿಕಾ ವಿದೇಹಜ ಬಂದು (ಜ). [4] ವಿವರಣೋ (ಝ.ಟ.ಡ). [5] ವು (ಕ.ಜ.ಣ), ರು (ಚ). [6] ಜನ ನಿ (ಕ.ಡ), ನಿಜ ನಿ (ಝ). [7] ನಿರಿಸಿ (ಗ.ಚ).

ರವಿಕು[1]ಲಜಗಾ[1] ನೃಪತಿ ಕೈಮುಗಿ
ದೆವಗೆ ಬೀಯಗರಾದಿರೀ ಭಾ
ಗ್ಯವನು ಕಾಣಿಸಿದುದು ಪುರಾಕೃತಪುಣ್ಯಫಲವೆಂದ ೧೭

ಎನುತ ಧಿಮ್ಮನೆ ನಿಂದು ದಶರಥ
ಜನಪನಪಸವ್ಯದಲಿ ಸಿಂಹಾ
ಸನ[2]ದೊಳವತರಿ[2]ಸಿರ್ದ ಮನುಕುಲಗುರುವಸಿಷ್ಠಂಗೆ
ತನುಪುಳಕದುಬ್ಬಿನಲಿ ನಿಮಿಕುಲ
ಜನಪನಾನತನಾಗಿ ಮಿಕ್ಕಿನ
ಮುನಿಜನಕೆ ಕೈಮುಗಿದು ಕುಳ್ಳಿದನಧಿಕಹರುಷದಲಿ ೧೮

ರಾಜರುಷಿಗಳೊಳುತ್ತಮನು ನಿಮಿ
ರಾಜವಂಶದೊಳಧಿಕನಗ್ಗದ
ರಾಜವರ್ಗದೊಳಗ್ಗಳನು [3]ನೀನೆನುತ[3] ಕೊಂಡಾಡಿ
ಆ ಜಗದ್ವಂದಿತ ತಪೋಧನ
ರಾಜನೊಯ್ಯನೆ ನಗುತ ವಂಶವಿ
ರಾಜಿತನೊಳೀ ಮಾತ ನುಡಿದನು ಕುಲಪರಿಶ್ರುತವ ೧೯

ಮುನಿಯ ಮಾತಿಂಗಾ ಜನಕನಾ
ನನವನೀಕ್ಷಿಸಿದನು ಶತಾನಂ
ದನನನಾ ಮುನಿ ಬಳಿಕ ನಿಮಿರಾಜೇಂದ್ರಸಂತತಿಯ
ಜನಪರುದಯವನಱುಹಿ ಮಿಥುಳಾ
ವನಿಪನಭ್ಯುದಯವನು ವಿರಚಿಸಿ
ದನು ವಿಶುದ್ಧಚರಿತ್ರವನು ಬಳಿಕಾ ಮಹೀಪತಿಯ ೨೦

ವರವಿದೇಹನೃಪಾಲನಾ [4]ನಿಮಿ[4]
ಧರಣಿಪಂಗುದುಭವಿಸಿದುದ ವಿ
ಸ್ತರಿಸಿದನು ಬಳಿಕಾ ವಿದೇಹ[5]ಪರಂಪರೆಯ ನೃಪರ[5]
ಚರಿತವನು ಕೊಂಡಾಡಿ ಜನಕನ
ನಿರತಿಶಯವಂಶಪ್ರಸಿದ್ಧ
ಸ್ಫುರಿತಧಾರ್ಮಿಕತನವನೊರೆದನು ಮುನಿ ವಸಿಷ್ಠಂಗೆ ೨೧

---

[1] ರಾಂಗದ (ಕ.ಐ). ಲಂಗಾ (ಜ.ಝ.ಟ.ಡ). [2] ವನಧಿಕರಿ (ಕ.ಝ), ದೊಳಳವಡಿ (ಜ). [3] ನೀನೆಂದು (ಕ.ಝ.ಟ.ಡ.ಣ). [4] ಮಿತಿ (ಕ.ಗ.ಣ). [5] ನೃಪಾಲ ಸಂತತಿಯ (ಕ.ಣ).

ಅಹುದು ಮತ್ತೇನುತ್ತಮೋತ್ತಮ
ರಹಿರಲೇ ವಂಶದಲಿ ನಾವೀ
ಮಿಹಿರವಂಶದ ರಾಯರನು ನಿಮಗಱುಹಬೇಹುದಲೆ
ದ್ರುಹಿಣನಿಂ ಕಶ್ಯಪನು ಕಶ್ಯಪ
ಗಹಿಮಕರ[1]ನಹಿಮಕರನಿಂದೀ[1]
ಮಹಿಗೆ ಮನುವರಸಾದ[2]ನಾತನಿನಾಯ್ತು[2] ಮನುವಂಶ ೨೨

ಆತನಿಂದಿಕ್ಷ್ವಾಕು ವಂಶ
ಖ್ಯಾತನಾದನು ಜನಿಸಿದನು ಬಳಿ
ಕಾತನನ್ವಯದಲಿ ದಿಳೀಪನುದಾರಕುಲಯುತನು
ಆತನಿಂದೀಚೆಯಲಿ ರಘು ಮಾಂ
ಧಾತ ಸಗರ ಭಗೀರಥಾದಿ ಮ
ಹೀತಳಾಧಿಪರೊಲಿದು ಪಾಲಿಸಿದರು ನಿಜಾನ್ವಯವ ೨೩

ಅಜನು ಬಳಿಕಾ ಸಂತತಿಯ ಭೂ
ಭುಜರ ಮಿಕ್ಕನು ನಡವಳಿಯಲಾ
ತ್ಮಜನು ಜನಿಸಿದನೀ ದಶಸ್ಯಂದನಮಹೀಪಾಲ
ತ್ರಿಜಗಕತಿಶಯರಿವರು ಸದ್ವಂ
ಶಜರು ಬಳಿಕೀ ರಾಮರಾಮಾ
ನುಜರು ಮಕ್ಕಳು ನಾಲ್ವರೀತಂಗೆಂದನಾ ಮುನಿಪ ೨೪

ಕುಲದಲತ್ಯುತ್ತಮರು ರಾಜಾ
ವಳಿಯಲಧಿಕರು ನಿಯತಧರ್ಮದ
ಬಳಕೆಯಲಿ ಬಲ್ಲಿದರು ಬಲ್ಲವರಖಿಳಕಲೆಗಳಲಿ
ಕೊಳುಕೊಡೆಗೆ ಸಂದೇಹವೇ[3]ನೆನೆ[3]
ಬಳಕೆಯವರೇ ನೀವೆನುತ ಮುನಿ
ತಿಲಕನುಭಯನೃಪಾಲಕರ ಕೊಂಡಾಡುತಿಂತೆಂದ ೨೫

ಸಲಹಿದನು ಜನಕಕ್ಷಿತೀಶನು
ನೆಲದೊಳುದಿಸಿದ ಮಗಳನೆಂದೇ
ಹಲಬರಾಡುವರದಱ[4]ನಿಂ ನಿಜ[4]ತನಯುಳಲ್ಲೆಂದು

[1] ನವನಿಂದಮತ್ತೀ (ಕ), ನಾಮಿಹಿರನಿಂದೀ (ಝ.ಟ.ಡ). [2] ನವನಿಂದಾಯ್ತು (ಕ.ಣ), ನಾತನಿಂದಾಯ್ತು (ಗ.ಝ.ಟ). [3] ತಕೆ (ಝ.ಡ), ವ್ಯೆ (ಟ). [4] ನೌರಸ (ಕ.ಗ.ಟ.ಣ).

ಉಲುಕು[1]ವುದು[1] ಚಿತ್ತದಲಿ ಜನನದ
ನೆಲೆಯನಱುಹಿದಡೊಪ್ಪುಗೊಂಬುದ
ಕಲಸಿಕೆಯದೇ[2]ನಿದ್ದುದೆಂದನು ಮುನಿ ವಿದೇಹಂಗೆ[2] ೨೬

ಮುನಿಪ ಚಿತ್ತೈಸಹುದು ನೀವೆಂ
ದಿನಿತು ಪೂರ್ವದ ರಾಜಸೂಯದ
ವಿನುತ ಮಖಭೂಮಿಯನು ಶೋಧಿಸಲಲ್ಲಿ ಲಾಂಗಲದ
ಮೊನೆಗೆ ಸಿಲುಕಿದ ಭೂಗತಾಲಯ
ವನರುಹಾಕರವಿರಲು ಕಂಡೆನು
ಕನಕ ಕಮಲದ ಕರ್ಣಿಕಾಮಧ್ಯದಲಿ ಕೋಮಲೆಯ ೨೭

ಈ ಕುತೂಹಲಿಕೆಯನು ಕಂಡು ಮ
ಹಾಕುಲದಿ ನಾವಂಜಿ ಮನದಲಿ
ಸಾಕು ನಮಗೀ ಸ್ಥಳವೆನುತ ತದ್ಭೂಮಿಗರ್ಭಿತದ
ಶ್ರೀಕರಾಲಯವಿದು ನಿಸರ್ಗ ಪು
ರಾಕೃತಿಯಲಿರಲೆಂಬ ಸಮಯಕೆ
ನಾಕಮುನಿ ನಡೆತಂದು ಬಳಿಕಿಂತೆಂ[3]ದು ನೇಮಿಸಿದ[3] ೨೮

ಭೀತಿಬೇಡೆಲೆ ಜನಕ ಜೀವನ
ಜಾತಮಂದಿರೆಯಿಾಕೆಯಿಾಕೆಯ
ನೋತು ಸಲಹೆಂದಿತ್ತನಾ ಮುನಿನಾಥನೊಲವಿನಲಿ
ಸೀತೆಯೆಂದೇ ನಾಮಕರಣವ
[4]ನಾತ[4] ಮಾಡಿಸಿ ಬಳಿಕ ಘನಸಂ
ಪ್ರೀತಿವಚನದಲೊರೆದನಧಿಗತಕಾರ್ಯವಿಸ್ತರವ ೨೯

ಮನುಜರೂಪಿಂದಿಳೆಯೊಳೀ ಗೋ
ಮಿನಿಯಪತಿ ವಸುಮತಿಯ ಭಾರವ
ನೊನೆಯಲುದಿಸಿದನಾ ಮಹಾತ್ಮಂಗೀಕೆ ಸೇರುವಡೆ
ಧನುವನೊಡ್ಡಿ ಪಿನಾಕಪಾಣಿಯ
ಜನಪರನು ಬರಿಸಾ ಕಳಂಬಾ
ಸನವ ಗೆಲಿದಂಗೀವುದಾತನೆ ವಿಷ್ಣುವೀಗೆಂದ ೩೦

---

[1] ತಿದೆ (ಕ.ಣ). [2] ನಿದ್ದುದೆಂದನು ಮುನಿನೃಪಾಲಂಗೆ (ಕ.ಣ), ಕೆಂದು ಮುನಿ ನುಡಿದನು ವಿದೇಹಂಗೆ (ಝ.ಡ). [3] ದ ನಮಗೆಂದ (ಕ.ಟ), ದನೀಹದನ (ಜ), ದ ನಮಗೆಂದು (ಝ.ಡ). [4] ನೋತು (ಕ.ಗ.ಣ).

ತೆಱನಿದೀಗಿದು ನಿಮಗಿದುವೆ ಮನ
ಕುಱುಸದಿರೆ ನಿಮ್ಮಡಿಗೆ ನಾವ್ ಕಂ
ದೆಱವ ಮಾಡುವೆವೆನುತ ನೆನೆದನು ನೃಪತಿ ನಾರದನ
ತುಱುಗಿ ತೂಳುವ ಶುಭ್ರಕಾಂತಿಯು
ನಿಱುಸಿನಲಿ ನಡೆತಂದು ನಿಂದಿರ
ಲೆಱಗಿದರು ಬಳಿಕುಭಯರಾಯರು ನಾರದನ ಪದಕೆ ೩೧

ಜನಪರಿಬ್ಬರ ಹರಸಿ ವಿವಿಧಾ
ರ್ಚನೆಯ ಕೈಕೊಂಡುಭಯರಾಯರ
ಮನದಣಿಯೆ ಕೊಂಡಾಡಿ ವಂಶದ್ವಯವಿಶುದ್ಧತೆಯ
ವಿನುತಚರಿತಕೆ ಮೆಚ್ಚಿ ಸೀತಾ
ವನಿತೆ ರಾಘವರಿವರು ಲಕ್ಷ್ಮೀ
ವನರುಹಾಂಬಕರವತರಣವೆಂದಱುಹಿದನು ಮುನಿಪ ೩೨

ತಿಳುಹಿ ನೃಪರಿತ್ತಂಡವನು ಕೈ
ಕೊಳಿಸಿದನು ಕೊಳುಕೊಡೆಗೆ ನಿಮ್ಮವೊ
ಲಿಳೆಯೊಳಾರ್ರೈ ಭಾಗ್ಯವುಳ್ಳವರೆನುತ ಕೊಂಡಾಡಿ
ತಳರ್ದನಮರಮುನೀಂದ್ರನಂಬುಜ
ದಳಸುನೇತ್ರನ ನಾಮಕೀರ್ತನೆ
ಗಳ ಸುವೀಣಾನಾದದಲಿ ನಳಿನಜನ ಪುರಿಗಾಗಿ ೩೩

ಸುರಮುನಿಯ ನುಡಿವಿಡಿದು ಲಗ್ನವ
ಪರುಟವಿಸಿದರು ಬಳಿ[1]ಕ[1]ವರು ರಘು
ವರಗೆ ಸೀತಾದೇವಿಯನು ಸೌಮಿತ್ರಿಗೂರ್ಮಿಳೆಯ
ಭರತ ಶತ್ರುಘ್ನರಿಗೆ ಜನಕಾ
ವರಜವೀರಕುಶಧ್ವಜಾತ್ಮಜೆ
ಯರನು ನಿರ್ಧರಿಸಿದರು ಮುನಿಪ ವಸಿಷ್ಠನಾಜ್ಞೆಯಲಿ ೩೪

ಬೀಳುಕೊಂಡನು ಜನಕನುರುನಿ
ಸ್ಸಾಳದಬ್ಬರ ಗಬ್ಬರಿಸೆ ಭೂ
ಪಾಲ[2]ರ[2]ರಮನೆಗಳಲಿ ನಡೆದವು ಪೂರ್ವವೇದಿಗಳು
ಮೇಲೆ ನಾಂದೀಮುಖದ ಸಂಭ್ರಮ
ವೇಳಿಸಿತು ಶೈಲಜೆಯ [3]ಸಿರಿಯ[3] ವಿ
ಶಾಲವಿಭವೋದ್ವಾಹಗೇಹದ ಸಕಲಸಂಭ್ರಮವ ೩೫

---

[1] ಕಿ (ಚ.ಜ.ಟ). [2] ಕ (ಗ.ಚ.ಟ). [3] ಶಿವನ (ಕ).

ಕುಶನೆ ಕೇಳ್ ಕಲ್ಯಾಣ ವಿಭವದಿ
ನೆಸೆದುದಾ ಮಣಿಮಯವಿವಾಹದ
ವಸತಿ ಮುತ್ತಿನ ಚೌಕದಲಿ ವಿಮಲಾಂಕುರಾರ್ಪಣದ
ಹಸರಿಕೆ[1]ಯಲುಜ್ವಲ ವಿ[1]ನೂತನ
ವಸನದರ್ಪಣದೀಪದಲಿ [2]ಪೂ
ಜಿ[2]ಸಿದ ಕಾಂಚನದ್ವೈರಣಿಯಲಿ ಶುಭೋಪಕರಣದಲಿ ೩೬

ಕನಕ[3]ಪ[3]ತ್ರಾವಳಿಯ ವರಚಂ
ದನದ ಕುಸುಮಾಕ್ಷತೆಯ ಗೋರೋ
ಜನದ ಲಾಜೆಯ ದಧಿಯ ದೂರ್ವೆ ಸುವರ್ಣ ಬಾಸಿಗದ
ವಿನುತಭದ್ರದುಕೂಲ ಮಣಿಕಾಂ
ಚನವಿಭೂಷಣ ಭಕ್ಷ ಫಲದು
ಬ್ಬಿನಲಿ ದಶಧಾನ್ಯಾದಿ ವಿಭವದಿನೆಸೆದುದಾ ಭವನ ೩೭

ನೆರೆದುದಾ ಮಂಟಪದ ಬಹಿರಾ
ವರಣದಲಿ ವಿಪ್ರರು ವಿಶುದ್ಧೋ
ತ್ಕರರು ಸಾಹಿತ್ಯರು ಕಲಾವಿದರಖಿಲಕೋವಿದರು
ಸರಸಕವಿವಾಗ್ಮಿಗಳು ಮಂತ್ರ
ಜ್ಞರು ಮಹಾಪಂಡಿತರು ನಾನಾ
ದರುಶನಾಚಾರಿಯರು ಮುಖ್ಯ ಸಮಸ್ತ ಜನನಿಕರ ೩೮

ತಾಳಗತಿಯ ಮೃದಂಗರವದ ರ
ಸಾಳಗೀತದ [4]ಗಾ[4]ಯಕರ ವೈ
ತಾಳಿಕರ ವಂದಿಗಳ ವೀಣಾಜನದ ನರ್ತನದ
ಬಾಲೆಯರ ಬಹುವಿಧದ ಮೋಹನ
ಜಾಲದುಬ್ಬಿನ ಕಾವ್ಯಗೀತದ
ಸಾಲ[5]ಸತ್ಸೌ[5]ರಂಭ ರಂಜಿಸಿತಾ ಮಹಾಸ್ಥಳವ ೩೯

ತರುಣಿಯರ ಶುಭಗೀತ ಧರಣೀ
ಸುರರ ಸೂಕ್ತ ಸುಮಂತ್ರಸಾಂವ
ತ್ಸರಿಕರಾಯುತ ರವವೆಸೆದುದುದ್ವಾಹಗೇಹದಲಿ
ತರುಣ ಕೇಳೀಚೆಯಲಿ ರಘುಪತಿ
ಭರತಲಕ್ಷ್ಮಣದೇವಶತ್ರು
ಘ್ನರುಗಳಿಭಕಂಧರದೊಳೊಪ್ಪಿದರರಸನಾಜ್ಞೆಯಲಿ ೪೦

[1] ಗಳುಜ್ವಲದ (ಚ), ಯಲುಜ್ವಲಪ (ಜ), ಗಳುಗ್ಗಡದಿ (ಟ). [2] ಸಂಧಿ (ಕ.ಣ). [3] ಪಾ (ಕ.ಗ.ಟ.ಡ.ಣ). [4] ನಾ (ಚ.ಜ). [5] ತರ ಸೌ (ಕ.ಣ).

ಹಿಡಿದ ಮುತ್ತಿನ ಸೂಸಕದ ಬೆಳು
ಗೊಡೆಯ ಚಿಮ್ಮುವ ಚಾಮರದ ತರ
ವಿಡಿದ ಸೀಗುರಿಗಳ ವಿಡಾಯಿಯು ನೊಸಲ ಬಾಸಿಗದ
[1]ಜಡಿವ[1] ಕೈದೀವಿಗೆಯ ಸಾಲಿನ
ತುಡುಕುವೆಳಗಿನ ವಂದಿಜನದು
ಗ್ಗಡದ ರಾಜಕುಮಾರಕರು ನಡೆತಂದರೊಲವಿನಲಿ ೪೧

ಸಂದಣಿಸಿದವು ಕರಿತುರಗ ಬಳಿ
ಸಂದು ನೂಕಿದ[2]ರ[2]ಖಿಳನಾರಿಯ
ರಂದಣಗಳಿಟ್ಟಣಿಸಿದವು ದಶರಥನ ಬಂಧುಜನ
ಮುಂದೆ ಕಂಬಿಯ ಕಂಚುಕಿಯರುಲು
ಹಿಂದ ವಿಪ್ರರ ಮಂತ್ರಘೋಷಣ
ದಿಂದ ಬಂದರು ರಾಜಪುತ್ರರು ರಾಜಬೀದಿಯಲಿ ೪೨

ಅಣುಗ ಕೇಳ್ಕೈ ನಭದ ತಾರಾ
ಗಣ ತದೀಯ ಮಹೋತ್ಸವದ ನಿ
ಬ್ಬಣಕೆ ನೆರೆದವೊ ಪುರದೊಳೆನೆ ಬೆಳಗಿದವು ದೀಪಾಳಿ
ಮಣಿಮುಕುರದಬಲೆಯ[3]ರ[3] ನೃತ್ಯದ
ಗಣಿಕೆಯ[3]ರ[3] ಮಾಂಗಲ್ಯವಾದ್ಯದ
ಕುಣಿಹದಲಿ ನೆಲ ಕುಸಿಯೆ ಹೊಕ್ಕರು ಜನಕನರಮನೆಯ ೪೩

ಇಳಿದರಾನೆಯನಬಲೆಯರ ಹೊಂ
ದಳಿಗೆಗಳ ಪಸ್ರುಗೂಳ ದೀಪಾ
ವಳಿಯ ಸಾಲಿನ ಸೇಸೆಗಳ [4]ಸೂಸುಗಳ ಸೊಗಸಿನಲಿ[4]
ಒಳಗಬಲ್ಲವರೂರ್ಧ್ವಮುಖದಂ
ಜುಳಿಗಳಲಿ ಜಯಯೆನಲು ಹೊಕ್ಕರು
ನಿಳಯವನು ನಿರ್ಜರರ ದುಂದುಭಿ[5]ರವದ[5] ರಭಸದಲಿ ೪೪

ಏನನೆಂಬೆನು ಜನಕ[6]ನೃಪನ ನ
ವೀ[6]ನಭಾಗ್ಯವನವಮು ಜಗದಭಿ
ಮಾನದೈವದ ಲಲಿತಪದಕಮಲಾಭಿಷೇಚನವ

---

[1] ಹಿಡಿದ (ಕ.ಗ.ಣ). [2] ವ (ಕ.ಜ.ಟ.ಣ). [3] ರು (ಚ.ಣ). [4] ಹರಕೆಗಳ ಕೈಕೊಳುತ (ಗ.ಚ), ಸೊಗಸಿನಲಿ ರಂಜಿಸುತ (ಜ). [5] ವಾದ್ಯ (ಚ), ಮೊಳೆಯೆ (ಟ), ಮೊರೆಯೆ (ಡ). [6] ರಾಯನನೂ (ಕ.ಣ), ಧೂಪನನೂ (ಜ).

ಶ್ರೀನಿವಾಸನ್ನ ರಾಣಿಯನು ವಿ
ಜ್ಞಾನಮುಖದಲಿ ಮಾಡಿ ತಾಳ್ದನ
ನೂನ ತೀರ್ಥವ ಶಿರದೊಳೀಮುಕೃತಾರ್ಥನೋ[1]ಯೆಂದ' ೪೫

ಬಳಿಕ ಮಧುಪರ್ಕಾದಿವೈದಿಕ
ವಿಲಸದಭಿರಂಜನೆಯೊಳಾ ಕಳ
ಕಳವ ಮಾಣಿಸುತಿತ್ತರುತ್ತಮ ಗುಡವ ಜೀರಿಗೆಯ
ನಿಲಿ[2]ಸಿ ಮು[2]ಟ್ಟಿಕ್ಕಿಯಲಿ ಮು[3]ದವ
ಕ್ಕ[3]ಳಿಗೆ ಕನ್ಯಾವರಣವಾದವು
ಘಳಿಗೆವಟ್ಟಲ ಲಗ್ನದೊಂಪುಣ್ಯಾಹರಚನೆಯಲಿ ೪೬

ಇಳೆಯಮಗಳನು ರಾಘವಂಗೂ
ರ್ಮಿಳೆಯನಾ ಸೌಮಿತ್ರಿಗುಳಿದರಿ
ಗುಳಿದನುಜತನುಜೆಯರ ಧಾರೆಯನೆರೆದನಾ ಜನಕ
ಸುಳಿದರಾ ದಂಪತಿಗಳುರುಮಂ
ಜುಳದ ಮಣಿವೇದಿಕೆಗೆ ಹೋಮಾ
ನಲನ ಬಲವಂಡೆಡಕೆ ಸಾರಿದರವರ ಪತ್ನಿಯರು ೪೭

ಆದುದವರ ವಿವಾಹ ವೈಭವ
ವೈದಿಕದಲವನೀಸುರರು ಮೊದ
ಲಾದ ಯಾಚಕವೃಂದ ದಣಿದುದು ಬಹಳದಾನದಲಿ
ಆ ದಶಸ್ಯಂದನನ ಜನಕನ
ಮೇದಿನಿಯು ಸೇರುವೆಯ ರಾಯರ
ನಾದರಿಸಿದರು ತಮ್ಮೊಳುಡುಗೊಱೆಯುಚಿತವೃತ್ತಿಯಲಿ ೪೮

ವರಶುಭೋದಯದಿಕ್ಕೆ ಸಂಪ
ತ್ಕರದ ನೆಲೆವನೆ ಸಿರಿಯ ಸೊಂಪಿನ
ಶರಧಿ ಸೊಬಗಿನ ಸೆಜ್ಜೆ ಸುಮ್ಮಾನದ ಜನಸ್ಥಾನ
ನಿರುಪಮೋತ್ಸವಶಾಲೆ ಹರುಷೋ
ತ್ಕರದ ಜನ್ಮಸ್ಥಳವಿದೆನಲಾ
ಕರುಷಿಸಿತು ಜನಮನವನನುಪಮಪರಿಣಯಸ್ಥಾನ ೪೯

---

[1] ಜನಕ (ಜ.ಝ.ಟ.ಡ.ಣ). [2] ಸಿದರು ಮು (ಕ.ಐ). [3] ದವ (ಕ.ಣ).

ಪರಮಸಂಭ್ರಮದಿಂದ ವರವಾ
ಸರಚತುಷ್ಟಯದಿರುಳು ದಂಪತಿ
ವರರು ಮೆಱೆದರು [1]ವಿಭ್ರ[1]ಮದ ಸಿಂಧುರದ ಕಂಧರದ
ಸುರುಚಿರದ ರತ್ನಪ್ರಭಾಪಂ
ಜರದ ಗದ್ದುಗೆಗಳಲಿ ನೃಪರಿ
ಬ್ಬರ ಮಹಾವಿತರಣದ ವೈಭವದಖಿಳರಚನೆಯಲಿ ೫೦

ಮಱುದಿವಸ ಮರುವಲಿಯ ಸಮನಂ
ತರದಲವಭೃತದೋಕುಳಿಯ ವಿ
ಸ್ತರಣವೆಸೆದುದು ವಿಲಸಿತೋತ್ಸವ ವಿವಿಧ[2]ವಿಭವದಲಿ[2]
ಪರಿ[3]ಮಳಿತ[3] ಪನ್ನೀರ ನವಕ
ರ್ಪುರದ ಕಸ್ತುರಿ ಕುಂಕುಮದ ಕೊ
ಪ್ಪರಿಗೆಗಳ ಸಾಲೆಸೆದುದನುಪಮಹೇಮಮಣಿಮಯದ ೫೧

ನನೆಯ ಕಂಚು[4]ಳಿಕೆಗಳ[4] ಹೂದುಱು
ಬಿನ ಹಿಣಿ[5]ಲ್ಗಳ ದಂಡೆಗಳ ಮು
ಮ್ಮೊ[5]ನೆಯ ಮುಂಜೆಱಗುಗಳ ಚಂದ್ರಿಕೆಪಟದ ಚಲ್ಲಣದ
ಕನಕರತ್ನಾಭರಣಕಾಂತಿಯು
ವನಿತೆಯರು ಬಳಸಿದರು ಬವರದ
ಮನಸಿಜನ ಮಾಸಾಳಿನಂದದಲುಭಯ ಭೂಮಿಪರ ೫೨

ಕೊಂಡು ಕುಂಕುಮವಾರಿಗಳ ಹೊ
ನ್ನಂಡೆಜಲ[6]ಜಂ[6]ತ್ರಂಗಳಲಿ ಮುಂ
ಕೊಂಡು ನೃಪರಿಬ್ಬರ ವಧೂನಿಕುರುಂಬವಾ ನೃಪರ
ಮಂಡಳಿಯ ತನ್ನೃಪಕುಮಾರರ
ತಂಡ ಸೌರಂಭದಲಿ ಸುರರೆಳೆ
ವೆಂಡಿರುತ್ಸಾಹಿಸಲು ಹೊಯ್ದಾಡಿದರುವೋಕುಳಿಯ ೫೩

ಹೊರದುದಿಳೆ [7]ಸೌರಭ್ಯ[7]ಶೈತ್ಯೋ
ತ್ಕರವನಂಬರವಳಯ[8]ದ[8]ಗಲಕೆ
ಪರಿಮಳಿಸಿದುದು ಗಂಧವಾಹನನಾಡಿಕೆಯಲಬುಧಿ

---

[1] ಶುಭದ (ಕ), ಭದ್ರ (ಝ.ಟ.ಡ.ಣ). [2] ರಚನೆಯಲಿ (ಕ.ಟ.ಣ). [3] ಪರಿಯ (ಕ), ಮಳದ (ಜ). [4] ಕಿಗಳಲಿ (ಕ.ಣ). [5] ಲ ದಂಡೆಗಳಲೆಸೆದರು ಮೊ (ಕ.ಣ). [6] ಸೂ (ಗ.ಚ). [7] ಸೌರಂಭ (ಝ.ಟ.ಡ). [8] ವ (ಚ.ಟ).

ಸುರಭಿಮಯುವಾಯ್ತು ಬುಜಸಖ ಹಿಮ
ಕಿರಣವಾಮೋದೈಕಥಾರೋ
ತ್ಕರಮರೀಚಿಗಳಾದವನುಪಮವಾರಿಕೇಳಿಯಲಿ ೫೪

ಆದುದಲ್ಲಿಂ ಮೇಲೆ ಮಾಮನೆ
ಮೇದಿನೀಪತಿ ಜನಕರಾಯಂ
ಗಾ ದಿವಾಕರಕುಲಲಲಾ[1]ಮಂಗಖಿಳವಿಭವ[1]ದಲಿ
ಆದರಿಸಿದನು ಜನಕನಿಭರಥ
ಕೈದುರತ್ನಾಭರಣಕಾಂತಾ
ಮೇದಿನಿಯ ಬಳುವಳಿಗಳಿಂ ಬಳಿಕಾ ಕುಮಾರ[2]ಕರ[2] ೫೫

---

[1] ಮಂಗಧಿಕಹರುಷ (ಕ), ಮನಿಗಖಿಳವಿಭವ (ಗ), ಮನನಖಿಳವಿಭವ (ಟ. ಡ). [2] ರಿಗೆ (ಚ.ಜ.ಟ.ಡ).

# ಹದಿನೇಳನೆಯ ಸಂಧಿ

ಸೂಚನೆ : ಭೂಮಿಪರನುಜಿಜಿಪಿದ ಭಾರ್ಗವ
ರಾಮನನು ಗೆಲದತುಳಬಲರಘು
ರಾಮಸಹಿತಜನಸೂನು ಬಂದನಯೋಧ್ಯಿಗೊಲವಿನಲಿ

ಧರಣಿಜೆಯ ಪರಿಣಯದ ಸಮನಂ
ತರದಲಾ ದಶರಥಮಹೀಪತಿ
ಪುರವ ಹೊರಿವಂಟನು ಕಣಾ ಜನಕಕ್ಷಿತೀಶ್ವರನ
ತರುಣ ಕೇಳ್ಕೆ [1]ಬಳಿಕ[1] ದಶರಥ
ನರಸಿಯರು ನಂದನರು [2]ನಂದನ
ರರಸಿಯರು ಗುರು[2]ಮಂತ್ರಿಜನಸಹಿತಖಿಳವಿಭವದಲಿ ೧

ಕಳುಹುತೈತಂದನು ನಿಮಿಷಾಶ್ವರ
ಕುಲಲಲಾಮನಶೇಷನೃಪಮಂ
ಡಳಿಯ ಮಸ್ತಕಮಣಿಯು ನಾಲುಕು ಪಯಣ ಪರಿಯಂತ
ಇಳಿವ ಕಂಬನಿಗಳಲಿ ಕಂಪಿತ
ಗಳದ ಬಿಕ್ಕುಳಿನಕ್ಕೆಯಲಿ ಮ
ಕ್ಕಳನು ಕೈವರ್ತಿಸಿ ಕಕುತ್ಸ್ಥಾನ್ವಯನ ಬೀಳ್ಕೊಂಡ ೨

ಬಳಿಕ ದಶರಥಸಾರ್ವಭೌಮನ
ದಳದ ಸಂಭ್ರಮದುಬ್ಬರದ ರವ
ವಳುಕಿಸಿತು ಸುರನರಭುಜಂಗಮಭುವನವೀಥಿಗಳ
ಇಳೆಯು ಪಾರ್ಥಿವರದಟುಕೊಡಲಿಯ
ಕೊಲೆಗಡಿಕಗದು ಸೊಗಸೆ ಸುಳಿದನು
ವಿಲಯರುದ್ರನ ಕುಪಿತರೌದ್ರಾವೇಶರೋಷದಲಿ ೩

ಕರಿಘಟೆಗಳುಪ್ಪರಿಸಿ ಜಗ್ಗನೆ
ಜರಿದು ನಿಂದವು ಕುಣಿವ ಕುದುರೆಗ
ಳುರಕೆ ಕಬ್ಬಿಯ ಕುಸಿದು ಕುಕ್ಕರಿಸಿದವು ಭೀತಿಯಲಿ
ಕರಿಸಬಾಯಲಿ ಹಾಯ್ದು [3]ಕ[3]ಳಲಿದ
ಕರದ ಕೈದುಗಳರಸುಗಳು ಬಾ
ಯ್ದೆರೆಯುದೇ ನೆಲನೆನುತ ಪರವಶರಾದರಲ್ಲಲ್ಲಿ ೪

---

[1] ಕೂಡೆ (ಚ.ಟ.ಡ), ಕುಶನೆ (ಜ). [2] ಬಳಿಕಾ ಗುರುವಸಿಷ್ಠನು (ಕ.ಣ).
[3] ಬ (ಝ.ಟ.ಡ).

ಉಲುಹುದೆಗದಿಂಗುವ ಸಮುದ್ರದ
ಸಲಿಲದವೊಲಾಯ್ತು ಖಿಳಸೇನಾ
ಜಲಧಿ ಕಾಣೆನು ಮಲೆವ ಮಹಿಪರ ಮುನಿಯ ಮುಂಬಿನಲಿ
ಕಳಚಿತರಸನ ಮನದ [1]ಧೈರ್ಯ[1]
ಚಲದ ಬೈಸಿಕೆ ಹದನ[2]ನದ[2] ಕಂ
ಡಲಘು[3]ಭುಜಬಲರಾಮು[3] ನಿಂದನು ಮುಂದೆ ಭಾರ್ಗವನ ೫

ನಿಮಗಿದೇ[4]ಕೀ[4] ಕ್ಷತ್ರಿಯರೊಳು
ಭ್ರಮಿತತನ ಭೂಭುಜರ ಭುಜವಿ
ಕ್ರಮದ [5]ಪಯ[5]ಪಾಡುಗಳ ನೀವೇ ನಿಮ್ಮ ಚಿತ್ತದಲಿ
ಸಮತೆಯಲಿ ಸುಮುಖದಲಿ ತಿಳಿದಾ
ಕ್ರಮಿಸುವುದೆ ಸುಪ್ರೌಢಿ ರಣಸಂ
ಭ್ರಮವು ಸಾಕೀಯೊಪ್ಪದಲಿ ಜಾಱುವುದು ಲೇಸೆಂದ ೬

ಕೆಲಕೆ ತೊಲಗುವುದುಚಿತ ಹಿಂದಣ
ಬಲುಹದಂದಿಗೆ ಹುಲುದೊರೆಗಳಲಿ
ಸಲುವುದಲ್ಲದೆ ಸಲ್ಲದಿತ್ತಲು ಶೌರ್ಯ ನಿಮ್ಮಡಿಯ
ತಿಳಿವಡವನೀಸುರರಿಗಿಂದ
ಗ್ಗ[6]ಳರು[6] ಶೌರ್ಯದಲವನಿಪರು ವೆ
ಗ್ಗಳರು ವಿಪ್ರರು ವಿಧಿವಿಹಿತಕರ್ಮದಲಿ [7]ನಮಗಿಂದ[7] ೭

ಧ್ಯಾನ [8]ಮೌನ[8] ಸಮಾಧಿ ಶೌಚ
ಸ್ನಾನ ಜಪ ತಪ ನಿತ್ಯನೇಮ
ಜ್ಞಾನ [9]ಷಟ್ಕರ್ಮ[9] ಪ್ರವಿಸ್ತರ ದೇವತಾಭಜನೆ
ಮೌನಿಗಳಿಗಿದು ಮಾರ್ಗಶರಸಂ
ಧಾನ ಸಮಯೋಚಿತದ ಶೌರ್ಯಾ
ನೂನ ಪಾರ್ಥಿವಕರ್ಮ ನಿಮಗಿದು ಯೋಗ್ಯವಲ್ಲೆಂದ ೮

---

[1] ಧೈರ್ಯದ (ಕ.ಡ.ಣ). [2] ನೆರೆ (ಕ.ಣ). [3] ಬಲ ರಘುನಾಥ (ಕ.ಜ.ಣ). [4] ತಕೆ (ಕ). [5] ಸಿರಿ (ಕ), ಪಡಿ (ಜ), ಪರಿ (ಝ.ಣ). [6] ಳದ (ಕ), ಳೆಯ (ಝ.ಟ.ಡ). [7] ನಿಮಗೆಂದ (ಕ.ಝ.ಡ), ಕೇಳೆಂದ (ಗ), ನೀವೆಂದ (ಜ). [8] ಮೋನ (ಗ.ಜ.ಝ.ಟ.ಣ). [9] ಸತ್ಕರ್ಮ (ಕ.ಝ.ಟ.ಡ.ಣ).

ಸೆಣಸುವುದು [1]ಸುವ್ಯಾಕರಣ ಪರಿ[1]
ಗಣಿತಶಾಸ್ತ್ರಜ್ಞರಲಿ ಸಮರದೊ
ಳಣಕಿಸುವುದಸಮಾನರಲಿ ಸಂಗ್ರಾಮ ಸಲ್ಲದೆನೆ
ಕುಣಿದವಾ ಕುಡಿಮಿಾಸೆ ಬಿಡದಿಂ
ಗಣವನುಗುಳಿದವಕ್ಷಿ ಕಲ್ಪದ
ಕಣುಗಿಡಿಯ ಕರ್ಕಶಕಪರ್ದಿಯ ಬಗೆಗೆ ಮನದಂದ ೯

ತರಣಿಯನು [2]ತುಷವೆಂದು ತುಂಡದ
ಲರವ[2] ರಾಹುವ ತಾರೆ ತವಕಿಸಿ
[3]ತಱುಬಿ[3] ನಿಲುವವೊಲಾಯ್ತಲಾ ಕ್ಷತ್ರಿಯರು ತಾವು ಗಡ
ಧರಣಿಯಮರರು ನಾವು ಗಡ ಸಾ
ಗರವ [4]ಕಾಸರ[4] ಸೆಣಸುವಂತಾ
ಯ್ತುಱಿಯಬಹುದಿನ್ನೆನುತ ಕೊಡಲಿಯ ಝಡಿದನಾ ರಾಮ ೧೦

ಹಾಯಿತುರಿ ಹೊದಱೆದ್ದು ಕೊಡಲಿಯ
ಬಾಯಧಾರೆಯುಲಖಿಳಜಗ [5]ಜರಿ
ದಾಯೆನಲು[5] ಸೀವರಿಸಿ ಶಿಖಿ ಮೊಗದುದು ಮರುತ್ಪಥವ
ವಾಯು ವರುಣ ಕುಬೇರ ಯಮ ವ
ಜ್ರಾಯುಧರು ಹಮ್ಮೈಸಿದರು ಹರು
ವಾಯಿ[6]ತೆಮಗೆಂದೊಡನೆ[6] ದಶರಥರಾಯುನಳವಳಿದ ೧೧

ರಾಮನಕಟಾ ಹಸುಳೆ ಭಾರ್ಗವ
ರಾಮನಗ್ಗದ ಜವನ [7]ಜೂಬು[7] ಮ
ಹಾಮಹೀಶಾಧೀಶವಂಶಾರಣ್ಯವನು ತಱಿದ
ಭೀಮಭುಜವಿಕ್ರಮಗೆ ಜಗದಭಿ
ರಾಮ ಸಿಲುಕಿದನಿನಕುಲಾಂಬರ
ಸೋಮ ಕೈವಶವಾದನೇ ಹಾಯೆನುತ ಹರಿತಂದ ೧೨

---

[1] ಸವ್ಯಾಪಕರಣದ (ಕ.ಣ). [2] ರೋಷದಲಿ ಝಂಕಿಪ ಭರದ (ಕ), ತುಸವೆಂದು ತುಂಡದಲರವ (ಟ.ಡ.ಣ). [3] ಧುರಕೆ (ಕ). [4] ಸರಸಿಯು (ಕ.ಝ). ಸಾರಸ (ಗ), ಸಾಸವೆ (ಜ.ಣ). [5] ವವಿಡಾಯೆಯುಲ (ಗ), ವವಿ ಧಾಯೆನಲು ಟ. ). [6] ತೇ ತಮಗೆನುತ (ಗ), ತೆಮಗೆಂದೆನುತ (ಚ), ತೇ ನಮಗೆನುತ (ಜ). [7] ಜೂಜು (ಕ.ಚ.ಜ.ಡ.ಣ).

ಕಂಡನಯ್ಯನ ಮನದ ಧೈರ್ಯದ
ದಂಡಿಯನು ನೀವ್ ಬೇಡಿಕೊಳಲೇ
ಕಂಡಲದು ಕೆಲಸಾರಿ ಸೈರಿಸಿ ನಿಮಿಷ ನೀವೆನುತ
ಖಂಡಪರಶುಮಹೋಗ್ರಚಾಪನಿ
ಖಂಡನನು ಸುಳಿಸಿದನು ನಿಶಿತಸು
ಕಾಂಡವನು ಭೃಗುಸುತನ ಕೊಡಲಿಯು ಕೊರಳ ಸರಿಸದಲಿ ೧೩

ಉಸುರಲೇನದ [1]ಕಲ್ಪದಲಿ[1] ಸುಳಿ
ವಶನಿಗೆಣೆಯೆನಿಸುವ ಮಹಾಯುಧ
ವೆಸೆದುದ್ವೈ ವ್ಯೋಮದಲಿ ರಾಮನ ತೋಮರಾಗ್ರದಲಿ
ಪಶುಪತಿಬ್ರಹ್ಮಾಮರರು ಮಾ
ನಸದೊಳಜುದರು ಪಲ್ಲಟಿಸಿತಿಂ
ದಸುರಹರನವತಾರವೆಂದುಬ್ಬಿದರು ಹರುಷದಲಿ ೧೪

ಘನತರಕ್ರೋಧಾಗ್ನಿ ಮಿಗೆ ಸಂ
ಜನಿಸೆ ಭಾರ್ಗವನುಗ್ರವೈಷ್ಣವ
ಧನುವನುಗಿದೇಱಿಸಿದನವನೀನಾಥರಳವಳಿಯೆ
ವನಜಸಂಭೂತಾಂಡವೆಡಬಲ
ಕೊನೆಯೆ ಬಿಲುದನಿದೋಱಿ ಕೋಲಿನ
ಕೊನೆಗೆ ಕೈಯಿಕ್ಕಿದನು ದಿವ್ಯಾಮೋಘಮಂತ್ರದಲಿ ೧೫

ಮನದೊಳಗೆ ನಸುನಗುತ ನಿಮ್ಮಯ
ಜನಕ ರಥದಿಂದಿಳಿದು ಪಾರ್ಥಿವ
ಜನಮಹಾಂಬುಧಿವಡಬನೆಡೆಗಿದಿರಾಗಿ ನಡೆತಂದು
ಅನಿಮಿಷರು ಕೊಂಡಾಡೆ ಹೊಡಿದ
ಧನುವ ಮೇಲ್ವಾಯ್ದುಗಿದುಕೊಂಡಾ
ಮುನಿಗೆ ಬಳಿಕೀ ಮಾತನೆಂದನು ಮಧುರವಚನದಲಿ ೧೬

ನೀವು ವಿಪ್ರರು ವಿಪ್ರಹಿಂಸಾ
ವ್ಯಾವಹಾರಿಕವೆಮ[2]ಗೆ ದೂಷ್ಯವ[2]
ಲಾ ವಿಶೇಷಜ್ಞಪ್ತಿಸೂಕ್ತಿಕರೋ[3]ದಿತಾರ್ಥದಲಿ[3]
ನೀವು [4]ವಂದ್ಯರು[4] ನಮಗೆ ನಿಮಗಿ
ನ್ನಾವ ಜಂಜಡ ಬೇಡ ತಪದ ಫ
ಲಾವಳಿಯೆ ಸಾಕಿನ್ನು ಬಿಜಯಂಗೈಯಿ ನೀವೆಂದ ೧೭

[1] ನಲ್ಪರಲಿ (ಚ). [2] ಗದ್ಯಶ್ಯವ (ಕ.ಣ). [3] ದಿನರ್ತದಲಿ (ಗ), ದಿದರ್ಥ
ಲಿ (ಚ), ದನಾರ್ಥದಲಿ (ಜ), ಟಿನರ್ತದಲಿ (ಝ.ಟ.ಡ). [4] ಧನ್ಯರು (ಕ.ಣ).

ಮನುಜನಲ್ಲೀತನು ಮದೀಯ
ಧ್ವನಿಗೆ ಭೂಭುಜವರ್ಗದಬಲಾ
ಜನದ ನಿರ್ಝರಗರ್ಭ ಕಳ[1]ಲುವವೆಮ್ಮ[1] ಕೋಪದಲಿ
ಜನಪರುಳಿದವರಿಲ್ಲ[2]ವೀ[2] ಗೋ
ಮಿನಿಯಗಂಡನ ಗೌರವದ ಗಾ
ಢಣೆಯಲಾ ಗತಿ ಪಲ್ಲಟಿಸಿತೆನುತುಬ್ಬಿದನು ರಾಮ ೧೮

ಆಯಿತೆಮ್ಮವತಾರವೀ ರಾ
ಮಾಯಣದ ನಾಟಕಕೆ ದೀಪ್ತಿ
ನ್ಯಾಯದ[3]ವೊಲೆನುತಪ್ಪಿ[3] ಬಳಿಕಕ್ಷಯನಿಷಂಗಮದ
ಸಾಯಕವನೊಲಿದಿತ್ತು ತಾಪಸ
ರಾಯ ತೆರಳಿದನಾಶ್ರಮಕೆ ಬಳಿ
ಕಾಯಿತಧಿಕೋತ್ಸವವು ದಶರಥಸಾರ್ವಭೌಮಂಗೆ ೧೯

ಲವನೆ ಕೇಳೈ ಬಂದನಾ ರಾ
ಘವನ ಬಳಿಗಾ ಸಮಯದಲಿ ವೈ
ಷ್ಣವ ಮಹಾಚಾಪವನು ಬೇಡಲು ಸುರಪನಾಜ್ಞೆಯಲಿ
ತವಕಮಿಗೆ ಮಕರಾಕರೇಶ್ವರ
ನವಿರಳದ ವಿನಯದಲಿ ತದ್ವೈ
ಷ್ಣವ ಮಹಾಕೋದಂಡವನು ಪಡೆದಿತ್ತನಿಂದ್ರಂಗೆ ೨೦

ಮುಂದೆ ಕಾರಣವುಂಟೆನುತ ಸಂ
ಕ್ರಂದನನು ಬಳಿಕಾ ಧನುವ ನಿಜ
ಮಂದಿರದಲಿರಿಸಿದನಲ್ಲೈ ವಧೆಗರಿದಶಾನನನ
ಬಂದ[4]ರಲ್ಲಿಂ[4] ಮೇಲೆ [5]ಸೇನಾ[5]
ವೃಂದಸಹಿತ ಮನೋನುರಾಗದ
ಸಂದಣಿಯ ಸೌರಂಭದಲಿ ಸಾಕೇತಪುರವರಕೆ ೨೧

---

[1] ಲುವವೆನ್ನ (ಕ.ಣ), ಚುವದೆಮ್ಮ (ಜ.ಝ), ಚವವೆಮ್ಮ (ಟ.ಢ). [2] ವಿದು (ಕ.ಗ.ಜ.ಝ.ಣ). [3] ಲೊಪ್ಪಿದನು (ಕ.ಣ). [4] ನಲ್ಲಿಂ (ಕ.ಝ.ಣ). [5] ನಾರೀ (ಚ).

ಕಳಸ ಕನ್ನಡಿ ತೋರಣದ ಹೊಂ
ದಳಿಗೆಯಾರತಿಗಳ ಸುಲಲನಾ
ವಳಿಯು ಮಂಗಳಪಾಠಕರ ನರ್ತನದ ನಾರಿಯರ
ಉಲಿವ ವಾದ್ಯದಲೆಡಬಲದ ಹೆ
ಕ್ಕಳದ ನೋಟಕಜನದಲಾ ನೃಪ
ಕುಲಶಿರೋಮಣಿ [1]ಹೊಕ್ಕನನುಪಮ[1]ರಾಜಮಂದಿರವ ೨೨

---

[1] ಬಂದು ಹೊಕ್ಕನು (ಟ.ಡ).

# ಒಂದನೆಯ ಸಂಧಿ

---

ಸೂಚನೆ : ರಾಯದಶರಥನಖಿಳಲೋಕದ
ರಾಯ ರಾಮಂಗೊಲಿದು ರಾಜ್ಯ
ಶ್ರೀಯ ಪಟ್ಟವ ಕಟ್ಟಲೆಂದುದ್ಯೋಗಮನನಾದ

ವೀರ ಕೇಳ್ಕೈ ಕುಶನೆ ರಾಜಕು
ಮಾರಕರು ನಾಲ್ವರಿಗೆ ಭದ್ರಾ
ಗಾರ ಸವದವು ವಿಶ್ವಕರ್ಮಮಯಾನುಮತಗಳಲಿ
ಬೇಱಬೇಱರಸಿಯರು ಸಹಿತ ಸು
ತಾರೆಯಲಿ ಶುಭಲಗ್ನದಲಿ ವಿ
ಸ್ತಾರವೈಭವದೊಸಗೆಯಲಿ ಹೊಕ್ಕರು ನಿಜಾಲಯವ ೧

ಅಳಿದನು ರಾಮನ ವಿವಾಹದ
ಮೇಲೆ ಹನ್ನೆರಡಬುದಪರಿಯಂ
ತೋಲಗಿಸಿಕೊಂಡಖಿಳರಾಯರನವನಿಮಂಡಲವ
ಕೇಳಿದೈ ಕುಶ ನಿಮ್ಮ ಮುತ್ತಯ
ನಾಲಯಕೆ ಬಳಿಕೊಂದುದಿನ ನೃಪ
ಬಾಲಕನು ಬಂದನು ಕಣಾ ಕೈಕೆಯುಮಹೀಪತಿಯ ೨

ಆದರಿಸಿದನು ಬಳಿಕ ಕೈಕೆಯ
ಸೋದರನ ಸುಕ್ಷೇಮಕುಶಲವ
ನಾ ದಯಾಂಬುಧಿ ಕೇಳಿದನು ಕೈಕೆಯನೃಪೋತ್ತಮನ
ಐದುದಿನವಿ[1]ದ್ದೀತ ತನ್ನಯ[1]
ಸೋದರಳಿಯಂದಿರನು ನಿಜಪುರಿ
ಗೊಯ್ದನಭ್ಯಾಸಿಸಲು [2]ವರಶಸ್ತ್ರಾಸ್ತ್ರ[2]ಕೌಶಲವ ೩

---

[1] ದ್ದೀತ ಬಳಿಕಾ (ಕ.ಝ), ದ್ದಾತ ಬಳಿಕಾ (ಗ.ಜ.ಙ). [2] ಶಸ್ತ್ರಾಭ್ಯಾಸ (ಕ.ಙ).

ಲವನೆ ಕೇಳಾ ಭರತನಾ ಸಹ
ಭವಸಹಿತ ನಿಜಪಿತನ ಬೀಳ್ಕೊಂ
ಡವನಿಜೇಶನ ಕಯ್ಯ ಕಳುಹಿಸಿಕೊಂಡು ಕೈಕೆಯನ
ಭವನಕೈದಿದನತ್ತಲಿತ್ತಲು
ದಿವಸದಿವಸಕೆ ಕೌಸಲಾಸಂ
ಭವನ ಸದ್ವರ್ತ[1]ನೆಗೆ[1] ಸಂತೋಷಿಸಿದನಾ ಭೂಪ ೪

ಈತನೇ ಸಿಂಹಾಸನಸ್ಥಿತ
ನೀತನೇ ಸಾಮ್ರಾಜ್ಯಪತಿ ತಾ
ನೀತನೇ ರಘುಕುಲಸಮುದ್ರೋದ್ಧರಣ ಹಿಮಕಿರಣ
ಈತ[2]ನೇ ರಘುನಾಥನೆಂಬೀ[2]
ಮಾತು ಮಂತ್ರಿಮಹಾಪ್ರಧಾನವಿ
ನೀತ ವಿನಯೋಗಿಗಳಿಗೆಚ್ಚಱಿಸಿದನು ನರನಾಥ ೫

ತೋಱಿದುದು ಜರೆ ನಮಗೆ ನಾವಿ
ನ್ನೇಱಿಲುಳ್ಳವರಮರನಗರದ
[3]ನೂಱುಯಜ್ಞದ[3] ಜಾಣನೋಲಗದಮಳವಿಷ್ಟರವ
ತೋಱುತಿದೆ ಚಿತ್ತದಲಿ ಮಿಕ್ಕಿನ
ಮೂಱುಮಕ್ಕಳಿಗಿಂದ ರಾಮನೆ
[4]ನೀಱ[4]ನೀ ಸಾಮ್ರಾಜ್ಯ[5]ಸತಿಗೆಂ[5]ದವನಿಪತಿ ನುಡಿದ ೬

ಬಳಿಕಲನಿಬರ ಮತದಿನಾತಂ
ಗೊಳುದಿವಸದಲಿ [6]ಯೌವರಾಜ್ಯದ[6]
ಲಲಿತಪಟ್ಟವ ಕಟ್ಟಿದನು ಸಂಭ್ರಮಿಸೆ ಸಕಲಜನ
ಹಲ[7]ವದೇನೀ[7] ರಾಮಚಂದ್ರನ
ನೆಳಲು ನಿರ್ಜರಕುಜದ ನೆಳಲಾ
ಯ್ತಿಳೆಯು [8]ಜನ ಪುರವರಜನಂಗಳಿಗಣುಗ[8] ಕೇಳೆಂದ ೭

---

[1] ನಕೆ (ಕ.ಜ.ಟ.ಡ.ಣ). [2] ತನೇ ಮಂತ್ರಿ ಪ್ರಮುಖ್ಯವಿ (ಗ), ತು ಮಂತ್ರಿಗಳಾ ಪ್ರಧಾನಾ (ಜ.ಣ). [3] ದೂಱುಗಾಱನ (ಕ.ಣ), ನೂಱುಜನ್ಮದ (ಝ.ಟ.ಡ.) [4] ವೀರ (ಕ.ಟ.ಣ). [5] ಪತಿಯೆಂ (ಕ.ಜ.ಝ.ಟ.ಡ.ಣ). [6] ರಾಜ್ಯಲಕ್ಷ್ಮಿಯ (ಕ.ಣ), ವಿಮಲರಾಜ್ಯದ (ಗ). [7] ವು ವಿಧದಿಂ (ಝ), ವವಧಿಗೀ (ಟ.ಡ). [8] ಲೀಪರಿಪುರಜನಂಗಳಿಗಣುಗ (ಕ), ಪರಿಜನ ಪುರಜನಂಗಳಿಗಣುಗ (ಗ.ಣ), ಜನಪತಿ ಪುರಜನಂಗಳಿಗರಸ (ಜ), ಜನಪರಿ ಪರಿಜನಂಗಳಿಗಣುಗ (ಝ), ಲುಳ್ಳ ಸಮಸ್ತಜನಗಳಿಗಣುಗ (ಡ).

ಮನು ಮಹೀಶ ದಿಲೀಪ ಮಾಂಧಾ
ತನು ಪುರೂರವ ಕಾರ್ತವೀರ್ಯಾ
ರ್ಜುನ ಭಗೀರಥ ಸಗರ ನಳ ನಹುಷಾದಿ ಭೂಭುಜರ
ನೆನಹ ಮಱಸಿದನೀತನೀತನ
ವಿನುತ[1]ವಿಮಲಚರಿತ್ರ[1]ಕಬುಜಾ
ಸನ ಪುರಾರಿ ಪುರಂದರರು ಪುಳುಕಿಸಿದರಡಿಗಡಿಗೆ ೮

ಬಯಸುವಳು ಭೂವನಿತೆ ವಿಪ್ರ
ಪ್ರಿಯನನುರುಧಾರ್ಮಿಕನ [2]ರಿಪು[2]ನಿ
ರ್ಭಯನ ನಿಯತಮತಿಪ್ರತಿಜ್ಞನ ರಾಘವೇಶ್ವರನ
ಬಯಸುವಳು ಪುರಲಕ್ಷ್ಮಿ ಜಗದಾ
ಶ್ರಯಸುಪರ್ವದ್ರುಮನನೆಂತುಟೊ
ದಯೆ ಸಮಸ್ತರ ಮೇಲೆ ರಘುರಾಜೇಂದ್ರಚಂದ್ರಮನ ೯

ಪಲ್ಲವಿಸಿದುದು ಹರುಷಲತೆ ಭೂ
ವಲ್ಲಭಂಗಾ ಜನಕತನುಜಾ
ವಲ್ಲಭನ ನಡವಳಿಯ ನೀತಿಯ ನಿರ್ವಿಕಾರತಗೆ
ಇಲ್ಲಗೀತನೆ ಕರ್ತೃ ಕಾಮಿತ
ವಲ್ಲಭಗೆ ನಾವ್ ಭರ್ತೃವಾದರೆ
ಬಲ್ಲವಿಕೆ ಲೇಸೆಂದು ಭೂಮಿಪಾಲ ಮನದಂದ ೧೦

ನೆಟ್ಟನಧಿರಾಜೇಂದ್ರಪಟ್ಟವ
ಕಟ್ಟುವೆನು ಕಮಲಾಂಬಕನ ಪಡಿ
ಗಟ್ಟಿನಗ್ಗದ [3]ರಾಮಚಂ[3]ದ್ರಂಗೆಂದು ನಿಶ್ಚೈಸಿ
ಇಟ್ಟೆಡೆಯ ಹರುಷದಲಿ ನ್ಮ ಹೊಂ
ಗಟ್ಟಿಗೆಯ [4]ಚರರಿಂ[4]ದಲಾ ಮನ
ಮುಟ್ಟಿದಾಪ್ತರ ಕರೆಸಿ ಬಳಿಕಿಂತೆಂದನವರ್ಗಳಿಗೆ ೧೧

ಆಸೆ ಬೀತುದು ನಮಗೆ ರಾಜ್ಯ
ಶ್ರೀಸತಿಯ ಮೇಲಣ ಮನಕ್ಕಭಿ
ಲಾಷೆಯಾದುದು ಮುಕ್ತಿವನಿತೆಯ ಖೇಳಮೇಳ[5]ದಲಿ[5]
ಈ ಸಕಲಸಾಮ್ರಾಜ್ಯಭಾರವ
ನೀ ಸುಬಾಹುಧ್ವಂಸಿಯಲಿ ನಿ
ರ್ಣೈಸಿದಡೆ ನಿಶ್ಚಿಂತರಾವೆಂದರಸ ನೇಮಿಸಿದ ೧೨

---

[1] ನಿರ್ಮಳಚರಿತ (ಗ.ಜ). [2] ನರಿ (ಕ.ಗ.ಜ.ಡ.ಣ). [3] ರಾಮಥ (ಝ.ಣ), ರಾಘವೇಂ (ಟ.ಡ). [4] ಭರದಿಂ (ಗ.ಜ.ಝ.ಟ.ಡ). [5] ವದ (ಜ.ಝ.ಟ.ಡ).

ವಿತತವಿನಿಯೋಗಿಪ್ರಧಾನ
ಪ್ರತತಿ ನೆಗಳ್ದ[1] ರಾಜಕಾರ್ಯ
ಸ್ಥಿತಿಗೆ ಪರಿಣಮಿಸಿ[2]ದರು[2] ಕೊಂಡಾ[3]ಡುತ[3] ನೃಪಾಲಕನ
ಕ್ಷಿತಿಸುತಾಸುತ ಕೇಳು ಬಳಿಕ
ಚ್ಯುತನ ಮಾಯಾನರನನವನೀ
ಪತಿಯು [4]ಪಟ್ಟಕೆ ಪರುಠವಿಸಿದರು ಕರೆಸಿ[4] ಜೋಯಿಸರ ೧೩

ನಿವಡಿಸಿದ ವೈಶಾಖಮಾಸದ
ಧವಳಪಕ್ಷದ ಪಂಚಮಿಯ ಶುಭ
ದಿವಸದಭಿಜಿಲ್ಲಗ್ನದಲಿ ಮೂರ್ಧಾಭಿಷೇಚನದ
ವಿವರವಾಯ್ತು ವಿದೇಹಜಾಪತಿ
ಗವನಿಪನ ಬಿಜಯಕೆಯಲಿ ಮಱು
ದಿವಸ ಮತ್ಸರಿಸಿತ್ತು ಪುರವು ಪುರಂದರನ ಪುರವ ೧೪

ಇಡಿದ ಮುತ್ತಿನ ಸೊಸಕದ ಕ
ನ್ನಡಿಯ ಕಲಶದ ತೋರಣದ ಪಂ
ಗಡದ ವಿವಿಧಧ್ವಜನಿಕಾಯದ ಸೌಧಸಂಕುಲದ
ಝಡಿವ ಝಲ್ಲರಿಗಳ ಪತಾಕೆಯ
ಸಡಕುಗಳ ಮೇಲ್ಕಟ್ಟುಗಳ ಪರಿ
ವಿಡಿಯ ಪಸರದಲೆಸೆದುದಾ ಸತ್ಯಾವತೀನಗರ ೧೫

ಬೀದಿಬೀದಿಗಳೊಳಗೆ [6]ಕತ್ತುರಿ[6]
ಸಾದುಗಳ ಸಾರಣೆಯ ಪರಿಮಳ
ಮೇಧಿಸಿದ ಪನ್ನೀರ ಚಳೆಯದ ಚಾರುಕುಂಕುಮದ
ಶೋಧಿಸಿದ ಕಾರಣೆಯ ಕಡವ[5]ಲಿ[7]
ಗೈದ ಪೊಸಮುತ್ತುಗಳ ಪಡಿಸಣ
ಗೈದ ಧೂಪದ ಧೂಮಪವನನಲೆಸೆದುದಾ ನಗರ ೧೬

ಎಸೆದುದೈ ಬಳಿಕಬಳಿಕೋಬಾ
ವಿಸರದಲಿ ಮೂರ್ಧಾಭಿಷೇಚನ
ವಸತಿ ವೈದಿಕ ಲೌಕಿಕಾಂಗದ ವಸ್ತುಕಾರದಲಿ

---

[1] ಳದ (ಕ.ಜ.ಟ). [2] ದುದು (ಗ.ಜ.ಝ). [3] ಡಿತು (ಚ.ಜ). [4] ಪರುಠವಿಸಿದರು ಪಟ್ಟಕೆ ಕರೆದು (ಕ.ಣ). [5] ತುಲ (ಕ.ಜ.ಝ.ಟ.ಡ). [6] ಕಸ್ತುರಿ (ಕ.ಜ.ಝ.ಡ). [7] ರಿ (ಗ.ಜ.ಝ.ಟ.ಡ.ಣ).

ಮಿಸುಪಮಿಸುನಿಯ ಪೂರ್ಣಕಲಶದ
ಪಸರಿಕೆಯ ಪು[1]ಣ್ಯೋದಕದ ಶೋ
ಭಿಸುವ ಪೂರ್ಣಸುವರ್ಣಕುಂಭದ ಸಂಭ್ರಮಂಗಳಲಿ ೧೭

ವಿನುತಧವಳಚ್ಛತ್ರ ಸಿಂಹಾ
ಸನ ಮಣಿಧ್ವಜ ಕನಕ ನೃಪಕೇ
ತನ ಫಲಾವಳಿ ದೂರ್ವೆ ದಧಿ ಮಧು ಕುಂಕುಮಾಕ್ಷತೆಯು
ಕನಕಪಾತ್ರೆ ಸುಗಂಧ ಗೋರೋ
ಚನ ಸುಪುಷ್ಪ ದುಕೂಲ ಮಣಿಮಂ
ಡನ ಸುಲಕ್ಷಣಹಯಮದೇಭದಿನೆಸೆದುದಾ ಭವನ ೧೮

ಮೇಲೆ ಮುದದಲಿ ಕೌಶಿಕಾಧ್ವರ
ಪಾಲಕನ ನಿಜನಿಳಯಕಾ ಭೂ
ಪಾಲಕನು ಕಳುಹಿದನು ಕಮಲಾಸನನ ನಂದನನ
ನಾಳೆ ರಘುನಾಥಂಗೆ ರಾಜ್ಯ
ಶ್ರೀಲತಾಂಗಿಯ ಮದುವೆ ಮಂಗಳ
ದೇಳಿಗೆಯ ಸುವ್ರತವ ಮಾಡಿಸಲುಚಿತವಚನದಲಿ ೧೯

ಜನಕಜಾಸುತ ಕೇಳು ರಘುನಂ
ದನನ ಭವನಕೆ ಬಂದ [2]ಸನ್ಮುನಿ
ಜನ[2]ಮನೋರಂಜಕನನಘಭಂಜಕನನಾ ರಾಮ
ವಿನುತಸತ್ಕೃತಿ ಸಹಿತ ಗುರುಭಾ
ವನೆಯಲೇ ಪೂಜಿಸಲು ಪೂಜೆಯ
ನನುಕರಿಸಿ ಕೈಗೊಳಿಸಿದನು ಕಾಲೋಚಿತವ್ರತವ ೨೦

ಪುರದೊಳಗೆ ರಾಜೇಂದ್ರನಂತಃ
ಪುರದೊಳಗೆ [3]ತತ್ಕ್ಷೇಸಲದರುಂ
ಹರಿಯೊಳಗೆ ರಾಜಾಧಿರಾಜರ ರಾಜಸಭೆಯೊಳಗೆ
ಹರೆದುದೀ ವೃತ್ತಾಂತವಿದನಾ
ದರಿಸಿದಳಲ್ಲೈ ಪೂರ್ವಮಾಯಾ
ತರುಣಿ ಮಂಥರೆ ಮಥಿಸಿ ಮನದಲಿ ಪೂರ್ವಸೂಚಿತವ[4] ೨೧

[1] ಣ್ಯಾಹವ (ಕ), ಣ್ಯೋದಯ (ಗ.ಜ.ಙ). [2] ನಾಪಸ್ಮುನಿ (ಜ). [3] ತತ್ಕ್ಷೇಸರಾರುಂ ಹರಿ (ಕ), ಬಳಿಕಾಗಣಾ ಪುರಪುರ (ಜ). [4] ಚಕವ (ಕ.ಗ.ಝ.ಟ.ಙ).

ಭೂರಿಭೂಭಾರದ ನಿಶಾಚರ
ವೀರಕುಲವಿಚ್ಛೇದನಕೆ ಲ
ಕ್ಷ್ಮೀರಮಣನು[1]ದಿಸಿದನಲ್ಲೈ[1] ರಾಮಾಭಿಧಾನದಲಿ
ಆ ರಮಾಪತಿಯಾಜ್ಞೆಗಾವುದೊ
ದಾರಿಯೆಂದಾ ಮಾಯೆ ವಿಜ್ಞಾ
ಸಾರಮುಖದಿಂದಱಿ[2]ದಳಾಗಸ[2]ಕಾರ್ಯಕೌಶಲವ ೨೨

ಅಂದಿನುದಯದಲವಳು ಕೈಕೆಯ
ಮಂದಿರಕೆ ನೃಪಸಭೆಯೊಳಿದ್ದೈ
ತಂದಳಾ ಸೈಳೇಂದ್ರಿವೇಷದ ಮಾಯೆ ವಹಿಲದಲಿ
[3]ಕಂ[3]ದನಿಕ್ಕುವೆನವನಿಪನ ಮನ
ಸಂದ ಮೋಹದ ಮಾನಿನಿಗೆ ಮನು
ನಂದನನನೆಬ್ಬಟ್ಟುವೆನು ರಾವಣನ ವಧೆಗೆನುತ ೨೩

ಹೊರೆಯ ಸಖಿಯರ ಮೇಳದಲಿ ನಸು
ಹೊರದ [4]ಕೋಪದ ಹೊಗರಿನಲಿ[4] ಸರ
ಸರಿಸಿ ಬಂದಳು ಸದನಕಾ ಕೈಕೆಯನೃಪಾತ್ಮಜೆಯ
ಅರಸಿಯಿದ್ದಳು ಖೇಳಮೇಳದ
ತರುಣಿಯರ ಸದ್ಗೋಷ್ಠಿಯಲಿ ಸಡ
ಗರಿಸಿ ಸಾರ್ದ[5]ವಳೆಂದಳಧಿಕ ಹಿತೋಪಭಾಷಿತವ ೨೪

ಅರಸಿ ಕೇಳಿನ್ನೇನ ಹೇಳುವೆ
ನರಸ ಮನದಲಿ ನೆನೆದ ಮಂತ್ರದ
ಪರಿಯ ನೀನದನಱಿತುದಿಲ್ಲವಲಾ ಮಹಾದೇವ
ಧರಣಿ ಗಡ ರಾಮಂಗೆ ಭರತಾ
ದ್ಯರುಗಳಾ ರಘುನಂದನಗೆ ಕಿಂ
ಕರರು ಗಡ ಕೇಳರಸಿ ಕೌತುಕ ನಡದುದಿಂದಿನಲಿ ೨೫

ಅರಸುತನ ರಾಮಂಗೆ ನೆಲೆಗೊಳ
ಲರಸಿ ಕೇಳಾ ನಿನ್ನ ಮಗನೇ
ನರಸನೋ ಮೇಣ್ ವಿರಸನೋ ಸಾಮ್ರಾಜ್ಯಸೌಂದರಿಗೆ

---

[1] ದ್ಭವಿಸಿದನು (ಗ.ಚ), ದಿಸಿದನಲಾ (ಝ.ಟ.ಡ). [2] ತಳಂದಾ (ಕ), ದಳಾನಿಜ (ಣ). [3] ರಂ (ಗ), ಕುಂ (ಟ.ಡ). [4] ಹೊಗರಿನ ಕೋಪದಲ (ಚ). [5] ರ್ದ (ಗ.ಚ).

ಹೊರೆಯುವೇ ಬಳಿಕೊಡಲ ಶುನಸೂ
ಕರಗಳಕಟಾ ನಿನ್ನಭಾಗ್ಯದ
ಸಿರಿಗೆ ಸೀವಟವಾದನೇ ನೃಪನೆಂದಳಾ ಕಾಂತೆ ೧೬

ಕೇಳಿ ಕಡುಗೋಪದಲಿ ಮಾನಿನಿ
ಮೇಳದಬಲೆಯುರೊದನೆ ನುಡಿದಳು
ಕಾಳುಗೆಡ[1]ದಪಳೇನನಿವಳಿವಳೆಂದ[1] ಮಾತುಗಳ
[2]ಕೇಳಿಯೆನೆ[2] ಜಱಿದವಳು ನವುಗಿದ
ಹೇಳ ಕಾರಣವೇನು ಹಿಸುಣರ
[3]ಜಾಳಿಗರ[3] ಚದುರೋಕ್ತಿ ನಮಗೇಕೆಂದ[4]ಳವರೊಡನೆ[4] ೧೭

ಭರತನಲಿ ರಾಮನಲಿ ದಾಯಿಗ
ರೊರಸೊರಸುತನವುಂಟೆ ನಮ್ಮಿ
ಬ್ಬರಲಿ ಸವತಿಯುರೆಂಬ ಮತ್ಸರವುಂಟೆ ಪೂರ್ವದಲಿ
ತರಣಿವಂಶಪರಂಪರೆಯು ಬಂ
ಧುರದ ಭದ್ರಾಸನಕೆ ರಾಘವ
ನರಸನಾದಡೆ ಭಾಗ್ಯವದು ನಮಗೆಂದಳಾ [5]ಕೈಕೆ[5] ೧೮

ಮರುಳುನುಡಿಗಳು ನಮ್ಮವಿವು ನೀವ್
ಪರಮನೀತಿಯು ಧರ್ಮಶಾಸ್ತ್ರದ
ನಿರುತರಾವೇ ಕುಹಕಕರ್ಮದ ಕಪಟ[6]ಕೌಶಲರು[6]
ಇರಲಿರಲು ತೋಱಿಸುವೆ ನಿಮಗಹ
ಗುರುಲಘುತ್ವದ ಪರಿಯ ತುದಿಯಲಿ
ದೊರಕುವಶುಭದ ಬೀದಿಗಲಹವನೆಂದಳಾ ಕಾಂತೆ ೧೯

ಹಿರಿದು ರಕ್ಷಿಸಿದೊಡತಿಯೆಂದಾ
ನಱಿಯದುಸುರಿದೆ ನಿಮಗಿನಿತು ನಿ
ಷ್ಠುರತೆಯಾದಡೆ ನಮಗಿದೇ[7]ಕೀ[7] ಬಾಯಿಬಡಿಕತನ
ಅರಸಿ ಕೌಸಲೆಯಿಂದ ಸೇರುವ
ಪರಿಭವವ ನೀವ್ ಕಾಬಿರೆನುತವ
ಳೆರಡುಕೈಗಳ ಮುಗಿದು ಹೊಱವಂಟಳು ನಿಕೇತನವ ೨೦

---

[1] ದಪಳೇನುನೆನಗಿವಳಿವಳೆಂದ (ಕ), ದಪಳೇನನಿವಳೆಂದವಳ (ಗ), ದಿವಳೆನ್ನೊಡನೆ ಬಳಿಕೆಂದ (ಜ). [2] ಹೇಳಿಯೆನೆ (ಕ.ಣ), ಕೇಳಿನೆರೆ (ಗ.ಜ). [3] ಚಾಳಿಗಳ (ಕ.ಚ.ಡ.ಣ), ಜಾಳಿಗಳ (ಗ). [4] ಳವಳೊಡನೆ (ಕ.ಟ.ಣ), ಳಾ ಕಾಂತೆ (ಜ). [5] ಕಾಂತೆ (ಕ.ಟ.ಣ). [6] ಕಲುಷಿತರು. [7] ತಕೆ (ಕ.ಟ.ಣ).

ಕರೆಯುವಳ ಮೂಸಂಡಿದೊತ್ತಿನ
ಮಱುಕ ಕರಲೇಸೆನಲವಳ ಹ
ತ್ತಿರಕೆ ತಂದರು [1]ಕೆಳದಿಯರು ಕೈಮುರುಟಲೊಡೆಯುವಟ[1]
ಇರಲಿರಲು ನಮ[2]ಗೇಕೆ ಹೊದ್ದುವ[2]
ಪರಿಭವವದೇ[3]ನೆ[3]ನಲು ಮಾಯಾ
ತರುಣಿ [4]ಮಾಯಾಮೋಹಕ[4]ದಲಿಂತೆಂದಳಾ [5]ಸತಿಗೆ[5] ೩೧

ಧರೆಯೊಳಗೆ ವೈರಿಗಳು ಬೇಱೊ
ಬ್ಬರೆ ನಿತಂಬಿನಿ ಕೇಳು ಸಾಪ
ತ್ನರು ಕಣಾ ಕಡುವಗೆಗಳುಳಿದವರ್[6]ಲ್ಪ[6] ವೈರಿಗಳು
ಧರಣಿ ರಾಮಂಗಾಗೆ ಕೌಸಲೆ
ಸರಕು ಮಾಡುವಳೇ ಸಮಶ್ರೀ
ವೆರಸಿ ಬದುಕಿದ ನಿನ್ನನೆಂದಳು ನಗುತ ಸೈಳೇಂದ್ರಿ ೩೨

ತೆವರಿದರು ನಿನ್ನಯ ಕುಮಾರರ
[7]ನೆವದಿನ[7]ತ್ತಲು ರಾಜ್ಯಲಕ್ಷ್ಮಿಗೆ
ಕವಡಹಾಯ್ಕಿದರಿತ್ತಲೀ ರಘುರಾಮಚಂದ್ರಂಗೆ
ವ್ಯವಹರಿಸಿತೀ ಕುಹಕ[8]ತನ[8] ನಿ
ಮ್ಮವನಿಪಾಲನ ಮತದಿ ನಿಮಗೀ
ಹವಣು ತಿಳಿಯದು ತಿಳುಹ[9]ಲೇ ನಿನಗೆಂ[9]ದಳಾ ಕಾಂತೆ ೩೩

ಅರಸಿ ಕೇಳ್ ಪೂರ್ವದಲಿ ಪಿಂಡವ
ಸರಿಯುನಿತ್ತನು ಸಕಲ ಪೃಥ್ವೀ
ಶ್ವರರ ಮಧ್ಯದಲಾ ಪ್ರಕಾರ[10]ದಲೂರ್ವಿ[10]ಯೊಡೆತನಕೆ
ಸರಿ ಕುಮಾರಕರಿಬ್ಬರಿದು ನಿ
ಮ್ಮರಸನಲಿ ಹುಟ್ಟಿದು ಸಮಸ್ತೈ
ಶ್ವರಿಯ ರಾಮಂಗಾಗೆ ನೀವೇನಹಿರಿ ಬಳಿಕಿನಲಿ ೩೪

---

[1] ಕೈಮುರುಟ ಕೆಳದಿಯರುವೊಡೆಯುವಟ (ಕ). ಕೆಳದಿಯರು ಕೈಮುರುಟ ರೊಡೆಯಾಕಿ (ಗ.ಚ), ಕೆಳದಿಯರು ಕೈವಮುರಿದುವೊಡೆಯುವಟ (ಟ.ದ). [2] ಗೇಕೆ ಹೊದ್ದದ (ಕ.ಣ). ಗಿನ್ನು ಪೋರ್ದುವ (ಗ). [3] ಕೆ (ಕ.ಣ). [4] ಮಂಥರೆ ಮೋಹನ (ಟ.ಡ). [5] ತರಳೆ (ಕ.ಣ). [6] ಲ್ಲ (ಜ.ಟ.ಡ). [7] ನೆವದಲ (ಕ.ಜ), ನವವರಿ (ಟ. ಡ). [8] ಮತ (ಕ.ಟ.ಡ.ಣ). [9] ಲೇನೆನಗೆಂ (ಕ.ಣ). ಲೆಮಗೇನೆಂ (ಗ), ಲೆಮಗೇಕೆಂ (ಜ). [10] ಕೆ ಪೊಡವಿ (ಚ).

ನಂಟರೋ ಸಾಮ್ರಾಜ್ಯಲಕ್ಷ್ಮಿಗೆ
ಬಂಟರೋ ನೀವ್ [1]ನಾನು ಬಱಿದೇ[1]
ನುಂಟು ಮಾಡುವ ಮಾತಿನಿಂದೇನಹು[2]ದು[2] ಫಲಸಿದ್ಧಿ
ಕಂಟಕರು ನಾವಾಗಲೇ[3]ಕಿದ[3]
ಕೆಂಟುಮಡಿ ನಯದಿಂದ ನೊಸಲಿನೊ
ಳಂಟಿ[4]ಸುವುದಾತಂಗೆ[4] ಪಟ್ಟವನೆಂದಳಾ [5]ಕಾಂತೆ[5] ೩೫

ಆರು ಮಾಡುವುದೇನು ಭಾಗ್ಯದ
ನಾರಿ ನೋಡಿದಳವರನಶು[6]ಭಾ
ಕಾರಿ[6] ನಿಮ್ಮ ನಿರೀಕ್ಷಿಸಿದಳಿದು ಸುಪ್ರಸಿದ್ಧವಲೆ
ಪ್ರಾರಬುಧಫಲಭೋಗವಿದ ಕೆಲ
ಸಾರಿಸಲು ನಿಮ್ಮಳವೆ ಮೀಱಲು
ಬಾರದಧಿಕೃತ ಪೂರ್ವದತ್ತವನೆಂದಳಾ ಸತಿಗೆ ೩೬

ಹುಟ್ಟಿದುದು ಬಳಿಕಾ[7]ಯತಿಕೆ[7] ಗಱಿ
ಗಟ್ಟಿತಗ್ಗದಸೂಯೆ ಮನ ಕವ
ಲಿಟ್ಟುದಾಕಾಂಕ್ಷೆಯಲಿ ರಾಜ್ಯಶ್ರೀನಿತಂಬಿನಿಯು
ನೆಟ್ಟ ನೇಹದಲವಳು ನುಡಿಗೊಡ
ಬಟ್ಟಳೈ ಕುತ ಕೇಳು ಮಾಯೆಯು
ಕಟ್ಟಿಗೊಳಗಾಗದರದಾರಭವಾದಿ ದೇವರಲಿ ೩೭

ಕರೆದು ಬಳಿಕೇಕಾಂತಕೊಯ್ದಾ
ದರಿಸಿ ಬೆಸಗೊಂಡಳು ನಯೋಕ್ತಿಯು
ಲರಸುತನ ಭರತಂಗೆ ಸೇರುವುಪಾಯವೇನೆಂದು
ಅರಿದಿದೇನೆಲೆ [8]ದೇವಿ[8] ನೃಪ ಕೊ
ಟ್ಟಿರಡುವರವುಂಟಾದಿಯಲಿ ಬೇ
ಡರಸನನು ನಿನಗಿದುವೆ [9]ಪಥ ಪಡೆವ[9]ಖಿಳಸಂಪದಕೆ ೩೮

[1] ನಾವು ಬಿರುದಿದ (ಕ), ನಾವು ಬಱಿದುದ (ಗ.ಜ.ಡ). [2] ದೊ (ಕ.ಟ.ಡ.ಣ). [3] ಕದ (ಗ.ಜ.ಡ), ತಕೆ (ಚ), ನದ (ಣ). [4] ಪುದು ರಾಮಂಗೆ (ಚ). [5] ತರಳೆ (ಕ.ಗ.ಟ). [6] ಭವಿ ಕಾರಿ (ಕ.ಟ.ಣ). ಭದ ನಾರಿ (ಗ). [7] ಸತಿಗೆ (ಕ.ಣ). [8] ತಾಯೆ (ಕ.ಣ). [9] ಫಲ ಪಡವ (ಚ), ಫಲವಹುದ (ಡ).

ಧರೆಯ ಭರತಂಗವನಿಜೇಶಂ
ಗರವರಿಸದಾರಣ್ಯವನು ಬೇ
ಡೆರಡುವರವಿವು ಸಫಲವಾದವು [1]ನಿನ್ನ ಭಾಗ್ಯ[1]ದಲಿ
ಪರಮಮತವಿದು ಪಲ್ಲಟಿಸಬೇ
ಡರಸಿ ಕೇಳೈಶ್ವರ್ಯಪದವಿಗೆ
ಪರಮಸಾಧನವೆಂದು ಮಂಥರೆ ನುಡಿದಳಾ ಸತಿಗೆ ೩೯

ಮುಸುಕಿದಳು ಮಾಯಾವಿಲಾಸದ
ವಸನದಲಿ ಮಾಯಾನಿತಂಬಿನಿ
ಮಿಸುಕದಂತಿರೆ ಕೇಳಿದೈ ಕಾಕುತ್ಸ್ಥನೃಪಸೂನು
ಪಿಸುಣರಿಂದಾ[2]ರೈ[2]ಶ್ವರಿಯು ಜಾ
ಳಿಸದು [3]ಜಗದಲ[3]ಸೂಯೆಯಧಿಕ
ವ್ಯಸನದಲಿ ಮನವಿಕ್ಕಿದಳು ಮಾನಿನಿ ಮಹೀತಳಕೆ ೪೦

ಸಡಿಲಿಸಿದಳು ದುಕೂಲವನು ಹೊಂ
ದೊಡವುಗಳ ಮಲಿನಾಂಬರವನಳ
ವಡಿಸಿದಳು [4]ಸೂಸಿದಳು ಸೌಗಂಧಿಕದ[4] ಸಿರಿಮುಡಿಯ
ಝುಡಿತೆಯಲಿ ನೆಲವಾಸಿನಲಿ ಸೈ
ಗೆಡದು ಸುಯ್ಯುತ ಶೂನ್ಯಹರುಷದ
ತೊಡಕಿನಲಿ ತಾಂಬೂಲವನು ತೊಱೆದಿರ್ದಳಾ [5]ಕೈಕೆ[5] ೪೧

ಭಾವೆಯರು ಬಳಿಸಲಿಸೆ ಖತಿಯಲಿ
ಸೀವರಿಸುವಳು ಮಜ್ಜನಕೆ ಮೈ
ಸೋವುವಳು ಸೊಗಸಳು ಸುಭೋಜನಗಂಧಮಾಲ್ಯದಲಿ
ದೇವ ತೊರವೆಯ ನರಹರಿಗೆ ಭೂ
ದೇವಿ ಸೇರದುಪಾಯವನು ನಾ
ನಾವಿಚಾರದಿ ನೆನವುತಿರ್ದಳು ಮನದೊ[6]ಳಾ[6] ಕೈಕೆ ೪೨

---

[1] ನಿಮ್ಮ ಪುಣ್ಯ (ಕ.ಣ). [2] ದೈ (ಚ.ಜ). [3] ಜಱೆದಳ (ಕ), ನೆನೆದಳ (ಣ). [4] ಸೌಗಂಧಿಕದ ಸಲ್ಲದುದ (ಕ.ಣ), ಕೆದಱಿದಳು ಸೌಗಂಧಿಕದ (ಗ). [5] ಕಾಂತೆ (ಕ.ಗ.ಜ). [6] ಳಗೆ (ಕ.ಗ.ಟ).

# ಎರಡನೆಯ ಸಂಧಿ

---

ಸೂಚನೆ: ಕೈಕೆಯನುಮತದಿಂದಲಾ ಲೋ
ಕೈಕವೀರನುದಾರಧೀರ [1]ಸ
ಮೀ[1]ಕಸಾಹಸ ರಾಮ ವನವಾಸವನು ಕೈಕೊಂಡ

ಕೇಳಿದೈ ಕುಶ ದಶರಥಕ್ಷಿತಿ
ಪಾಲನಾ ದಿನದಿರುಳು ಬಂದನು
ಮೇಳದಬಲಾಜನಸಹಿತ ಭರತಾಂಬಿಕೆಯ [2]ಬಳಿಗೆ[2]
ಆಳಿಯರು ಕೆಲಸಾರಿದರು ಭೂ
ಪಾಲಕನ ಬರವಿನಲಿ ನೃಪಶಯ
ನಾಲಯ[3]ವ ಸಾರಿ[3]ದನು ಸುಮ್ಮಾನದ ಸಘಾಡದಲಿ ೧

ಲಲನೆಯಿದ್ದಳು ಮಲಿನಮಯಪು
ತ್ತಳಿಯವೊಲು ಹೇಮಂತಕಾಲದ
ನಳಿನಿಯಂತೆ ನಿದಾಘದೆಳೆಲತೆಯಂತೆ ರಾಹುವಿನ
ಎಳತಟದ ಶಶಿ[4]ಲೇಖೆಯಂತು[4]
ಜ್ವಲತೆಗುಂದಿದ ಮುಖದ ಕಾಂತಿಯ
ಹಳಹಳಿಕೆ [5]ಹಳುವಾದ ಕೈಕೆಯ[5] ಕಂಡನಾ ಭೂಪ ೨

ಅರಸ ನುಡಿದನಿದೇನಿದೇನ
ಚ್ಚರಿ ಮಹಾಮಾಂಗಲ್ಯಮಾನಿನಿ
[6]ಗಿರವ[6]ದೆಲ್ಲಿಯದಾದುದಶುಭಾಕಾರ [7]ನಿನಗೆನುತ[7]
ಕರಸರೋಜದಿನಂಗನೆಯ ಮುಖ
ಸರಸಿಜವನಭಿಮುಖವಮಾ[8]ಡಿದು[8]
ತರುಣಿ ದುಗುಡವಿದೇನು ಹೇಳೆನ್ನಾಣೆ ಹೇಳೆಂದ ೩

---

[1] ರಣ್ಯೈ (ಕ). [2] ಮನೆಗೆ (ಗ.ಜ.ಡ). [3] ಕೆ ಸಾರಿ (ಚ), ವನೈದಿ (ಟ.ಡ). [4] ಯಂದದಿಂದು (ಕ.ಜ.ಣ). [5] ಹಳುವಾದ ಕಾಂತೆಯು (ಕ), ಹಳುಗಾದ ಕೈಕೆಯು (ಗ.ಟ.ಡ.ಣ), ಗೊಳಗಾದ ಕೈಕೆಯು (ಜ). [6] ಯರಿಗಿ (ಕ.ಣ). [7] ದಾರೈಕೆ (ಕ.ಜ.ಣ). [8] ಡುತ (ಕ.ಜ.ಣ).

ಆರು ಮುನಿದರು ನಿನಗೆ ನಿನ್ನ ಮ
ನೋರಥಾಮರಕುಜಕೆ ಕಠಿಣಕು
ಠಾರರಾದವರಾರು ನುಡಿ ನೀನಂಜಬೇಡೆನುತ
ಸಾರಿ ಮಂಚವನಿಳಿಯೊಳೊಱಗಿದ
ನಾರಿಯನು ಬರಸೆಳೆದು ನೃಪ ಲಲಿ
ತೋರುವಿಗೆ ತಂದುಗುರಿಸಿದನಳಿದಳಕಪಂಗ್ತಿಗಳ ೪

ಮನದ ಬಯಕೆಯದೇನು ಹೇಳದ
ನಿನಗೆ ಸಲಿಸುವೆನಂಜಿಕೆಯ [1]ಬಿಸು
ಟನುಕ[1]ರಿಸು ನಿನ್ನಿಷ್ಟವಾವುದು ಕೊಟ್ಟೆನದ ಬೇಡು
ತನುಜ ರಾಘವನಾಣೆಯೆನೆ ಮೆ
ಲ್ಲನೆ ಮುಖೇಂದುವ ಮುರಿದು ನೃಪನಾ
ನನವನೀಕ್ಷಿಸುತಬಲೆ ನಗುತಿಂತೆಂದಳರಸಂಗೆ ೫

ಕೊಡಸಮರ್ಥರೆ ಬೇಡಿದುದ ನೀವ್
ನುಡಿದು ತಪ್ಪುವರಲ್ಲಲೇ ಬಾ
ಯ್ಬಡಿಕಿಯಿವಳೆಂದೆನ್ನಿರಲೆ ನೋವಿಲ್ಲಲೇ ಮನಕೆ
ಎಡಬಲಕೆ ಮನವಿಕ್ಕಿರಲೆ ತಾ
ನುಡಿದ ನುಡಿಯನು ಸಲಿಸುವುದು ನೆಱೆ
ದೃಢವೆ ದೃಢವೆಂದಿತ್ತನಱಿಯದೆ ಸತಿಗೆ ನಂಬುಗೆಯ ೬

ಹಿಂದೆ ನೀವೆನಗಿತ್ತ ವರವೆರ
ಡಂದಿನವ ನೀವ್ ಬಲ್ಲಿ[2]ರೇ[2] ಸಂ
ಕ್ರಂದನನ ಶಂಬರನ ಸಮರದ ಸೋಲಗೆಲವಿನಲಿ
ಎಂದಡೆಂದ[3]ನು ಬಲ್ಲೆ[3] ಬೇಡೆನ
ಲೊಂದು ವರದಲಿ ಧರೆಯ ಭರತಂ
ಗೊಂದಱಲಿ ಬೇಡಿದಳು ರಾಮಂಗಡವಿಯೊಡೆತನವ ೭

[1] ಬಿಟ್ಟನುಸ (ಕ.ಡ.ಣ), ಬಿಸುಟನುಸ (ಗ), ಬಿಸುಟನುವ (ಚ). [2] ರಲೆ (ಚ). [3] ನು ಅಬಲೆ (ಕ.ಣ), ನಿದೇನು (ಡ).

ವನಿತೆಯುತ್ತರದಲಗು ನಾಟಿತು
ಜನಪನುರವನು ಬಗಿದು ಬೆನ್ನಲಿ
ಮನದ ಮಱುಕದಲೊಱಗಿದನು ಹಾ ಎನುತ ಹಮ್ಮೈಸಿ
ತನುವ [1]ತುಂಬಿತು[1] ತಾಪ ತಾಪದ
ಘನತೆಯಲಿ ಗರುವಾಯಿಗೆ[2]ಟ್ಟನು
ನನದು[2] ನಯನಜಲಂಗಳಲಿ ನೂಕಿದನು ಯಾಮಿನಿಯ ೮

ನರಚರಿತ್ರದ ರಾಮ ದಶಕಂ
ಧರನ ವಧೆಗುದ್ಯಕ್ತನಹನೆಂ
ಬುರುತರೋತ್ಸ[3]ಹವಱಿದು[3] ಶಚಿ ಸುರಪತಿಯ ನೇಮದಲಿ
ಇರುಳಿನಗ್ರದಲಮಳಮಣಿಬಂ
ಧುರದ ಹೊಂದಳಿಗೆಯ ನಿವಾಳಿಯ
ಧರಿಸಿದಳೊ ದರಹಾಸ ಮಿಗಿಲೆನಲೆಸೆದುದಿನಬಿಂಬ ೯

ಹರೆದುದೀ ನೃಪಚಕ್ರವರ್ತಿಯ
ಹರುಷಕುಂಠಿತವಾರ್ತೆ ನಗರದ
ಲರಸಿಕೌಸಲೆ ರಾಮ ಸೌಮಿತ್ರಿಯರು ಹೊಱಗಾಗಿ
ಹಿರಿದು ಮನದಲಿ ಮಱುಗಿ ಮಂತ್ರಿಗ
ಳರಮನೆಗೆ ನಡೆತಂದು ಮೈತ್ರಾ
ವರುಣಿಯಲಿ [4]ಮಾಡಿ[4]ದರು ಮಂತ್ರಾಲೋಚನೆಯ ಹದನ ೧೦

ಧರಣಿಪ[5]ತಿ[5] ಕೈಕೆಯ ವಿವಾದದ
ಭರದ ಸುದ್ದಿಯ ಬಾಲದೂತರಿ
ನಱಿದು ಮಱುಗಿದರಿವರು ಪಾಣಿಶ್ರೋತ್ರಬಂಧದಲಿ
ಹರಮಹಾದೇವೆನುತ ನಯನ[6]ದಿ
ನು[6]ರುಳುವಂಬಕವಾರಿಬಿಂದುವ
ಬೆರಳಕೊನೆಯಲಿ ಮಿಡಿದು ಮಿಡುಕಿದರಧಿಕ[7]ಶೋಕ[7]ದಲಿ ೧೧

---

[1] ತುಡುಕಿತು (ಕ.ಙ). [2] ಟ್ಟೊಗುವನಿಯ (ಕ.ಟ.ಡ.ಙ). [3] ವದಿಂದ (ಕ.ಙ), ವವಱಿದು (ಚ). [4] ನೂಕಿ (ಟ.ಡ). [5] ನ (ಕ.ಟ.ಡ.ಙ). [6] ದಲು (ಚ.ಡ.ಙ). [7] ರೋಷ (ಗ.ಟ.ಡ.ಙ).

ಏನುಪಾಯವು ನಿಮ್ಮ [1]ತಮ್ಮನು[1]
ಮಾನವಾವುದಿದಕ್ಕೆ ಯೋಚನೆ
ಗೇನು ಹದನನು ಕಂಡಿರೆಂದವರೊಬ್ಬರೊಬ್ಬರಲಿ
ಹೀನವಿದು ಮಧ್ಯಮವಿದುತ್ತಮ
ಸಾನುಮತವಿದು ಸಾಕು [2]ನ[2]ಮ್ಮನು
ಮಾನ[3]ವಿಂದಿಂತೆಂದು[3] ನಿಶ್ಚೈಸಿದರು [4]ನಿಜಮತವ[4] ೧೨

ಕರೆಸಿ ರಾಮನನೀ ನೃಪನ ಮುಂ
ದಿರಿಸಿ ನೋಡುಪೆವವರ ಚಿತ್ತದ
[5]ಹರಹು[5]ಗಳ ಬಳಿಕಱಿವೆವೆಂದುತ್ಸಾಹಭೇರಿಗಳ
ಅರಮನೆಯಲೊದಱಿಸಿದರಡಗಿಸಿ
[6]ಪುರಜನದ[6] ವಾರ್ತೆಯನು ನೆರಹಿದ
ರರಸುಗಳ ನಿಖಿಳಾಪ್ತಸಚಿವನಿಯೋಗಿ ಪರಿಜನವ ೧೩

ಕುಶನೆ ಕೇಳ್ ಪಟ್ಟಾಭಿಷೇಕದ
ವಸತಿ ಸಿಂಗಾರಿಸಿತು ನೆರೆದವು
ಹೊಸಪರಿಯ ನೃಪಲಾಂಛನಾದಿ ಸಮಸ್ತವಸ್ತುಚಯ
ಒಸಗೆ ತತ್ಪುರವರವನವಲಂ
ಬಿಸಿತು ನಿಮಿಷದಲಾ ಸುಮಂತ್ರನ
ದಶರಥನ ಬಳಿಗಟ್ಟಿ ರಾಮನ ಬಳಿಗೆ ಮುನಿ ಬಂದ ೧೪

ಬಂದ ಮುನಿಪನ ಭಕ್ತಿಪೂರ್ವಕ
ದಿಂದ ಸತ್ಕರಿಸಿದನಲ್ಲೈ ರಘು
ನಂದನನು ವಿಧಿವಿಹಿತಗುರುಪೂಜಾವಿಧಾನದಲಿ
ಎಂದನಾ ಮುನಿಪತಿಗೆ ಕಂಡೆನಿ
ದೊಂದು ಕನಸನು ಕಾನನದೊಳರ
ವಿಂದಮುಖಿಸಹಿತೆನಗೆ ಸಂಭವಿಸಿತು ಪರಿ[7]ಭ್ರಮಣ[7] ೧೫

ಕಂಡೆಱೆದೆನನಿತಱಿಲಿ ಮನಕಿದು
ಚಂದವಾಗಿರದೇನು ನೀವೇ
ನೆಂದು ಕಂಡರಿ ರಾಜ್ಯಸಂಪದದಾಗಮಸ್ಥಿತಿಗೆ

---

[1] ಮನದನು (ಗ.ಜ). [2] ನಿ (ಕ.ಚ). [3] ಮಾನವಿದೆಂದು (ಕ.ಣ). [4] ತಮ್ಮೊಳಗೆ (ಟ.ಡ). [5] ಹುರುಳು (ಚ). [6] ದರು ಪುರದ (ಕ.ಟ.ಡ), ದರು ಪುರೋ (ಣ). [7] ಯಾಟನ (ಟ.ಡ).

ಮುಂದೆನಲು ಮುನಿನಾಥ ಮುಗುಳಿಂ
ತೆಂದನಾಯಸದೋಟಿಬಿ ಬಳಿಕ ಪು
ರಂದರನ ವೈಭವ[1]ಕೆ ಸರಿ[1]ಸಿರಿಯಹುದು ನಿನಗೆಂದ ೧೬

ನಿಮ್ಮ ಕರುಣಕಟಾಕ್ಷರಕ್ಷಣೆ
ನಮ್ಮ ಮೇಲಿರಲಾವ ದುರ್ಘಟ
ವೆಮ್ಮ ಮಾಡುವುದೇನು ನಾವ್ ನಿರ್ದೈವರೇಯೆನುತ
ಬೊಮ್ಮಕೋಟಿಕಿರೀಟ[2]ಮಂಡಿತ[2]
ನಿಮ್ಮರ್ಗಳಾಂಘ್ರಿನಖಪ್ರಭಾಕರ
ನುಮ್ಮಹದೊಳೆಱಗಿದನು ನರರವೊಲಾ ಮುನೀಂದ್ರಂಗೆ ೧೭

ಅರಸನಾಗಧಿರಾಜನಾಗೂ
ರ್ವರೆಗೆ ಪತಿಯಾಗಧಿಕ ಸೂನೃತ
ಚರಿತನಾಗರಿವಿಜಯನಾಗು ಸಮಸ್ತ ಸುಜನರಿಗೆ
ಸುರಮಹೀರುಹನಾಗು ಲಕ್ಷ್ಮೀ
ವರನವೊಲು ಷಾಡ್ಗುಣ್ಯಸಕಲೈ
ಶ್ವರಿಯಯುತನಾಗೆಂದು ಮುನಿ ಹರಸಿದನು [3]ಹರುಷದಲಿ[3] ೧೮

ಬಿಸರು[4]ಹಪ್ರಿಯಕುಲದ ಮುನಿ[4] ಮಾ
ನಸಸರೋವರರಾಜಹಂಸನ
ನೊಸೆದು ಮಂಗಳಮಜ್ಜನವ ಮಾಡಿಸಿದನಾ ಮುನಿಪ
ಒಸಗೆವರೆ ಘುಲ್ಲವಿಸೆ ನೂತನ
ವಸನ ವಿಮಲವಿಭೂಷಣಂಗಳ
ಲೆಸೆದನೈ ಮೂರ್ಧಾಭಿಷೇಕದ ರಾಜತೇಜದಲಿ ೧೯

ಮಾಡಿದನು ಮನದಣಿಯೆ ದಕ್ಷಿಣೆ
ಗೂಡಿ ಕನ್ಯಾಧೇನು ದಾನವ
ನಾಡಲೇನದನವನಿಯಮರರ ಸಿರಿಯ ಸಡಗರವ
ಝಾಡಿವೆಳಗಿನಲಾರತಿಗಳೆಡೆ
ಯಾಡಿದವು ಕಳಕಳಿಕೆ ಮಿಗೆ ಮುಂ
[5]ಡಾ[5]ಡಿದವು ಕಂಬಿಗಳು ಕಂಚುಕಿಜನದ ಕೈಗಳಲಿ ೨೦

---

[1] ದವ್ಪೋಲು (ಕ.ಟ.ಣ), ದಸರಿ (ಡ). [2] ಬಿಂಬಕ (ಕ.ಣ), ಬಿಂಬಸು (ಗ).
[3] ರಘುಪತಿಯ (ಗ), ಕರುಣದಲಿ (ಜ). [4] ಹಾಪ್ತಕುಲಪ್ರಿಯನ (ಕ), ಹಾಕುಲ
ಪ್ರಿಯದ ಮುನಿ (ಣ). [5] ದಾ (ಕ.ಜ.ಣ).

ಕ್ಷಿತಿಯು ವಿಬುಧರ ವಿಮಲಮಂತ್ರಾ
ಕ್ಷತೆಯ ಕೈಕೊಳುತಡರಿದನು ನಿಜ
ಸತಿಸಹಿತ ಹೊಂಗದ್ದುಗೆಯ ಹೊಂಬೆಸೆದ ಜೆಂಚೆ[1]ಯದ[1]
ರತುನಲಹರಿಯ ಲಳಿಯು ಭದ್ರಾ
ಯುತ[2]ಮತಂಗದ[2] ಕಂಧರವ ಮುನಿ
ಪತಿಯನುಜ್ಞೆಯೊಳಖಿಳತೂರ್ಯತ್ರಯದ ರಭಸದಲಿ ೨೧

ಬಳಿಸಲಿಸಿತು ನೃಪಾಲತತಿ ಹೆ
ಕ್ಕಳಿಸಿದುದು ಚತುರಂಗಬಲವೆಡ
ಬಲದಲುಗ್ಘಡಿಸಿದರು ಕೈವಾರಿಗಳು ಬಿರಿದುಗಳ
ನಿಳಯು ನಿಳಯುದ ನಳಿನಮುಖಿಯರ
ಹೊಳೆವ ರತ್ನಾವಳಿಯ [3]ದೀಪಾ
ವಳಿಯು[3] ಸಂಭ್ರಮದಿಂದ ಬಂದನು ರಾಜಬೀದಿಯಲಿ ೨೨

ತಳಿತಪಲ್ಲವ ಪೆಲ್ಲವವನು
ಜ್ವಲಿಪ ಮಣಿಹರ್ಮ್ಯಾಳಿ ಚಿತ್ರಾ
ಚಲವನಾ ರಾಮಾವಳಿಯು ಶಿಖಿಶುಕಪಿಕವ್ರಜದ
ಉಲುಹು ವಿಪಿನವಿಹಂಗಮದ ಕ
ಟ್ಟುಲುಹು ಸೂಚಿಸುತಿರ್ದುದೈ ವನ
ವಿಲಸದಭಿನವರಾಜ[4]ಪದವಿಯ[4]ನವನಿಜಾಪತಿಗೆ ೨೩

ಕದಡಿದಂತಃಕರಣಗಳ ಗದು
ಗದಿ[5]ತ[5] ಕಂಠದ ಕಂಬನಿಯುಲಿ
ದ್ದುದು ಸಮಸ್ತಚಮೂಪಸಚಿವನಿಯೋಗಿಬಂಧುಜನ
ಇದಿರುವಂದು ಸುಮಂತ್ರನಿಳೆಗಿಳು
ಹಿದನು ಮದಕರಿಯಿಂದ ಮುರಿವಿನ
ಮುದದ ಹೊಳೆವಶ್ರುಗಳ ಸಂತಾಪದಲಿ ರಘುಪತಿಯ ೨೪

ತೆವರುದೊದ್ದೆಯ ಹೊಗಿಸಬೇಡುಳಿ
ದವರನೆಂದೊಳಹೊಗುತ ನೇಮವ
ನವಸರದ ಸೇವಕರಿಗಿತ್ತು ವಸಿಷ್ಠಮುನಿ ಸಹಿತ

---

[1] ಗಳ (ಜ.ಟ.ಡ.ಣ). [2] ದ ಮದಗಜ (ಗ.ಟ). [3] ಲಾರತಿಗಳಸು (ಗ).
[4] ತೇಜವ (ಕ.ಗ). [5] ಪ (ಚ).

ಅವನಿತನುಜಾಪತಿಗೆ ಕೈಗೊ
ಟ್ಟವನಿಪನ ಬಳಿಗಾಗಿ ಕೈಕೆಯ
ಭವನದತ್ತಲು ತಿರುಗಿದನು ಮಂತ್ರೀಶ ದುಗುಡದಲಿ ೨೫

ಯುವತಿಯರ ಗುಜುಗುಜಿನ ಶೂನ್ಯೋ
ತ್ಸವದ ನೃಪಮಂದಿರದ ಜಾಡ್ಯದ
ಜವನಿಕೆಯ ಜಂಜಡವ ಕಾಣುತ ನುಡಿದನಿಂತೆಂದು
ಅವನಿ ನಮ್ಮ[1]ಗಸ್ವಾಮ್ಯ[1]ವೆಂಬೀ
ವ್ಯವಹರಣೆ ಗೋಚರಿಸುತಿದೆ ಸಂ
ಭವಿಸಲುತ್ತರವೆಂದನಾ ರಘುಪತಿ ಸುಮಂತ್ರಂಗೆ ೨೬

ಹೃದಯ ಕಳವಳಿಸಿದುದು ಕಂಗ[2]ಳ
ಹೊದೆ[2]ಸಿದವು ನಯನಾಂಬು ಮಱುವಾ
ತುದಿಸದೊಯ್ಯನೆ ಬಾಗಿದನು ಮಂತ್ರೀಶ ಮಸ್ತಕವ
ಬೆದಱಿದನು ರಘುಪತಿ ಸುಮಂತ್ರನ
ವದನಚೇಷ್ಟೆಯ ಕಂಡು [3]ತಂದೆಯ[3]
ಹದನಿದೇನೆನುತರಸನಿದ್ದೆಡೆಗಾಗಿ ನಡೆತಂದ ೨೭

ವಿತತಗಳಿತಾಶ್ರುಪ್ರಕರಪೂ
ರಿತನಿಮೀಲಿತನೇತ್ರನನು ನಿ
ರ್ಗತವಚೋವಿಹ್ವಲನ ಶೋಕೋದ್ರೇಕಪರವಶನ
ಸತಿಯ ಕರ್ಕಶಕಲುಷ[4]ವಾಕ್ಶರ[4]
ಹತಿನಿರೋಧಿತ ಹೃದಯಬಾಧಾ
ನ್ವಿತನ ಕಾಣುತ ಕೈಯಕದಪಿನಲಿರ್ದನಾ ರಾಮು ೨೮

ಆ ಸಮಯದಲಿ ಮನವಱುಗಿ ಮಂ
ತ್ರೀಶನೊಯ್ಯನೆ ರಾಜರಾಜಾ
ಧೀಶನನು ನುಡಿಸಿದನು ಮಧುರವಚೋವಿಲಾಸದಲಿ
ಈಸು ನಿರ್ಬಂಧದ ನಿರೋಧ
ಕ್ಲೇಶವಾರಿಂದೇನುಕಾರಣ
ವಾಸವಾದುದು ದೇವರಂಗದಲೆಂದನಾ ಮಂತ್ರಿ ೨೯

---

[1] ಗೆಯುಸಾಧ್ಯ (ಟ.ಡ). [2] ಳೊಳುದಿ (ಚ). [3] ಭರದಲಿ (ಕ.ಣ), [4] ವಾತರ್ಾ (ಕ.ಣ), ವಾಸರ (ಝ).

ತರಣಿವಂಶದ ಸಾರ್ವಭೌಮರಿ
ಗೆರವಲಾ [1]ದುಶ್ಚಿತ್ತ[1] ಮನುಕುಲ
ದರಸುಗಳಿಗೆ ವಿಷಾದವದು ತಾ[2]ನ[2]ಪ್ರಸಿದ್ಧವಲೆ
ಅರಿವಿಜಯವೀರರಿಗೆ ಚಿಂತಾ
ಸ್ಪರುಶವುಂಟೇ ಜೀಯ ಯೋಗೋ
ತ್ಕರುಷರಿಗೆ ದೇಹವ್ಯಥೆಯದೇಕೆಂದು ಬೆಸಗೊಂಡ ೩೦

ಆ ಮಧುರ [3]ವಾಚೋ[3]ವಿಲಾಸೋ
ದ್ದಾಮಗಾರುಡಮಂತ್ರವೆಬ್ಬಿಸಿ
ತಾ ಮಹಾದುಷ್ಟಾಂಗನಾ ರಸನಾಹಿದಷ್ಟನನು
ರಾಮನೇ ಬಂದಾತ ಜಗದಭಿ
ರಾಮನೇ ನುಡಿವಾತ ಮಂಗಳ
ನಾಮನೇಯೆನುತಪ್ಪಿದನು ಮಗನೆಂದು [4]ಮಂತ್ರಿಯನು[4] ೩೧

ಜೀಯ ತಾನು ಸುಮಂತ್ರಕನು ರಘು
ರಾಯನಭಿಷೇಚನದ ರಾಜ್ಯ
ಶ್ರೀಯ ಪರಿಣಯಕಾವುದಭಿಮತ ನಿಮ್ಮ ಚಿತ್ತದಲಿ
ರಾಯತನದಭಿಮುಖದ ಕಮಲದ
ಳಾಯತಾಂಬಕ ಬಂ[5]ದ್[5]ಹನೆ ಮುನಿ
ರಾಯನೈತಂ[6]ದಿ[6]ಹನೆ ನೇಮವದೇನು ತನಗೆಂದ ೩೨

ಮಗನೆ ಬಂದ್ಯೆ ಮನುಕುಲಾಂಬರ
ಗಗನಮಣಿ ಬಂದ್ಯೆ ಮನೋರಥ
ಸು[7]ಗುಣ[7] ಬಂದ್ಯೆ ಸೂನೃತವ್ರತ ಬಂದೆಯ್ಯೆಯೆನುತ
ಒಗುವ ನಯನೋದಕದಲರೆದಿ
ಟ್ಟಿಗಳ ನೋಟದಲಪ್ಪಿ ಸತ್ಯದ
ತಗಹಿನವನೀನಾಥನಾ ರಘುನಾಥಗಿಂತೆಂದ ೩೩

[8]ಕಂದ[8] ಕೇಳೆನ್ನಣುಗ ಕೇಳಾ
ನೊಂದ ನೆನದರೆ ದೈವತಾ ಬೇ
ಱೊಂದ ನೆನದುದು ದೈವಗತಿಗೀ ಕೈಕೆಯನುಸಾರಿ

---

[1] ದುಶ್ಚರಿತ (ಕ.ಝ.ಟ.ಡ.ಣ), ದುಶ್ಚಿಂತೆ (ಜ). [2] ಸು (ಗ.ಟ). [3] ವಚನದ (ಕ.ಣ), ವಚನೋ (ಟ.ಡ). [4] ದಳಪತಿಯ (ಕ.ಗ.ಝ.ಟ.ಡ.ಣ). [5] ದಿ (ಕ.ಗ.ಝ.ಟ.ಣ). [6] ದ (ಟ.ಡ). [7] ಗಮ (ಗ.ಡ), ಗುಣಿ (ಝ.ಟ.ಣ). [8] ತಂದೆ (ಚ.ಟ).

ಎಂದು ಮೇಲುತ್ತರಕೆ ನಾಲಿಗೆ
ಬಂದು ಬಂದೊಳಸರಿದು ಮೆಲ್ಲನೆ
ನಿಂದು ಬಳಿಕೀ ಮಾತನೆಂದನು ಕಲಿಸುಮಂತ್ರಂಗೆ ೩೪

ಈಸುದಿನ ಪರಿಯಂತ ವಿಭವದ
ವಾಸ ಸೊಬಗಿನ ಸೆಜ್ಜೆ ಸುಖದ ಸು
ದೇಶ ಸುಮ್ಮಾನದ ಸುಧಾಂಬುಧಿ ಸಿರಿಯ ನೆಲೆವೀಡು
ಲೇಸಿನಾಗರ ಶುಭದ ಬಹಳಿತ
ಕೋಶ ಸಂತಸದಿಕ್ಕೆ ಸೊಂಪಿನ
ವಾಸವಾಗಿದ್ದುದು ನಿವಾಸವಿದೆಂದನಾ ಭೂಪ ೩೫

ಅಶುಭದಾಡುಂಬೊಲನು ಕುಮುದದ
ಹಸರ ಚಿಂತೆಯ ಸಂತೆ ದುಃಖದ
ವಸತಿ ದುಗುಡದ ಬೀಡು ದುಮ್ಮಾನದ ಜನಸ್ಥಾನ
ಅಸುಖದಾರವೆ [1]ಖೇದ ಹು[1]ದಿದಾ
ಯಸದ ಜಾಳಿಗೆ ಜವನ ಮನೆ ರ
ಕ್ಕಸಿಯ ಮಠವಾಯ್ತೆಂದು ಭವನವಿದೆಂದನಾ ಭೂಪ ೩೬

ನರಪತಿಗಳೊಳು ಭಾಗ್ಯದಲಿ ಬಾ
ಹಿರರಲಾ ನಾವಿಂದು ಸುಕೃತದೊ
ಳರೆಗೆಲಸಿಗಳು ನಾವಲೇ ಹರಹರ ಮಹಾದೇವ
ಪರ[2]ಮ[2]ಹರುಷದ್ರುಮದ ಬೇರಿಂ
ಗುರಿಯನುಱೆ ಚಾಚಿದೆ[3]ವಲೇ[3] ಕಡು
ದುರಿತಕಾಯರು ನಾವಲೇ ಹಾ ಎಂದನಾ ಭೂಪ ೩೭

ಹೇಳಿ ಫಲವೇನೆಲೆ ಸುಮಂತ್ರಕ
ಮೇಲನಱಿಯದೆ ಕೊಟ್ಟೆನೀ ಘಾ
ತಾಳಿಗ[4]ಸುರಾಮ[4]ರರ ಸಂಗ್ರಾಮದಲಿ ವರವೆರಡ
[5]ಬಾಳಚಾಚಿ[5]ದಳಿವಳೆನಗೆ ಗೋ
ನಾಳಿಗೊಡ್ಡಿದ ಬಂದಿ[6]ಯಲಿ ತುದಿ[6]
ನಾಲಗೆಗೆ ನರಸುಕ್ಕ ನಿಕ್ಕಿದಳಿವಳು ತನಗೆಂದ ೩೮

---

[1] ಕ್ಲೇಶಪ್ರ (ಕ.ಜ.ಣ). [2] ರ (ಕ.ಟ.ಡ.ಣ). [3] ವಲಾ (ಕ.ಣ), ನಲ್ಲೈ (ಚ), ವಲ್ಲೈ (ಜ). [4] ಮರಾಸು (ಕ.ಜ.ಣ). [5] ಬಾಳಲೌಕಿ (ಚ), ಬೀಳಚಾಚಿ (ಝ.ಟ.ಡ). [6] ಯುರಿಯಲಿ (ಚ).

ಬಟ್ಟಗುತ್ತ[1]ದ ವಿದ್ಯವಿವರಿಗೆ[1]
ಕೊಟ್ಟಿರುಂಟೆಲೆ ಮಂತ್ರಿ ಕೇಳ್ ಮನ
ಮುಟ್ಟಿ ನುಡಿ[2]ಯಲಿ ಭಾವಿಸದೆ ಸದ್ಧರ್ಮ[2]ಮಾರ್ಗದಲಿ
ಕೊಟ್ಟ ವರವೆರಡುಂಟು ಬೇಡಲು
ಕೊಟ್ಟ[3]ರವರಿಂ[3]ದೀಗ ಹೊದಕುಳಿ
ಗುಟ್ಟುತಿಹರಿದನಱಿಯೆ ನೀ ಕೇಳೆಂದಳಾ ಕೈಕೆ ೩೯

ಬಂದುದೆ[4]ಮ[4]ಗಪಕೀರ್ತಿ ರಾಜ್ಯವ
ನೊಂದುವರದಲಿ ಬೇಡಿದೆ[5]ವು[5] ನಿಜ
ನಂದನಂಗೊಂದಱಲಿ ರಾಮಂಗಡವಿಯೊಡೆತನವ
ಇಂದುಮುಖಿಯರ ಸಾಕ್ಷಿಯಲಿ ಮೊದ
ಲೊಂದಿಸಿದರೆನಗೀ ವರವ ನೀವ್
ಬಂದಬಳಿಕನುಮಾನವಾಗಿದೆ [6]ನಿಮ್ಮ[6] ರಾಯರಿಗೆ ೪೦

ಮನುಕುಲದ ರಾಯರಲಿ ಹುಸಿ ಸಂ
ಜನಿಸದೆಂದೊಳಗಱಿಯದೆನ್ನಯ
ತನುಜಗಧಿರಾಜತ್ವವನು ಬೇಡಿದೆನು ನಿಮ್ಮವರ
ಇನಿತುಸತ್ಯಕೆ ಮರಳುದಲೆಯಿರ
ಲೆನಗೆ ದೊಡ್ಡಿತೆ ಸಾಕು ರಘುನಂ
ದನಗೆ ಪಟ್ಟವ ಕಟ್ಟಿ ನೀವ್ ನೆರೆದೆಂದಳಾ ಕೈಕೆ ೪೧

ಈತನೇನು ದಧೀಚಿ ಶಿಬಿ ಜೀ
ಮೂತವಾಹನ ಬಲಿ ಕಪೋತ
ಖ್ಯಾತರೊಳಗಗ್ಗಳನೆ ಬೇಡಿತನೀವಡವನಿಯಲಿ
ಮಾತ[7]ದೇತಕೆ[7] ಮಂತ್ರಿ ಸಾಕಿ
ನ್ನೇತಕವನಿಯ ಬಯಕೆ ರಘುಸಂ
ಜಾತಗಭಿಷೇಕವನು ಮಾಡಲಿಕೆಬ್ಬಿಸವನಿಪನ ೪೨

---

[1] ರವಿದ್ಯೆಯಿವದಿರು (ಕ), ನವಿದ್ಯವಿವರೇ (ಟ), ರವಿದ್ಯವಿವರಲಿ (ಚ), ದವಿದ್ಯಯಿವರಲಿ (ಝ), ರವಿದ್ಯೆವಿವದಿರು ಟ.ಡ). [2] ಯ ವಿಭಾಡಿಸದೆ ಸದ್ಧರ್ಮ (ಕ), ಯೆ ವಿಭಾಗಿಸದೆ ಸದ್ವರ್ತ (ಟ.ಡ). [3] ವರದಿಂ (ಚ), ನವನೆಂ (ಟ.ಡ). [4] ನ (ಗ). [5] ನು (ಗ.ಚ.ಜ). [6] ನಮ್ಮ (ಚ). [7] ದೇನೆಲೆ (ಗ), ದೇಕೆಲೆ (ಜ), ಕೇಳೆಲೆ (ಝ.ಟ.ಡ).

ದೊಡ್ಡಿತೇ ಕ್ಷತ್ರಿಯರಿಗೀ ಕಡು
ಖಡ್ಡತನವಿರಬೇಕು ರಾಮಂ
ಗೊಡ್ಡಿ[1]ದೀ ಕವಡೊಂದ[1] ತಪ್ಪಿಸಿ [2]ನೆನೆದ[2] ಮತಿ ಲೇಸು
[3]ಬೊಡ್ಡಿ ತನಗ[3]ಪಕೀರ್ತಿವಧು ಸಲೆ
ದೊಡ್ಡಿದರು ರಘುಸಗರರವರೊಳ
ಗಡ್ಡನಗೆ ಹೊಗದಂತೆ ಮಾಡುವುದುಚಿತ ನಿಮಗೆಂದ ೪೩

ಸುತವಿಯೋಗದಲಳಿಯದಿರನೀ
ಕ್ಷಿತಿಪ ನೀವಿಂದುಗ್ರ[4]ಪಾತಿ[4]
ವ್ರತೆಯರೊಳಗಗ್ಗಳರು [5]ನಿಮ್ಮನು ನೆಮ್ಮುಗಪಕೀರ್ತಿ[5]
ಕ್ಷಿತಿಯ ಕುಜನರ ಜಿಹ್ವೆ ಕಡುಕೊ
ರಿತು ತದರ್ಥದಿನವನಿಪಾಲ
ಚ್ಯುತಿಗೆ ಮನವನು ಮಾಡುವುದು ನಿಮಗುಚಿತವಲ್ಲೆಂದ ೪೪

ಇರಲಿ ನಿಮ್ಮ ಕುಮಾರನೀ ಧರೆ
ಯರಸುತನದಲಿ ರಾಘವೇಶ್ವರ
ನಿರಲಿ ಭೂನುತನಾಗಿ ರಾಜರುಷಿತ್ವದಲಿ ಬಳಿಕ
ಇರ[6]ದಪಪ್ರಥೆ[6] ನಿಮಗೆ ಮೆಱೆವುದು
ಧರೆಯು ಸಿರಿ ಮನ್ವಾದಿರಾಯರ
ತರುಣಿಯರು ನಗದಂತೆ ಮಾಡುವುದುಚಿತ ನಿಮಗೆಂದ ೪೫

ಬೇಡಿದೀ ವರದಿಂದ ನೃಪತಿಯು
ಕೂಡಿಕೊಂಡು ವನಪ್ರವಾಸವ
ಮಾಡುವೆನು ಮಱೆಯೇನು ಮನದನುಮಾನವಿನ್ನೇಕೆ
ಖೋಡಿ ನಿಮಗಾಗದವೊಲೀ ನೃಪ
ನಾಡಿ ಹುಸಿಹೊಗದಂತೆ ಕೀರ್ತಿಯ
ಜೋಡಿಸುವಡಿದು ಸಮಯವೆಂದು ಸುಮಂತ್ರ ಕೈಮುಗಿದ ೪೬

---

[1] ದಧಿಕವದೊಂದು (ಕ), ದೀಕವಲಂಬು (ಝ). [2] ಮನದ (ಕ.ಝ). [3] ಬೊಡ್ಡಿ ತಾನ (ಕ.ಗ.ಝ.ಣ), ಬಡ್ಡಿ ತನಗ (ಚ), ದೊಡ್ಡಿ ತಾಗ (ಜ). [4] ತರಪತಿ (ಕ.ಝ.ಣ). [5] ನಿಮಗೊಂದುವದಪಖ್ಯಾತಿ (ಗ), ನಿಮ್ಮುವನೆಮ್ಮದಪಕೀರ್ತಿ (ಚ). [6] ದಪಪ್ರಭೆ (ಗ.ಚ.ಟ), ಲು ತಪ್ಪದೆ (ಜ).

ಬಿಡು ಸುಮಂತ್ರ ಕುಮಂತ್ರಕೃತ್ಯವ
ನಡೆಸಬೇಡೆ[1]ಮ್ಮೊ[1]ಡನೆ ರಘುಗಳ
ಮಡದಿಯರು ನಗ[2]ಲೆಮ್ಮ ನೆಮ್ಮ ಲಿಯಾಯ್ತು[2] ದುಷ್ಕೀರ್ತಿ
ಒಡರಿಸಲಿ ಪುನರುಕ್ತಿ ನಮ್ಮಯ
ನುಡಿಗೆ ಹೊಗದಾವ್ ಬಲ್ಲೆವೀ[3] ಬೊಂ
ಬ[3]ಡೆಯುತನವನು ಕೆಲಕೆ ಸಾರೆಂದಳು ಸುಮಂ[4]ತ್ರಕನ[4] ೪೭

ಇದು ಯಥಾರ್ಥ ಸುಮಂತ್ರ [5]ನೀನಾ[5]
ಡಿದ ಸುಭಾಷಿತವೆಮ್ಮ [6]ನಂಬಿಹು
ದಿ[6]ದಕೆ ಹೊರೆಹೊಗದಂತೆ ನಡೆಸುವೆವೆಂದು ಮುನಿ ನುಡಿಯೆ
ಗದಿಯಬೇಡಿನ್ನಾತನಾಡಿದ
ತುದಿಯ ಕೊಸರನು ನಿಮ್ಮ ರಾಯ[7]ನ[7]
ವದನದಲಿ ನುಡಿಹುಟ್ಟಲೆಂದಳು ಕೈಕೆ [8]ಮುನಿಪತಿಗೆ[8] ೪೮

ಐಸಲೇ ನೀವ್ ಬೇಡಿದುದು ತಾ
ನೇಸುದೊಡ್ಡಿತು ತಂದೆಯಾಡಿದ
ಭಾಷೆಗಿದಕೋ ಭಾಷೆಯೆನುತಾ ಜನನಿಗಾ ರಾಮ
ಲೇಸುಮಾಡಿದಿರನೃತವೆಮ್ಮವ
ನೀಶರಲಿ ಹೊಗದಂತೆ ಘಟದಲಿ
ಕಾಸದಿರಿ ಕಲ್ಮಷವನುಗಿದನ್ವಯ ವಿಭೂಷಣವ ೪೯

ಭರತನಾಳಲಿ ರಾಜ್ಯವನು ನೀವ್
ನರಪತಿಯ ಚರಣಾರವಿಂದದ
ಪರಮಸೇವಾನಿರತರಾಗಿರಿ ನಿಮ್ಮನುಜ್ಞೆಯಲಿ
ಚರಿಸುವೆನು ವನವಾಸ[9]ದಲಿ ಗೋ[9]
[10]ಚರಿಸುವೆನು ನೀವ್ ನುಡಿದ[10] ವರುಷದ
ಪರಿಗಣನೆ ಪರಿಯಂತವೆಂದನು ಕೈಕೆಗಾ ರಾಮ ೫೦

---

[1] ನ್ನೊ (ಚ). [2] ಲೆಂದು ನೀ ಮಾತಿನಲಿ (ಕ.ಣ), ಲೆಂದು ನೆಮ್ಮಲಿಯಾದ (ಝ). [3] ಬೊಬ್ಬೆ (ಕ.ಣ), ಬೊಮ್ಮ (ಗ), ಜೊಂಬೊ (ಝ.ಟ). [4] ತ್ರಂಗೆ (ಚ.ಡ). [5] ನಿನಗಾ (ಗ.ಝ). [6] ದೆಂಬೀ ಹ (ಕ.ಣ). [7] ರ (ಟ.ಡ.ಣ). [8] ಕ್ಷೆ ಮುಗಿದು (ಚ). [9] ವನು ನೀವ್ (ಕ.ಣ), ವನು ಗೋ (ಗ.ಜ.ಝ). [10] ಮುರಿದು ಕಟ್ಟಿದಡೈಸು (ಕ.ಣ).

ಆ ಸತಿಯನುಪಚರಿಸಿ ಪಿತನಾ
ಯಾಸವನು ಶ್ರುತಿಧರ್ಮಶಾಸ್ತ್ರವಿ
ಲಾಸವಚನಾಲಾಪದಿಂದ[1]ನುತಾಪ[1]ವನು ಬಿಡಿಸಿ
ಆ ಸಕಲಲೋಕೈಕಲೀಲಾ
ವಾಸ ತೊರವೆಯರಾಯನಾ ವನ
ವಾಸವನು ಕೈಕೊಂಡನಮರೇಂದ್ರಾದಿಗಳು ನಲಿಯೆ ೫೧

---

[1] ವಿಲಾಸ (ಕ.ಟ.ಡ), ವಿಷಾದ (ಝ), ವಿಲಾಪ (ಙ).

# ಮೂರನೆಯ ಸಂಧಿ

ಸೂಚನೆ : ಸುರಕದಂಬಕ ನಲಿಯೆ ರಜನೀ
ಚರಕದಂಬಕ ಕುಮುದರವಿ ದಶ
ಶಿರನ ನಿಧನಕೆ ನಿಜಪುರವ ಹೊಱವಂಟನಾ ರಾಮ

ಹರೆದುದೀ ವೃತ್ತಾಂತವಾ ನೃಪ
ನರಸಿ ಕೌಸಲೆಗೂಡಿದ್ದೈನೂ
ಅರಸಿಯರ ಮನೆಗಳಲಿ ಮಗಧಾತ್ಮಜೆಯ ನಿಳಯದಲಿ
[1]ಶರನಿಧಿಯು[1] ಸಲಿಲವನು ಮೊಗದು
ಬ್ಬರಿಸುವೌರ್ವಾನಲನವೊಲು ಕಾ
ಹುರದಲಂತಃಪುರದಲೆದ್ದುದು ಬಹಳಶೋಕಾಗ್ನಿ ೧

ಹಿಡಿದ ಕನ್ನಡಿಕಳಸಗಳ ಕೆಲ
ಕಿಡುತ ಹೊಂದಳಿಗೆಯ ನಿವಾಳಿಯ
ಸೊಡರ ಸೂಸುತ [2]ಬಿಸುಡು[2]ತಮಲಾಕ್ಷತೆಯ [3]ದೆಸೆದೆಸೆಗೆ[3]
ಮುಡಿಯುಲರ ಕೆದಱಿಕೆಯ ಕೇಶದ
ಸಡಿಲಿದುನ್ನತಕುಚದ ಸೆಱಗಿನ
ಮಡದಿಯರ [4]ಮಂದೆಯಲಿ[4] ಬಂದಳು ಕೌಸಲಾದೇವಿ ೨

ಹರಸಿ ಹಡದೆನೆ ಮಗನನಡವಿಯ
ಸಿರಿಯ ಸೂರೆಗೆ ಘೋರವಿಪಿನಾಂ
ತರದ ಖಗಮೃಗರಾಜಧಾನಿಯ ರಾಜ್ಯಸಂಪದಕೆ
ಗಿರಿಗುಹಾಕಟಕಂಗಳರಮನೆ
ಯರಸುತನಕಕಟಕಟ ಹಾಹಾ
ತರುಣ ಹಾಯೆನುತ್ತೈದಿದಳು ಬಾಯ್ಬಿಡುತ ಬಾಲಕನ ೩

ಅಕಟ ಕಲ್ಪಾನಲನ ಜಿಹ್ವಾ
ಪ್ರಕರದುಬ್ಬರದಮಲತರಚಂ
ದ್ರಿಕೆಗೆ ಸೊಗಸೇ ಸಿಡಿಲಡವಿ [5]ಗಿರಿ[5] ಶಿಶುವಿಗನುನಯವೆ
ಸಕಲ ದುಷ್ಟವ್ಯಾಘ್ರಸೂಕರ
ವೃಕಮಹೋರಗಶರಭಸಿಂಹ
ಪ್ರಕರ[6]ವನವೆ[6]ನ್ನಣುಗಗುಚಿತವೆಯೆಂದಳಾ ಕಾಂತೆ ೪

---

[1] ಸುರನದಿಯ (ಕ.ಜ.ಣ). [2] ಸೂಸು (ಕ.ಗ.ಣ). [3] ಸೇಸೆಗಳ (ಕ.ಗ.ಣ).
[4] ತಂಡದಲಿ (ಕ.ಜ), ಮೇಳದಲಿ (ಣ). [5] ಗೀ (ಚ). [6] ವಿದುಯೆ (ಕ.ಗ.ಚ.ಜ).

ನೆರೆದುದಭ್ರದೊಳಗಜೆ ಭಾರತಿ
ವರಶಚೀಸತಿ ಮುಖ್ಯ ನಾನಾ
ಸುರವಧೂನಿಕುರುಂಬವಂಬಕಜಲವ ಝಾಡಿಯಲಿ
ಕರದ ಕದಪಿನ ಖೇದದಂತಃ
ಕರಣದನುತಾಪದಲಿರಲು ಸರ
ಸರಿಸಿ ಬಂದಪ್ಪಿದಳು ಕೊರಳನು ಕಾಂತೆ ನಿಜಸುತನ ೫

ನಿಂದ ನೆಲ ನುಂಗುವಡೆ ಸುಳಿವಿನ
ಮಂದಮಾರುತನುರುಹುವಡೆ ಪೂ
ರ್ಣೇಂದುಮಂಡಲ ಗರಳಮಯಕೌಮುದಿಯ ಕಾಱುವಡೆ
ಕಂದ ಕೇಳ್ಕೈ ಬದುಕಬಹುದೇ
ತಂದೆ ನಿನಗೀ [1]ನೆನಹ[1] ನೆನದರೆ
ಹಿಂದುಗಳೆವವರಾರು ಹೇಳೆಂ[2]ದಪ್ಪಿದಳು ಮಗನ[2] ೬

ಕುಶನೆ ಕೇಳೀಚೆಯಲಿ ರಾಯನ
ವಸತಿಯಲಿ ರಾಮಂಗೆ ಕೈಕೆಯ
ದೆಸೆಯಲಾದೀ ವಾರ್ತೆ ಕೇಳಿಸಿತೂರ್ಮಿಳಾ ಪತಿ[3]ಯ[3]
ಹಸಿದ ಹುಲಿಯೋ ಹೊಯ್ಲಿನಲಿ ಗ
ರ್ಜಿಸುವ ಸಿಂಹವೊ ಹೆರೆಗಳದ ನಿ
ಟ್ಟುಸುರಿನುರಗನೊ ಮೇಣೆನಲು ಸೌಮಿತ್ರಿ ಹಲುಮೊರೆದ ೭

ಹೊಗೆದುದಾನನವಕ್ಷಿ ಕಿಡಿಗಳ
ನುಗುಳಿದವು [4]ಹೊಗೆಸುತ್ತ[4] ಕುಡಿಮಿಾ
ಸೆಗಳು [5]ಕೌಱಿದವಂಗ[5] ಕಾಹೇಱಿದುದು ಕಡುಹಿನಲಿ
ಬಿಗುಹುಗೊಂಡುಪ್ಪರಿಸಿದವು ಹು
ಬ್ಬುಗಳು ಹರಹರಹರ ಲಯಾಗ್ನಿಯ
ಮೊಗವಡವನುಗಿದಂತೆ ಬಹಳಿತ ರೌದ್ರಮಯನಾದ ೮

ಬಗೆಯನಯ್ಯನನಿನ್ನು ಕಷ್ಟವ
ಬಗೆದ ಕೈಕೆಯ [6]ಕಾ[6]ಳುದೊತ್ತಿರ
ಜಗಳದಲಿ ಹೊಯ್ಯುವೆನು ಬಾಯನು ಭರತನೀ ಪುರವ
ಹೊಗಲಱಿಯಬಹುದಿನ್ನು ದಿಟ ಕೈ
ಮಿಗುವ ಪರಿಯನು ಕಾಣಬಹುದೆನು
ತಗಿವ ಹಲ್ಲೌಡಿನಲಿ ಹೊಱವಂಟನು ನಿಜಾಲಯವ ೯

[1] ಹದನ (ಕ.ಜ.ಝ.ಣ). [2] ದೂಱಲಿದಳು ಕಾಂತೆ (ಚ). [3] ಗೆ(ಚ).
[4] ಕಾಹೇಱ (ಚ). [5] ಕೌಱುಡಲಂಗ (ಕ.ಜ.ಣ), ಕೆದಱಿದವಂಗ (ಟ). [6] ಕೀ (ಗ).

ಉಕ್ಕಿಱುವ [1]ಕೋಪಾಗ್ನಿ[1] ದಳ್ಳಿಸಿ
ದಿಕ್ಕುಗಳನಳ್ಳಿಱಿಯೆ ಲಕ್ಷ್ಮಣ
ನೆಕ್ಕತುಳದಲಿ ಬಂದನಾ ಲಯಕಾಲದಲಿ ಜಗವ
ಮುಕ್ಕಿ ಮೋದುವ ಮದನಹರನ ವೊ
ಲಿಕ್ಕೆಲದ ನೆರವಿಗರು ಕೆಲಬಲ
ಕೊಕ್ಕ ಸರಿದರು ಕೈಕೆ ಮಱೆಯೊಕ್ಕಳು ಮುನೀಶ್ವರನ ೧೦

ಧರಣಿಜೇಶನ ಮುಸುಕಿಕೊಂಡಹ
ನೆರವಿಗರ ಹೊಯ್ ಹೊಯ್‌ಯೆನುತ ಸರ
ಸರಿಸಿ ಬಂದನು ರಾಘವೇಂದ್ರನ [2]ಹೊರೆಗೆ[2] ಸೌಮಿತ್ರಿ
ಮರುಳುತನ ನಿಮಗುಂಟೆ ಬಿಡಿ ಬೇ
ಱರಸರುಂಟೇ ಧರೆಗೆನುತ ರಘು
ವರನ ಜನನಿಯು ಜಱೆದು ಜಾನಕಿಯುರಸಗಿಂತೆಂದ ೧೧

ಅವನಿಪ[3]ನ[3] ಮುಪ್ಪಿನಲಿ ಮುದುಗರ
ವವಚಿತೀ[4]ಬೆಯ[4] ತಲೆಯು ಪಿತ್ತದ
ಬವಣೆ ಬಲಿದುದು ಮುನಿ ವಸಿಷ್ಠ ಸುಮಂತ್ರ ಮಂತ್ರಿಗಳು
ನವಗೆ ಹಿತವರೆಯ್ಸೆ ಮತ್ತೇ
ನವನಿ ಗಡ ಭರತಂಗೆ ಕಾನನ
ಭವನ ಗಡ ನಿಮ[5]ಗಹುದಲೇ ಪರಿ[5]ಲೇಸು ಲೇಸೆಂದ ೧೨

ಜರಡು ಮನವೇಕರಸ ನೊಸಲಲಿ
ಧರಿಸು ಪಟ್ಟವ ಲಗ್ನವಿದೆ ಹ
ತ್ತಿರ ಹರಾದ್ಯರ ಬರಿಸುವೆನು ಮೂರ್ಧಾಭಿಷೇಚ[6]ನಕೆ[6]
ತರುಣಿಯರು ಬರಲಮಳಸೇಸೆಯು
ಹರಸಿಹಾಯ್ಕಲೆ ತಾಯೆ ಚಿಂತೆಯು
ನೆರವ ಕೊಡಿ ಭರತಾಂಬಿಕೆಗೆ ಬೇಗೇಳಿ ನೀವೆಂದ ೧೩

ತಮ್ಮ ಸೈರಿಸು ಸೈರಿಸೀ ಮಾ
ತೆಮ್ಮ ವಂಶಕೆ ಸಲ್ಲದಾಸುರ
ಕರ್ಮವಿದು ಸತ್ಯಪ್ರತಿಜ್ಞರಿಗುಚಿತವೇ ಹೇಳು

---

[1]ರೋಷಾಗ್ನಿ (ಕ.ಜ.ಣ). [2]ಬಳಿಗೆ (ಟ.ಝ). [3]ಗೆ (ಕ.ಗ.ಜ.ಣ). [4]ಬೆಗೆ (ಗ), ಬ್ಯೆ (ಝ.ಟ.ಡ). [5]ಗ್ಯೆಸಲೇ ಕರ (ಕ.ಜ.ಝ), ಗಹುದಲೇ ಕರ (ಟ.ಡ) ಗ್ನೆಸಲೇ ಪರಿ (ಣ). [6]ನೆಗೆ (ಗ.ಚ.ಝ).

ಉಮ್ಮಳಿಸುವರು ಸುರ[1]ರ ಸಭೆಯೊಳ
ಗೆಮ್ಮ[1] ರಾಯರು ಪಿತನ ಸತ್ಯದ
ಸೊಮ್ಮನಳಿದರೆ ಬಳಿಕ ಬಹು[2]ದಪಕೀರ್ತಿ ನಮಗೆಂದ[2] ೧೪

ವೇದಮತವಿದು ಜಗಕೆ ಸೂನೃತ
ವಾದಿಯೇ ಸಾಕ್ಷಾತ ಶಿವನೋ
ಪಾದಿ ಸತ್ಯವಿಹೀನನೇ ತಾ ನರಕಭಾಜನನು
ಶೋಧಿಸ್ಯೆ ಲೇಸಾಗಿ ಪಿತೃವಚ
ನೋದಯವನೆಲೆ ತಮ್ಮ ನಿನ್ನ ವು
ಹಾದುರಾಗ್ರಹ ತಾರದಿರದಪಯಶವ ನಮಗೆಂದ ೧೫

ಕಾಲವಾವುದು ನೋಡು ನೆರೆದಿಹ
ಮೇಲಣವರಾರೀಕ್ಷಿಸನೃತಕೆ
ಸೋಲಲಹುದೇ ತಮ್ಮ ತಂದೆಯ ಮಾತನತಿಗಳೆದು
ಮೇಲೆ ಕಾಬ್ಯೈಶ್ವರ್ಯವದು ತಾ
ಕೀಳುಮಾಡದೆ ನಮ್ಮನೀ ಜನ
ಜಾಲ ನಗುವುದು ಪಿತನನುಜ್ಞೆಯೆ ರಾಜ್ಯಪದವೆಂದ ೧೬

ಎಂದು ತಮ್ಮನ ಧರ್ಮಪದ್ಧತಿ
ಯಿಂದ ಚಿತ್ತವ ತಿಳುಹಿ ಬಳಿಕಿಂ
ತೆಂದನಯ್ಯನ ಸೇವೆಯಲಿ ಮಾತೃಗಳ ಭಕ್ತಿಯಲಿ
ಸಂದಿಹುದು ಕೇಳಣುಗ ಭರತನು
ಬಂದಡಾತನ ಕೂಡಿಕೊಂಡಿಹು
ದೆಂದು ಕೋಪವ [3]ನಿಲಿಸಿ[3] ಸಂತೈಸಿದನು ಸಹಭವನ ೧೭

ಈ ಯಥೋಚಿತ ಸುತವಚೋಭಿ
ಪ್ರಾಯವನು ಕಿವಿಗೊಟ್ಟು ಕೇಳ್ದಬು
ಜಾಯತಾಂಬಕಿ ನುಡಿದಳಣುಗಂಗಾಗವೋಚಿತವ
ತಾಯಿ ಮೊದಲಾಕ್ರಮದಿ ಪಿತ ತರು
ವಾಯ[4]ಲಾಚಾರಿಯನನುಜ್ಞಾ
ದಾ[4]ಯದಳತೆಗೆ ಮಗನೆ ಕೇಳು ವಸಿಷ್ಠಮುನಿವರನ ೧೮

---

[1] ಸಭೆಯೊಳಿದ್ದೆಮ್ಮ (ಕ.ಗ.ಜ.ಣ). [2] ದೆಮಗೀಗಲಪಕೀರ್ತಿ (ಕ.ಗ.ಜ.ಣ).
[3] ತಿಳುಹಿ ಚ. [4] ಪಿತನಾಚಾರ್ಯ ಸುಜ್ಞಾನಾ (ಕ).

ಕ್ರಮವಿದೀಗೆಲೆ ಕಂದ ನೀನ
ಕ್ರಮವ ಮಾಡದೆ ಮಾತೃವಚನದ
ಸಮತೆಯಲಿ ಸಲಹುವುದು ಶಾಸ್ತ್ರವಿದೀಗ ಸರ್ವರಿಗೆ
ರಮಣನಾಗೆಲೆ [1]ರಾಮ[1] ವಸುಧಾ
ರಮಣಿಗೆನ್ನ[2]ನವಜ್ಞೆಗೈದರೆ[2]
ಸುಮನಸರು ನಗದಿಹರೆ ಹೇಳೆಂದಳು ನಿಜಾತ್ಮಜನ ೧೯

ಉಚಿತವೇ ನಿಮಗಿದು ಪರೀಕ್ಷಿಸಿ
ಸುಚರಿತಾಗಮ ಧರ್ಮಶಾಸ್ತ್ರ
ಪ್ರಚುರತೆಯ ನಾಡಾಡಿಯೆಣಿಕೆಯ ಮತ್ತಕಾಶಿನಿಯೆ
ವಿಚರಿತಾನ್ವಯ[3]ವೆರಡ[3]ನೆತ್ತುವ
ಶುಚಿತನವು ನಿಮಗಲ್ಲದಿತರರ
ಲಚಲತೆಯದಾರ್ಗುಂಟದೆಂಬುದ ನೋಡಿ ನೀವೆಂದ ೨೦

ಪತಿಯ ವಶವರ್ತನೆಗೆ ಬಾರದ
ಸತಿಯನೇನೆಂಬರು ಮಹಾಸು
ವ್ರತೆಯರಾ ದಂಪತಿಗಳಿಚ್ಛೆಯಲಿರದ ಪುತ್ರ[4]ನನು[4]
ಪತಿಕರಿಸುವರೆ ಬುಧರು ಮುನಿಭೃಗು
ಸುತನ ಚರಿತವ ಕೇಳಿದಱಿಯಿರೆ
ಪತಿಭಜನೆ ನಿಮಗಲ್ಲದಿತರರಿಗುಂಟೆ ಹೇಳೆಂದ ೨೧

ಮನದೊಳ[5]ನುಮಾನಿಸದೆ[5] ನೇಮವ
ನೆನಗೆ ಕರುಣಿಸು ತಾಯೆ ತಾತನ
ಮನಕೆ ಬಹುದಿದು ಪರಮಸೀಮೆ ಪತಿವ್ರತಾಗುಣಕೆ
ತನಗೆ ಪೂರ್ವದ [6]ದತ್ತ[6]ಫಲವಿದ
ನೊನದು ತೆಗೆವವರಾರು ಚಿಂತಾ
ವನಧಿ ಬತ್ತಲೆನುತ್ತ ನೆಱೆನಂಬಿಸಿದನಂಬಿಕೆಯ ೨೨

ಆಯೆನುತ ಕೊಂಡಾಡಿತಂಭೋ
ಜಾಯತಾಕ್ಷನ ನಭದ ಸುರಸಮು
ದಾಯ ಸುರವಂದಿಗಳು ಹೊಗಳೆ[7]ದರುದಧಿ[7]ಘೋಷದಲಿ

---

[1] ಮಗನೆ (ಝ.ಟ). [2] ನವಜ್ಞೆ ಮೀರ್ದರೆ (ಗ), ನುಮತವ ಮೀಱಲು (ಜ), ನನುಜ್ಞೆಯಿದ್ದಡೆ (ಟ). [3] ದೆಡರ (ಜ.ಝ.ಟ.ಡ). [4] ರನು (ಝ.ಡ.ಣ). [5] ಗೆ ನೆರೆದಿರ್ದ (ಗ). [6] ಸುಕೃತ (ಚ). [7] ದರಬುಧಿ (ಕ.ಣ), ತು ವನಧಿ (ಗ), ದರಧಿಕ (ಝ.ಡ), ದರಬಿಳ (ಟ).

ವಾಯು [1]ನಿರುತೀಶಾಗ್ನಿ[1] ಯಮ ವ
ಜ್ರಾಯುಧಾದ್ಯರು ಮನದ ಮುದದ ನ
ವಾಯಿಯಲಿ ಸೂಸಿದರು ಸುರನಂದನದ ಕುಸುಮಗಳ ೨೩

ಮೊಳೆತುದಾ ಮನು[2]ವಿಂ ವಿ[2]ಕುಕ್ಷಿಯೊ
ಳೆಸಸಿಯನ್ನೈದಿತು ದಿಲೀಪನೊ
ಳೆಲೆವಡೆದುದಾ ರಘುವಿನಿಂ ಪಲ್ಲವಿಸಿತಜನಿಂದ
ನಳನಳಿಸಿತಜಪುತ್ರನಿಂದು
ತ್ಕಳಿಕೆ ತೋಱಿತು ರಾಮ [3]ನಿನ್ನಲಿ[3]
ಫಲಿಸಿತಗ್ಗದ ಸತ್ಯತರುವೆಂದನು ವಸಿಷ್ಠಮುನಿ ೨೪

ಐಸೆ ಮತ್ತೇನೆನುತ ಸೇನಾ
ಧೀಶನಂಗೀಕರಿಸಿದನು ನೆರೆ
ದಾ ಸಭಾಸದರೊಲಿದು ಕೊಂಡಾಡಿದರು ರಘುಪತಿಯ
ಆಸೆ ನಿಂದುದು ನೀರಜೋದ್ಭವ
ವಾಸವಾದ್ಯರಿಗರಸಿ ಕೈಕೆಗೆ
ಪೈಸರಿಸಿದುದು ಮೇಲೆ ಮನ ದಿಕ್ತಟದ ಸಂದೇಹ ೨೫

ತನುಜ ಕೇಳೀ ಜಗದ ದುರ್ಜನ
ವನಿತೆಯರೊಳ[4]ನ್ನೆನಿತು[4] ಪಾಪಿಯೊ
ನೆನೆದಳೈ ನಿಷ್ಠುರವನವನಿಯೊಳಾರು ನೆನೆಯದುದ
ಮನವದೆಂತೊಡಬಟ್ಟುದೋ ತವ
ಜನಕನನು ಹತ್ತಿರಕೆ ಕರೆದಾ
ನನವ ನೋಡದೆ ಸಡಲಿಸಿದಳು ಸಮಸ್ತಭೂಷಣವ ೨೬

ಮಱುಗುತಿರ್ದುದು ಮೇಲೆ ಕಂಬನಿ
ಯೊಱತೆಗಳ ಕೈಗಲ್ಲಗಳ ಕಡು
ಮೆಱಗುಗಳ ಶೋಕದಲಿ ಶೈಲಜೆ ಮುಖ್ಯನಾರಿಯರು
ಮಱೆಯದೇಕೆಲೆ ರಾಮ ಕೊಳ್ಳೆಡು
ಗೊಱೆಯನಬುಧಚತುರ್ದಶದ ವನ
ದುಱುವಪಟ್ಟಕೆನುತ್ತ ಕೊಟ್ಟಳು [5]ಕೈಕೆ[5] ವಲ್ಕಲವ ೨೭

---

[1] ವಿತ್ತೇಶಾಗ್ನಿ (ಕ.ಣ), ಈಶಾನ್ಯಾಗ್ನಿ (ಝ.ಟ), ವೀಶಾನ್ಯಗ್ನಿ (ಡ).
[2] ವಿನಲಿ (ಗ), ವಂಶ (ಝ.ಟ.ಡ). [3] ನಿನ್ನಿಂ (ಗ), ನಿಂದಲಿ (ಚ.ಡ).
[4] ನ್ನೆಂತು (ಕ.ಜ), ನ್ನೇನು (ಚ.ಡ.ಣ). [5] ಕೈಗೆ (ಚ.ಜ).

ನೋಡಲಚ್ಚರಿ ಚಿತ್ತದಲಿ ಖಯ
ಖೋಡಿಯಿಲ್ಲದೆ ಸಕಲಜನ ಕೊಂ
ಡಾಡೆ ಕೊಂಡನು ಕುಮತಿಸತಿ ತನಗಿತ್ತ ವಲ್ಕಲವ
ನೋಡಿ ಲಕ್ಷ್ಮಣದೇವನಣ್ಣನ
ಕೂಡೆ ವನವನು ಚರಿಸಿ ಸೇವೆಯ
ಮಾಡುವ[1]ಡೆ[1] ತನಗಿದುವೆ ಸಮಯವೆನುತ್ತ ಮನದಂದ ೨೮

ದೇವ ಬಿನ್ನಹ ನಿಮ್ಮ ಪದರಾ
ಜೀವದೋಲಗ ತಪ್ಪಿ [2]ಜೀವಿಪ[2]
ಜೀವವಿದು ತಾನಿದ್ದು ಫಲವೇನೀ ಧರಿತ್ರಿಯಲಿ
ದೇವ ತನ್ನಯ ಮೇಲೆ ನಿಮ್ಮ ಕೃ
ಪಾವಲಂಬನವಾಗಲುಳಿವುದು
ಜೀವವಿದು ವಲ್ಕಲವನೆನಗಿತ್ತುಳುಹಬೇಕೆಂದ ೨೯

ಭರತನಿಲ್ಲೀ ಸಮಯದಲಿ ದು
ಸ್ಥಿರನು ತಾತನು ತಮ್ಮ ಕೇಳೀ
[3]ದು[3]ರುಳತನ ಬೇಡಧಿಕೃತರು ನಾವ್ವೆಸಲೇ ವನಕೆ
ಹಿರಿದು ಬರಬೇಕಾದಡವನಿಯ
ಭರತಗೊಪ್ಪಿಸಿ ಪಿತನನುಜ್ಞೆಯ
ಧರಿಸಿ ಬೀಳ್ಕೊ ಬಳಿಕ ನಮ್ಮೆಡೆಗೆಂದನಾ ರಾಮ ೩೦

ದೂರವೇ ನಾಲ್ಕೆರಡು ದಿವಸಕೆ
[4]ಬಾ[4]ರದಿರನಾ ಭರತನವನೀ
ನಾರಿಯೆಂದಡೆ ನಲಿಯದವರಾರೀ [5]ಧರಿತ್ರಿಯಲಿ[5]
ಪಾರಮಾರ್ಥವಿದೀಗ ತಂದೆಯ
ಭಾರವ[6]ನ್ನಬರೀ[6] ಸುಮಂತ್ರನ
ಸಾರಲೆಂದಾ ಸೀರೆಯನು ಸೆಳೆದುಟ್ಟನೊಲವಿನಲಿ ೩೧

ಅರಸಿ ಮನದಲಿ ಹರುಷಿಸಿದಳಿ
ಬ್ಬರಿಗೆ ವನವಾಯ್ತೆಂದು ಕಿಱುನಗೆ
ವೆರಸಿ ಕೊಟ್ಟಳು ಮತ್ತೆ ಮನುವಂಶಂಗೆ ವಲ್ಕಲವ

---

[1] ರೆ (ಕ.ಜ.ಝ.ಟ). [2] ಬದುಕುವ (ಚ.ಝ.ಡ.). [3] ಮ (ಚ). [4] ಸಾ (ಕ.ಜ.ಝ.ಟ.ಡ). [5] ಜಗತ್ತಿನಲಿ (ಜ.ಝ.ಣ). [6] ನು ಬರಿಸುವ (ಕ.ಣ).

ಸರಸರಿಸಿ ಶಶಿವದನೆ ಸಭೆಯಲಿ
ಭರವಸದಲೈತಂದು ರಾಮನ
ಚರಣದಲಿ ಚಾಚಿದಳು ಭಾಳವ ಭಕ್ತಿಭಾವದಲಿ ೩೨

ದೇವ [1]ಬಿನ್ನಹ ನಿಮ್ಮ ದೇಹದ[1]
ಮೈವಳಿಯ ನೆಳಲಾ[2]ನಲಾ[2] ನೀ
ವೇ ವಿಚಾರಿಸಿ [3]ತನಗೆ ಬೇರೆ[3]ನ್ಯತ್ರ ಗತಿಯುಂಟೆ
ಹೂವ ಸುರಭಿ ಸುಧಾಂಶುಬಿಂಬವ
ನಾ ವಿಮಲರುಚಿ ಕೀರ್ತಿ ಸದ್ಧ
ರ್ಮಾವಳಿಯ ಬಿಟ್ಟಿರಲು [4]ಬಲ್ಲವೆ[4]ಯೆಂದಳಾ ಸೀತೆ ೩೩

ಬೇಡ ನೀ ಸುಕುಮಾರಿ ನಮ್ಮೊಡ
ನಾಡುವರೆ [5]ಕಡು[5]ಬಿಜಿಸು ಕಾನನ
ವಾಡುವರು ನಿಮ್ಮವರು ನಮ್ಮನು ಲೋಕದುರ್ಜನಕೆ
ಬೇಡ[6]ವೀ ಮಾತಕಟ[6] ನಮ್ಮೊಡ
ನಾಡದಿರು ಕೌಸಲೆಯ ಸೇವೆಯ
ಮಾಡಿಕೊಂಡಿರು ಸಾಕು ಬಂದವಳೆಂದ[7]ನವನಿಜೆಯ[7] ೩೪

ಹಸಿದಡಿಲ್ಲಮೃತಾನ್ನಚಯ ಪವ
ಡಿಸುವಡಿಲ್ಲ ಮೃದುಸ್ತರಣದಿಂ
ದೆಸೆವ ಮಣಿಪರಿಯಂಕವಿಹಡಲ್ಲಿಲ್ಲ ಮಣಿಭವನ
ಬಿಸಿಲು ಮಳೆ ಚಳಿಗಳಿಗೆ ಸಲೆಸೈ
ರಿಸುವ ದೇಹವೆ ನಿನ್ನದಿದು ಧೀ
ವಸತನಕ್ಕಾವಂಜುವೆವು ಕೆಲಸಾರು ನೀನೆಂದ ೩೫

ಪತಿಯ ಸುಖದುಃಖಂಗಳೊಳಗನು
ಗತೆಯೆನಿಸದವಳಾವಲೋಕದ
ಗತಿಯನೈದುವಳೆಂಬುದನು ನೀವೇ ವಿಚಾರದಲಿ
ಶ್ರುತಿಗೆ ಕೊಱತೆಯ ತಾರದಿದ್ದಾ
ಸ್ಥಿತಿಯಲೇ ಕರುಣಿಸುವುದೆಂದ
ಚ್ಯುತನನೊಡಬಡಿಸಿದಳು [8]ಪತಿಭಜನಾನುಭಾವದಲಿ[8] ೩೬

---

[1] ಕೇಳ್ ಬಿನ್ನಹವ ನಿಮ್ಮಯ (ಚ). [2] ಗ ಬಹೆ (ಜ). [3] ಬೇಱೆ ತನಗ (ಕ.ಜ.ಣ). [4] ಬಲ್ಲುದೆ (ಕ.ಗ.ಡ.ಣ). [5] ಕರ (ಕ.ಟ.ಡ). [6] ನೀನೀ ಮಾತ (ಕ.ಗ.ಜ.ಣ). [7] ನಾ ರಾಮ (ಜ.ಡ). [8] ಪದದಲಿ ಹೊರಳಿ ಭಕ್ತಿಯಲಿ (ಗ).

ಇನ್ನು ನೀನೇ ಬಲ್ಲೆ ಬಳಲಿಕೆ
ಗೆನ್ನ ಸಮ್ಮತವಲ್ಲ ಮುಂದಣ
ಗಿನ್ನು ಕೋಯೆಂದಿತ್ತ[1]ನಾಕ್ಷಾಮಾಂ[1]ಬರವ ಸತಿಗೆ
ಮುನ್ನ ದುಃಖದೊಳಡಿದ ದುಃಖವಿ
ಪನ್ನರೊದಱಿದರಶ್ರುಧಾರಾ
ಪನ್ನಪಟುಪರಿಸರವಿಲಾಸದ ಗಾಳುಮೇ[2]ಳಿನಲ[2] ೩೭

ಹಸುಳೆಗಾಯ್ತೆ ವಿಪತ್ತಕಟ ಸಮ
ನಿಸಿತೆ ಸುಕುಮಾರಿಗೆ ವನಾಂತರ
ವಸತಿ ಸಂಭವಿಸಿತ್ತೆ ಶಿಶುವಿಗೆ ವನಪರಿಭ್ರಮಣ
ದಶರಥನ ಸೊಸೆಯಾಗಿ ಜನಕನ
ಬಸುಱಬಂದುಡದುಣ್ಣದೀಯಾ
ಯಸಕೆ [3]ಸಂದೌ[3] ತಾಯೆಯೆಂದಳು ಕೌಸಲಾದೇವಿ ೩೮

ಕರೆದು ತಂಗಿಗೆ ಹೇಳಲಾಗದೆ
ಗುರು ಸುಮಂತ್ರಕರಕಟ ನೀವೇ
ನೆರವ ಬಂದಿರೆ ತಾಯ್ಗಳಿರ ಸೊಸೆಯಲ್ಲವೇ ನಿಮಗೆ
ಅರಸಿಯರೊಳ್ಮೆನೂಱರೊಳಗೊ
ಬ್ಬರಿಗೆ ಹುಟ್ಟದೆ ಕರುಣವಕಟಾ
ನಿರಪರಾಧಿಗೆ ತಕ್ಕುದೇ ವನವೆಂದಳಾ ಕಾಂತೆ ೩೯

ಕೊರಳ ಡೊಕ್ಕರವಾಯ್ತು ಹಣೆಯಿಂ
ದೊರಸಿ ಹಣೆಯನು ಗಲ್ಲವನು ಪಿಡಿ
ದೆರಡು[4]ಮೈ[4]ಯಿಂದೊಲದು ಮೋಹದಲೊಸದು ಮುಂಡಾಡಿ
ಮರಳಿ ಮರಳೀಕ್ಷಿಸಿ ನಿಜಾಂತಃ
ಕರಣದತುಳ ವ್ಯಥೆಯ ಸುಯ್ಲಿನ
ಶಿರದ ತೂಗಿನ ತಳ್ಳವಾರಿನಲಳಲಿದಳು ಕಾಂತೆ ೪೦

ಸಂತವಿಸುತತ್ತೆಯನು ಸತಿ ನಿಜ
ಕಾಂತನಿತ್ತಾ ನಾರಸೀರೆಯು
[5]ನಂತರಿಕ್ಷದ[5] ಸುರವಧೂನಿಕುರುಂಬ ಕಂಬನಿಯ

---

[1] ನಕ್ಷಯದಂ (ಕ.ಜ.ಣ). [2] ಳದಲ (ಕ.ಜ.ಟ.ಣ). [3] ಬಂದೌ (ಚ.ಝ).
[4] ಕೈ (ಕ.ಜ.ಝ.ಟ). [5] ನಾಂತುಕೊಂಡಳು (ಟ.ಡ).

ತುಂತು[1]ರಲಿ[1] ತುಳುಕಾಡೆ ಬಳಿಕಾ
ದ್ಯಂತಶೂನ್ಯನ ಸುಖಮಯನ ವಿ
ಕ್ರಾಂತಧೀರನ ನೋಡುತುಟ್ಟಳು ಕಳಚದಂಬರವ ೪೧

ಎದ್ದು ಕೋಪದಲಬುಜಭವಸುತ
ನೆದ್ದು ಹರಿತಂದವನಿಸುತೆ ಸು
ತ್ತಿರ್ದ ನೂತನ ನಾರಸೀರೆಯ ಸೆಳೆದು ಸೀಳ್ದಿಕ್ಕಿ
ಅದ್ದಲಿಸಿದನು ಕೈಕೆಯನು ಕಡು
ಗದ್ದಲವು ಘನವಾಯ್ತಲಾ ನೀ
ನಿದ್ದ ಹವಣಿನಲಿರಲಱಿಯೆಲಾಯೆನುತ ಗರ್ಜಿಸಿದ ೪೨

ತರಣಿವಂಶಪರಂಪರೆಯ ಭೂ
ವರರಿಗವನಿಯ ಪಟ್ಟ ಜ್ಯೇಷ್ಠರಿ
ಗುರುವುದಲ್ಲದೆ ಬೇಱೆ ಸಲ್ಲದು ತತ್ಕನಿಷ್ಠರಿಗೆ
ಹಿರಿದು ನಾವ್ ಸೈರಿಸಿದಡಂಜದೆ
ಧರಣಿಸುತೆ ವಲ್ಕಲವನುಡುವುದ
ಕುರಿಸಲಹುದೇಯೆನುತ ಕಿಡಿಕಿಡಿಯೋದನಾ ಮುನಿಪ ೪೩

ತರಿಸಿ ದಿವ್ಯದುಕೂಲವನು ಪರಿ
ಪರಿಯ ದಿವ್ಯವಿಭೂಷಣಂಗಳ
ಸುರ[2]ಕುಸುಮ ಮೊದಲಾದ[2] ದಿವ್ಯಸುಗಂಧ ಸಾರದಲಿ
ತರುಣಿಯರ ಕೈಯಿಂದರುಂಧತಿ
ಯರಸ ಸತಿಯನಲಂಕರಿಸಿ ಮಿಗೆ
ಹರಸಿ ರಾಮನ ವಾಮಭಾಗಕೆ ಕಳುಹಿ ಕುಳ್ಳಿರ್ದ ೪೪

ಮನದೊಳಂಜದೆ ಮುನಿಯ ವಚನದ
ಮೊನೆಗೆ ತೆಕ್ಕದೆ ಕೈಯೊಡನೆ ಕಾ
ಮಿನಿ ಕಕುತ್ಸ್ಥಾನ್ವಯಗೆ ತಂದಳು ಮತ್ತೆ ವಲ್ಕಲವ
ವನನಿವಾಸ ಧರಾಧಿಪತ್ಯದ
ಜನಪತನದುಡುಗೊಱೆಯಿದೀಗೆಂ
ದೆನುತ ಮೊಳೆನಗೆಯಿಂದ ಹರಸಿದಳವನಿಜೇಶ್ವರನ ೪೫

---

[1] ರನು (ಗ.ಜ.ಝ.ಣ). [2] ಭಿಕುಸುಮಾಮೋದ (ಕ.ಗ.ಜ.ಣ).

ಉಟ್ಟನೀತನು ಬಿಗಿದು ಸುರಗಿಯು
ಕಟ್ಟಿ ಕಟಿಯಲಿ ತಿರುಗಿ ತನ್ನೊಡ
[1]ವು[1]ಟ್ಟಿದನನೀಕ್ಷಿಸಲು ತಂದನು ಚಾಪಮಾರ್ಗಣವ
ಪಟ್ಟದರಸಿಗೆ ಪೊಡವಿಪಗೆ ಪೊಡ
ಮಟ್ಟು ಗುರುಪದಕಭಿನಮಿಸಿ ಪೊಱ
ಮಟ್ಟನಾ ವೈದೇಹಿ ಸಹಿತರಮನೆಯನಾ ರಾಮ ೪೬

ಅನುಜನಾ ಕ್ರಮದಿಂದ ವಂದಿಸಿ
ಜನನಿಯನು ಬೀಳ್ಕೊಳೆ ಸುಮಿತ್ರಾ
ವನಿತೆ ನುಡಿದಳು [2]ಕಂದ ಕೇಳ್ಕೈ[2] ರಾಘವೇಶ್ವರನ
ಜನಪ ದಶರಥನಂತೆ ಕಾಬುದು
ಜನಕಜೆಯನೆನ್ನಂತೆ ಕಾಬುದು
ವನವಯೋಧ್ಯೆಯೆಂದು ಬಗೆ ನಡೆಯೆಂದಳಾ ಕಾಂತೆ ೪೭

ಆ ಸುಮಿತ್ರಾದೇವಿ ನಡೆತಂ
ದಾ ಸರೋಜಾಂಬಕನ ಕೈಯಲಿ
ಸೂಸುವಶ್ರುಗಳಿಂದ ಕೊಟ್ಟಳು ತನ್ನ ನಂದನನ
ದಾಶರಥಿ ಕೇಳ್ ತರಳನಿವನತಿ
ರೋಷಗರ್ವಿತನೀತನಲಿ ಗುಣ
ದೋಷವನು ಭಾವಿಸದೆ ಸಲಹೆಂದಿತ್ತಳರ್ಭಕನ ೪೮

ಬಳಿಕಬುಧಿ ಪರಿವಳಯದವನೀ
ತಳದ ರಾಯರ ರಾಜವೈಭವ
ನಿಳಯವನು ವೈಶಾಖಸಿತಪಂಚಮಿಯ ದಿವಸದಲಿ
ಘಳಿಗೆ ಹದಿನಾಱರಲಿ ಪುಷ್ಯದ
ಸುಳಿವಿನುಚ್ಚಗ್ರಹದ ದೃಷ್ಟಿಯ
ಲಿಳೆಯಮಗಳೂರ್ಮಿಳೆಯ ವಲ್ಲಭಸಹಿತ ಹೊಱವಂಟ ೪೯

ಕೂಡೆ ಹೊಱವಂಟುದು ಸಮಂತ್ರಕ
ಗೂಡಿ ಸಚಿವ ಪಸಾಯಿತರು ಹೊಱ
ಬೀಡ ಬಿಟ್ಟುದು ಮುಂದೆ ಮನ್ನೆಯ ಮಂಡಲೇಶ್ವರರು
ಕೂಡೆ ಸರಕಿನ ಬಂಡಿ ಬಿಡದೆಡೆ
ಯಾಡಿದವು ರಾಜೋಪಕರಣದ
ಜೋಡಣೆಯು ಪಸರಿಕೆಯು ಸಾಳಯ ತೆರಳಿತಗಲದಲಿ ೫೦

---

[1] ಹು (ಜ.ಝ.ಟ.ಡ). [2] ಮನದೊಲವುಮಿಗೆ (ಕ.ಣ).

ದಾರಿದೆಗದವು ಮುಂದೆ ಹೂಡಿದ
ತೇರುಗಳು ಹಣ್ಣಿದ ಮದಸ್ತಂ
ಭೇರಮಾವಳಿ ಹಲ್ಲಣಿಸಿದ ಹಯಾಳಿ ಮಣಿಮಯದ
ಭೂರಿ ಭೂಷಣವಸ್ತ್ರಶಸ್ತ್ರದ
ಭಾರಣೆಯು ಭಟರುಗಳ ಗುಡಿ ಗೂ
ಡಾರ ಕೊಟ್ಟಿಗೆ ಲಾಯ ಸಹಿತ ಸಮಸ್ತ ನೃಪನಿಕರ ೫೧

ಹರಿ ಜಗದ್ರಕ್ಷೆಗೆ ಸುಧಾಸಾ
ಗರವ ಹೊಱವಡುವಂತಯೋಧ್ಯಾ
ಪುರವ ಹೊಱವಂಟನು ದಶಗ್ರೀವಾದಿರಾಕ್ಷಸರ
ಹರಣಸಂಹರಣಾರ್ಥದಲಿ ಶಂ
ಕರ ವಿರಂಚಿ ಸುರೇಂದ್ರರಭ್ರದ
ಲರಳಮಳೆಗಱೆದರು ಜಯಾನಕರವದ ರಭಸದಲಿ ೫೨

ತರಹರಿಕೆ ಕೈಗೂಡದವನೀ
ಶ್ವರನು ಕೌಸಲೆಸಹಿತ ಬಳಲುವ
ಶಿರದ ಬಿಡುಮಂಡೆಗಳ ಬೀಳುವ ನಯನವಾರಿ[1]ಯಾಲಿ[1]
ತರುಣಿಯರ ಹೆಗಲಿನಲಿ [2]ಚಾಚಿದ[2]
ಕರದ ಕಾಲ್ನಡೆಯಿಂದ ಕಡುಕಾ
ಹುರದ ಕಟ್ಟಳಲಿಕೆಯಲ್ಯೈದಿದ[3]ನ[3]ವನಿಜಾಪತಿಯ ೫೩

ತೆರಳುತಿದೆ ಮಜ್ಜೀವರತ್ನಾ
ಭರಣ ತನ್ನ ಮನೋರಥದ ಸಿರಿ
ಸರಿವುತಿದೆ ರಘುರಾಜವಂಶದ ಬಹಳಭಾಗ್ಯನಿಧಿ
ಪುರವ ಹೊಱವಡುತಿದೆ ಮದೀಯ
ಸ್ಫುರಿತಚಂದ್ರಮಕಲ್ಪಪಾದಪ
ಪರುಷನಿರ್ಜರಧೇನು ಬಿಡುತಿದೆ ತನ್ನನಕಟೆಂದ ೫೪

ಅಕಟ ಸೆಳೆದರೊ ಜೀರ್ಣದೇಹಾಂ
ಧಕನ ಹಸ್ತದ ಯಷ್ಟಿಯನು ಕೌ
ಳಿಕವ ತೋಱಿದನೇ ವಿಧಾತ್ರನು ಪುತ್ರಮೋಹಕದ
ಸುಕೃತಹೀನರು ನಾವಲೇ ವಾ
ರ್ಧಿಕದಲಾದುದೆ ಸುತವಿಯೋಗ
ಪ್ರಕಟಪಾತಕಫಲವೆನುತ ಮೊಱೆಯಿಟ್ಟನಾ ಭೂಪ ೫೫

---

[1] ಗಳ (ಚ.ಜ.) [2] ಹಾಯ್ಕಿದ (ಚ). [3] ರ (ಚ.ಝ.ಟ).

ನಿಲಿಸಲಾಗದೆ ತಂದೆಗಳಿರಿಭ
ಕಳಭನನು ಹರಿಪೋತನನು ಮಂ
ಜುಳಮನೋಜಾತನನು ಮನ್ಮನರತ್ನಮುಕುರ[1]ವನು[1]
ನಿಲಿಸಿರೈ ನೀವೆನುತಲಾ ಕೌ
ಸಲೆ ಕಳಲ್ಚಿದ ಮುಡಿಯ ಕಂಬನಿ
ದುಳುಕೆ ಕೆಲಬಲ[2]ಕಳವಳಿವು[2]ತೊಱಲಿದಳು ದೆಸೆದೆಸೆಗೆ ೫೬

ಬಿಟ್ಟು ಕಳೆದೈ ಮಗನೆ ನಮ್ಮನು
ಬಟ್ಟಬಯಲೊಳಗಿರಿಸಿದೈ ಹೊಗ
ಗುಟ್ಟಿದೈ ಕಾಳ್ಗಿಚ್ಚಿನಲಿ ಕಾಮೇಷ್ಟಿಯಲಿ ಪಡೆದ
ಹೊಟ್ಟೆ ಬಱುದೊಱೆಯಾಯಿತೇ ಕಂ
ಗೆಟ್ಟೆವೈಯೆಲೆ ಕಂದ ಹಾಯೆಂ
ದೊಟ್ಟಿವೊಱಲಿದಳಬಲೆ ಕಂಬನಿ[3]ದುಂಬೆ[3] ಪೌರಜನ ೫೭

ಇರಿಸಿ ಹೋಹರೆ ಕಂದ ಜವ್ವನ
ಜರಿದ ಜನನಿಯ ಜನಕರನು ನಿ
ನ್ನುಱಿತಕಿದು ತಾ ಗುಣವೆ ಪಿತೃಸೇವಾಪ್ರಸಿದ್ಧರಿಗೆ
ಕರಗದಕಟಾ ಚಿತ್ತವೆಮ್ಮಿ
ಬ್ಬರ[4]ಲಿ[4] ಬಿಡಬೇಸುವರೆ ಹೇಳೈ
ತರುಣ ನಮಗಿನ್ನೇನುಗತಿಯೆಂದೊಱಲಿದಳು ಕಾಂತೆ ೫೮

ಆರ ನೋಡಿದರವರು ಲೋಚನ
ವಾರಿಧಾರಾಕಲಿತಗದ್ಗದ
ಪೂರಣದ [5]ಕಂಠದಲ[5] ಕರಪಲ್ಲವದ ಗಲ್ಲದಲಿ
ಊರ ಹೊಱವಂ[6]ಟರು[6] ನರೇಂದ್ರನ
ಪೌರಜನ ಬಿಡಲಾಱದಾ ರಘು
ವೀರನನು ವಿಶ್ರುತಸುಧಾರ್ಮಿಕಸಾರ್ವಭೌಮಕನ ೫೯

---

[1] ನನು (ಕ.ಟ.ಡ.ಣ). [2] ಕೆವ್ವಳಿಸು (ಕ.ಜ.ಣ). [3] ದುಳುಕೆ (ಕ.ಣ). [4] ನು (ಚ.ಜ). [5] ಕಂಧರದ (ಕ.ಗ.ಜ.ಣ). [6] ಟನು (ಕ.ಡ.ಣ), ಟುದು (ಗ).

ತೆರಳಿತಷ್ಟಾದಶ ಮಹಾಪ್ರಜೆ
ಪುರದೊಳಿಲ್ಲೂಳಲಿಕೆ ನಾಯ್ ಪಾ
ಳ್ಗರೆದುದಾ ಪುರವಾರಿಗೇನೊಳ್ಳಿದನೋ ರಘುನಾಥ
ತೊರವೆಯಧಿಪತಿರಾಯ ನರಕೇ
ಸರಿಯು ಚರಣವ ಸಜ್ಜನರು ಬಿ
ಟ್ಟಿರಲು ಬಲ್ಲರೆ ಕಂದ ಕುಶ ಕೇಳೆಂದು ಮುನಿ ನುಡಿದ ೬೦

———

# ನಾಲ್ಕನೆಯ ಸಂಧಿ

---

ಸೂಚನೆ: ವೀರರಘುಪತಿ ವಿಮಲತರಭಾ
ಗೀರಥಿಯನುತ್ತರಿಸಿ ಗುಹನಿಂ
ಸಾರಿದನು ವರಚಿತ್ರಕೂಟಮಹಾಮಹೀಧರವ

ಕೇಳಿದೈ ಕುಶ ನಗರವದು [1]ನೆಱೆ[1]
ಹಾಳೆನಿಸಿದುದನಱಿದು [2]ಕಡು[2]ಘಾ
ತಾಳಿ [3]ಗಂಡನ ತಡೆದು ನುಡಿದಳು ಜಡಿವ[3] ರೋಷದಲಿ
ಆಳಲವನಿಯ ನಿನ್ನ ಮಗನು ವ
ನಾಳಿಯೆಂಬುದದೇಕೆ ಬಂದುದು
ಕೌಳಿಕದ ವರವೆನುತ ಕಟಕಿಯು ನುಡಿದಳಾ ಕೈಕೆ ೧

ಅರಸ [4]ಕೇಳ್ದೈ ಲೋಪ[4]ವಾದುದು
ವರವು ನಿನ್ನಯ ಸತ್ಯವಚನಕೆ
ಮ[5]ರ[5]ಳುದಲೆಯುಂಟೆಂಬುದನು ನಾನಱಿಯದಾದೆನಲ
ಧರೆಯ ಜನಸಂಕುಲದ ಜಿಹ್ವಾಂ
ಕುರದ ಕಷ್ಟಕೆ ಸೀಮೆಯಾದೆನು
ಮರುಳುತನ ತನಗಿದ್ದುದೆಂದಳು [6]ಕೈಕೆ ಕೋಪದಲ[6] ೨

ಅಱಿದನಾ ಕೈಕೆಯ ವಿವಾದದ
ತೆಱನನಾ ರಘುನಾಥ ನಮ್ಮನು
ಕೊಱತೆ ನೆಮ್ಮದೆ ಮಾಣದಿರದೆಂದಾಪ್ತಮಂತ್ರಿಗಳ
ಪುರಜನವ ಪರಿಜನವನುಚಿತೋ
ತ್ಕರದ ವಚನದಲಾ ಸತಿಯ ನಿ
ರ್ಭರದ ರೋಷವ [7]ಬಿಡಿಸಿ[7] ಕೊಟ್ಟನು ನಮಿಸಿ ವಿನಯದಲಿ ೩

---

[1] ತಾ (ಕ.ಗ.ಜ.ಝ.ಣ). [2] ಘನ (ಕ.ಣ). [3] ನುಡಿದಳು ತಡೆದು ಗಂಡನನಧಿಕ (ಕ.ಣ), ಗಂಡನ ಜಱೆದು ತಡೆದಳು ಬಂದು (ಗ). [4] ಕೇಳನು ಲೋಪ (ಕ.ಡ), ಕೇಳನುಲೋಮ (ಝ.ಟ.ಣ). [5] ರು (ಕ.ಜ.ಝ.ಟ.ಡ.ಣ). [6] ಕಾಂತೆ ನಸುನಗುತ (ಕ.ಣ), ಕೋಪದಲಿ ಕೈಕೆ (ಗ), ನಗುತ ನಳಿನಾಕ್ಷಿ (ಜ) [7] ನಿಲಿಸಿ (ಚ.ಡ).

ತಿರುಗಿ ನೀವಿನ್ನೆ[1]ನ್ನ[1]ದೆಸೆಗು
ಬ್ಬರದ ಚಿಂತೆಯ ತಾಳದಿರಿ ತಂ
ದಿರಿಸಿ ತತ್ಪುರದಾಧಿಪತ್ಯಕೆ ಭರತಭೂಪತಿಯ
ಗುರುವಸಿಷ್ಠನ ಕಳುಹದಿರಿ ನಿ
ಮ್ಮರಸಿ ಕೌಸಲ್ಯಾಸತಿಯನುಪ
ಚರಿಸಿಕೊಂಡಿಹುದೆಂದು ತಂದೆಗೆ ನಮಿಸಿದನು ರಾಮ ೪

ಕಂದ ಕೇಳೀರೇಳುವರುಷವು
ಸಂದ ಬಳಿಕೀ ನಗರವಿದು ನಿ
ನ್ನಿಂದ ಪಾಲಿಸಿಕೊಳಲಿ ಕೋ ಮುದ್ರಿಕೆಯ ನೀನೆಂದು
ಸಂದಣಿಸುವಶ್ರುಗಳಲಾ ನಿಜ
ನಂದನನ ಕಿಱುವೆರಳಿಗಿಟ್ಟಿಂ
ತೆಂದು ನುಡಿದನು ವರಸುಮಂತ್ರಂಗಾ ಮಹೀಪಾಲ ೫

ತರಿಸು ನಮ್ಮಯ ವಿಮಲ ಮಣಿಬಂ
ಧುರ ವರೂಥವನಿವರ ಕೊಂಡೊ
ಯ್ದಿರಿಸಿಬಾ ಕಳುಹಿದರೆ [2]ಕಳುಹದಿರಿರು[2] ಸಮೀಪದಲಿ
ತೆರಳಿ ನೀವೆಂದಶ್ರುಕಣದು
ಬ್ಬರದಲವರನು ಬೀಳುಕೊಟ್ಟನು
ಮಱುಗಿದುದು ಜನಜಾಲ ವಿರಹದಲಾ ಕಕುತ್ಸ್ಥಜನ ೬

ಅಮೆಯುಲಿನನೊಡನಿದ್ದು ತೊಲಗಿದ
ಹಿಮಕರನವೊಲು ರಘುಕುಲಾಂಬರ
ಹಿಮಕಿರಣನಗಲಿದನು ವಿಪಿನವಿಯದ್ವಿಭಾಗದಲಿ
ದ್ಯುಮಣಿಕುಲ ಪಾರ್ಥಿವಸರೋಜ
ದ್ಯುಮಣಿ ದಶರಥರಾಯನಾ ಪ
ಶ್ಚಿಮದ ತರಣಿಯ ತೇಜದಲಿ ತಿರುಗಿದನು ಪಟ್ಟಣಕೆ ೭

ಬಳಿಕ ಸರಯುವ ದಾಂಟಿ ಗಗನದ
ನಳಿನಮಿತ್ರಂಗರ್ಘ್ಯವಾರಿಯ
ತುಳುಕಿ ರಥವೇಱಿದನು ಸೀತಾದೇವಿಯರು ಸಹಿತ
ಚಳಗತಿಯ ವಾಜಿಗಳು ಕೊಂಡೊ
ಯ್ದಿಳುಹಿದವು ತಮಸೆಯಲಿ ನಾಲ್ವರು
ಕಳಿದರಾ ತೀರದಲಿ ಜಲದಾಹಾರದಲಿ ತಮಿಯ ೮

[1] ಮ್ಮ (ಚ). [2] ಕಳುಹದಿರೀ (ಕ), ಬಾರದಿರಿರು (ಚ), ಬಾರದಿರೀ (ಝ.ಡ).

ಮಱುದಿವಸ ವೇದಾವತಿಯ ಸಾ
ರ್ದರು ಬಳಿಕ್ಕವರಲ್ಲಿ ರಜನಿಯು
ಪರಿಹರಿಸಿ ದಾಂಟಿದರು ನದಿಯನು ಮೂಱನೆಯ ದಿವಸ
ಹರಿಪದೋದ್ಭವೆಯನು ಜಗತ್ರಯ
ಪರಮಪಾವನೆಯನು ಪುರತ್ರಯ
ಹರಶಿರೋಮಂಡಿತೆಯನೈದಿದರಸ್ತಮಾನದಲಿ ೯

ಅಂದಿನಿರುಳನು ಕಳೆದು ಬಳಿಕರ
ವಿಂದಸಖನುದಯದಲಮಾತ್ಯಂ
ಗೆಂದನಾ ರಘುನಾಥನಾಗತಕಾರ್ಯದನುನಯವ
ತಂದೆಯೇನಾಗಿಹನೊ ಭರತನು
ಬಂದುದಿಲ್ಲಾಪ್ತರುಗಳಯ್ಯನ
ಮುಂದಿರರು ನಡೆ ಪಿತನನಾರೈ ಹೋಗು ನೀನೆಂದ ೧೦

ತೆರಳು ತಾಯ್ಗಳ ಶೋಕವನು ಪರಿ
ಹರಿಸು ಕೈಕೆಯ ಪುರಿಗೆ ದೂತರ
ಹರಿಸು ಭರತನ ಕರೆಸು ಕೈವರ್ತಿಸು ಮಹೀತಳವ
ವರುಷ ಹದಿನಾಲ್ಕಕ್ಕಯೋಧ್ಯಾ
ಪುರಿಗೆ ಬಹೆ[1]ನೀ ಹದನನಾ[1] ಭೂ
ವರಗೆ ಬಿನ್ನಹಮಾಡೆನುತ ಬೀಳ್ಕೊಟ್ಟನಾ ರಾಮ ೧೧

ಬಿಡಲಱಿಯದವರುಗಳನಳಲಲಿ
ಮಿಡುಕುತಿರಲಾ ಮಂತ್ರಿ ಮಂತ್ರಿಯ
ಮುಡುಹ ಹಿಡಿದಲ್ಲಾಡಿ ಮಿಗೆ ಬಿಗಿಯಪ್ಪಿ ಮಸ್ತಕವ
ಬಿಡು ನೃಪಾಲನ ಜೀವಶರಧಿಗೆ
ವಡಬನೋ ಚಂದ್ರಮನೊ ಸಾಕಿ
ನ್ನಡಿಗಡಿಗೆ ಹೇಳುವ[2]ಡೆ[2] ನೀನೇನಜ್ಞನೇಯೆಂದ ೧೨

ಆ ಸುಮಂತ್ರನ ಸಂತವಿಸಿ ಬಳಿ
ಕಾ ಸರಿತ್ತೀರದಲಿ ಕಳುಹಿದ
ನಾ ಸರೋಜಾಂಬಕನು ವಿನಯದ[3]ಲಧಿಕತೇಜದಲಿ[3]

---

[1] ನೆಂದೀಹದನ (ಗ), ವೆಂಬೀಹದನ (ಚ), ವೀಹದನನಾ (ಝ.ಡ). [2] ರೆ (ಕ.ಚ.ಜ.ಟ.ಡ). [3] ಲಾಪ್ತವಚನದಲಿ (ಗ), ಲಾ ಸುಮಂತ್ರಕನ (ಝ.ಣ), ಲಾಗ ಮಂತ್ರಿಯನು (ಟ).

ದಾಶರಥಿಸುತ ಕೇಳ್ ಕಪರ್ದಿಯ
ಮೈಸಿರಿಯ ಮಿಕ್ಕನು ಶಿರೋವಿ
ನ್ಯಾಸವಿಮಲಜಟಾ[1]ನಿಬಂಧದ[1] ನಾಟಕಾಂಗದಲಿ ೧೩

ಬಂದು ಕಂಡನು ಗುಹನು ಚರಣ
ದ್ವಂದ್ವ[2]ದಲಿ ಚಾಚಿದನು[2] ಪರಮಾ
ನಂದಭಕ್ತಿಯಲುಪಚರಿಸಿದನು ರಾಘವೇಶ್ವರನ
ಮುಂದೆ ಜಾವದಮೇಲೆ ನಾವೆಗ
ಳಿಂದ ನದಿಯನು ದಾಂಟಿ ಬಳಿಕ
ಲ್ಲಿಂದ ತೆರಳಿದ[3]ರಿ[3]ವರು ಮೂವರು ಕಾಲುನಡೆಗಳಲಿ ೧೪

ಕುಶನೆ ಕೇಳು ನಿದಾಘಸಮಯದ
ಬಿಸಿಲಬೇಗೆಗೆ ಬೆಂದು ನೆಲನೂ
ಷ್ಣಿಸಿತಲ್ಲೈ ಕಡುಗಾದ ಕಾವಲಿಯಂತೆ ಕಡಲುಗಳು
ಬಿಸಿಗುದಿಯಲುಕ್ಕಿದವು ಸಿಡಿದವು
ವಸುಮತೀಧರಶಿಖರವಿವರಾ
ಯಸವನೇವೇಳುವೆನು ಬಳಲಿದರಾ [4]ವನಾಂತ[4]ದಲಿ ೧೫

ಮುಸುಡುಗಳು ಕಂದಿದವು ಕುಂದಿದ
ವೆಸೆವ ತನುಕಾಂತಿಗಳು ಪದಸಾ
ರಸದ ಸೊಂಪಡಗಿದವು [5]ಕದಡಿ[5]ದವಕ್ಷಿ [6]ಕೆಂಪಿನಲಿ[6]
[7]ಕಸ[7]ರಿಕೆಯ ಕಾಪಥದ ಕಟ್ಟಾ
ಯಸ[8]ವು ತಡೆದುದು[8] ನಿಮ್ಮ ರಾಯನ
ಶಶಿಮುಖಿಯನಾಪತ್ತಿಗೊಳಗಾಗದ[9]ರದಾ[9]ರೆಂದ ೧೬

ಅಡಿಗೆ ನಿಲುವಳು ಕುಳ್ಳಿ[10]ರುವಳಡಿ
ಗಡಿಗೆ[10] ಸುಯ್ವಳು ಬಳಲುವಳು ಬಾ
ಯ್ವಿಡುವಳೇಳುವಳಳುಕುವಳು ಬಳುಕುವಳು ಮೆಲ್ಲಡಿಯ
ಇಡಲಱಿಯದಿನ್ನೆನಿತು ಕಾನನ
ದೆಡೆಯೆನುತ ಬೆಸಗೊಂಬಳೀಪರಿ
ನಡೆನಡೆದು ನಡೆಗೆಟ್ಟು ನೆಪ್ಪಿಮ್ಮದಳಾತ್ಮವಲ್ಲಭನ ೧೭

---

[1] ನಿಬದ್ಧದ (ಗ.ಝ.ಡ), ವಿಬಂಧದ (ಚ). [2] ದಲಿ ಶಿರವಿಟ್ಟು (ಗ), ದಲಿ ಮೈಯಿಕ್ಕಿ (ಜ), ಕಾನತನಾಗಿ (ಝ). [3]ರ (ಚ.ಜ.ಟ). [4] ವನಾಧ್ವ (ಚ). [5] ಕೆದಱಿ (ಗ.ಝ.ಟ), ಕೆರಳಿ (ಜ). [6] ಕೆಂಪಡಱಿ (ಚ). [7] ಕಿಸು (ಗ.ಝ). [8] ದಿ ನಡೆವುತ (ಕ), ವು ತಡೆದವು (ಚ). [9] ವರಾ (ಕ.ಜ.ಟ.ಣ). [10] ಹಳು ಮತ್ತಡಿಗೆ (ಕ.ಡ.ಣ)

ತುಂಬಿದನು ಕಂಬನಿಯನಾತ್ಮನಿ
ತಂಬಿನಿಯ ಮೊಗನೋಡಿ ಮೆಲ್ಲನೆ
ನಂಬಿಸಿದನಿದ ಸಾರೆ ನೋಡಿದೆ ನೋಡು ಕಾಂತಾರ
ಅಂಬುಜಾಕರವಲ್ಲಿ ಫಲನಿಕು
ರುಂಬವಲ್ಲಿ ಸಮಗ್ರವೀ ರವಿ
ಬಿಂಬದುಗ್ರಾಟೋಪ ರೂಪಿಸದರಸಿ ಕೇಳೆಂದ ೧೮

ತೆಗೆದು ದಾರಿಗೆ ಹೆಜ್ಜೆಹೆಜ್ಜೆಗೆ
ಚಿಗುರುದೋಱಿದ ತಳಿ[1]ರ ಪಱಿಪಱಿ[1]
ದಗಲದಲಿ ಪಸರಿಸುತ ಪದಕಂಟಕವ [2]ಪಂಟಿ[2]ಸುತ
ಮೊಗಕೆ ಮುತ್ತುಗದೆಲೆಯ ಮಱೆವಿಡಿ
ದಗಲಿದುಮ್ಮಹದಿಂದ ಜನಕನ
ಮಗಳ ನಡೆಸುತ [3]ತಂ[3]ದರೊಂದು ಮಹಾಸರೋವರಕೆ ೧೯

ಅಂಚೆ ಶುಕ ಪಿಕ ಚಕ್ರವಾಕ
ಕ್ರೌಂಚ ಬಕ ಕಾರಂಡಮಂಡಳಿ
ಯಿಂಚರದ ಮಱಿದುಂಬಿಗಳ ಮೇಳವದ ಝೇಂಕೃತಿಯ
ಸಂಚರಿಪ ಶಫರಿಗಳ ಸಾರಸ
[4]ದಂ[4]ಚಿತದ ಕಲುಹಾರ ಕೈರವ
ಸಂಚಯದ ಸೌರಭ್ಯಪವನನಿನೆಸೆದುದಾ ಸರಸಿ ೨೦

ಸುಳಿದನೊಯ್ಯನೆ ಶೈತ್ಯಸಲಿಲೋ
ಚ್ಚಲಿತಧೂತತುಷಾರಭಾರಾ
ಕಲಿತದಳಿತ ಸರೋಜಗಂಧಪರಾಗಯೋಗದಲಿ
ತಿಳಿಗೊಳನ ತಡಿವಿಡಿದು ಮಂದ
ಸ್ಖಲಿತಮಾರುತನಾ ವನಾಧ್ವದ
ಬಳಲಿಕೆಯ ಬಿಸಜಪ್ರಿಯಾನ್ವಯರಂಗವೀಥಿಯಲಿ ೨೧

ಝಳದ ಥಗೆ ಡಾವರಿಸೆ ಹೊಕ್ಕರು
ಕೊಳನ ಕರಚರಣಾನನಂಗಳ
ತೊಳೆದು ಕುಡಿತೆಯಲೀಂಟಿದರು ನಿರ್ಮಳ ಹಿಮೋದಕವ
ಕಳೆದರಧ್ವಶ್ರಮವನಾ ತಿಳಿ
ಗೊಳನ ತೀರದ ತಳಿರುದೋಱಿದ
ನಳನಳಿಪ ಮಾಮರನ ನೆಳಲಲಿ ಮೂವರವರೆಂದ ೨೨

---

[1] ರ ತಱುತಱು (ಕ.ಗ.ಡ.ಣ), ರೆಲೆಯ ಪಱು (ಜ). [2] ಘಟ್ಟಿ (ಗ.ಡ). [3] ಬಂ (ಕ.ಗ.ಣ). [4] ವಂ (ಗ), ಸಂ (ಚ).

ಮೂಱುದಿನ[1]ದುಪ್ಪ[1]ಯಣಕುದಕಾ
ಹಾರ[2]ವನಿಬ[2]ರಿಗಾಯ್ತು ಕಳಿದರು
ವಾರಿಜದ ಕಂದದಲಿ ಹಸಿವನು ನಾಲ್ಕನೆಯ ದಿವಸ
ಸಾರಿದರು ಜಾಹ್ನವಿಯ [3]ಯಮು[3]ನೆಯ
ಭಾರತಿಯ ಸಂಗಮದ ಮಧ್ಯದ
ಪಾರಿಕಾಂಕ್ಷಿಪ್ರವರಭಾರದ್ವಾಜನಾಶ್ರಮವ ೨೩

ಪರಮಸತ್ಕಾರದಲಿ ಮುನಿಯುಪ
ಚರಿಸಿದನು ಬಳಿ[4]ಕಿ[4]ವರ ಗಮನದ
ಪರಿಯನಱಿದನು ಪರಮಪುರುಷನ ನಾಟಕಸ್ಥಿತಿಯ
ತರುಣ ಕೇಳ್ವೈ ಬಳಿಕ ನಿರ್ಜರ
ಗುರುತನೂಭವ ಚಿತ್ರಕೂಟದ
ಗಿರಿಗೆ ಕಳುಹಿದ[5]ನಿ[5]ವರನಾ ಮಱುದಿವಸದುದಯದಲಿ ೨೪

ತುಂಗತರಧಾತುಪ್ರಕೀರ್ಣದ
ಶೃಂಗದುರುಸಾನುವಿನ ಸುರಗಿ ಲ
ವಂಗ ಕದಳಿ ತಮಾಲ ಚೂತಪ್ರಮುಖತರುಲತೆಯ
ಸಂಗದಲಿ ಹರಿ ಶರಭಕುಲ ಸಾ
ರಂಗ ಸೂಕರ ಹರಿಣ ಮದಮಾ
ತಂಗದೆಡೆಯಾಟದಲಿ ಗಿರಿ ಕಂಗೆಸೆದುದಿದಿರಿನಲಿ ೨೫

ಇರವು ಬಳಿಕೆಮ್ಮಾಶ್ರಮದೊಳಾ
ಯ್ತರಸ ರಘುಪತಿಗಾ ಮಹಾಭೂ
ಧರದ ಮಧ್ಯಸ್ಥಳದ ಲಲಿತಪಲಾಶಭವನದಲಿ
ತೊರವೆಯಧಿಪತಿ ವೀರನರಕೇ
ಸರಿಯ ಕೈಯಲಿ ಬೀಳುಕೊಂಡಾ
ತರಣಿವಂಶದ ಸಚಿವಪತಿ ತಿರುಗಿದನು ಪಟ್ಟಣಕೆ ೨೬

---

[1] ದಲಿ ಪ (ಕ.ಣ), ದುಪಪ (ಚ). [2] ವಿನಿಬ (ಕ.ಗ.ಣ), ವಿಬ್ಬ (ಚ.ಡ).
[3] ಜಗ (ಗ.ಜ). [4] ಕ (ಕ.ಜ.ಡ). [5] ನ (ಚ.ಜ.ಡ).

# ಐದನೆಯ ಸಂಧಿ

———

ಸೂಚನೆ: ಚಂಡಕರಕುಲಕಮಲವನಮಾ
ರ್ತಾಂಡನಸ್ತಮಿಸಿದನು ಪೂರ್ವದ
ತಾಂಡವನ ಪಿತೃಶಾಪದಲಿ ನಿಜಸುತವಿಯೋಗದಲಿ

ಕೇಳಿದೈ ಕುಶ ನಿಮ್ಮ ರಘುಭೂ
ಪಾಲಕನ ಕೈಯಿಂದ ಗಂಗಾ
ಕೂಲದಲಿ ಬೀಳ್ಕೊಂಡ ಸೇನಾನಾಥ ದುಗುಡದಲಿ
ಮೇಲುಮುಸುಕಿನ ಮನದ ಮುಱುಕದ
ಜಾಳಿಸುವ ಕಂಬನಿಯ ಸುಯ್ಲಿನ
ಸೂಳುಗಳ ಸಂತಾಪದಲಿ ತಿರುಗಿದನು ಪಟ್ಟಣಕೆ ೧

ಅಗಲಲಾಱದೆ ಮುರಿದ ಮೋರೆಯ
ದುಗುಡದಲಿ [1]ಹಯವ[1]ಶ್ರುವಾರಿಯ
ನುಗುಳಿ ಗತಿಗುಂದಿದವು ಗುಣಭರಿತನ ವಿಯೋಗದಲಿ
ಮಗುಳೆ ಮಗುಳೆ ಸುಮಂತ್ರ ಮನದು
ಬ್ಬೆಗದಲುಱೆಬೆಂಡಾಗಿ ವಿರಹದ
ಧಗೆಯ [2]ಡಿ[2]ಳ್ಳಾಯಿಯಲಿ ಬಂದನು ಕೌಸಲಾವತಿಗೆ ೨

[3]ತೇರೊಳಿವರನು[3] ಕಾಣದಳಲಿತು
ಪೌರಜನವಲ್ಲಲ್ಲಿ ರಾಜ
ದ್ವಾರವನು ಹೊಕ್ಕನು ಸುಮಂತ್ರನು ಶೂನ್ಯಹರುಷದಲಿ
ವಾರಿಜಪ್ರಿಯನಸ್ತಶೈಲವ
ಸಾರೆ ಸಾರಿದನಕ್ಷಿಯುಗಳದ
ವಾರಿಗಳ [4]ಬೀಳಿಕೆಯ[4] ಬಿಸುಸುಯ್ಲಿನ ಮಹೀಪತಿಯ ೩

ಬಿಟ್ಟು ಬಂದೈ ನಂದನರನ[5]ಳಿ
ವಿಟ್ಟು[5] ಬಂದೈ ರಾಜಪುತ್ರರ
ನಟ್ಟಡವಿಯಲಿ ನಿರ್ಜನಾರಣ್ಯಪ್ರ[6]ವೇ[6]ಶದಲಿ

---

[1] ಹೊಯ್ವ (ಕ.ಣ), ಹಾಯ್ವ (ಚ.ಟ). [2] ಡೂ (ಗ.ಚ.ಝ). [3] ತೇರೊಳವರನು (ಕ.ಣ), ಊರೊಳಿವರನು (ಗ), ವೀರರಾಮನ (ಡ). [4] ಬಳಲಿಕೆಯ (ಕ.ಗ.ಟ.ಣ). [5] ಳುಹಿಟ್ಟು (ಚ.ಟ). [6] ದೇ (ಕ.ಗ.ಣ).

ಕೆಟ್ಟು ನುಡಿದರೆ ತನ್ನನೇನೆಂ
ದಟ್ಟಿದರು ನಿನ್ನುವನು ತನುವಿದು
ತುಟ್ಟಿಸದ ಮುನ್ನಿದ್ದುದನು [1]ಹೇಳಯ್ಯ ತನಗೆಂದ[1] ೪

ಜನಪ ಕೇಳಿಲ್ಲಿಂದ ತೆರಳಿದ
ದಿನದೊಳಿದ್ದರು ತಮಸೆಯಲಿ ಮಱು
ದಿನದೊಳಿರವಾಯ್ತುಮಲವೇದಾವತಿಯ ತೀರದಲಿ
ದಿನವೆರಡಱಿಂ ಮೇಲೆ ಮಂದಾ
ಕಿನಿಯನೈದಿದರಲ್ಲಿ ತನ್ನನು
ಜನಪಗಿಲ್ಲಾಪ್ತರುಗಳೆಂದಟ್ಟಿದರು ದುಗುಡದಲಿ ೫

ಬಳಿಕಲವರೇನಾದರೆಂಬುದ
ತಿಳಿದುದಿಲ್ಲೆನೆ ಕೇಳುತವನಿಪ
ನಿಳುಹಿದನು ನಿಜಕಾಯವನು [2]ಕೌ[2]ಸಲೆಯ ವಕ್ಷದಲಿ
ಕಳುಹಿದನು ಕೈಸನ್ನೆಯಲಿ ನಿಜ
ನಿಳಯಕಾ ಮಂತ್ರಿಯನು ಭೂಪತಿ
ಹಳವಿಸಿದನಡಿಗಡಿಗೆ ನೆನೆನೆನೆದಾ ಕುಮಾರಕರ ೬

ಹದುಳಿಸೆಲೆ ರಾಜೇಂದ್ರ ಸತ್ಯಾ
ಸ್ಪದನಲಾ ನೀ ನಿನ್ನ ಕುಲಸಂ
ಪದದ ಸಿರಿಗಾಭರಣನಾದನು ಪುತ್ರನೆಂದೆಂಬ
ಮುದವಿರಲು ಬೇಕಲ್ಲದೀ ಪರಿ
[3]ಗಡಗ[3]ದಿಸಬಹುದೇ ದೃಢವ್ರತ
ಸದಮಳದ ಸತ್ಪುರುಷರೆಂದಳು ಕೌಸಲಾದೇವಿ ೭

ಮಱೆವ ಮಗನೇ ಮರುಳಲಾ ಮಹಿ
ಗುಱುವ ಸುಕುಮಾರಕನ ಕಾನನ
ಕುಱುಬಿ ಸಂತೈಸಿದಡೆ ನಿಲುವುದೆ ಮನವು ವಿಧಿ ನಮಗೆ
ಕಱುಬನಾದೆನು ಕಯ್ಯಮೇಲೆ
ಚ್ಚಱಿಸಿತಕಟಾ ಪುತ್ರವಿರಹದ
ಮಱುಕ[4]ದೂರುಜ[4]ತಾಪಸರ ಬಲುಶಾಪ ತನಗೆಂದ ೮

---

[1] ಹೇಳೆಂದನಾ ಭೂಪ (ಚ). [2] ಕಂ (ಗ.ಚ.ಜ,ಝ.ಟ). [3] ಕದಬ (ಚ.ಟ.ಡ). [4] ವ್ಯೋ ಮಝು (ಕ.ಜ), ಧಳಿವೀ (ಗ).

ಯುವತಿ ಕೇಳುನ್ಮತ್ತಯೌವನ
ದವತರಣದಲಿ ತನಗೆ ನೆಱೆಸಂ
ಭವಿಸಿ[1]ತಪಿಶಾಚೋ[1]ನೃಪೋನಾಸ್ತ್ಯೆಂಬ ನಾಣ್ಣುಡಿ[2]ಯು[2]
ನೆವವಿದೀಗುಪವರ್ತನದ ಮೃಗ
ನಿವಹಶಿಕ್ಷಾವ್ಯಸನ ಕೊಂಡೊ
ಯ್ದುವಚಿತೆನ್ನನು ವಿಧಿ ಪುರಾಕೃತವಾರವಶವೆಂದ ೯

ಅಂಬುಜಾನನೆ ಕೇಳು ತಾಂಡವ
ನೆಂಬಮುನಿ ಪಿತೃಮಾತೃಸೇವಾ
ಲಂಬಕನು ತೊಳಲಿದನು ನಾನಾ ತೀರ್ಥಯಾತ್ರೆಯಲಿ
ಅಂಬುವನು ತರಲೆಂದು ಪಿತೃಗಳ
ಕಂಬಿಯನು ನೇರಿರಿಸಿ ಚರ್ಮದ
[3]ತಂ[3]ಬುಗೆಯ ಕೊಂಡಱಸು[4]ತಿರುಳ್ಕೈದಿದನು[4] ಜೀವನವ ೧೦

ತೋಹಿನಲಿ ತಾನಿರುಳು ಶರಸ
ನ್ನಾಹನಾಗಿರೆ ತಾಂಡವನು ತ
ದ್ವಾಹಿನಿಯೊಳದ್ದಿದನು ಕರವತಿಗೆಯನು ಕೈನೀಡಿ
ಮೋಹಿಸಿತು ಘುಳುಘುಳುನಿನಾದ ವ
ರಾಹನಿಸ್ವನದಂತೆ ಮುನಿಯೆಂ
ಬೂಹೆಕೊಳ್ಳದೆ ಕೊಂಡು ಹರಿದುದು ಚಿತ್ತವಘುಪಥಕೆ ೧೧

ಆ ರವ [5]ಧ್ವನಿಗೊಡುವುದನು[5] ಭೂ
ದಾರವೆಂದೇ [6]ಬಗೆದು[6] ಹೂಡಿದ
ಕೂರಲಗು ಬಿಡೆ ಬಿದ್ದುದುರದಲಿ ವೈಶ್ಯಮುನಿವರನ
ಭೂರಿಬಾಣವ್ಯಥೆಯನಾ ಮುನಿ
ಸೈರಿಸದೆ ಶಂಕರ ಸದಾಶಿವ
ಮಾರಹರ ಹರಯೆನುತ ಹಮ್ಮೈಸಿದನು ಮೂರ್ಚೆಯಲಿ ೧೨

ಇದು ವಿಚಿತ್ರ[7]ವೆನುತ್ತ[7] ಹರಿದೈ
ದಿದೆನು ನಿಲ್ಲದೆ ಬಿಲ್ಲಿನಲ್ಲಿಯೆ
ಬಿದಿರಿ ಬಳಿಕಿದಿರಿನಲಿ ಕಂಡೆನು ಕೆಡೆದ ತಾಂಡವನ

---

[1] ತಪಿಶಾಚಾ (ಕ), ತು ಪಿಶಾಚೋ (ಗ), ತಪಿಶಾಪೋ (ಡ). [2] ಗೆ (ಗ.ಚ.ಟ). [3] ಕಂ (ಗ), ರಂ (ಚ). [4] ತ್ಕೈದಿದನವನು (ಕ.ಝ.ಡ). [5] ದ ದನಿಗೊಡುವುದನು (ಕ.ಡ), ವನೇ ದನಿಗೊಡುವ (ಗ), ವನೆಡೆಗೊಂಡು ವರ (ಝ), [6] ಮಾಡಿ (ಗ), ನೋಡಿ (ಜ.ಝ). [7] ವಿದೆನುತ (ಕ.ಜ.ಣ).

ಕದಡಿತೆನ್ನಯ ಹೃದಯ ಹೃದಯವ
ಹುದುಗಿಸಘವಘದುರಿಗೆ ತನು ಬೆದ
ಬೆದನೆ ಬೆಂದಿಂತೆಂದೆನಾ ಮುನಿಗರಸಿ ಕೇಳೆಂದ ೧೩

ನರರು ರಜನೀಮುಖದ ಸೀಮಾ
ಚರಿತ[1]ರು[1]ತ್ತರಭಾಗ ರಾತ್ರೀ
ಚರರಿಗಾಗಿಹುದಿದುವೆ ನೀ ನರನೋ ನಿಶಾಚರನೊ
ನಿರುತವಾವುದು ಹೇಳೆನಲು ನಾವ್
ನರರು [2]ವಿಟತಾಪಸರು ತೀರ್ಥಾ[2]
ಚರಿತರಿನ್ನಾರಾದಡೇನೆಮಗಾಯ್ತು ಹರಿವೆಂದ ೧೪

[3]ಹಳೆದಿನದ[3] ತಾಯ್ತಂದೆ[4]ಗಳ[4] ಬಿಡ
ದಲಸದವರನು ಹೊತ್ತು ತೊಳಲಿದೆ
ನಿಳೆಯೊಳುಳ್ಳ ಸಮಸ್ತತೀರ್ಥಕ್ಷೇತ್ರಗಿರಿವನವ
ಉಳಿದುದೊಂದೇ ಕಾಶಿ ಕಾಶಿಯೊ
ಳಿಳುಹುವ[5]ದೆ[5] ಸಂಕಲ್ಪವದು ತಾ
ನಿಲುಕದಾದುದು ದೈವಗತಿ ಬೇಱಿದ್ದುದೆನಗೆಂದ ೧೫

ಅಱಿದನೆನ್ನುವನೆನ್ನ ಮಾತಿನ
ನಿಱುಗೆಯಲಿ ನೃಪನೆಂದು ಮೇಲೆ
ಚ್ಚಱಿಸಿದನು ತನಗಾತ್ಮವಿದ್ಯಾವಿಷಯಬುದ್ಧಿಗಳ
ನೆಱೆವುದಾರಾಯುಷ್ಯವಾರಿಂ
ದಱಿತುಕೋ [6]ಚಿತ್ಪ್ರಭೆಯ[6] ಮಾಯೆಯ
ಮಱೆಯ ಜವನಿಕೆಯೇಕೆ ನೀನಿದಕಳುಕಬೇಡೆಂದ ೧೬

ಎಲೆ ಮಹೀಪತಿ ನಿನ್ನ ಮನದು
ಷ್ಕಲಿತಕಲ್ಮಷವಿಪಿನಕಿದಕೋ
ಜ್ಜ್ವಲನಸತ್ಕರ್ಮಪ್ರಪಂಚಿತ ಸಾರ[7]ಸಂಸ್ಕಾರ[7]
ಹಲವು ಮಾತೇನೆಮ್ಮ ಮಾತೆಯು
ಸಲಹು ತಾತನ ರಕ್ಷಿಸಕ್ಷಯ
ಫಲದ ಪ್ರಾಯಶ್ಚಿತ್ತವಿದು ನಿನಗೆಂದು [8]ಮುನಿ ನುಡಿದ[8] ೧೭

---

[1]ದು (ಚ.ಜ). [2]ದಿಟತಾಪಸರು ತೀರ್ಥಾ (ಕ.ಣ), ವೈಶ್ಯರು ತೀರ್ಥಯಾತ್ರಾ (ಝ.ಟ.ಡ). [3] ಹಲವುದಿನ (ಜ.ಝ.ಡ). [4] ಯನು (ಗ), ಯರ (ಜ.ಝ.ಟ). [5] ಡೆ (ಗ), ದು (ಚ.ಝ.ಡ). [6] ಚಿತ್ಪ್ರಭೆಗೆ (ಗ), ಚಿದ್ಭ್ರಮೆಯು (ಚ). [7] ಪನ್ನೀರ (ಕ), ಸರ್ವಸ್ವ (ಝ), ಸಂಗತಿಯ (ಣ). [8] ಕೈಮುಗಿದ (ಕ.ಗ.ಜ.ಣ).

ನೀರನೆಱೆ ಕೊಂಡೊಯ್ದು ಮೇಲುಪ
ಚಾರವೇನದ ಮಾಡು ಗಂಗಾ
ತೀರವನು ಸಾರುವಡೆ ಕೊಂಡೊಯ್ದಿಳುಹು ಕಾಶಿಯಲಿ
[1]ಭಾ[1]ರವಿದು ನಿನಗಿದುವೆ ಮೃತಸಂ
ಸ್ಕಾರಪರಿಯಂತರಸ ಕೇಳೆಂ
ದೂರುಜವ್ರತಿ ಸರಳ ಕೀಲಿಸಿ ಮುಗಿದನಕ್ಷಿಗಳ ೧೮

ಹರನ [2]ಗಂಗಾಧರನ ಗಿರಿಜಾ
ವರನ ಶಶಿಶೇಖರನ ಶೋಭಾ
ಕರನ[2] ಸರ್ವೇಶ್ವರನ ವಿಜಿತಸ್ಮರನ ಶಂಕರನ
ಪರಮ ಮೂರ್ತಿಯ ಹೃದಯಕಮಲದೊ
ಳಿರಿಸಿ ಸಂಧಾನದಲಿ ಜೀವವ
ತೆರಳಿಚಿದನೊಡೆಹಾಯ್ದುದಾತ್ಮಜ್ಯೋತಿ ಮೂರ್ಧ್ನಿಯಲಿ ೧೯

ಹೊತ್ತಿ ಹೊಗೆವನುತಾಪದಲಿ ನೀ
ರೊತ್ತಿದಂಬಕದಿಂದ ಬಿಡದೞ
ಸುತ್ತ ಬಂದೆನು ಕರವತಿಗೆ ಜಲಸಹಿತ ತಾಂಡವನ
ಹೆತ್ತ ತಾಯ್ತಂದೆ[3]ಯರ[3] ಕಂಡೆನು
ಮುತ್ತುಸಡಿಲಿದ ಚಿಪ್ಪಿನವೊಲಳ
ಲುತ್ತ ಬಾಯ್ಬಿಡುತಿಹ ಪುರಾಣಶರೀರತಾಪಸರ ೨೦

ನೀರೊಳಗೆ ಜಾಱಿದನೊ ಮೇಣು
ಗ್ರೋರಗನೊಳಳಿವಾಯ್ತೊ ದುಷ್ಟಚ
ಮೂರು ಚಪ್ಪರಿಸಿದುದೊ ಕೆಡೆದನೊ ಹಳ್ಳಕೊಳ್ಳದಲಿ
ಕ್ರೂರಲುಬ್ಧಕ[4]ರಸ್ತ್ರ[4]ಹತಿಯಲಿ
ತೀರಿದನೊ ಹಾ ಕಂದ ಹಾ ಎಂ
ಬೂರುಜವ್ರತಿಗಳನು ಕಂಡತಿಮುಱಕವಾಯ್ತೆಂದ ೨೧

ನೊಂದೆನಾ ನುಡಿಗೇಳುತವೆ ಪೂ
ರ್ಣೇಂದುಮುಖಿ ಕೇಳ್ ತಾಂಡವನ ತಾಯ್
ತಂದೆಗಳ ದನಿದೋಱದಿಳುಹಿದೆನಿಳೆಗೆ ಮರದಿಂದ

---

[1] ಸಾ (ಚ). [2] ಗಿರಿಜಾವರನ ಗಂಗಾಧರನ ಶೋಭಾಕರನ ಶಶಿಶೇಖರನ (ಚ.ಡ). [3] ಗಳ (ಚ.ಜ). [4] ಶಸ್ತ್ರ (ಕ.ಜ.ಣ), ನಾಪ್ರ (ಗ).

ಇಂದಿದೇನ್ನೈ ತಡದೆ ನೀರನು
ತಂದಡೆಱೆ [1]ತಮಗೆ[1]ನಲು ವಿಗತಾ
ನಂದಮಾನಸನಾಗಿ ಬಳಿಕೆಱೆದೆನು ಹಿಮೋದಕವ ೨೨

ಹೊಲಸುದೋಱಿದೆ ಮಗನೆ ಜಲ[2]ವೆಮ
ಗೆ[2]ಲಸಿದೆಯಲಾ ಸೇವೆಯಲಿ ವಿಧಿ
ಮುಳಿಯದಕಟಾ ಪಾಪಿಗಳಿಗೆನುತೊಕ್ಕರಾ ಜಲವ
ಬಳಿಕ ತನ್ನಿಂದಾದ ಹದನನು
ತಿಳಿಯ ಹೇಳಿದು ಶಾಪವನು ಕೈ
ಗೊಳಿಸಿ ತನಗೆಂದವರ್ಗೆ ಕೈಗಳ ಮುಗಿದೆ ನಾನೆಂದ ೨೩

ಹೊರಳಿದರು ಕಾವಡಿಯೊಳಕಟಾ
ಕರುಣಿಸಿದನೆ ವಿಧಾತ್ರನೆಮಗೀ
ಪರಿಯ ಸುತಶೋಕವನು ಹಾ ಹಾ ಮಗನೆ ನಮ್ಮುವನು
ಪರಕೆ ಸಲಿಸದೆ ಮುಂದೆ ನೀನೀ
ಪರಿಯ ಹೋಹರೆ ಕಂದಯೆಂದ
ವರು[3]ರು[3]ಳಿಸಿದರಶ್ರುಗಳನಲುಗುವ ಶಿರದ ಶೋಕದಲಿ ೨೪

ಎಲೆ ಮಹಾಪುರುಷನೆ ಪುರಾಕೃತ
ಫಲವಿದೆಮಗಿನ್ನಾದಡೆಯು ನಾ
ವಿಳಿಕೆಗೈಯದ ಮುನ್ನ ನಿನ್ನಿಂದಳಿದ ತಾಂಡವನ
ಬಳಿಗೆ ಕೊಂಡೊಯ್ದಿರಿಸು ನಿಜಸುತ
ನೊಳಗೆ ಮಾತುಂಟೆಮಗೆ ಕಾರ್ಯದ
ಕಳಶವಿದು ನಿನಗೆಂದು ಕೈಗಳಮುಗಿದರೆನಗೆಂದ ೨೫

ಹೊತ್ತುಕೊಂಡೊಯ್ದಿಳುಹಿದೆನು ನದಿ
ಯೊತ್ತಿನಲಿ ತಾಂಡವನ ಬಳಿಯಲಿ
ಕುತ್ತಿದಂಬಿನ ಗಾಯವನು ತಡವರಿಸಿ ಮುಡುಹುಗಳ
ಇತ್ತ ಭಾಷೆಯ ಸಲಿಸದುಱಿಬೇ
ಸತ್ತು ಬಿಸುಟ್ಟೈ ನಮ್ಮ ನಮಗಿ
ನ್ನೆತ್ತ ಪಥ ನಮಗೇನುಗತಿ ಹೇಳೆಂದರವ[4]ರೆಂದ[4] ೨೬

---

[1] ಯೆಂದೆ (ಕ.ಜ.ಣ), ನಮಗೆ (ಚ). [2] ದಿಂದ (ಗ), ವೆನುತ (ಣ).
[3] ಗು (ಕ.ಚ). [4] ರಂದು (ಕ.ಜ.ಟ.ಣ).

ಅಳಿದ ಮಗನೋಪಾದಿ ನಿಮ್ಮನು
ಸಲಹುವೆನು ನಂಬುವುದು ನೀವೆನ
ಲಲಸಿ ಬಳಿಕಸುಪಿಡಿಯಲೊಲ್ಲದೆ ಸುತವಿಯೋಗದಲಿ
ಅಳಿ[1]ವು ಸಮನಿಸಲೆ[1]ನುತ ನಳಿನಜ
ನಿಳಯಕಭಿಮುಖರಾದರನಿಬ[2]ರು
ಜಳನ[2] ಸಂಸ್ಕೃತಿಯಿಂದ ಮಾಡಿದೆನೂರ್ಧ್ವದೇಹಿಕವ ೨೭

ಎನುತ ಬಹಿರಂಗದ ಮನಸ್ಸಂ
ಜನಿತ ಭವಮಾಯಾಪ್ರಪಂಚವ
ನೊನದು ನಿರ್ಮಲಸಚ್ಚಿದಾನಂದಸ್ವರೂಪಕದ
ವಿನುತಯೋಗ[3]ಜ್ಞಾ[3]ನತತ್ವದ
ನೆನಹಿನಲಿ ನಿಜ[4]ದೈಕ್ಯ[4]ತರಭಾ
ವನೆಯಲಿಳಿವಿಟ್ಟನು ಕಳೇವರವನು ಮಹೀಪಾಲ ೨೮

ಮೇಲಣಾತ್ತರವಿಲ್ಲದಿರೆ ಭೂ
ಪಾಲಕನ ಮುಖಚೇಷ್ಟೆಯನು ಮುಖಿ
ದಾಲಿಗಳನಖಿದಕಟ ಕೆಟ್ಟೆನು ಕೆಟ್ಟೆನಕಟೆನುತ
ಬಾಲಕರಿಗಿನ್ನೇನು ಗತಿ ಭೂ
ಪಾಲ ಹೇಳ್ಳೆ ಹೇಳೆನುತ ನಿಜ
ಬಾಳವನು ಭಾಳದಲಲಂಕರಿಸಿದಳು ಭೂಪತಿಯು ೨೯

ಸುತವಿಯೋಗದ ಶೋಕನದಿ ನಿಜ
ಪತಿ[5]ವಿಯೋಗದ[5] ಶೋಕ ತಟಿನೀ
ಪತಿಯು ಸಂಗಮವಾದು[6]ದದ್ದಳು[6] ಕೌಸಲಾದೇವಿ
ಕ್ಷಿತಿಸುತಾಸುತ ಕೇಳು ನೆರೆದುದು
ಸತಿಯರಾ ದಶರಥನ ಹಾಹಾ
ಕೃತಿಯು ಕಲಿತಾಕ್ರಂದನಾ ಧ್ವನಿ ತುಂಬಿತಂಬರವ ೩೦

---

[1] ಬಳಿಕ ನೀನೆ (ಗ), ವು ನಿನಗಹುದೆ (ಝ). [2] ರು ಜಲಧಿ (ಗ), ರ ಜ್ವಲನ (ಚ). [3] ಧ್ಯಾ (ಕ.ಗ.ಜ.ಣ). [4] ಧೈರ್ಯ (ಚ), ದೈನ್ಯ (ಝ.ಡ). [5] ಯ ಮರಣದ (ಚ). [6] ದೆಂದಳು (ಕ.ಗ.ಣ), ದತ್ತಳು (ಡ).

ಹರಿದು ನೃಪದೂತಿಯರು ಪುರಜನ
ವಱಿಯದಂತಿರೆ ಬಂದು ಮೈತ್ರಾ
ವರುಣಿ ದೃಷ್ಟಿ ಸುಮಂತ್ರಮುಖ್ಯರಿಗಱುಹಿದರು ಹದನ
ಪುರದ ಬಾಗಿಲಿಗರಮನೆಗೆ ತ
ತ್ಪುರದ ಕೇರಿಗಳೊಳಗೆ ಕಾವಲ
ನಿರಿಸಿ ಹೊಕ್ಕರು ಕಂಡು ಮಱುಗಿದರವರು ನೃಪನಿರವ ೩೧

ಸೂಳಗಿವ ಬಲುಚಿಂತೆಯಲಿ ಭೂ
ಪಾಲ ಮರಣದ ಮೇಲೆ ಮುನಿಕುಲ
ಮೌಳಿ ದೃಷ್ಟಿಸುಮಂತ್ರ ಮುಖ್ಯ ಸಮಸ್ತ ಮಂತ್ರಿಗಳು
ಮೇಲಣಭಿಗತಕಾರ್ಯದವನೀ
ಪಾಲಪದವಿಗೆ ಕೈಕೆಯ [1]ಕ್ಷಿತಿ[1]
ಪಾಲಕನ ಮೊಮ್ಮಗನ ಕರೆಸಲು ಮಾಡಿದರು ಮನವ ೩೨

---

[1] ಕ್ಷ್ಮಾ (ಗ.ಚ).

# ಆರನೆಯ ಸಂಧಿ

ಸೂಚನೆ : ಅರಸುತನಕೊಡಬಡದೆ ರಘುಕುಲ
ದರಸನಲ್ಲಿಗೆ ಬಂದು ನೇಮವ
ಧರಿಸಿ ಮರಳಿದು ಭರತ ನಂದಿಗ್ರಾಮಕೈತಂದ

ರಾಯನಾಯುಷ್ಯಾವಸಾನದ
ರಾಯಸವ ಬರೆಸಿದರು ಕೈಕೆಯ
ರಾಯ ನಗರಿಗೆ ಕಳುಹಿದರು ಬಳಿಕಾಪ್ತಗುಪ್ತಿಗರ
ರಾಯ ದಶರಥನಸುವಿಸಂಚಿತ
ಕಾಯವನು ನವತಪ್ತತೈಲದ
ಲಾಯುಸಂಬಡಿಸಿದರು ಮೇಧಿಸಿದರು ಸುಗಂಧದಲಿ ೧

ವರದುಕೂಲವನುಡಿಸಿ ವಸುಧಾ
ಸ್ತರಣದಲಿ ಪಟ್ಟಿರಿಸಿ ಜಾಡ್ಯ
ಸ್ಫುರುಷನೆಂದೂರೊಳಗೆ ಹರಹಿದರುದಯಕಾಲದಲಿ
ಹರಿದರಿತ್ತಲು ಲೇಖವಾಹಕ
ರಿರುಳು ಹಗಲೆನ್ನದೆ ಗಿರಿವ್ರಜ
ಪುರವ ಹೊಕ್ಕರು ಕಂಡರಾ ಕೈಕೆಯ ಕುಮಾರಕ[1]ನ[1] ೨

ಇತ್ತರೋಲೆಯನವದಿರವದಿರ
ಹತ್ತಿರಕೆ ಕರೆದಯ್ಯನಿರವಿಗೆ
ಚಿತ್ತದಲಿ ಶಂಕಿಸುತ ಹದನೇನೆಂದು ಬೆಸಗೊಳಲು
ಹೊತ್ತ ರಾಜ್ಯಶ್ರೀಯ ನಿಮ್ಮಡಿ
ಯುತ್ತಮಾಂಗದಲಿರಿಸಿ ಸುರಪುರ
ದತ್ತ ಸರಿದನು ರಾಯ ದಶರಥನೆಂದರಾ ಚರರು ೩

ಐಸೆ ಮತ್ತೇನೆಂದು ಕಲಿತ
ಕ್ಲೇಶದನುತಾಪದಲಿ ಹೊಱವಂ
ಟಾ ಸುಮಿತ್ರಾಸೂನುಸಹ ಚತುರಂಗಬಲಸಹಿತ
ವಾಸರತ್ರಯಕೈದಿದನು ವರ
ಕೌಸಲಾ ನಗರವನು ಗತಭೂ
ಮೀಶನಿದಿರಲಿ ಬಿದ್ದು ಹೊರಳಿದ[2]ನ[2]ಧಿಕಶೋಕದಲಿ ೪

[1] ರ (ಕ.ಚ.ಜ.ಝ.ಡ.ಣ). [2] ರ (ಗ.ಚ.ಝ.ಟ).

ಕೇಳಿದನು ಸುತವಿರಹದವನೀ
ಪಾಲಮರಣ[1]ವನಧಿಕಶೋಕ
ಜ್ವಾಲೆ ದಳ್ಳಿಸಿತಗ್ರಜನ್ಮವಿಯೋಗವಿಶ್ರುತವ[1]
ಆಲಿಯಲಿ ಕಿಡಿಗೆದಱಿ ಜನನಿಯ
ಮೇಲೆ ಮುಳಿದಳಿವಿಂಗೆ ಝಡಿದನು
ಬಾಳ ಬಳಿಕ ವಸಿಷ್ಠ ಕಂಡಡಹಾಯ್ದನಾಯುಧಕೆ ೫

ಜಱೆದು ಭರತನ ಕೈಯ ಖಡುಗವ
ನೊಱೆಗೊಳಿಸಿ ಧರ್ಮದ ರಹಸ್ಯವ
ನಱುಹಿ ಬಳಿಕ ಪರೇತಕೃತ್ಯದ ಪರಮವೈದಿಕದ
ನಿಱುಗೆಯಲಿ ಮಾಡಿಸಿದ[2]ರ[2]ಗ್ನಿಯ
ಲೊಱಗಿತೈನೂಱರಸಿಯರು ನೇ
ಸಱಿಗುಲಾಧಿಪನೊಡನವರ್ಗಳಿಗಾಯ್ತು ಸಂಸ್ಕಾರ ೬

ನದಿನದಿಯ ತೀರದಲಿ ಗೃಹಸಂ
ಪದಸಹಿತ ಸುಕ್ಷೇತ್ರಕನ್ಯಾ
ವಿದಿತ ವಿವಿಧಸುವರ್ಣವಸ್ತ್ರಾಭರಣ ದಾನದಲಿ
ಮದುವೆ ಕೆಱೆಯಱವಟಿಗೆ ಯಾತ್ರಾ
ಸದನ ನಾನಾಛತ್ರ ಸಂಪೂ
ರ್ಣದಲಿ ಮಿಗೆ ಮೆಚ್ಚಿಸಿದನಾ ಮನುವಂಶದರಸುಗಳ ೭

ದಿವಸ ಹದಿ[3]ಮೂ[3]ಱರಲಿ ಕೈಕಾ
ಭವನನೊಡಬಡಿಸಿದರು ಮುನಿಪುಂ
ಗವಸುಮಂತ್ರಕ[4]ರ[4]ರಸುತನಕೆ ನೃಪಾಲಮತವಿಡಿದು
ಅವನಿ ತಾಯ್ ರಘುನಾಥ ಪಿತನೆಂ
ದವರ ಮಗುಳೊಡಬಡಿಸಿ ನೃಪ ನಗ
ರವನು ಹೊಱವಂಟನು ಕಕುತ್ಸ್ಥಾನ್ವಯನ ದರುಶನಕೆ ೮

---

[1] ವರಧಿಕರೋಷಜ್ವಾಲೆ ಝಳಪಿಸಿತಗ್ರಜಲ್ಮವಿಯೋಗವಿಶ್ರುತವ (ಕ), ಸ್ಥಿತಿಯ ಸೀತಾ ಲೋಲಲಕ್ಷ್ಮಣರುಗಳ ವನವಾಸ ಪ್ರಯಾಸಕವ (ಚ), ವನಧಿಕಶೋಕಜ್ವಾಲೆ ದಳ್ಳಿಸಿತಗ್ರಜನ್ಮವಿಯೋಗ ವಿಶ್ರುತದ (ಗ.ಜ.ಝ.ಟ). [2] ಲ (ಕ.ಗ.ಝ), ನ (ಟ). [3] ನಾ (ಚ). [4] ನ (ಜ.ಚ).

ಕೊಡೆ ಹೊಱವಂಟುದು ಸುಮಂತ್ರಕ
ಗೂಡಿ ಸಚಿವನಿಯೋಗಿಗಳು ಹೊಱ
ಬೀಡ ಬಿಟ್ಟುದು ಮುಂದೆ ಮನ್ನೆಯ ಮಂಡಲೇಶ್ವರರು
ಜೋಡಿಸಿದ ಕರಿತುರಗ[1]ರಥವೆಡೆ[1]
ಯಾಡಿದವು ಗುಡಿ ಮಂಡವಿಗೆಗಳ
ಹೂಡಿದೆತ್ತಿನ ಬಂಡಿಗಳು ನಡೆಗೊಂಡವಗಲದಲಿ ೯

ಇರಿಸಿದನು ಪಟ್ಟಣದ ರಕ್ಷಣೆ
ಗೆರಡನೆಯ ಸೌಮಿತ್ರಿಯನು ನಾ
ಲ್ವರು ಮಹಾಮಂತ್ರಿಗಳನನ್ವಯದಾಪ್ತಪರಿಜನವ
ಹರಿಸಿದನು ನಾನಾ ದಿಗಂತಕೆ
ಚರರನಖಿಳಾರಣ್ಯ ನದಿ ದು
ಸ್ತರಮಹೀಧರನಿಕರದೆಡೆಗಱಸಲು ನಿಜಾಗ್ರಜನ ೧೦

ಕೇಳಿಕೊಳುತಾ ಭರತನಧಿಕಕ್ಕ
ಪಾಳುವನು ಕಾಬುಜ್ಜುಗದ ಪರಿ
ಪಾಳಿಯಿಂದೈದಿದನು ಶೃಂಗೀವೇರ ಪುರವರವ
ಪಾಳಯವನಿದ ಕಾಣುತಾ ಗುಹ
ನಾಳುಕುದುರೆಯ ಕೂಡಿ ಗಮನದ
[2]ಚಾ[2]ಳಿಯಾವುದೊ ತಿಳಿಯಬೇಕೆನುತಲ್ಲಿಗೈತಂದ ೧೧

ಅವನ ಮನ್ನಿಸಿ ಕಂಡುದುಂಟೇ
ರವಿಕುಲೇಂದ್ರನ ರಾಮಚಂದ್ರನ
ಭುವನಜನ[3]ವಂದ್ಯನನಿಂದ್ಯನನಖಿಳ[3]ಗುಣಯುತನ
ನವರಘುಕ್ಷಿತಿಪಾಲಕನನೆನ
ಲವನು ಮನದಲಿ ವೈರಬುದ್ಧಿಯ
ಲಿವರು ಬಂದವರಲ್ಲವೆನುತೀಂತೆಂದನರಸಂಗೆ ೧೨

ಜನಪ ಚಿತ್ತೈಸಾದಡಾ ಶ್ರೀ
ಸ್ತನಸುಕುಂಕುಮಪಂಕದಂಕಿತ
ವಿನುತವಕ್ಷಸ್ಥಳನು ಸೀತಾದೇವಿಯರು ಸಹಿತ

---

[1] ಬಿಡದೆಡೆ (ಗ.ಚ.ಟ). [2] ಜಾ(ಗ), ಧಾ (ಟ). [3] ವಂದಿತನನಖಿಳೈಶ್ವರ್ಯ (ಕ.ಣ), ವಂದ್ಯನನಗಮ್ಯನನಖಿಳ (ಚ).

ಅನುಜಸಹಿತೀ ವಿಮಲಮಂದಾ
ಕಿನಿಯ ದಾಂಟಿ ಸುರೇಂದ್ರಗುರುನಂ
ದನನ ನಂದನಕಾಗಿ ಗಮಿಸಿದರರಸ ಕೇಳೆಂದ ೧೩

ಬಳಿ[1]ಯ[1]ಲೋಲೈಸುತ್ತಲವರನು
ಕಳುಹಿದೆನು ಸುರುಗುರುತನೂಜನ
ಬಳಿಗೆ ನೀವಾ ಮುನಿವಚೋವಿಸ್ತರವಿಲಾಸಕವ
ತಿಳಿವುದೆನೆ ಬಳಿಕಾ ಭರತ ನಿಜ
[2]ಬಲಸಹಿತ[2] ಭಾಗೀರಥಿಯ ಹಾ
ಯ್ದೊಲವು [3]ಮಿಗಲೈ[3]ತಂದನಾ ಮುನಿನಾಥನಿದ್ದೆಡೆಗೆ ೧೪

ಆ ಭರದ್ವಾಜನು ನಿಜೋನ್ನತ
ವೈಭವದಿನಾ ಭರತ ಮುಖ್ಯ ಮ
ಹಾಭಟ[4]ಸ್ತೋಮವನಿಭಾ[4]ಶ್ವವರೂಥವಾಹಕರ
ಶೋಭಿಸುವ ಸುರಧೇನುವಿಂ ಸೌ
ಖ್ಯಾಭಿಸಂತುಷ್ಟಿಯಲಿ ಸುರರ ಸು
ಖಾಭಿಲಾಷೆಯ ಬಿಡಿಸಿದನು ವಿವಿಧೋಪಚಾರದಲಿ ೧೫

ಬಳಿಕ ಭಾರದ್ವಾಜಮುನಿ ಮನು
ಕುಲದ ರಾಯನ ಚಿತ್ರಕೂಟಾ
ಚಲಕೆ ಕಳುಹಿದ ಹದನ ಭರತಂಗೊರೆದು ಬೀಳ್ಕೊಡಲು
ತಳರ್ದನಲ್ಲಿಂ ಮೇಲೆ ಮುನಿಪದ
ನಳಿನಕಾನತನಾಗಿ ಸೇನಾ
ಜಲನಿಧಿಯ ನಿರ್ಘೋಷ ನಿಲುಕಲಜಾಂಡಮಂಡಲವ ೧೬

ಕುಶನೆ ಕೇಳಾ ಭರತಸೇನಾ
[5]ವಿಸರಪದಹತದೂತಧೂಳೀ
ವಿಸರ ವಿಬುಧತರಂಗಿಣಿಯನಿಂಗಿಸಿತು ರಂಗಿಸಿತು[5]
ಬಿಸರುಹಾಸನ ಪುರವನುಱೆ ಕೀ
ಲಿಸಿತಜಾಂಡವ ವಾದ್ಯರವ ನೆಱೆ
ಕೆಸಱುದೋಱಲು [6]ಜಗುಳೆ ದಾಂಟಿತು[6] ಭರತಪರಿವಾರ ೧೭

---

[1] ಕ (ಚ.ಝ.ಟ.ಡ). [2] ನಿಳಯದಿಂ (ಕ.ಣ). [3] ಮಿಗೆ ನಡೆ (ಚ.ಝ).
[4] ಸ್ತಂಭೇರಮಾ (ಕ.ಗ.ಜ.ಣ). [5] ವಿಸರ ವಿಬುಧ ತರಂಗಿಣಿಯನಿಂಗಿಸಿತು ರಂಜಿಸಿತವನಿ ಸೇನಾನಾಥ ಮೊದಲಾಗಿ (ಕ.ಣ), ವಿಸರ ಪದಹತ ಧೂಳಿಧೂತ ಪ್ರಸರ ವಿಬುಧತರಂಗಿಣಿಯನಿಂಗಿಸಿತು ರಂಗಿಸಿತು (ಚ). [6] ಬಂದು ಹೊಕ್ಕುದು (ಕ).

ಬಂದುಬಿಟ್ಟುದು ಸೇನೆ ಶೈಲದ
ಹಿಂದುಮುಂದಿದ್ದೆಸೆಯಲಾ ಬಲ
ವೃಂದದದ್ಭುತ ನಿನದ ಕಿವಿಗೇಳಿಸಿತು ರಘುಪತಿಯು
ಬಂದವ[1]ರ[1]ದಾರಱಿದುಬಾ ಹೋ
ಗೆಂದು ನೇಮಿಸೆ ಬಳಿಕ ಭರತ
ಸ್ಯಂದನವ ಕಂಡಱಿದು ಲಕ್ಷ್ಮಣದೇವ ಹಲುಮೊರೆದ ೧೮

ಆಗಲದಕೇನೀತ ವೈರೋ
ದ್ಯೋಗ[2]ಗತಿಗೊಡರಿಸಿದನಾದೊಡೆ[2]
ಕಾಗೆ ಹದ್ದಿಗೆ ಹರಹುವೆನು ಕಡಿದೀ ಚತುರ್ಬಲವ
ಮೇಗೆ ಬರಲಪಕೀರ್ತಿಯದಕೇ
ನೀಗಲೆಣಿಕೆಯೆನುತ್ತ ಕರುಣಾ
ಸಾಗರನ ಬಳಿಗೈದಿ ಬಿನ್ನಹಮಾಡಿದನು ಹದನ ೧೯

ಭರತ ಬಂದವ ಬಂದ ಹದನೇ
ನಱಿಯಬಾರದು ಜೀಯ ಬೆಸಸೊಂ
ದರೆನಿಮಿಷದಲಿ ನಿರ್ಣೈಸಿ ತೋಱುವೆನು [3]ನಿರುಪಮವ[3]
ಧರೆಯ ದೂಷಿಸಿಕೊಂಡುದಲ್ಲದೆ
ಧುರಕೆ ಬಹುದಿದು ಗುಣವೆಯೆಂದು
ಬ್ಬರದ ರೋಷಾವೇಶದಲಿ ಸೌಮಿತ್ರಿ ಗರ್ಜಿಸಿದ ೨೦

ಮರುಳಲಾಯೆಲೆ ತಮ್ಮ ತಪ್ಪಿಸಿ
ತರಣಿ ತಲೆದೋಱಿದರೆ ವೈರವ
ಧರಿಸಬಲ್ಲನೆ ಭರತನಾರೆಂದಱಿಯಲಾ ನೀನು
ತರಹರಿಸು ಕಟ್ಟುಗ್ರವನು ನಿ
ಷ್ಠುರತೆ ಸಾಕಿನ್ನೆಂಬ ಸಮನಂ
ತರದೊಳಿಳಿದು ವರೂಥದಿಂ ಮೈಯಿಕ್ಕುತೈತಂದ ೨೧

ಬಳಿ[4]ವಿಡಿದು[4] ಕೌಸಲೆ ಸುಮಿತ್ರಾ
ಲಲನೆ ಕೈಕೆ ಸುಮಂತ್ರರಾ ಮುನಿ
ಕುಲಲಲಾಮವಸಿಷ್ಠರಿವರಂದಣಗಳಿಂದಿಳಿದು

---

[1] ನ (ಕ.ಜ.ಝ.ಡ.ಣ). [2] ಗಳ ನಡಱಿಸಿದನಾದರೆ (ಕ.ಝ). [3] ಚಿತ್ತ್ರಿಸು (ಚ.ಡ), ಚಿತ್ತ್ರದಲಿ (ಟ). [4] ಸಲಿಸಿ (ಕ).

ನಳಿನನಯನನ ಕಾಬ ತವಕದ
ತಳಿತ ಹರುಷದ ತುಱುಗಿದಂಗೋ
ಚ್ಚಳಿತ ಪುಳಕದಿನೈದಿದರು ರಘುಸಾರ್ವಭೌಮಕನ ೨೨

ದೇವ ತಾಟಕಿಯಸುವಿಜಯ ಜಯ
ದೇವ ವೀರಸುಬಾಹು ಜಯ ಜಯ
ದೇವ ಮಾರೀಚಪ್ರತಾಪಪ್ರಕಟವಿಜಯ ಜಯ
ದೇವ ಮುನಿಮುಖಪಾಲನಾವಿ
ರ್ಭಾವಿತಾಮಲಕೀರ್ತಿಕಾಂತಾ
ಜೀವಿತೇಶ್ವರ ಜಯ ಜಯೆಂದಡಗೆಡೆದನಾ ಭರತ ೨೩

ದೇವ ಗೌತಮವಧುವಿಶಾಪ ಕೃ
ಪಾವಲಂಬನ ಕಪಟ[1]ನಾಟಕ[1]
ದೇವ ಹರಕೋದಂಡಚಂಡನಿಖಂಡಬಾಹುಬಲ
ದೇವ ವೈದೇಹೀ ವಿವಾಹ ಮ
ಹಾವಿಭವ ಭೃಗುಜಪ್ರತಾಪ ಹ
ರಾವತಾರ ವಿನೋದವೈಭವ ರಾಮ ನಮೊಯೆಂದ ೨೪

ಎದ್ದು ಬಳಿಕಪ್ಪಿದನು ನೇಹದ
ಹೊದ್ದಿಗೆಯಲನುಜನನು ತಾಯಿಗ
ಳಿದ್ದ ಹದನನು ಕಂಡು ಕಂಗಳಲುಗಿಸಿದನು ಜಲವ
ತಿದ್ದಿತೇ ಭವದೀಯ ಕರ್ಣದ
ಹೊದ್ದಿಗೆಯ ಸೌಭಾಗ್ಯವಿಂದ್ರನ
ಗದ್ದುಗೆಯನಡಱಿದನೆ ಪಿತನೆನುತೆಱಗಿದನು ಪದಕೆ ೨೫

ಅಳಲಿದರು ಬಳಿಕೊಬ್ಬರೊಬ್ಬರು
ಹಳವಿಸುತ ಹಲವಂಗದಲಿ ನೃಪ
ಕುಲಲಲಾಮಗೆ ವೀರದಶರಥಸಾರ್ವಭೌಮಂಗೆ
ತಿಳುಹಿ ಬಳಿಕನಿಬರನು ಸಲಿಲಾಂ
ಜಲಿಮೃತಸ್ನಾನಾದಿ ಕರ್ಮಾ
ವಳಿಯ ಮಾಡಿಸಿ ಮುನಿಪನುಪಚರಿಸಿದನು ರಘು[2]ಪತಿಯ[2] ೨೬

---

[1] ಮಾನವ (ಕ.ಙ.), ನಟ ನರ (ಗ.ಚ). [2] ವರನ (ಚ.ಙ).

ಲವನೆ ಕೇಳಾ ದಿನವನಾ ದಳ
ಭವನದಲಿ ನೂಕಿದರು ಮಱುದಿನ
ವವನಿಪತಿಗಾ ಭರತ ಭಯಭಕ್ತಿಯಲಿ ಕೈಮುಗಿದು
ಅವಧರಿಸು ರಾಜೇಂದ್ರ ವಸುಧಾ
ಯುವತಿಗರಸಾಗೇಳು ರಕ್ಷಿಸು
ಭುವನಜನವನು ಬಿಜಯಮಾಡೆಂದೆಱಗಿದನು ಪದಕೆ ೨೭

ತಂದೆಯಡಗಿದ ಬಳಿಕ ನೀನೇ
ತಂದೆ ತಾಯ್ [1]ನಮ[1]ಗವನಿತಾಯಲಿ
ಸಂಧಿಸುವರೇ ಮನವ ಮಕ್ಕಳು ಮಱೆಯಮಾತೇನು
ಇಂದು ನೀವರಸಾಗದಿರೆ ತ
ಮ್ಮಂದಿರಲಿ ತಾನೊಬ್ಬ ನಿಮಗಿ
ಲ್ಲೆಂದು [2]ಚಿತ್ತೈಸೆನುತ ಬಿನ್ನಹಮಾಡಿ[2]ದನು ಭರತ ೨೮

ಒಡನೆ ಭರತನ ಬಿನ್ನಹಕೆ ಮೈ
ಗೊಡುವುದೆಂದು ಸುಮಂತ್ರನಂಘ್ರಿಯ
ಹಿಡಿದನುಚಿತವಿದೆಂದು ಕೈಮುಗಿದನು ವಸಿಷ್ಠಮುನಿ
ಬಿಡಿಸಿದನು ಬಳಿಕವರವರ ಮನ
ದೊಡಕನನುಪಮನೀತಿಶಾಸ್ತ್ರದ
ಸಡಗರದ ಸತ್ಯವ್ರತಾಗಮದನುನಯೋಕ್ತಿಯಲಿ ೨೯

ಬಂದು ಕೈಕಾದೇವಿ ಕಂಬನಿ
ಯಿಂದ ಮನದನುತಾಪಶಿಖಿಯಲಿ
ಬೆಂದು ಬಳಿಕೀ ಮಾತ ನುಡಿದಳು ಚಿತ್ತಶುದ್ಧಿಯಲಿ
ಹಿಂದೆ ನೆನೆದಪಕೃತವ ನೆಱೆಮಱೆ
ದಿಂದು ಪಾಲಿಸು ಧರೆಯ ಕೇಳೆಲೆ
ಕಂದಯೆಂದಪ್ಪಿದಳು ಶಿರವನು ರಾಘವೇಶ್ವರನ ೩೦

ನಿಮ್ಮ ಮಾತನು ಮೀಱಿದವನೇ
ನಮ್ಮ ನಾನೆಲೆ ತಾಯೆ ನಿಜಪಿತ
ನುಮ್ಮಳಿಸದಿರನಾಜ್ಞೆಯನು ಮೀಱಿದನು ಮಗನೆಂದು
ನಮ್ಮ ಪಾಡೇನಾದಿಯವನಿಯ
ಹೆಮ್ಮೆಕಾಱರು ಸತ್ಯಮಾರ್ಗವ
ನೆಮ್ಮಿದವರೇನಪ್ರಬುದ್ಧರೆಯೆಂದನಾ ರಾಮ ೩೧

[1] ಯೆನ (ಚ.ಟ.ಡ). [2] ಚಿತ್ತವಿಸುವುದೆನುತ ಬಿನ್ನಯಿಸಿ (ಕ.ಝ.ಡ.ಣ).

ಕಳುಹಿದನು ಕೈಮುಗಿದು ಮುನಿಕುಲ
ತಿಲಕನನು ಬಳಿಕಾ ಸುಮಂತ್ರನ
ನೊಲಿದು ಮನ್ನಿಸಿ ಬೀಳುಕೊಟ್ಟನು ನಮಿಸಿ ಜನನಿಯರ
ಹಲವು ನಯನೀತಿಯಲಿ ಚಿತ್ತದ
ಕಲು[1]ಷವನು[1] ಕೆಲಚಾಚಿ ನಗರಕೆ
ಕಳುಹಿದನು ಕರುಣದಲಿ ಕೈಕಾಸತಿಯ ನಂದನನ ೩೨

ಆದಡೆಲೆ ರಾಜೇಂದ್ರ ನಿಮ್ಮಯ
ಪಾದುಕೆಯ ಚಿತ್ತೈಸಿ ದೇವರ
ಪಾದವೆಂದೇ ಕಂಡು ಸೇವೆಯ ಮಾಡಿಕೊಂಡಿಹೆನು
ಕಾದಿಹೆನು ಹದಿನಾಲ್ಕು ವರುಷವು
ಮೇದಿನಿಯ ನೀವ್ ಬಾರದಿರಲು ನಿ
ವೇದಿಸುವೆನೀ ತನುವನನಲಂಗೆಂದನಾ ಭರತ ೩೩

*ಎನಲು ಭರತನ ಬಿನ್ನಹದ ನಿಜ
ಮನದ ಭಕತಿಗೆ ಮೆಚ್ಚಿ ಕರುಣಾ
ವನಧಿ ಶಿರವನು ತಕ್ಕಯಿಸಿ ನಿಜಭಾವಶುದ್ಧಿಯಲಿ
ಘನಕೃಪಾಸಾಗರನು ತನ್ನಯ
ನೆನಹು ನೆಲೆನಿಲುವಂತೆ ಪಾದುಕೆ
ಯನು ಕರು[2]ಣಿಸಲು ಶರಣು ಸಲಹೆಂ[2]ದೆಱಗಿದನು [3]ಭರತ[3] ೩೪

ಎಂದು ಬೀಳ್ಕೊಂಡಖಿಳಸೇನಾ
ವೃಂದಸಹಿತಾ ಭರತನೃಪನೆ
ಯ್ತಂದು ನಗರವ ಹೊಗದೆ ನಂದಿಗ್ರಾಮದಲಿ ಬಳಿಕ
ಇಂದಿರೇಶನ ತೊರವೆಯರಸನ
ಸಂದ ನಿಜಪದಭಕ್ತಿಪರಮಾ
ನಂದರಸಮಯನಾಗಿ ಪಾಲಿಸಿದನು ಧರಾತಳವ ೩೫

---

[1] ಮಾನವ (ಕ.ಜ). * ಈ ಗುರುತಿನ ಪದ್ಯವು ಕ.ಡ.ಣ. ಪ್ರತಿಗಳಲ್ಲಿಲ್ಲ.
ಣದಿಂ ಕೊಡಲು ಶರಣೆಂ (ಚ). [3] ಪದಕೆ (ಗ.ಚ).

# ಏಳನೆಯ ಸಂಧಿ

ಸೂಚನೆ: ರಾಯ ರಘುಪತಿ ವನದೊಳಗೆ ವ
ಜ್ರಾಯುಧನ [1]ನಿಜನಂದನನ[1] ತೃಣ
ಸಾಯಕದಲಿಟ್ಟೊಡನೆ ತಲೆಗಾಯಿದನು ಕರುಣದಲಿ

ಜನಕಜಾಸುತ ಕೇಳು ಕೈಕಾ
ತನುಜ ತೆರಳಿದ ಬಳಿಕ ತಿಂಗಳ
ದಿನವ ಕಳಿದರು ವಿಪಿನವಿಲಸಿತ ಚಿತ್ರಕೂಟದಲಿ
ವನಿತೆ ಸಹಿತ ತದೀಯ ಶೈಲದ
ವನವಿಹಾರೋದ್ಯೋಗಕೇಳೀ
ಜನಿತಮಾನಸನಾಗಿ ತೊಳಲಿದನಾ ಮಹೀಪಾಲ ೧

ದಿವಿಜಮುನಿ ಗಂಧರ್ವಕಿನ್ನರ
ಯುವತಿಯರ ಖಚರಿಯರ ನಂದನ
ನಿವಹದಲಿ ಶಬರಿಯರ ನಿರುಪಮ ಸಿದ್ಧಚಾರಣರ
ಅವರವರ ಬಳಿಸಂದು ಸೊಗಸಿನ
ವಿವಿಧಚಿತ್ರಕಲಾಪ ಕೇಳೀ
ಭವನವೀಥಿಗಳೊಳಗೆ ವಿಹರಿಸಿದನು ವಿನೋದದಲಿ ೨

ಬಳಿಕ ಬಳಲಿದು ಸಾರಿದರು[2] ಪೂ[2]
ಗೊಳನನಾ ಚಂಡಾಂಶುವಿನ ಮೃ
ಝಳದ ಝಾಡಿಯ ಜೋಡಿಯಧ್ವಶ್ರಮದ ಭಾರದಲಿ
ತಿಳಿಗೊಳನ ತಂಪಗಿವ ತೆಕ್ಕೆಯ
ತೊಳಲಿಕೆಯ ತಾವರೆಯ [3]ತನಿ[3] ಪರಿ
ಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ ೩

ಪರಿಮಳದ ಪದ್ಮದ ಪರಾಗ[4]ದಿ[4]
ಹೊರೆದ ನಿಱಿದೆರೆಯುಬ್ಬುಗಳ ಸಂ
ಚರಿಸುವಂಚೆಯ ರಾಗರಥಿಯ ರಥಾಂಗದಂಪತಿಯ

---

[1] ನಂದನನನಾ (ಕ.ಜ.ಝ.ಣ). [2] ತಿಳಿ (ಗ.ಚ), ಹೂ (ಕ.ಜ.ಣ).
[3] ನಿಜ (ಕ.ಜ.ಣ). [4] ದ (ಕ.ಗ.ಟ.ಣ).

ಮೊರೆವ ಮಱಿದುಂಬಿಗಳ ಸೊಗಸಿನ
ಸರಸಿಗಿಳಿದರು ತಮ್ಮೊಳೊಬ್ಬೊ
ಬ್ಬರ ನಿರೀಕ್ಷಿಸಿ ವಾರಿಕೇಳಿಗೆ ಮಾಡಿದರು ಮನವ ೪

ಚರಣ ಜಾನು ಕಟಿ ಪ್ರಮಾಣಾಂ
ತರದಿನಿಳಿದರು ನೀರೊಳುಱೆಮ
ತ್ಸರಿಸಿದರು ಪ್ರಣಯಪ್ರತಾಪವನೊಬ್ಬರೊಬ್ಬರಲಿ
ಅರಸಿಯರಸನ ಮೇಲೆ ರಘುಕುಲ
ದರಸನರಸಿಯ ಮೇಲೆ ಹಿಮಶೀ
ಕರಕದಂಬಕ ಸೂಸೆ ಸೂಸಿದರಾ ಹಿಮೋದಕವ ೫

ಕುಚ[1]ದ ಮೇಲೊಗಿಸಿದನು[1] ವಾರಿ
ಪ್ರಚಯವನು ರಘುನಾಥನಾತನ
ರುಚಿಕರಾನನಬಿಂಬದಲಿ ಬೀಱಿದಳು ಸಾರಸ[2]ವ[2]
ಪ್ರಚುರತರ ಹಿಮಜಲವನಭ್ರದ
ಖಚರಿಯರು ಕೊಂಡಾಡೆ ಕೇಳೀ
ರಚನೆಯಿಂದೋಡಿಸಿದಳರಸನನಟ್ಟಹಾಸದಲಿ ೬

ಸೋ[3]ತ[3]ರರಸರೆನುತ್ತ ಧರಣೀ
ಜಾತೆ ತಡಿಗಡಱಿದಳು ವಿಮಲ
ಶ್ವೇತವಸನವನುಟ್ಟಳಿಟ್ಟಳು [4]ಬೊಟ್ಟು ಮಣಿಶಿಲೆಯ[4]
ಕೇತಕಿಪ್ರಮುಖಾದಿ ಕುಸುಮ
ವ್ರಾತದಾಭರಣದಲಿ ರಘುಸಂ
ಜಾತನಮಳಾಂಗದಲಲಂಕರಿಸಿದನು ಜಾನಕಿಯ ೭

ಬಂದರಿವರಾಶ್ರಮಕೆ ಲಕ್ಷ್ಮಣ
ನಿಂದ ಬಾಣಸವಾದ ನಾನಾ
ಕಂದಮೂಲ ಫಲಂಗಳಲಿ ಕಳಿದರು ಮಹಾಕ್ಷುಧೆಯ
ಕಂದ ಕೇಳ್ಕೈ ಬಳಿಕ ಸಮಯಾವಿ
ದೆಂದು ಸಾರಿದನಿವರ ಶಾಪದ
ಲೊಂದಿಕೊಂಡಿದ್ದಾ ಜಯಂತನು ಕಾಕರೂ[5]ಪಿನಲಿ[5] ೮

---

[1] ಯುಗದ ಮೇಲೊಗಿಸಿ (ಕ.ಣ). [2] ದ (ಕ.ಜ.ಝ.ಡ.ಣ). [3] ತಿ (ಕ.ಗ.ಜ.ಟ). [4] ತಿಲಕವನು ಸೀತೆ (ಗ.ಝ). [5] ಪದಲಿ (ಕ.ಗ.ಝ.ಡ.ಣ).

ಅವಗೆ ಶಾಪವಿಮೋಚನವು ರಾ
ಘವನ ರಾಣಿಯು ಪದರಜದ ಸೋಂ
ಕವಗೆ ಘಟಿಸಲಿಕೆಂಬುದಿದು ತಾನತ್ರಿ[1]ವಚನವಲ[1]
ಹವಣನಿದನವನಱಿದು ದಳನಿಳ
ಯವನು ಸಾರಿದು ಮುಂದೆ ಸಂದಿಪ
ಹವಣನಱಿಯದೆ ಹೊದ್ದಿದನು [2]ದರುಶನಕೆ ಧರಣಿಜೆಯ[2] ೯

ಸಾರುತಿರೆ ಪದಸೋಂಕಿಗಾ [3]ಸತಿ[3]
ಕ್ರೂರವಾಯಸಕಂಜಿ ಪತಿಯು ಶ
ರೀರವನು ಬಿಗಿಯಪ್ಪುತಾಚರಿಸಿದಳು ಭೀತಿಯಲಿ
ವೀರ ಕೇಳ್ ವಾಯಸದ ಪದನಖ
ಧಾರೆ ಭುಜದಲಿ ಬೀಳೆ ಬಳಿಕಸು
ರಾರಿ ಕೋಪಿಸುತಿಟ್ಟನಾ ಖಳನನು ತೃಣಾಸ್ತ್ರದಲಿ ೧೦

ಅದು ಬಳಿಕ ಭುಗಿಲಿಡುತ ಬೆಂಬ
ತ್ತಿದುದು [4]ಬಿಡದಾ ಕಾಕನನು[4] ಸಾ
ರಿದುದು ಸರಸಿಜಭವನನಾತನಿನಾಗದಿರೆ [5]ಮುಱಿದು[5]
ಮದನಮದಮರ್ದನನ ಮಱೆಯೊ
ಕ್ಕುದು ಬಳಿಕ್ಕಾ ದೇವನಲಿ [6]ಹ[6]ಱಿಯು
ದುದ ಕಂಡಿಳಿತಂದು ಸಾರ್ದುದು ಪಾಕಶಾಸನನ ೧೧

ಆವ ದೇವರ ಮಱೆಯ ಹೊಕ್ಕರೆ
ಕಾವ ದೇವರ ಕಾಣೆ ರಾಘವ
ದೇವನಸ್ತ್ರದ ಮಹಿಮೆಯೆಂತುಟೊ ಶಿವಮಹಾದೇವ
ದೇವರೊಳಗಗ್ಗಳನಲಾ ರಾ
ಜೀವನೇತ್ರನು ಚಿತ್ರವೆನುತ ಮ
ಹಾವಿಭುವಿನ ವಿನೋದ ವಿಭವ[7]ಕೆ ಬೆಱಗದೇನೆಂದ[7] ೧೨

ಅಱಿದು ಬಳಿಕಿಂದ್ರನು ಜಯಂತನ
ಜಱೆದು ಕಳುಹಿದನೀ ಮಹಾಸ್ತ್ರವ
ತಱಿಬುವವರುಂಟೇ ಸುರಾಸುರನರಭುಜಂಗರಲಿ

[1] ವಚನವಲೆ (ಕ.ಙ), ಮುನಿವಚನ (ಚ). [2] ಧರಣಿಜೆಯ ದರುಶನಕೆ (ಚ).
[3] ಸ (ಕ.ಗ.ಜ.ಙ) [4] ಬಳಿಕಾ ಕಾಕನುಱೆ (ಕ.ಗ.ಝ). [5] ಬಳಿಕ (ಕ.ಜ.ಟ).
[6] ನು (ಗ.ಜ.ಟ ಡ). [7] ವೆನುತ್ತ ನಡೆತಂದ (ಕ.ಙ), ಕೆ ಬೆಱಗಾದೆನೆಂದ (ಜ.ಝ.ಟ),
ವನಱುವರಾರೆಂದ (ಡ).

ಬಱಿದೆ ಬಳಲಿದೆ ಹೋಗು ಮಾಯಾ
ಮಱೆಯು ಮನುಜಾಕೃತಿಯು ದೈವದ
ಮಱೆಯಹೊಗು ಹೋಗೆನಲು ಹೊದ್ದಿದನಾ ಕಕುತ್ಸ್ಥಜನ ೧೩

ಶರಣುಹೊಕ್ಕೆನು ದೇವ ದೇವರ
ಚರಣಕಮಲವನಸ್ತ್ರವಿದ ಪರಿ
ಹರಿಸಲಾಪವರುಂಟೆ ನೀ[1]ನ[1]ಲ್ಲದೆ ಸುರೌಘದಲಿ
ಶರಣಜನ ರಕ್ಷಾಮಣಿಯೆ ನಿಜ
ಶರಣಜನ [2]ವತ್ಸಲನೆ[2] ನಿರುಪಮ
ಶರಣದೇಹಿಕದೇವ ತನ್ನನು ಕಾಯಬೇಕೆಂದ ೧೪

ಕಾವಡೆಯು ಕೊಲುವಡೆಯು ಮಿಕ್ಕಿನ
ದೇವತತಿಗುಂಟೇ ಸ್ವತಂತ್ರ ಮ
ಹಾವಿಭುವಲಾ ನೀನು ನಿನಗೆಣೆಗಾಣೆ[3]ನುಳಿದ[3]ರಲಿ
ದೇವಮಾರ್ಕಂಡೇಯ ಧ್ರುವ ದಂ
ತಾವಳೇಂದ್ರಪ್ರಮುಖ ಶರಣಜ
ನಾವಳಿಯ ಸಲಹಿದವೊಲೆನ್ನನು ಸಲಹಬೇಕೆಂದ ೧೫

ಶರವಿದೆಮ್ಮದಮೋಘ ಮಱೆಯೊ
ಕ್ಕರನು ಸಲಹುವ ಬಿರಿದು ಸಂಧಿಹು
ದೆರಡುಗುಣ ನಮಗೀ ಧರಿತ್ರಿಯೊಳೆಂದು ರಘುನಾಥ
ಸರಳಿಗೊಂದವನಕ್ಷಿಯನು ಕೊಂ
ಡೆರಡುಕಡೆಗೊಂದಾಲಿಯನು ವಿ
ಸ್ತರಿಸಿ ಕರುಣದಲಾ ಜಯಂತನ ಕಾಯ್ದನಾ ರಾಮ ೧೬

ಬಳಿಕ ಶಾಪವಿಮೋಚನದಲವ
ನಳಿನನಾ[4]ಭ[4]ಸ್ತೋತ್ರದಲಿ ಮಂ
ಗಳಮನೋರಾಗದಲಿ ಮುಕುಳಿತಕರಪುಟಂಗಳಲಿ
ನಲಿದು ನರ್ತಿಸುತಮರನಗರಿಗೆ
ತಳರ್ದನಮರವಿಮಾನದಲಿ ಬಳಿ
ಕಿಳಿದ[5]ರಿವರೀ[5] ಚಿತ್ರಕೂಟಮಹಾಮಹೀಧರವ ೧೭

———

[1] ವ (ಚ). [2] ರಕ್ಷಕನೆ (ಕ.ಣ). [3] ನಮರ (ಗ). [4] ಭನ (ಕ.ಜ.ಝ.ಡ.ಣ). [5] ರವರೀ (ಕ), ರಿವರಾ (ಗ).

# ಮೊದಲನೆಯ ಸಂಧಿ

ಸೂಚನೆ : ತರಣಿವಂಶಜ[1]ರ[1]ತ್ರಿಮುನಿಯುಪ
ಚರಣೆಯನು ಕೈಕೊಂಡು ರಜನೀ
ಚರ ವಿರಾಧನ ಮುಱಿದು ಸಾರ್ದರು ಪಂಚವಟಿವನವ

[2]ಕೇಳು ಕುಶ ಬಳಿಕವರು[2] ಹಲವು ವ
ನಾಳಿ[3]ಗಳ ಕ[3]ಳಿದತ್ರಿಮುನಿಕುಲ
ಮೌಳಿ[4]ಮಣಿಯಾಶ್ರಮವ[4] ಸಾರಿದರ[5]ತುಳ[5] ಹರುಷದಲಿ
ಶ್ರೀಲತಾಂಗಿಯ ರಮಣನೀ ಭೂ
ಪಾಲನೆಂದಱಿದಾ ಮುನಿಪ ಸಂ
ಸ್ಥೂಲಸತ್ಕೃತಿಯಿಂದ ಸಂಭಾವಿಸಿದನವರುಗಳ ೧

ಆ ಸಮಯದಲಿ ಬಂದು ರಾಮನು
ವಾಸಿನಿಯ ಬಿಗಿ[6]ಯ[6]ಪ್ಪಿದಳು ಪರಿ
ತೋಷರಸದುಬ್ಬರದ [7]ಝೂಢಿ[7]ಯಲನಸೂಯಾದೇವಿ
ಕ್ಲೇಶಗೊಂಡಳು ಕೈಯೊಡನೆ ವನ
ವಾಸವಾದುದೆಯಕಟ ಬಹಳಾ
ಯಾಸ ಘಟಿಸಿತೆ ರಾಜನಂದನೆಗೆಂ[8]ದು ಮನಸಿನಲಿ[8] ೨

ಹೇಳಿದಳು ಬಳಿಕವನಿಜೆಗೆ ಶಶಿ
ಮೌಳಿವಿಷ್ಣುವಿರಿಂಚಿಗಳು ನಿಜ
ಬಾಲಕರು ತನಗಾದ ಕಥೆಯನು ತನ್ನ ನಡವಳಿಯ
ಶೀಲ[9]ವನು ಸಿಗುಱೇಳದಿರಲಿ[9] ವಿ
ಶಾಲಪತಿಭಜನೆಯಲಿಯೆಂದತಿ
ಲಾಲನೆಯಲುಪಚರಿಸಿದಳು ಲಲನಾಶಿರೋಮಣಿಯ ೩

---

1 ನ (ಕ.ಚ.ಜ.ಝ.ಟ.ಣ). 2 ಕೇಳಿದ್ಯೆ ಕುಶ ಬಳಿಕ (ಚ). 3 ಯನು ಕ (ಕ.ಗ.ಡ.ಣ). ಗಳನು (ಝ.ಟ). 4 ಯಾಶ್ರಮ ವನವ (ಗ), ಯಾಶ್ರಮಕಾಗಿ (ಡ) 5 ಧಿಕ (ಚ), ಖಿಳ (ಝ). 6 ದ (ಚ.ಡ). 7 ಝುಡಿತೆ (ಗ.ಟ). 8 ದು ಮಿಗೆ ಮಱುಗಿ (ಗ), ದು ದುಗುಡದಲಿ (ಜ), ದಳಿಂದುಮುಖಿ (ಟ). 9 ಸಿಗುಱೇಳದೆ ಬಳಿಕ್ಕ (ಕ.ಣ), ಪಿದು ಸಿಗುಱೇಳದಿರಲಿ (ಝ.ಡ).

ಸೊಗ[1]ಸುವೀ[1] ಸೌಂದರ್ಯಸಾಗರ
ವಗಜೆಗಾ ರಮೆಗಾ ಸರಸ್ವತಿ
ಗುಗುಳುನೀರಾಗಿದೆ [2]ನಿರೀಕ್ಷಿ[2]ಸಲಂಗವಟ್ಟದಲಿ
ಅಗಲದಿರು ರಾಮನನು ಮಾಯಾ
ವಿಗಳು ಘನ ಕೇಳೆಂದು ಹೊಂದೊಡ
ವುಗಳನಿತ್ತುಪಚರಿಸಿ ಹರಸಿದಳನಸುಯಾದೇವಿ ೪

ಮುನಿ ಬಳಿಕ ಬೀಳ್ಕೊಟ್ಟನೀ ರಘು
ಜನಪರನು ಜಮದಗ್ನಿರಾಮನ
ಬನಕೆ ಬಂದರು ಬೀಳುಕೊಂಡರು ತನ್ಮುನೀಶ್ವರನ
ಮುನಿ ಮುನಿಗಳಾಶ್ರಮವ ಹೊಕ್ಕವ
ರೆನಿತು ಮಾಡಿದ ಸತ್ಕೃತಿಯ ಸಾ
ಧನವ ಕೈಕೊಳುತ್ತೈದಿದರು ಘನಘೋರಕಾನನವ ೫

ಹಬ್ಬಿ[3]ದಾಲ ತಮಾಲ ತರುಗಳ
ಮೊ[3]ಬ್ಬುಗಳ ಹೆಮ್ಮೆಳೆಯ ಹರಹುಗ
[4]ಳು[4]ಬ್ಬರದ ಶಾರ್ದೂಲ ಸ್ತೈರಿಭ ಶರಭ[5]ಸೂಕರದ[5]
ಉಬ್ಬಟೆಯ [6]ಪೂತ್ಕೃ[6]ತಿಯ ಫಣಿಕುಲ
[7]ದಬ್ಬರದ[7] ಕಾಂತಾರದೊಳಗಿವ
ರಬ್ಬಟಿಸುತ್ತೈದಿದರು ಸೋಹುತ ಸಕಲ ಮೃಗಕುಲವ ೬

ಏನಿದ[8]ಚ್ಚರಿ[8] ವಿಪಿನವಿದಟಿಲಿ
ಮಾನವರ ಸಂಚಾರವಿಲ್ಲ ನ
ವೀನವಿದು ನರರಾಗೆ ಪುಣ್ಯವಿದೈಸಲೇಯೆನುತ
ಆ ನಿಶಾಟ ವಿರಾಧನಾ ಮಾ
ಯಾನರ[9]ರ[9] ಬಳಿಗೈದಿದನು ಸೀ
ತಾನಿತಂಬಿನಿ ಬೆದಱೆ ಬಹಳಿತ ರೌದ್ರರೂಪಿನಲಿ ೭

ಮುಳುಗಿಸಿದುದಾ ಖಳನ ಮೈಗ
ತ್ತುಲೆ ದಿವಾಕರಬಿಂಬವನು ಬಿಡು
ದಲೆಯ ಸಿಡಿಲಿಂಗಳದ ಜಂಗಳದಕ್ಷಿಯುಗಳಗಳ

---

[1] ಸಿನಲಿ (ಕ.ಙ). [2] ನಿಧಾನಿ (ಕ.ಙ). [3] ತಾ ಲತೆ ವನದ ತರುಗಳ ನೊ (ಕ.ಙ), ದಾಲ ತಮಾಲ ಜಾಲದ ಮೊ (ಚ). [4] ಳ (ಕ.ಝ.ಙ). [5] ಸಾರಂಗ (ಝ.ಡ). [6] ನಾಕ್ಯ (ಕ.ಝ.ಡ.ಙ). [7] ದುಬ್ಬುಗಳ (ಚ), ದುಬ್ಬರದ (ಜ), ದುಬ್ಬಟೆಯ (ಟ). [8] ಬ್ಬರ (ಕ.ಝ.ಡ.ಙ). [9] ನ (ಜ.ಟ).

ಕುಲಿಶದಂಷ್ಟ್ರದ ವಿಕೃತವಕ್ತ್ರದ
ವಿಲಯ ಭೈರವನಂತೆ ಮುಂದಕೆ
ಸುಳಿಯಲಾಚರಿಸಿದಳು ಕಂಡು ಕುಮಾರಿ [1]ಕುಂಭಿನಿಯು[1] ೮

ಸೀತೆಯನು ಕಂಡಾ ವಿರಾಧನು
ಸೋತನೈ ಚಿತ್ತದಲಿ ಲೆಕ್ಕಿಸ
ದೀತಗಳ ಝುಂಕಿಸುತ ಝೊಂಪಿಸಿದನು ವಿದೇಹಜೆ[2]ಯು[2]
ಆ [3]ತುಟಾರನ[3] ಕಂಡು ನಿವ್ಮಯ
ತಾತ ಸೈರಿಸುವನೆ ಮಹೋಗ್ರನಿ
ಶಾತಶರದಿಂದೆಚ್ಚು ಕಡಿದನು ಕರವನಾ ಖಳನ ೯

ಮುರಿದು ಮೊರೆದವನಿಪನ ನುಂಗುವ
ಭರ[4]ದಿನ[4]ವನೈತರಲು ನೃಪ ಹೊಂ
ಬರಹದಸ್ತ್ರದಲಿಳುಹಿದನು ರಕ್ಕಸನ ಮಸ್ತಕವ
ಉರವಣಿಸುತಾ ಮುಂಡ ಮುಂದಕೆ
ಬರಲು ಲಕ್ಷ್ಮಣದೇವನದನೂ
ರ್ವರೆಯೊಳಡಗಿಸಲೆಚ್ಚು ಮೆಚ್ಚಿಸಿದನು ಕಕುತ್ಸ್ಥಜನ ೧೦

ಶಾಪಹತನಾಗಿರ್ದನವನು ವಿ
ಶಾಪವಾಯ್ತಿವರಿಂದ ಪೂರ್ವದ
ರೂಪ ಕೈಕೊಂಡೆಸೆದ ತುಂಬುರನೆಂಬ ನಾಮದಲಿ
ಶ್ರೀಪತಿಯ[5]ಲಾ[5] ನೀನು ಭೂಭಾ
ರಾಪಹರಕಾರಣದಿನೀ ನರ
ರೂಪು ನಿನಗಾ[6]ಯ್ತೆಂದು[6] ಹೊಗುಳುತ ಹಾಯ್ದನಜಪುರಿಗೆ ೧೧

ಕಳಿದರಿವರು ವಿರಾಧವಿಪಿನ
ಸ್ಥಳವನಲ್ಲಿಂ ಮೇಲೆ ನಾನಾ
ಹಳುವವನು ಬಳಸಿದರು [7]ಬಂದರು[7] ತೆಂಕಮುಖವಾಗಿ
ಫಲಿತಭೂಜಾರಣ್ಯವನು ಮಂ
ಜುಳಮಹೀಲಾವಣ್ಯವನು ಕಂ
ಡೊಲಿದು ಹೊಕ್ಕರು ದಂಡಕಾರಣ್ಯವನು ಹರುಷದಲಿ ೧೨

---

[1] ಭೀತಿಯುಲಿ (ಕ.ಣ). [2] ಗೆ (ಕ.ಝ.ಟ.ಡ.ಣ). [3] ತವಕಿಗನ (ಕ.ಣ). [4] ದಿಯು (ಕ), ದಲ (ಜ.ಣ) [5] ಲೇ (ಕ.ಣ). [6] ಯ್ತೆನುತ (ಚ.ಜ). [7] ನಡೆದರು (ಕ.ಗ.ಣ), ಮೂವರು (ಝ).

ಮುನಿಗಳಿದ್ದರು ಮುಂದೆ ನಿಯಮಾ
ಸನ ಸಮಾಧಿಧ್ಯಾನದಲಿ ಜಲ
ದನಿಲದಾಹಾರದಲಿ ಕಾಮಕ್ರೋಧ ಮೊದಲಾದ
ಜಿನುಗುಜಾಡ್ಯದ ಜಂಜಡವ ಕೆಲ
ಕೊನದು ನಿಖಿಳೇಂದ್ರಿಯದ ಕಳಕಳ
ವನು ನಿವಾರಿಸಿ ಕೇವಲಬ್ರಹ್ಮದಲಿ ನೆಲೆಯಾಗಿ ೧೩

ಕೆಲಬರೂರ್ಧ್ವಮುಖಾಂಘ್ರಿಯಲಿ ಕೆಲ
ಕೆಲರು ಜಲಮಧ್ಯದಲಿ ಕೆಲರಾ
ಜ್ವಲನಪಂಚಕಮಧ್ಯದಲಿ ಸೂಚ್ಯಗ್ರದಲಿ ಕೆಲರು
ಕೆಲರು ಜಪತಪಹೋಮನಿಯಮಂ
ಗಳಲಿ ನೀಲಗ್ರೀವನೀರಜ
ದಳವಿಲೋಚನ[1]ರಮಳಭಕ್ತಿಯ[1]ರಿರ್ದರಿದಿರಿನಲಿ ೧೪

ವರಪಲಾಶಾಶ್ವತ್ಥವೌದುಂ
ಬರ [2]ಕುಶ ಶ್ವೇತಾರ್ಕ[2] ಶಮಿ ಖಾ
ದಿರವಪಾಮಾರ್ಗಾದಿ ಹೋಮದ ಸಮಿಧೆಗಳ ಹೊರೆಯು
ಭರಿತ ಘಟ ಗೋಕ್ಷೀರ ದಧಿ ಬಂ
ಧುರದ ಮಧು ಸಿತಸರ್ಪಿಗಳ ಮುನಿ
[3]ವ[3]ರರ ಬಳಿವಿಡಿದ್ದೈದಿದರು ಶರಭಂಗನಾಶ್ರಮವ ೧೫

ಆ ಮುನೀಶ್ವರನಿದಿರುಗೊಂ[4]ಡೀ[4]
ರಾಮಚಂದ್ರನ ಸಕಲ[5]ಸುಗುಣ[5]
ಸ್ತೋಮಸಾಂದ್ರನನಧಿಕಮಾನ್ಯತೆಯಿಂದ ಸತ್ಕರಿಸಿ
ಈ ಮಹಾತ್ಮ[6]ನು[6] ವಿಷ್ಣುವೆಂದೇ
ಸೌಮನಸ್ಯ[7]ದಲ[7]ಱಿದು ಭಕ್ತಿ
ಪ್ರೇಮದಲಿ [8]ಕೂ[8]ಡಿದನು ಮುನಿ ಹೋಮಾಗ್ನಿಮುಖದಿಂದ ೧೬

ಆ ಕ್ಷಣದೊಳಾ ವನವನುಳಿದು ಸು
ತೀಕ್ಷ್ಣನನಧಿಗತತಪಃಪರಿ
ರಕ್ಷಣನ ದಳನಿಳಯವನು ಸಾರ್ದರು ಸರಾಗದಲಿ

---

[1]ನಮಳಭಕ್ತಿಯ (ಕ.ಣ), ರುಗಳ ನೆನಹಿನ (ಚ). [2]ಕುಶಾಶ್ವಾಲಾರ್ಕ (ಗ.ಡ), ಪು ದೂರ್ವೆ ಕುಶಾರ್ಕ (ಚ), ಕುಶಶಾಲಾರ್ಕ (ಜ.ಝ). [3] ಚ (ಕ.ಝ.ಡ ಣ). [4] ಡಾ (ಕ.ಗ.ಝ.ಣ). [5] ಸದ್ಗುಣ (ಕ.ಣ), ಸಗುಣ (ಚ.ಜ), ನಿಗಮ (ಟ.ಡ). [6] ನ (ಚ.ಡ). [7] ದಿನ (ಗ.ಝ.ಟ.ಡ). [8] ಮಾ (ಕ.ಜ.ಣ).

ಸೂಕ್ಷ್ಮಮಜ್ಞಾನದಲಿ ಮುನಿ ವನ
ಜಾಕ್ಷನೆಂಬುದನಱಿದು ಮನದಾ
ಪೇಕ್ಷೆಯಲಿ ಭಜಿಸಿದನು ಮಾಯಾಮನುಜವಲ್ಲಭನ ೧೭

ಆ ಸುತೀಕ್ಷಣನಾಶ್ರಮದೊಳಾ
ದಾಶರಥಿ ನೂಕಿದನು ತಿಂಗಳ
ವಾಸರವನಲ್ಲಿಂದ ಮೇಲಾ ಮುನಿಯು ಬೀಳ್ಕೊಂಡು
ಆ ಸುಮಿತ್ರಾಸೂನು ಜನಕಮ
ಹೀಶನಂದನೆ ಸಹಿತಗಸ್ತ್ಯಮು
ನೀಶನೊಡವುಟ್ಟಿದನ ಬಳಿಗೈತಂದರೊಲವಿನಲಿ ೧೮

ಇವರನಾ ಮುನಿಯುಪಚರಿಸಿದನು
ವಿವಿಧ ಸತ್ಕಾರದಲಿ ತಿಂಗಳ
ದಿವಸ[1]ಪರಿಯಂತಿರಿಸಿ[1] ಬಳಿಕಿಲ್ವಲನ ಸಂಗತಿಯ
ಅವನನುಜ ವಾತಾಪಿಯೆಂ[2]ದೆಂ
ಬ[2]ವನ ಕಥೆಯನು [3]ಪೇಳ್ದು[3] ಘಟಸಂ
ಭವನ ಭವನಕೆ ಬೀಳುಕೊಟ್ಟನು [4]ಮುನಿ[4] ಕಕುತ್ಸ್ಥಜನ ೧೯

ಕುಶನೆ [5]ಬಲ್ಲೈ[5] ಹಿಂದೆ ಭಾರ್ಗವ
ನಸಮಧನುವನು ನಿಮ್ಮ ಪಿತನಾ
ಶಶಿಮುಖಿಯ ಪರಿಣಯದ ಸಮನಂತರ[6]ದಲಧ್ವದಲಿ[6]
ವಿಷಮತರದೋರ್ದಂಡಸಾಹಸ
ದೆಸಕದಲಿ ಸೆಳದಾ ಮಹಾಧನು
ವಸತಿಯಲಿ ಮಡಗಿರ್ದದನು ಲವ ಕೇಳು ಸುರಪತಿಯ ೨೦

ನಾರದನ ಸೂಚನೆಯಲಾ ವೃಂ
ದಾರಕೋತ್ತಮನಕ್ಷಯದ ತೂ
ಣೀರ ಬಾಣ ಕೃಪಾಣ ಬಾಣಾಸನ ಸಮೇತದಲಿ
ಸಾರಿದನು ಮಾತಲಿಯ ರಥಚೀ
ತ್ಕಾರದಬ್ಬರದಿಂದ ಕೊಡನ ಕು
ಮಾರಕನ ಬಳಿ[7]ಗಾ[7] ಮುನೀಂದ್ರಂಗಿತ್ತನಾ ಧನುವ ೨೧

[1] ವಲ್ಲಿಯೆ ನಿಲಿಸಿ (ಗ), ಪರಿಯಂತಿದ್ದು (ಚ). [2] ಬವನ (ಕ.ಣ). [3] ಪೇಳಿ (ಕ.ಟ.ಣ). [4] ನೃಪ (ಕ). [5] ಕೇಳೈ (ಕ.ಣ). [6] ವಾ ಧನುವ (ಕ.ಣ). [7] ಕಾ (ಗ.ಝ.ಟ.ಣ).

ಈವು[1]ದಿವ ನಿನ್ನೆ[1]ಡೆಗೆ ರಾಘವ
ದೇವ ಬಂದರೆ ಮಱೆಯದಗ್ಗದ
ರಾವಣಾಸುರನಿಧನಕುಪಕರಿಸು[2]ವವ[2]ಲೇಯೆನುತ
ಆ ವಿಭಾಕರ ವರುಣಪುತ್ರಂ
ಗೀ ವಿವೇಕವನಱುಹಿ ಬಳಿಕವು
ರಾವತಿಯ ಸಾರಿದನು ಸಾರಿದರಿವರು ಮುನಿವರನ ೨೨

ಆ ಮಹಾ[3]ಶ್ರಮವೆಸೆದುದಿದಿರಲಿ[3]
ಹೋಮಧೂಮೋದ್ಧೂತಗಂಧ
ಸ್ತೋಮದಲಿ ಸ್ವಾಹಾಸ್ವಧಾಕಾರಪ್ರಣಾ[4]ದ[4]ದಲಿ
ಸಾಮಗಾನಧ್ವಾನದಲಿ ವಿ
ಶ್ರಾಮವಿಶ್ರುತ ರಮ್ಯ[5]ಪೂ[5]ರ್ಣಸು
ಧಾಮದಲಿ ಕಂಡಿವರು ಹೊಕ್ಕರಗಸ್ತ್ಯಮಂದಿರವ ೨೩

ಶಕ್ರವಚನದಲೀತನಂದಿನ
ಚಕ್ರಧರನೆಂದಱಿದು ರಘುಕುಲ
ಚಕ್ರವರ್ತಿಯನುಪಚರಿಸಿದನು ಸಾನುರಾಗದಲಿ
ಶಕ್ರನಿತ್ತಾಯುಧವನಾ ವಂ
ಶಕ್ರಮಾಚಾರ್ಯಂಗೆ ರಾಕ್ಷಸ
ವಿಕ್ರಮಾಂಬುಧಿವಡಬಗಿತ್ತನಗಸ್ತ್ಯಮುನಿ ಬಳಿಕ ೨೪

ಇರಿಸಿಕೊಂಡಿದ್ದನು ನಿಶಾಚರ
ಕರಿಮೃಗೇಂದ್ರನನೊಂದು ತಿಂಗಳು
ಪರಮಪಂಚವಟಿಪ್ರದೇಶದ ಘನವನಾಂತರಕೆ
ಹರಸಿ ಕಳುಹಿದನಿವರು ಮೂವರು
ಬರುತ ಕಂಡರು ದಂಡಕಾನನ
ದಿರವನಾ ವಿಸ್ತರವ ತೋಱಿದನಾ [6]ನೃಪತಿ ಸತಿಗೆ[6] ೨೫

ಇದು ಲವಂಗ ವಿಳಂಗ ಕುರವಕ
ಕದಳಿ ಕಕ್ಕೆ ಕವುಂಗು ಕಮ್ಮರ
ತದಿಕು ತಂಡಸು ತಡಸು ತಪಸಿ ಕುರಂಜಿ ಖರ್ಜೂರ

[1] ದೀ ವನದೆ (ಕ), ದೀವನಿಯೆ (ಗ.ಙ), ದಿವನೀಯೆ (ಜ), ದಿದನೀಯೆ (ಝ.ಡ). [2] ವುದ (ಕ.ಜ.ಟ.ಡ). [3] ಮುನಿಯಾಶ್ರಮದ ಸುಖ (ಚ). [4] ಮ (ಚ.ಜ.ಟ). [5] ಪ (ಗ.ಙ), ವ (ಜ). [6] ಮಹೀಸುತೆಗೆ (ಙ).

ಬದರಿ ಬೆಳಲಬ್ಬಿೀಡೆ ಬಿಗ್ಗುಲಿ
ಬಿದಿರು [1]ಬೆಳಲ[1]ರುಟಾಳವಿವು ನೋ
ಡಿದಿರಿನಲಿ ಬೇರಿವೆ ಮಹೀ[2]ಜಗಳ[2]ರಸಿ ನೋಡೆಂದ ೧೬

ಮತ್ತಿ ಮೊಳಗರ ನೆಲ್ಲಿ ಮಾದಲ
ಮುತ್ತು ಮಾವು ಮಧೂಕ ಕುಟ ಕ
ಲ್ಲತ್ತಿ ಖಾ[3]ದಿರ[3] ಕಡವು ಶಾಲ್ಮಲಿ ಸೋವೆ ಸುರಹೊನ್ನೆ
ಬೆತ್ತ ಬೇ[4]ವಗ್ಗಾರಣಿಲೆ[4] ಮುಳು
ಮುತ್ತು[5]ಕಾತರು[5] ಕರ್ಣಿಕಾರದ
ಮೊತ್ತವಿವೆ ನೋಡಬಲೆ ತಳಿರೆಲೆದ[6]ಳದ[6] ಸೊಂಪಿನಲಿ ೧೭

ಆಲವಂಬಟೆ ತಗ್ಗಿ [7]ತುಗ್ಗಿಲು[7]
ಬೇಲ ಬೊಬ್ಬುಲಿ ಬಕುಳ ಶಮಿ ಕು
ದ್ದಾಳ ಗುಗ್ಗುಳ ಹೊನ್ನೆ ಚೆನ್ನಗಿ ತಾಳ ಹಿಂತಾಳ
ಜಾಲಿ ಜೇನೊಡವಿಪ್ಪೆ ಪಿಪ್ಪಲ
ಮ್ಹಾಲೆಯಿವ ನೋಡಬಲೆ ಲತೆಗಳ
ಮೇಲುಹೊದಕೆಯು ಬಂದಣಿಕೆಗಳ ಭಾರಿಪೊರೆಗಳಲಿ ೧೮

ಬೆಲ್ಲವತ್ತ [8]ಕಪಿತ್ಥ ಚಿಕ್ಕಣಿ[8]
ಚಿಲ್ಲ ಗುಗ್ಗುಳ ಗೇರು ಗಾವಟೆ
ಚೆಳ್ಳು ತಿಲಕವಶೋಕೆ ಚಂಪಕ ಪೂಗ ಪುನ್ನಾಗ
ನೆಲ್ಲಿ ನೇಱಿಲು [9]ನಗರೆ ಕ[9]ಡಸಿಗೆ
ಕಲ್ಲರಳಿ ಕರ್ಪೂರ ಕದಳಿಗ
[10]ಳಿಲ್ಲ[10]ನೋಡಿವೆ ಭೂಮಿಸುತೆ ಭೂಜಾತಸಂತತಿಯು ೧೯

ನೋಡು ಬೇಱುವನಿತ್ತಲವೆ ಹರಿ
ಕ್ರೋಡ ಖಡ್ಗಿ ಕುರಂಗಿ ಚಿತ್ರಕ
[11]ನೇಡ ಕಡವ[11]ವ್ಯಾಮು ಸೈರಿಭ ಶರಭ [12]ಸಾರಂಗ[12]
ಕಾಡಬೆಕ್ಕುರಿಗಣ್ಣ ಜಂಬುಕ
ಕೋಡಗವು ವೃಕ ಶಶಕ ಮರೆ ಮರ
ಗಾಡಿನೊಳಗಿವೆ ನೋಡು ಸೀತೆ ಸಮಗ್ರಮೃಗಕುಲವ ೨೦

---

[1] ಬಿರಿವ (ಕ), ಬಿಳಿಲ (ಚ.ಡ). [2] ರುಹವ (ಕ.ಝ.ಡ). [3] ತರು (ಗ.ಟ.ಣ), ಮರ (ಝ). [4] ಪುನಗರಣಲೆಗಳು (ಚ.ಡ) ?, ವಗ್ಗರಣಿಲೆ (ಣ). [5] ಖಾದಿರ (ಗ.ಝ.ಟ), ಗದ ತರು (ಚ). [6] ಳಿರ (ಗ.ಝ.ಟ). [7] ತೂಬುರ (ಝ), ತುಂಬುರು (ಟ), ತದಿಗಿಲು (ಡ). [8] ತಮಾಲ ಚಿಕ್ಕಣಿ (ಕ), ತಮಾಲ ಕರ್ಬುರ (ಚ), ತಮಾಲ ಕಿತ್ತಳಿ (ಣ). [9] ಚೆಲ್ಲಕ (ಕ), ನಗರೆತ (ಗ), ಚಿಲ್ಲಕ (ಡ). [10] ಳಲ್ಲಿ (ಗ.ಝ). [11] ನೈಡ ಕಡವ (ಕ.ಝ), ನೋಡಕಟವಿ (ಗ), ನೋಡು ಕಡವಂ (ಡ). [12] ಶಾರ್ದೂಲ (ಚ).

ಕರಡಿ ನೋಡಿವು ಮುಸುಗಳಿವು ಕ
ಸ್ತುರಿಯ ಮೃಗವಿವು ಚಮರಿಯಿವು ಕಿ
ನ್ನರಕದಂಬಕವಿವು ವನದ್ವಿಪಕಳಭನಿಕರವಿವು
ಕರಭವಿವು ಕಾಕೋ[1]ದರಗಳಜ[1]
ಗರಗಳಿವು ಹೇರಣ್ಲೆಯಿವು ಮುಂ
ಗುರಿಗಳಿವು [2]ಗೌಜುಗೆಗಳಿವು[2] ಗಜಗಮನೆ ನೋಡೆಂದ ೩೧

ಅರಸಿ ನೋಡೀಚೆಯಲಿ ಹುದುಗಿದ
ಹರಡೆ ಹಂಗ ಮಯೂರ ಟಿಟ್ಟಿಭ
ಗೊರವ ಗೀಜಗ ಗೌಜು ಲಾವುಗೆ ಬುರಲೆ ಬೋಗಾರ
ಮುರಕುಟಿಗ ಚಂಬೋತ ಶುಕ ಜಾ
ಗರಿಗ ನರಳಿಗನಸಗ ಸಾಳುವ
ಸರಟ[3]ಸಾರ[3]ಸಮೂಹ [4]ಮೇಳಗ[4]ಳಿತ್ತಲಿವೆಯೆಂದ ೩೨

ವಲಿಯ ಭಾರದ್ವಾಜ ಪಿಕ ಪಿಂ
ಗಲಿ ನಿಶಾಟಧ್ವಾಂಕ್ಷ ಚಾತಕಿ
ಚಲಿಮಿಲಿಗ ಜಾಣ್ವಕ್ಕಿ ಚಕೊರಿ ಕಳಿಂಗ ಕಳವಿಂಕ
ಬೆಳುವ ಬೆಂಚಗ [5]ಬೆಕ್ಕು[5]ಬಕ ಮೀ
ನ್ಬುಲಿಗ [6]ಮಂಜು[6]ರಿಗಣ್ಣ ಶಿಖಿ ಮಡ
ಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ ೩೩

ದೇವಿ ನೋಡಿದೆ ಮುಂದೆ ಕನಕ
ಗ್ರಾವದಂತಿ[7]ದೆ[7] ಖಗವಿದೊಂದು ಮ
ಹಾವಿಚಿತ್ರಪತತ್ರಿಯಿದ ನಾವ್ ನೋಡಬೇಕೆನುತ
ತೀವಿದುತ್ಸವದಿಂದ ವರರಾ
ಜೀವಲೋಚನನೈದಿದನು ಪರಿ
ಭಾವಶುದ್ಧಿಯ ಮನದ ತಪದ ಪತಂಗಸೂತಜನ ೩೪

ನೀನಿದಾರ್ಯೆ ಪಕ್ಷಿವೇಷದ
ದಾನವನೊ ಮಾನವನೊ ವಿನತಾ
ಸೂನುವೋ ಸುರನೋ ಭುಜಂಗಮನೋ ಮಹಾದೇವ

---

[1] ದರಂಗಳ (ಕ್.ಝ), ದರಗಳಿವು (ಟ.ಣ). [2] ಗೌಧೆಯವಿವು (ಚ), ಗೌಜುಗಳಿವನು (ಡ). [3] ನಕುಲ (ಚ). [4] ಮೆಳೆಗಳೊ (ಗ), ಪಕ್ಷಿಗ (ಚ). [5] ಯೆಂಚೆ (ಚ), ಬೊಕ್ಕು (ಡ). [6] ಕೆಂಜ (ಕ.ಡ). [7] ರೆ (ಕ.ಗ.ಟ).

ಕಾನನದ ಖಗಕುಲದ ಪರಿಯನು
ಮಾನ[1]ತೋರ್ಪುದು[1] ಮನಕೆ ಹೇಳ್ಳೈ
ನೀ[2]ನಿ[2]ದಾರೆಂಬುದನು ತನಗೆಂದರಸ ಬೆಸಗೊಂಡ ೩೫

ತೆಱೆದು ಕಂಗಳನಾತನೀತನ
[3]ನಿಱಿಸ[3]ನೀತನ ಹೊಗರನೀತನ
ಮಿಱುಪತನುವಿನ ದೇವತಾಲಾಂಛನವ ಮನದೊಳಗೆ
ಅಱಿದು ನೀನಾರ್ಕೈ ನರಾಂಗದ
ಮಱೆಯ ಜವನಿಕೆ ನಿನ್ನಲಿದೆ ಕಂ
ದೆಱೆವವಾಡಾರೆಂಬುದನು ನೀನೆಂದನರುಣಸುತ ೩೬

ಆದಡೆಲೆ ವಿಹಗೇಂದ್ರ ರವಿವಂ
ಶೋದಯನ ವಸುಮತಿಯ ಸುಮನೋ
ಪಾದಪನ ದಶರಥನ ಬಲ್ಲೈ ಕೇಳಿ ಪೂರ್ವದಲಿ
ತೀದನಾತನು ಬಳಿಕ ಭರತಂ
ಗಾದುದೀ ಧರೆ ವನಪರಿಭ್ರಮ
ಣೋದಯವು [4]ನಮಗಾ[4]ಯ್ತು ಪಿತನಾಜ್ಞೆಯಲಿ [5]ಕೇಳೆಂದ[5] ೩೭

ಅಕಟ ದಶರಥರಾಯನಮರ
ಪ್ರಕರದಲಿ ಸೇರಿದನೆ ಶಿವಶಿವ
ಸಕಲ ವಿಭವಾಲಂಕೃತನು ಸಾರಿದನೆ ಸುರಪುರವ
ಪ್ರಕಟಿತಾತ್ಮಪ್ರಿಯನ ಮೃತವಾ
ಚಕವ ಕೇಳ್ದೆವೆ ಹಾ ಎನುತಲ
ವ್ಯಕುತಜಲಬಿಂದುಗಳ ಬಿಡದುಗುಳಿಸಿದನಕ್ಷಿಯಲಿ ೩೮

ನರಕುಲಾಧಿಪನಾತ ನೀನಂ
ಬರಚರಾಧಿಪನುಭಯಮೈತ್ರ
ಸ್ಫುರಣವಾದುದ ಹೇಳಬೇಕೆಂದರಸ [6]ಕೈಮುಗಿಯೆ[6]
ತರಣಿಕುಲ ಕೇಳಾದಡಾದಿಯ
ಲರಸಿಯರು ಹದಿಮೂವರಾದರು
ವರಮರೀಚಿಸುತಂಗೆ ದಕ್ಷಮುನೀಂದ್ರತನುಜೆಯರು ೩೯

---

[1] ತೋಱಿದು (ಗ.ಟ.ಡ), ದೋಱಿತು (ಚ). [2] ನ (ಚ.ಡ). [3] ನರಸಿ (ಕ. ಙ). [4] ಬಳಿಕಾ (ಗ.ಜ.ಝ.ಟ). [5] ನಮಗೆಂದ (ಗ.ಜ), ತನಗೆಂದ (ಝ), ತಮಗೆಂದ (ಟ). [6] ಬೆಸಗೊಳಲು (ಚ.ಜ).

ಅದಿತಿಯಿಂ ದೇವತೆಗಳಾ ದಿತಿ
[1]ಸುದತಿಯಿಂ[1] ದೈತ್ಯರು ನಿಕಷೆಯಿಂ
ದದಟಬಲ ರಕ್ಕಸರು ಖದ್ರುವಿನಿಂ ಭುಜಂಗಮರು
ಉದಿಸಿದರು ಮಿಕ್ಕಾದ ಮಹಿಳೆಯ
ರುದರದಲಿ ತೋರ್ಪೀ ಜಗಂಗಳ
ವಿದಿತವಿವಿಧಚರಾಚರದ ವಿಸ್ತಾರವಾಯ್ತೆಂದ ೪೦

ವಿನತೆಯೆಂಬಂಗನೆಗೆ ಕಶ್ಯಪ
ಮುನಿಗೆ ನಂದನರಿಬ್ಬರಿಳೆಯಲಿ
ಜನಿಸಿದರು ಕೇಳರುಣಗರುಡರು ಬಹಳ ಭುಜಬಲರು
ಇನನ ಸೇರಿದನೊಬ್ಬನೊಬ್ಬನು
ವನಜನಾಭನ ಸಾರಿದನು ತಾ
ಜನಿಸಿದನು ಗರುಡಾಗ್ರಜಂಗೆಲೆ [2]ರಾಮ[2] ಕೇಳೆಂದ ೪೧

ಆ ತಮೋವಿಧ್ವಂಸಕನ ನಿಜ
ಸೂತನೆನ್ನೊಡವುಟ್ಟಿದನು ಸಂ
ಪಾತಿ ಜನಿಸಿದ ಮೊದಲು ನಾವಿಬ್ಬರು ಸಹೋದರರು
ತಾತನಿಂ ಬಳಿಕಿಂದ್ರನಲಿ ವಿ
ಖ್ಯಾತಸೇವಕರಾದೆವೆಂದು ನಿ
ಪಾತಕವಚರ ದೆಸೆಯಲಳಿವಾಯ್ತಮರಪುರಿಗೆಂದ ೪೨

ಬಂದನಿಂದ್ರಸಹಾಯಕಜನೃಪ
ನಂದನನು ಬಳಿಕಾ ಮಹೀಶನೊ
ಳೊಂದಃಗೂಡಿ ಬಿಡೌಜನಾಜಿಯಲರಿನಿಶಾಚರರ
ಕೊಂದೆವಾವದಱಿಂದ ಬಳಿಯಲಿ
ಬಂದುದೈ ಬಂಧುತ್ವ ಕೇಳೈ
ವೊಂದುದರದಲಿ ಬರಲುಬೇಕೇ ರಾಮ ಕೇಳೆಂದ ೪೩

ಇರಲು ಬಳಿಕಱುವತ್ತುಸಾವಿರ
ವರುಷ ನಿಮ್ಮಯ್ಯಂಗೆ ನಮಗೊಂ
ದರೆನಿಮಿಷವಾಯ್ತಡಸಿದವು ಜರೆವಾರ್ಧಿಕಗಳೆಮಗೆ
ಪರವ ಗಳಿಸುವ ಬಗೆಯ ಬುದ್ಧಿಯು
[3]ಲಿರವು[3] ಬಳಿಕಾಯ್ತಿಬ್ಬರಿಗೆ ವಿ
ಸ್ತರಿಸಿದೆ[4]ವು[4] ಯೋಗದಲಿ ಮನವನು ರಾಮ ಕೇಳೆಂದ ೪೪

---

[1] ಯುದರದಲಿ (ಚ). [2] ದೇವ (ಝ.ಡ). [3] ಲಿರಲು (ಕ.ಗ.ಝ.ಡ).
[4] ನು (ಗ.ಜ.ಟ.ಣ).

ಅಯ್ಯನಸ್ತಿರ[1]ವಾ[1]ದಬಳಿಕೆವು
ಗಯ್ಯನೀ ನಾಕದಲಿ ನೆಲೆಗೊಂ
ಡಯ್ಯನೀಗ ಜಟಾಯು ನೀ ನಮಗೀಗ ದಶರಥನು
ಮುಯ್ಯ ಮಾತಲ್ಲಿದುವೆ ನಮ್ಮಯ
ಕಯ್ಯಲಹ ಸೇವೆಯನು ಕೈಕೊಂ
ಡಯ್ಯನಾಗಿಹುದೆಂದು ನಮಿಸಿದನಂಘ್ರಿಗರುಣಜನ ೪೫

ತಂದು ಕಂಗಳಲಶ್ರುಗಳ ನಿಮಿ
ಗೊಂದಿತೇ ವಿಪಿನಪ್ರವಾಸ ವಿ
ದೆಂದು ದುಃಖಿಸಿ ಮೈದಡವಿ ನಿಜಭಾವಶುದ್ಧಿಯಲಿ
ಅಂದವರ ಬೀಳ್ಕೊಟ್ಟನಾಯೆಡೆ
ಗೊಂದುಯೋಜನಪಥವನಿವರೈ
ತಂದು ಕಂಡರು ಪಂಚವಟಿಯಲಿ ಪರಮಗೌತಮಿಯ ೪೬

ಮೆಱೆದುದಿದಿರಲಿ ನಿಖಿಳನದಿಗಳ
ಮುಱುಕವನು ಮಸುಳಿಸುವ ಮಸಕದ
ನಿಱುಸಿನಲಿ ನೀರುಬ್ಬುಗಳ ನಿರ್ಘೋಷದಬ್ಬರದ
ಬಿಱುಬುತೆರೆಗಳ ಸಿಡಿದೊಗುವ ತುಂ
ತುಱಿನ ತೂಳುವ ಫೇನಪಿಂಡದ
[2]ಗು[2]ಱುಬಿನಲಿ ಗಾಡಿಸಿತು ಗೋದಾವರಿ ಕಕುತ್ಸ್ಥಜನ ೪೭

ಆ ನದಿಯು ಕಂಡಘುವನೌಘುಕ್ಯ
ಶಾನು ಪರಿತೋಷದಲಿ ನಮಗೀ
ಸ್ಥಾನವೇ ಸಾಕೆಂದು ನಿಶ್ಚಯಿಸಿದನು ಬೀಡಿಕೆಯ
ಸ್ನಾನ ಪಾನಾದಿಗಳಿಗಿದು ಪರ
ಮಾನುಗುಣವಾಯ್ತೆಂದು ತೊರವೆಯ
ಶ್ರೀನೃಸಿಂಹನು ಬಂದು ಹೊಕ್ಕನು ಪರ್ಣಮಂದಿರವ ೪೮

---

[1] ನಾ (ಗ.ಜ.ಣ). [2] ಬಿ (ಕ.ಝ.ಣ).

# ಎರಡನೆಯ ಸಂಧಿ

ಸೂಚನೆ : ಅಗಲಿದನುಜಾಮಾತ್ಯಗುರುಮಾ
ತೃಗಳ ವನವಾಸಪ್ರಯಾಸದ
ದುಗುಡವನು ಪರಿಹರಿಸಿದನು ಜಾಬಾಲ ಜನಪತಿಯ

ಕೇಳಿದ್ಯೆ ಕುಶ ನಿಮ್ಮ ರಘುಭೂ
ಪಾಲನಿದ್ದ[1]ನು ಗುರುತನುಜನ[1] ವಿ
ಶಾಲವಚನದಲಮಳಪಂಚವಟಿಪ್ರದೇಶದಲಿ
ಕಾಲ ಸವೆದುದು ಹಿಂದಕಬುದದ
ಮೇಲೆ ತಿಂಗಳು [2]ನಾಲ್ಕರೆಣಿಕೆಯು[2]
ಮೇಲೆ [3]ಬಂದುದು ಕೇಳಿದ್ಯೆ[3] ಹಿಮಸಮಯ ಸೌರಂಭ ೧

ಶರದ ಘನರಾಜೇಂದ್ರಪದವಿಯು
ಬರಹ ತೊಡದುದು ಬಲವಿರೋಧಿಯು
ಕರುಣದಲಿ [4]ಹಿಮವಂ[4]ತಗಾದುದು ಕೇಳ್ ಭೂತಳದ
[5]ಹರಿದರಾ[5] ಹಿಮಚರರು ಠಾಣಾಂ
ತರಗಳಿಗೆ ಹಿಡಿದಬುಜಮಿತ್ರನ
ಕರವ ಕೊಂಡರು ಕೋಳಹಿಡಿದಂಭೋಜಿನೀವಧುವ ೨

ಶಿರದ ಗಂಗೆಯ ತೂಱ ತುಹಿನಾ
ಕರನನಂಬರಕಿಟ್ಟು ಹಣೆಗ
ಣ್ಣುರಿಯ[6]ನೆಬ್ಬಿಸಿ[6] ತನುವನೊಡ್ಡಿದನಭವ ನಡುಕದಲಿ
ಹರಿ ಪಯೋಧಿಯನುಳಿದು ಲಕ್ಷ್ಮಿಯ
ಗುರು ಪಯೋಧರದಿಱುಬಿನಲಿ ಬೈ
[7]ಚ[7]ರಿಸಿದನು ನಿಜಮೂರ್ತಿಯನು ಹೇಮಂತಕಾಲದಲಿ ೩

ಧಾತುಗುಂದಿ ವಿಧಾತ್ರನಂಭೋ
ಜಾತನಿಳಯುವನುಳಿದು [8]ತೇಜೋ[8]
ಜಾತೆಯನು ಭೋಗಪ್ರಪಂಚಕೆ ಮಾಡಿದನು ಮನವ

[1] ನ ನೂರುತನುಜನ (ಗ), ನು ನೋಡುತಲ್ಲಿ (ಚ). [2] ಬಂದುದಲ್ಲಿಂ (ಡ.ಣ). [3] ಕುಶನನುಜಾತ ಕೇಳ್ (ಡ.ಣ). [4] ಹೇಮಂ (ಗ.ಚ). [5] ಹರಿದುದಾ (ಕ.ಝ.ಡ). [6] ನುಗುಳಿದು (ಕ.ಝ.ಡ). [7] ತಿ (ಚ.ಝ.ಡ). [8] ಚಿತ್ತೋ (ಕ.ಣ), ಚೇತೋ (ಗ.ಝ).

ಕಾತರಿಸಿ ಕಂಗೆಟ್ಟು ಸೀತದ
ಭೀತಿಯಲಿ ನಿಲಲಾರದೋಡಿದ
ವೀತಿಹೋತ್ರನ ಮೇಲೆ ರವಿ ಏಕ್ಕವರ ಪಾಡೇನು ೪

ಕಳಿದರೀ ಚಂಡಾಂಶುವಂಶೋ
ಜ್ವಲರು ಬಳಿಕಾ ಹಿಮಸಮಯವನು
ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಕೆಯಲಿ
ತಳಿರ ತಗಡಿನ ಮನೆಗಳಲಿ ತಳಿ
ಗಳ ಶಿಖಾಸೇವೆಯಲಿ ನೆನೆದನು
ಬಳಿಕ ಭರತನೃಪಾಲನಾ ಭಾಸ್ಕರ[1]ಕುಲೋತ್ತಮನ[1] ೫

ಬಿಸಿಲು ಮಳೆ ಚಳಿಗಾಲವಿವು ಸಂ
ಧಿಸಿದವೇ ರಘುಪತಿಯನೀಯಾ
ಯಸವ ನೋಡಲಿ[2]ಕಿದ್ದವೇ ಶಿವಶಿವ[2] ಮಹಾದೇವ
ಅಸುವಿದೇನಿದ್ದೇನುಫಲವೆಂ
ದುಸುರಲಾ ಜಾಬಾಲಿಮುನಿ ಜಾ
ಳಿಸಿದನಂತಸ್ತಾಪವನು ಬಳಿಕಾ ನೃಪಾಲಕನ ೬

ಕಂಡುಬಹೆನೆಲೆ ಭರತ ಭವಕೋ
ದಂಡಭಗ್ನನ ಬಿಡು ವೃಥಾ [3]ಗೋ
ಳುಂ[3]ಡೆಗುಟ್ಟ[4]ದಿರೆನುತಲಾ[4] ಭರತನನು ಬೀಳ್ಕೊಂಡು
ಚಂಡಮುನಿಪತಿ ದಕ್ಷಿಣದ ಭೂ
ಮಂಡಲದ ಪಥವಿಡಿದು ಗಿರಿವನ
ಷಂಡವನು ಕಳಿದೈದಿದನು ಕಾಕುತ್ಸ್ಥಭೂಪತಿಯ ೭

ಅರಸ ಬಳಿಕೀಚೆಯಲಿ ತಮ್ಮಂ
ದಿರನು ತಾಯ್ಗಳು ಮೂವರನು ಮುನಿ
ವರವಸಿಷ್ಠನ ಬಿಟ್ಟು ಬಂದುಮ್ಮಳದ ಭಾರದಲಿ
ಹಿರಿದು ಚಿಂತಿಸುತಿವರ ವಾರ್ತೆಯ
ಪರಿಯನಱುಹುವರಿಲ್ಲಲಾಯೆಂ
ದುರುಳಿಸುವ ಕಂಬನಿಗಳಿಂದಿರೆ ಬಂದನಾ ಮುನಿಪ ೮

---

[1] ಕುಲೋದ್ಭವನ (ಕ.ಝ), ಕುಲಾಗ್ರಣಿಯ (ಟ), ಶಿರೋಮಣಿಯ (ಣ).
[2] ಕದ್ದೆನಲ್ಲಾ ಶಿವ (ಗ), ಕಿದ್ದೆನೊಂದೆನರಾ (ಚ). [3] ಘೋಳ್ಮೊಂ (ಚ.ಜ.ಡ).
[4] ಲು ಬೇಡೆನುತ (ಕ.ಜ.ಝ.ಡ).

ಅಲಿಬಿಡದಾನಂದಜಲ ಮು
ಕ್ತಾಳಿಗಳನುಗುಳಿದವು ಮುನಿಜಾ
ಬಾಲಿಯನು ಕಾಣುತ ಕಕುತ್ಸ್ಥಾನ್ವಯಶಿರೋಮಣಿಯ
ಆ ಲತಾಂಗಿಸಮೇತ ಮುನಿಕುಲ
ಮೌಳಿಗಾನತನಾಗಿ ವಿಹಿತವಿ
ಶಾಲವೈದಿಕದಿಂದ ಸತ್ಕರಿಸಿದನು ಮುನಿವರನ ೯

ಗುರುವಸಿಷ್ಠನ ಚರಣಯುಗ ಸು
ಸ್ಥಿರವೆ ಕೌಸಲ್ಯಾದಿ ಜನನಿಯ
ರಿರವು ಕುಶಲವೆ ಭರತ ಶತ್ರುಘ್ನರು ಬಲಾನ್ವಿತರೆ
ವರಸುಮಂತ್ರಪ್ರಮುಖ ಮಂತ್ರೀ
ಶ್ವರರು ಸುಕ್ಷೇಮಿಗಳೆ ಪುರಜನ
ದಿರವು ಲೇಸೇ ಮುನಿಪ ಹೇಳೆಂದರಸ ಬೆಸಗೊಂಡ ೧೦

ಅವನಿಜಾಪತಿ ಕೇಳು ನೀನೆಂ
ದವ[1]ರು ಹದುಳದಲಿಹರು ಬಡವವ
ಯವದಲಾ ಭರತಾಂಕನೆಲೆ[1] ರಾಜೇಂದ್ರ ನಿನ್ನೆಡೆಗೆ
[2]ಸ[2]ವದನತಿಚಿಂತೆಯಲಿ ಬಳಿಕಾ
ಹವಣುಳಿದು ಬರವಾಯ್ತೆನಲು ಸಹ
ಭವನ ವಿರಹದ ದುಃಖದಲಿ ತುಂಬಿದನು ಕಂಬನಿಯ ೧೧

ಅಗಲ[3]ಲಿದ್ದುದೆ ತ[3]ನಗೆ ಭರತಾ
ದಿಗಳನಯ್ಯನ ಮರಣದಲಿ ಹೆಚ್ಚೆ
ತೆಗಹವಾದುದೆ ಜನನಿಯಂಘ್ರಿಸರೋಜಸೇವೆಯಲಿ
ಸೊಗಸದಾ[4]ದೆನೆ[4] ಸೀತೆ ಲಕ್ಷ್ಮಣ
ರುಗಳ ವನವಾಸ ಪ್ರಯಾಸಕೆ
ತೆಗೆದುಕೊಂಡೆನೆ ತಾನೆನುತ ಬಿಸಸುಯ್ದನಾ ರಾಮ ೧೨

ಏತಚ್ಚಾಯಸವಿವು ಜಗದ್ವಿ
ಖ್ಯಾತ[5]ನಲ್ಲಾ[5] ರಾಯರಲಿ ನಳ
ನಾತಗಾದಾಪತ್ತು ಬಲ್ಲೈ ಕೇಳಿ ಪೂರ್ವದಲಿ

---

[1] ರು ಮಿಗೆ ಹದಳಿಗರು ಬಡತನವವಯುವವು ಭರತಾಂಕಗೆಲೆ (ಕ), ರು ಹದುಳಿಗರಿಂದಿನಲಿ ಬಡವವಯುವದೊಳಾ ಭರತನೆಲೆ (ಗ), ರನಿಬರಿಗೆ ಹದುಳ ಬಡವವಯುವದಲಾ ಭರತಾಂಕನೆಲೆ (ಝ.ಡ), ರು ಹದುಳಿಗರೀನೆಲೆಗೆ ಬಡವವಯುವದಲಾ ಭರತನೆಲೆ (ಣ). [2] ನ (ಚ.ಜ). [3] ಲಾದುದೆ ನ (ಕ), ಲಾಡುದು ತ (ಡ). [4] ದುದೆ (ಕ.ಝ.ಡ). [5] ನೂರ್ವೀ (ಕ.ಝ.ಡ).

ಆತ ದಾಯಾ[1]ದ್ಯರಿ[1]ಗೆ ಕಪಟ
ದ್ಯೂತದಲಿ ಸಾಮ್ರಾಜ್ಯಲಕ್ಷ್ಮಿಯ
ಸೋತು ಸತಿಸಹಿತಡವಿಗುಱಿಯಾದನು ಕಣಾ ಎಂದ ೧೩

ಬಿಸುಟನೈ ಬಳಿಕಡವಿಯೊಳಗಾ
ಯಸವ ಸೈರಿಸಲಾರದಾ ದಮ
ರುಷಿಯ ದೆಸೆಯಿಂದಾದ ದಮಯಂತಿಯನು ವಿಪಿನದಲಿ
ನುಸುಳಿದನು ಬಳಿಕೊಬ್ಬನೇ ಸಂ
ಧಿಸಿದ ಕರ್ಕೋಟಕನ ದೆಸೆಯಿಂ
ದಸುವ ನೀಗದೆ ಸಾರಿದನು ರುತುಪರ್ಣಭೂಪತಿಯ ೧೪

ನಳನ ಮನೆಯವನೆಂದಡಾತನ
ಸಲಹಿಕೊಂಡಿದ್ದನು ಕಣಾ ನೃಪ
ತಿಲಕ ನಿಮ್ಮನ್ವಯದ ರುತುಪರ್ಣಕ್ಷಿತೀಪಾಲ
ಬಳಿಕಲಾ ದಮಯಂತಿ ಭಾರಿಯ
ಬಳಲಿಕೆಯನನುಭವಿಸಿ ತಂದೆಯ
ನಿಳಯವನು ಸಾರಿದಳು ಸೀತಾರಮಣ ಕೇಳೆಂದ ೧೫

ಅಳಿಯನನು ಕಾಣದೆ ವಿದರ್ಭನು
ತೊಳಲಿಸಿದನನುಚರರ ನಾನಾ
ಹಳುವದಲಿ ಹಳ್ಳಿಯಲಿ ನಗರಂಗಳಲಿ ನಗಕುಲದ
ಬಳಿಗಳಲಿ ಬಳಿಕವರು ಕಾಣದೆ
ಹೊಳಲ ಸಾರ್ದರು ಭೀಷ್ಮಕನು ಮಗ
ಳುಳಿವ ಕಾಣದೆ ಕಂಡನೊಂದನುಮಾನಸಾಧನವ ೧೬

ಸೃಜಿಸಿದನು ಸುದ್ದಿಯನು ನೃಪಭೂ
ಭುಜರ ನಗರಂಗಳಲಿ ನಿಷಧನ
ನಿಜವನಿತೆಗೆ ಪುನಃಸ್ವಯಂವರವೆಂದು ಚರರಿಂದ
ನಿಜವಱಿಯದಳಿಯಾಸೆಯಲಿ [2]ಬಾ
ಹು[2]ಜರು ಬರುತಿರ್ದರು ಕಣಾ ಕೇ
ಳಜಕುಮಾರ[3]ಕುಮಾರ ಬಳಿಕಾ[3] ಕುಂಡಿನೀಪುರಿಗೆ ೧೭

---

[1] ದ್ಯಂ (ಜ.ಟ.ಣ). [2] ಭೂ ಭು (ಕ.ಣ). [3] ತನೂಜ ಕೇಳಾ (ಗ), ತನೂಜ ಬಳಿಕಾ (ಚ.ಜ), ಕಸೂನು ಬಳಿಕಾ (ಟ).

ಸೋಕಿತೇ ಕಡುನಿಂದೆ ಪುಣ್ಯ
ಶ್ಲೋಕ[1]ರಿ[1]ಗೆ ನಳಭೂಪನೀ ನರ
ಲೋಕದೊಳಗುತ್ತಮನಲಾ ತತ್ಪತ್ನಿ ಪಾರ್ವತಿಗೆ
ನಾಕುಮಡಿ ಮಿಗಿಲೆಂಬ ನಾಣ್ನುಡಿ
ಕಾಕಬಳಸಿತೆಯೆಂದು ನಿಮ್ಮಿ
ಕ್ಷ್ವಾಕುಕುಲದವನಿಪ[2]ನು[2] ಸುಯ್ದನು ಬೈದು ಕಮಲಜನ ೧೮

ಅರಿದನಿದ ನಾವ್ ನೋಡಬೇಕೆಂ
ದರಸನುತ್ತಮವಾಜಿ ಹೂಡಲಿ
ವರ ವರೂಥಕ್ಕೆನಲು ತಂದನು ಸೂತನುರುಹಯವ
ಅರಸ ಕೇಳ್ಕೈ ನಳಮಹೀಪತಿ
ತುರಗವಿವು ನಾಳಿನಲಿ ಕುಂಡಿನಿ
ಪುರಿಗೆ ಪರಿಗತವಾಗವೆನೆ ರುತುಪರ್ಣನಿಂತೆಂದ ೧೯

ನಳನು ಬಲ್ಲವನಶ್ವಹೃದಯವ
ನಿಳೆಯೊಳೆಂದು ಸಮಸ್ತರಾ ನೃಪ
ತಿಲಕನನು ಕೊಂಡಾಡುವರು ನೀನಶ್ವಲಕ್ಷಣದ
ಹೊಲಬ ಬಲ್ಲೈ ಬಲ್ಲೆನೆನೆ ಕಂ
ಗಳಿಗೆ ಸೊಗಸು[3]ಪಕರಿಸದ[3]ಶ್ವಾ
ವಳಿಯ ತಂದನು ಹೂಡಿದನು ಹೊಂದೇರಿನಲಿ ಹಯವ ೨೦

ಏಱಿದನು ನೃಪನಾ ರಥವನು
ಬೇಱಿ ನಳನಬ್ಬರಿಸೆ ಕಣ್ಣಿವೆ
ಜಾಱೆ ಜಾಱಿದವಶ್ವ[4]ಚಯ ಪವಮಾನವೇಗದಲಿ[4]
ತೂಱಿಬಿದ್ದುದು ಮಕುಟ ಹಿಡಿ ಹಯ
ವೇಱಿದಂತಿರೆ ಪಥವನೆನೆ ನಳ
ನೂಱುಯೋಜನ ಮುಂಚಿತೆಂದಬ್ಬಱಿಸಿದನು ಹಯವ ೨೧

ಇವನು ತಾ ನಳನಲ್ಲಲೇಯೆಂ
ದವನಿಪತಿಯನುಮಾನವಮುಖದಿಂ
ದಿವನನಱಿಯಲುಬೇಕೆನುತ ಧುಮ್ಮಿಕ್ಕಿದನು [5]ಧರೆಗೆ[5]

---

[1] ನಿ (ಗ.ಜ.ಟ) [2] ತಿ (ಕ.ಝ.ಡ). [3] ವಚಲಿಸುವ (ಗ). [4] ಯೋಜನ ಯೋಜನಾಂತರವ (ಗ.ಜ.ಝ.ಣ). [5] ನೆಲೆಗೆ (ಗ), ರಥಕೆ (ಚ), ನೆಲಕೆ (ಝ).

ಹವಣ[1]ನಿ[1]ದನಱುದೀತ ಕಡಿವಾ
ಣವನು ಸೆಳೆದಿಳೆಗಿಳಿದಿದೇನ್ನೈ
ಯವನಿಗವತರಿಸಿದ ಕಥಾಂತರವೇನು ಹೇಳೆಂದ ೨೨

ನಳನು ನೀನಹುದೆನಲು ಕಂಗಳ
ಝಳದ ಝಾಡಿಯಲಪ್ಪಿ ತುರಗಾ
ವಳಿಯ ಹೃದಯವನಱುದನಾತನಿನಕ್ಷಹೃದಯವನು
ನಳ [2]ತದೀಯನೃಪಾಲ[2]ನಿಂದಱು
ದೊಲವು ಮಿಗೆ ರಥವೇಱು ಭೂ[3]ವಿಪ[3]
ತಿಲಕರಿಬ್ಬರು ಸಾರಿದರು ಭೀಷ್ಮಕನ ಪಟ್ಟಣವ ೨೩

ಬಂದ ನೃಪರೊಳಗೀತನೇ ನಳ
ನೆಂದಱುದು ಭೀಷ್ಮಕನು ತನ್ನಯ
ನಂದನೆಯನೊಲಿದಿತ್ತನೈ ಮಗುಳಾ ಮಹೀಪತಿಗೆ
ಬಂದ ಭೂಪರು ಹರೆದರೀತನ
ತಂದು ನಿಲಿಸಿದರಖಿಳಸಂಪದ
ದಿಂದ ನೈಷಧನಗ[4]ರದಲಿ[4] ನರನಾಥ ಕೇಳೆಂದ ೨೪

ಜನಪನಾ ದಾಯಿಗನೆ ಮಱುಜೂ
ಜಿನಲಿ ಗೆಲಿದನು ಧರೆಯನಾಳ್ದನು
ಜನಪರಲಿ ಮಿಗಿಲೆನಿಸಿ ರಾಜ್ಯವ ಕೇಳು ಪೂರ್ವದಲಿ
ಇನಕುಲದ ನಿಮ್ಮಯ ಹರಿಶ್ಚಂ
ದ್ರನ ಕಥೆಯ ಕೇಳ್ದಱುಯಲಾ ಸುರ
ಪನಲಿ ಕೌಶಿಕಮುನಿ ವಸಿಷ್ಠರಿಗಾಯ್ತು ಸಂವಾದ ೨೫

ಭೂವಧೂವರರೊಳಗೆ ಸತ್ಯವ
ಚೋವಿಲಾಸನು ಕಲಿಹರಿಶ್ಚಂ
ದ್ರಾವನಿಪನೆನಲವನಸತ್ಯದ ಕುಲತಿಲಕನೆಂದು
ಹೇವವಿಬ್ಬರಿಗಾ ಪ್ರತಿಜ್ಞಾ
ಭಾವದಲಿ ಬಲುಹಾಯ್ತು ಘನಮಾ
ಯಾವಿಲಾಸತೆಯಿಂದ ಕೌಶಿಕ ಹೊಕ್ಕನಾ ನೃಪನ ೨೬

---

[1] ನ (ಚ.ಣ). [2] ನು ನುತನೃಪತಿಲಕ (ಚ). [3] ಪತಿ (ಜ.ಝ.ಟ). [4] ರಿಯಿಲಿ (ಕ.ಜ).

ಬಳಲಿಸಿದನಾ ನೃಪನ ಮೃಗಸಂ
ಕುಲದ ಬೇಂಟೆಯ ನೆವದಿನವನಿಯ
ಸೆಳೆದುಕೊಂಡನು ವರಸುವರ್ಣಾಧ್ವರದ ದಾನದಲಿ
ಹಳುವಕೆಬ್ಬಟ್ಟಿದನು ಬಿಱುನುಡಿ
ಗಳಲಿ ಸತಿಸುತಮಂತ್ರಿಸಹಿತುರಿ
ಯೊಳಗೆ ಹೊಗಿಸಿದನಡವಿಯಲಿ ಕಲ್ಪಿ[1]ತ[1]ದವಾನಲನ ೨೭

ವಿಲಸದಧ್ವರದಕ್ಷಿಣೆಗೆ ಹೆ
ಕ್ಕಳವನಿಕ್ಕಿದನೊಬ್ಬ ನಿಷ್ಠುರ
ತಿಲಕನನು ತಗದವನು [2]ತರಕಟಗಾಡಿ[2]ಕಾಶಿಯಲಿ
ಲಲನೆನಂದನರನು ಮಹೀಸುರ
ನಿಳಯದಲಿ ಮಾಱಿದನು ತಾನೇ
ಹೊಲೆಯಗಾಳಾ[3]ಗಿದ್ದನಾ[3] ಪಿತೃವನಪ[4]ತಿತ್ವ[4]ದಲಿ ೨೮

ಕುಶಿಕಸುತ ಮಾಯಾಹಿಯನು ಕ
ಲ್ಪಿಸಿ ಹರಿಶ್ಚಂದ್ರನ ಕುಮಾರಕ
ನಸುವನುಗಿದನು ಮಗನನಱಸಲು ಬಂದ [5]ತನ್ನೃಪನ[5]
ಶಶಿಮುಖಿಯನೂರೊಡೆಯನಿಂ ರ
ಕ್ಕಸಿಯ ಮಾಡಿಸಿ ಹಿಡಿಸಿ ವಲ್ಲಭ
ನಸಿಯಧಾರೆಗೆ ಕೊರಳನಡೆ[6]ಯೊಡ್ಡಿ[6]ಸಿದನಾ ಮುನಿಪ ೨೯

ವಿತತರಾಜ್ಯ[7]ಭ್ರಷ್ಟ[7]ಚಿಂತಾ
ವ್ಯತಿಕರವನಂತ್ಯಜನ ಸೇವಾ
ಕೃತಿಯನಾ ಸುಕುಮಾರ ಮರಣವನಾ ಕುಲಾಂಗನೆಯ
ಕೃತವ[8]ಧ[8]ವ್ಯಾಪಾರಮನನಾ
ದತಿಶಯದ ಬಳಲಿಕೆಯನಣುಸಂ
ಪ್ರತಿಗೆ ತಾರದೆ ಸಲಹಿದನು ಸತ್ಯವನು ಭೂಪಾಲ ೩೦

ಬಳಿಕಲಾ ಮುನಿ ಮೆಚ್ಚಿ ಪೂರ್ವದಿ
ಗಳಿಸಿದಧಿಕತಪಃಪ್ರಭಾವದ
ಫಲವ ಕೊಟ್ಟನು ಹರಿಹರಬ್ರಹ್ಮೇಂದ್ರರಿದಿರಿನಲಿ

---

[1] ಸಿ (ಚ). [2] ತರಕಟಗಾಡೆ (ಗ), ಕರಕಠಕಾಡೆ (ಚ), ತರಕಟಕಾದಿ (ಜ). [3] ಗಿರ್ದನಾ (ಕ.ಜ.ಡ), ದನು ಕಣಾ (ಚ). [4] ರೇತ (ಜ.ಡ), ರೀಕ್ಷ (ಟ). [5] ರಾತ್ರಿಯಲಿ (ಕ.ಜ.ಡ). [6] ಗೆಡಹಿ (ಜ.ಝ.ಡ) [7] ಭ್ರಂಶ (ಗ.ಝ.ಟ.ಣ). [8] ಧಾ (ಚ.ಝ.ಡ).

ಇಳೆಯಧೀಶ್ವರತನಕೆ ನೃಪತಿಯ
ನಿಲಿಸಿದನು ಕೇಳ್ಳೈ ಮಹೀಪತಿ
ತಿಲಕ ಬಹಳಾಯುಸವನನುಭವಿಸಿ[1]ದ ಮಹೀಭುಜರ[1] ೩೧

ಅವರ ನಡೆವಳಿಯಿಂದ ನೀನೇ
ಭುವನ[2]ಭಾರಿಯ[2] ಕೀರ್ತಿಯನು ನಿ
ನ್ನವಯವದಲೇ ತಾಳ್ದಿ ನಿನಗಿನ್ನಾರು ಸರಿಯೆಂದು
ರವಿಕುಲದ ತೊರವೆಯ ನೃಕಂಠೀ
ರವನ [3]ಮಿಗೆ[3] ಕೊಂಡಾಡಿ ಭರತನ
ಭವನಕಭಿಮುಖನಾದನಾ ಜಾಬಾಲಿ ಹರುಷದಲಿ ೩೨

---

[1] ದ ಮಹೀಪಾಲ (ಚ), ದನು ಭೂಪಾಲ (ಜ), ದ್ದ ಭೂಭುಜರ (ಣ).
[2] ಪಾವನ (ಕ.ಣ). [3] ನುಱೆ (ಕ.ಡ.ಣ), ನೆರೆ (ಜ).

# ಮೂರನೆಯ ಸಂಧಿ

ಸೂಚನೆ: ಚಂಡಕರಕುಲಕಮಲವನಮಾ
ರ್ತಾಂಡ ರಾಘವರಾಯನನುಜನು
ದಂಡಕಾರಣ್ಯದಲಿ [1]ಮುಱಿ[1]ದನು ಶಂಬುಕಾಸುರನ

ಸುರಪತಿತ್ವವ ಬಯಸಿ ಬಹ[2]ಳಾ
ಶ್ಚ ರಿಯದುಗ್ರತಪಃ [3]ಸಮಾಧಿಯ[3]
ಲಿರವು ಘಟಿಸಿತು ಶಂಬುಕಂಗಬುಜಜನ [4]ನೇಮದಲಿ[4]
ತರುಣ ಕೇಳ್ಕೆ ಕೆಲವು ಕಾಲಾಂ
ತರದಲಾ ಖಳನಿಂದ ದೂರಾ
ಯ್ತರಿಯ ಮನ ದೆಸೆಯಿಂದ ಸುರಕುಲಸಾರ್ವಭೌಮಂಗೆ ೧

ಇದು ಸಮಯವೆನುತಿಂದ್ರನಾ ನಾ
ರದಸುರಾಚಾರಿಯರ ಮತದಿಂ
ಹದನ ಕಂಡನು ಹರಣದಂತ್ಯಕೆ ಶಂಬುಕಾಸುರನ
ತ್ರಿದಶರೂಪವನುಳಿದು ಕೈರಾ
ತದಲಿ ಕಂಗೊಳಿಸಿ[5]ದನು[5] ಬಳಿಸಲಿ
ಸಿದುದು ಸುರನಿಕುರುಂಬವಾಕ್ಷಣ ರಾಘವಾಶ್ರಮವ ೨

ಹೀಲಿಯುಡುಗೆಯ ಹೆಗಲ ಬಿಲುಬಡಿ
ಗೋಲುಗಳ ಸಂಕಲೆಯ ನಾಯ್ಗಳ
ತೋಳಗುಂಜಿಯ ದಂಡೆಗಳ ಕಟಿತಟದ ಸುರಗಿಗಳ
ಬೋಳೆಗಳ [6]ಮಿಟ್ಟೆ[6]ಗಳ [7]ದೀಹದ[7]
ಸಾಳುವನ ಗಳೆಯಂಟುಗಳ ಶಬ
ರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ ೩

ಕರಿಯ ಮುಕ್ತಾಫಲವ ವನಸೂ
ಕರನ ದಾಡೆಯ ಹರಿಣಶಿಶು ಕ
[8]ತ್ತು[8]ರಿಯಮೃಗ ಶಾರ್ದೂಲಚರ್ಮವ ಸಿಂಹದುಗುರುಗಳ

---

[1] ಗೆಲಿ (ಗ.ಚ.ಟ). [2] ಳೈಶ್ವ (ಕ.ಗ). [3] ಪ್ರಭಾವದ (ಝ.ಟ.ಡ). [4] ನೆನಹಿನಲಿ (ಜ.ಝ.ಟ.ಡ.ಣ). [5] ದುದು (ಜ.ಣ), ದವು (ಟ). [6] ಮಿಂಟೆ (ಜ.ಝ.ಡ), ಮಿಾಟೆ (ಟ). [7] ವಿಹಗನ (ಕ), ದೀಹವ (ಜ), ಗಿಡುಗನ (ಡ). [8] ಸ್ತು (ಕ.ಜ.ಟ.ಡ.ಣ).

ತೆರ[1]ಳಿ ಕಟ್ಟಿನ[1]ಬಿಲ್ಲು ಬೋಳೆಗ
ಳರೆಗಿಳಿಯ ಕೋಡಗಗದ ಮಱಿಗಳ
ನರಸ ರಾಮಂಗಿತ್ತು ಕಂಡುದು ಶಬರಸಂದೋಹ ೪

ಕಾಣಿಕೆಯ ಕೈಕೊಂಡು ಶಬರ
ಶ್ರೇಣಿಯನು ಮನ್ನಿಸಿದನುಚಿತದ
ವಾಣಿಯಲಿ [2]ವೈವಸ್ವತಾ[2]ನ್ವಯನಾ ಪುಳಿಂದಕರ
ಏಣನಿಕ್ಕೆಯ ಸೊಕ್ಕಿದೆಕ್ಕಲ
ತಾಣಗಳ ಕಾಡಾನೆ ಮರೆ ಕಾ
ಡ್ಕೋಣನಾಡುಂಬೊಲನ ನೃಪತಿಗೆ ಶಬರಪತಿ ನುಡಿದ ೫

ಜೀಯ ಬಿನ್ನಹವಿಲ್ಲ ಹರಿಕಾ
ತ್ಯಾಯಿನೀ[3]ಪತಿ[3] ಕಮಲ[4]ಜನ ಪಾ[4]
ರಾಯಣರು ಪರಲೋಕಸಾಧನ[5]ರಿ[5]ದೆ ತಪಸ್ಸಿನಲಿ
ಈಯಟವಿಯಲಿ ದುಷ್ಟಮೃಗಸಮು
ದಾಯವಿದೆ [6]ನೈಷ್ಠಿಕ[6]ರನುಷ್ಠಾ
ನಾಯಕರ ಕಂಟಕರ ಬೇಂಟೆಗೆ ಬಿಜಯಮಾಡೆಂದ ೬

ನಿಯಮವೆ[7]ಮಗಿದು[7] ವನನಿವಾಸಾ
ಶ್ರಯದ ತುದಿಪರಿಯಂತ ಮೃಗಹಿಂ
ಸೆಯ[8]ಲಿ[8] ಮಾಡೆವು ಮನದ ಮತವಿದು ರಾಜರುಪಿತನದ
ಪ್ರಿಯವು ನಿಮ[9]ಗೀ[9] ದುಷ್ಟಮೃಗಹಿಂ
ಸೆಯಲಿ ನಿಲುವಡೆ ಮುನಿಗಳಿಗೆ ನಿ
ರ್ಭಯ ಮಾಡುವಡೊಯ್ಯುವದೀ ಲಕ್ಷ್ಮಣನ ನೀವೆಂದ ೭

ಈತನೇ ಸಾಕೆಂದು ಶಬರರ
ಜಾತಶತ್ರುವಿಗೆಱಗಿ ಭರತ
ಭ್ರಾತರನನೆಬ್ಬಿಸಿದರಾ ರಘುವರನನುಜ್ಞೆಯಲಿ
ಆತ ಬಳಿಕಳವಡಿಸಿದನು ಶಬ
ರಾತಿಶಯದಂಗವನು ಪಾರ್ಥಿವ
ರೀತಿಯನು ಮಱೆಮಾಡಿ ಕೂಡಿದನಾ ಪುಳಿಂದಕರ ೮

---

[1] ಳಿ ಕಟ್ಟಿದ (ಗ.ಡ), ರಳೆಗಟ್ಟಿದ (ಚ), ರಣಿಗಟ್ಟಿನ (ಝ), ರಳಿಕಬ್ಬಿನ (ಣ). [2] ಹರಿದಶ್ವನ (ಚ). [3] ಧವ (ಕ.ಗ.ಟ). [4] ಜನ್ಮಪ (ಗ.ಚ.ಣ), ಭವಪಾ (ಡ). [5] ಕ (ಕ.ಝ.ಟ.ಣ). [6] ನಿಷ್ಠಿತ (ಕ ಝ.ಟ.ಣ). [7] ನಗೀ (ಜ.ಝ.ಟ.ಣ). [8] ನು (ಗ.ಚ), ದ (ಜ.ಡ). [9] ಗಿದು (ಗ.ಚ).

ಸೇರಿಸಿದನಮಳಾಂಗ[1]ಕಂಗಿಯ[1]
ಪಾರಿ[2]ಯದ ಪದಕೆ[2]ಕ್ಕಡವನೊ
ಯ್ಯಾರಿಸಿದನೊಱೆಗೊಳಿಸಿ ಸುರಗಿಯ ಕಟಿಯೊಳಳವಡಿಸಿ
ಕೂರಲಗುಗಳ ಹೊದೆಯು ಬಲುಬಿಲು
ಭಾರಣೆಯ ತಲೆವಿಣಿಲ ಹೊಗ[3]ರಿನ[3]
ಹಾರ ನಿಶಿತಾಂಗದಲಿ ಬೀಳ್ಕೊಂಡನು ಮಹೀಪತಿಯು ೯

ಅಬ್ಬಱಿಸಿ[4]ದುದು ಬೇಂ[4]ಟೆವರೆ ನೆಲ
ಗಬ್ಬಱಿಸೆ ಶಬರಾಳಿ ಬೆರಳಿನ
ಬೊಬ್ಬೆಯಲಿ ನಲವೇಱಿ ನರ್ತಿಸಿ ರಾಘವಾನುಜನ
ಉಬ್ಬಿಸಿದರೆಡಬಲನ ಸರುಹಿನ
ಹಬ್ಬುಗೆಯ ಹರಹಿನಲಿ ತೆಗೆಹಿನ
ತೆಬ್ಬುಗಳ ಸಂಧಿಸಿದ ಸರಳಿನ ಸನ್ನೆವಾತಿನಲಿ ೧೦

ತೊಳಗುವಜ್ಜೆಯನುದಿರ್ದ ತುಪ್ಪಳ
ಬಳಿಯ ಮಲಗಿದು ಮೆಲುಕಿರಿದನೊರೆ
ವಳಿಯ ನೋಣವಿಱಿದಾಡಿದೊಗುನೆತ್ತರಿನ ಬೆಂಬಳಿಯ
ನೆಲನನಿಕ್ಕೆಯ ಹಕ್ಕೆಯಾಡುಂ
ಬೊಲನ ಮರಗಾಡುಗಳೊಳಗೆ ಕ
ಟ್ಟುಲುಹುದೋಱಿದೆ ಹೊಕ್ಕುದಗಲಕೆ ಶಬರಸಂದೋಹ ೧೧

ಒಡ್ಡಿದರು ದಡಿವಲೆಯು ಸಿಡಿವಲೆ
[5]ಕ[5]ಡ್ಡಿವಲೆ ಕುಣಿವಲೆಯನಗಲಕೆ
ಚಡ್ಡಣಿಸಿದರು ಬೀಸುವಲೆ ಬೆಳ್ಳಾರವಲೆಗಳಲಿ
ಅಡ್ಡವಿಸಿ ಸೋಹಿದರು ಕೋಣನ
ದೊಡ್ಡುಗಳ ದಂತಿಗಳ ಮರೆಗಳ
ನೊಡ್ಡೊಡೆಯುದವೊಲಾ ಸುಮಿತ್ರಾಸುತನ ಸರಿಸದಲಿ ೧೨

ಮರೆ ಲುಲಾಯ ವ್ಯಾಘ್ರ ವೃಕ ಸೂ
ಕರ ಶಿಖರಿ ಸಾರಂಗ ಕೇಸರಿ
ಕರಿಕಳಭ ಖಡ್ಗಿಪ್ರತಾನದ ಮೋಹುಗಾಡಿನಲಿ

---

[1] ಕನ್ನಿಯ (ಕ.ಗ.ಟ), ಕರ್ನಿಯ (ಜ.ಡ). [2] ಯಃವ ಪದಕೆ (ಕ), ಯದ ಪದದೆ (ಗ.ಝ), ವದ ಪದದೆ (ಚ). [3] ರನಿ (ಕ.ಗ.ಟ.ಡ). [4] ದವು ಬೇ (ಗ.ಚ.ಜ). [5] ಖ (ಚ.ಝ), ದ (ಟ).

ಹರಿದು ಬೆರಸಿತು ಬೇಡಪಡೆ ಕು
ಕ್ಕುರನ ಹಾಸವನುಗಿದು [1]ಸೇದಿದ[1]
ಸರಳ ಸನ್ನಾಹದಲಿ ಕುಱುಬಿಱಿದಖಿಳದೆಸೆ[2]ಗಳಲಿ[2] ೧೩

ಹುಲಿಯನೌ[3]ಡು[3]ವ ವಿಗಡದಂತಾ
ವ[4]ಳಿಗೆ[4] ಲಂಘಿಪ ಸಿಂಹವನು ಹಿಡಿ
ದುಲಿವ ಶರಭಕೆ ಮಲವ ಮದದೆಕ್ಕಲನ ಕುಕ್ಕುರಿಪ
ಉಳಿಯ ಜಂಘೆಯ ಜವಗತಿಯ ಹೆ
ಕ್ಕಳದ ಗಳಘರ್ಜನೆಯ ಕಟ್ಟಾ
ಗುಳಿಕೆಗಳ ನಾ[5]ಯ್ತು್ತಡುಕಿ[5]ದವು ತಡದಖಿಳಮೃಗಕುಲವ ೧೪

ಹಾಯಿದವು ಮೃಗವಿಂಡು ಸರಳರೆ
ಗಾಯದಲಿ ಮೂರ್ಛೆವ ಮೃಗಗಳ
ನಾಯಿಗಳು ತುಡುಕಿದವು ಸೆಳೆದವು ಕಿಱುಮೃಗಾವಳಿಯ
ಬಾಯ ಬೊಬ್ಬೆಯ ಬಿರುಬುಗಳಲಡ
ಹಾಯಿದೋಡುವ ನಿಖಿಳಮೃಗಸಮು
ದಾಯವನು ಸಂಹರಿಸುತಿರ್ದುದು ಶಬರಸಂದೋಹ ೧೫

ನಾಲಗೆಯನರೆಗಚ್ಚಿ ಕೆಡವ ಮೃ
ಗಾಳಿ ಕೆಲವಳ್ಳೆಗಳ ಗಾಯದ
ಜೋಲುಗರುಳಿನಲೊಱಗುವವು ಕೆಲವಱಚಿ ಕೊರಳುಡಿದು
ಬೀಳುವವು ಕೆಲಕೆಲವು [6]ನಡುದೊಡೆ[6]
ಕಾಲು ಖಂಡಿಸಿ ಬಸಿವ ನೆತ್ತರ
ಲಾಳೆ ನೆಲದಲಿ ಮಗ್ಗುಲಿಕ್ಕಿದವಖಿಳಮೃಗನಿಕರ ೧೬

ಸಿಲುಕಿದವು ಮೃಗವಿಂಡು ನಾನಾ
ಬಲೆಗಳಲಿ ಕುಳಿಗಳಲಿ ಬೀಸಿದ
ಬಲೆಗೆ ಬಿದ್ದವು ಗಿಡುಗ ಗೀಜಗ ಗೌಜು ಗುಬ್ಬಿಗಳು
ಚಿಲಿಮಿಲಿಗ ಚಂಬೂತ ವಾಯಸ
ವಲಿಯ [7]ಹುದುಗಿದ ಹರಡೆ ಹಸುಬಗ[7]
ಳಳಿದುದಕೆ ಕಡೆಯಿಲ್ಲ ಬೇಟೆಯೊಳೂರ್ವಿಳಾಪತಿಯ ೧೭

[1] ಸಡಲದೆ (ಕ), ಸೇರಿದ (ಗ.ಝ). [2] ದೆಸೆಗೆ (ಗ.ಟ.ಡ). [3] ಕು (ಕ.ಜ.ಡ). [4] ಳಿಯ (ಕ.ಗ.ಜ), ಳಕೆ (ಚ.ಝ). [5] ಯ್ತಾ್ತಳಿ (ಕ.ಜ.ಝ.ಡ). [6] ತೊಡೆ ನಡು (ಗ), ನಡುತೊಡೆ (ಚ.ಝ.ಟ). [7] ಹುದುಗಿದ ಹಸುಬಹರಡೆಗ (ಚ), ಚಾದಗೆ ಹರಡೆಹಸುಬಗೆ (ಝ).

ಗಳೆಗಳಂಟಿಗೆ ಸಿಲುಕಿದವು ಪಿ
ಕ್ಕಳಿಗ ಪಿಂಜರ ಮಂಜರಿಗ ಮಿಾ
ನ್ಬುಲಿಗ ಲಾವುಗೆ ಸರಲೆ ಬುರುಲೆಗಳೆಚ್ಚ ಮಿಂಟೆಯಲಿ
ಬಳಲುಗೊರಳಲಿ ಬೀಳುತಿರ್ದವು
ಬೆಳುವ ಗಿಳಿ ಕಬ್ಬಕ್ಕಿ ಬಕ ಕೋ
ಗಿಲೆ ಕಪೋತ ಕಳಿಂಗ ಕೊಂಚೆಗಳವನಿಯಗಲದಲಿ ೧೮

ಇದುವೆ ಸಮಯವೆನುತ್ತ ಹರಿ ಸೃಜಿ
ಸಿದನು ಮಾಯಾಸೂಕರನ ಕ
ಟ್ಟಿದಿರಿನಲಿ ಘರ್ಜಿಸಿತು ದಾಡೆಯ ಮಸೆದು ಲಕ್ಷ್ಮಣನ
ಕೆದಱಿತೀ ಶಬರಾಳಿ ಸೀಳ್ದಿ
ಕ್ಕಿದುದು ತುಡುಕುವ ನಾಯಿಗಳನ
ಟ್ಟಿದುದು ಘುಡುಘುಡಿಸುತ್ತ ಕಪಟಕಿರಾತಸಂತತಿಯ ೧೯

ನಿಂದನೈ ಬಳಿಕೀತನಾ ಹೆ
ಬ್ಬಂದಿಯಿದಿರಲಿ ಮೆಲ್ಲಮೆಲ್ಲನೆ
ಹಿಂದಣಡಿಗಳಲಂಡುಗೊಂಡುದು ಶಂಬುಕಾಸುರನ
ಮಂದವಿಸಿ ಮುಸುಕಿದ ಮಹೀರುಹ
ವೃಂದವನು ಕುಶ ಕೇಳ್ ಸುಮಿತ್ರಾ
ನಂದನನು ಬಳಿಕುಗಿದು ಹೂಡಿದನಸಮಮಾರ್ಗಣವ ೨೦

ಉಗಿದು ಕಿವಿವರೆಗಾಗಿ ಬಾಣವ
ನಗಲಿಸುತ ಬೊಬ್ಬಿಱಿಯೆ ಶರವಿ
ಬ್ಬಗಿಯ ಮಾಡಿತು ಮುಂದುವರಿದಂಡಿ[1]ಸಿದ[1] ಸೂಕರನ
ಚಿಗಿದು ಮುಂದಕೆ ಹಾಯ್ದು ಹುತ್ತವ
ಬಗಿದು ರಜನೀಚರನ ಶಿರವನು
ನೆಗಹಿದುದು ನಭಕಾಗಿ ನಿರ್ಜರನಿವಹ ನಲಿದಾಡೆ ೨೧

ನಿಲ್ಲದೊದಱುತ ಬೀಳ್ವ ಮಸ್ತಕ
ದಲ್ಲಗೈದಿದನೀತನಾ ತುದಿ
ಗಲ್ಲದಲಿ ಚಾಚಿದನು ಕರತಳಗೂಡಿ ಕಾರ್ಮುಕವ
ಎಲ್ಲಿಯದು ಹೆಬ್ಬಂದಿ ಮುನಿವಥೆ
ಯೆಲ್ಲಿ ಕೂಡಿತೊ ಯೋಗವೆಂದೆದೆ
ಝಲ್ಲೆನಲು ಜವಗುಂದಿ ಲಕ್ಷ್ಮಣನೊಲದನವಯವವ ೨೨

[1] ಸುವ (ಕ.ಜ.ಝ.ಟ.ಡ).

ಐಸೆ ಮತ್ತೇನಿದು ಪುರಾಕೃತ
ದೋಷ[1]ಫಲದುದ್ಭವ[1]ವಲಾ ಹೆ
ಡ್ಡೈಸಿ ಮಾಡುವುದೇನು ಪ್ರಾಯಶ್ಚಿತ್ತಮುಖವೆನಗೆ
ಈ ಶರೀರತ್ಯಾಗವೇ ಕೃತ
ದೋಷಹರವೆನುತುಗಿದು ಸುರಗಿಯ
ನಾ ಸುಮಿತ್ರಾಸೂನು ಮಿಗೆ ಮೋಹಿಸಿದನುದರದಲಿ ೨೩

[2]ಯಾತಿ[2] ಹೊದ್ದದು ಸೈರಿಸಾತುಮ
ಘಾತಕಕೆ ಮನವಿಕ್ಕಬೇಡೀ
ಯಾತುಧಾನನು ಮುನಿಪನಲ್ಲಿವ ನಂಬು ನಿಶ್ಚಯವ
ಈತನನು ಕೊಲಲೋಸುಗ[3]ರ[3] ಸುರ
ಜಾತ ನೆರೆದುದು ಶಬರರೂಪಿನ
ಲೀತನಿಂದ್ರನು ನೋಡು ನಾರದನೀಗ ತಾನೆಂದ ೨೪

ಇವ ಕಣಾ ರಕ್ಕಸನು ರಕ್ಕಸ
ನಿವಹದಲಿ ಬಲ್ಲಿದನು ಬಳಿಕಿವ
ನೆವಗೆ ಸಲುವ ಸುರೇಂದ್ರಪದವಿಗೆ ಮಾಡಿದನು ಮನವ
ಇವನು ನರರಿಂದಲ್ಲದಾಯು
ಷ್ಯವನು ಬಿಡನೆಂದಱಿದು ಬರವಾ
ಯ್ತೆವಗೆ ನೀ ನೋಡೆಂದು ನಿಜವನು ತೋಱಿದನು ಸುರಪ ೨೫

ಮರಳಿದ[4]ರು[4] ಬಳಿಕಿತ್ತಲಮರರು
ಸರಿದನತ್ತಲು ರಾಮಗೀ ವಿ
ಸ್ತರವನೆಲ್ಲವ ಬಿನ್ನಹವ ಮಾಡಿದನು ಸೌಮಿತ್ರಿ
ತೊರವೆಯಧಿಪತಿರಾಯ ನರಕೇ
ಸರಿ ನಿಜಾಂಗನೆ ಸಹಿತ ಭರತಾ
ವರಜ ಸಹಿತೀರಾಱು ವರುಷವ ಕಳಿದರೊಲವಿನಲಿ ೨೬

---

[1] ದುದ್ಭವಫಲ (ಕ), ಫಲದುರ್ದೈವ (ಗ), ಫಲದದ್ಭುತ (ಚ.ಜ). [2] ಘಾತಿ (ಕ), ಪಾತು (ಗ), ಘಾತ (ಝ) [3] ವು (ಗ), ವೆ (ಝ.ಡ). [4] ನು (ಝ.ಟ.ಡ.ಣ).

# ನಾಲ್ಕನೆಯ ಸಂಧಿ

ಸೂಚನೆ: ಚಲುವತನವನು ತೋಱು ರಾಮನ
ನೊಲಿಸಲ್ಯೆದಿದ ಶೂರ್ಪಣಖಿಯನು
ಕಲಿಸುಮಿತ್ರಾಸೂನು [1]ಹಿಡಿದಿ[1]ಳುಹಿದನು ನಾಸಿಕವ

ಕುಶನೆ ಕೇಳ್ಳೈ ಶೂರ್ಪಣಖಿಯೆಂ
ಬಸುರೆ ಬಂದಳು ವನವಿಹಾರ
ವ್ಯಸನದಲಿ ನರಮಾಂಸಭೋಜನದುಜ್ಜುಗಾರ್ತದಲಿ
ಅಸುವಳಿದ ಶಂಬುಕನ ಬಳಿಗವ
ನುಸುರುದೆಗಹನು ಕಂಡು ಹಲುಗಳ
ಮಸವುತ್ಯೆದಿದಳಿನಕುಲೇಂದ್ರನ ಪರ್ಣಮಂದಿರವ ೧

ಆ ರಘುಕ್ಷಿತಿನಾಥನಾ ನಿಜ
ನಾರಿಸಹಿತ ದ್ಯೂತಕೇಳೀ
ಭಾರದಿಂದಿರೆ ಕಂಡ[2]ಳವಳೀ ರಾಜ[2]ಚಂದ್ರಮನ
ದೂರದಲಿ ಧುಮ್ಮಿಕ್ಕಿದುದು ದೃಢ
ವೈರದರುಶನ ಮಾತ್ರದಲಿ ಕಣು
ಕೋರವಿಸಿ[3]ದವು[3] ಕೋಮಲಾಂಗನ ಕಾಯಕಾಂತಿಯಲಿ ೨

ಭುವನ ಮೂಱರಲಧಿಕರೆಂದೆಂ
ಬವರು ನಾಲ್ವರು ರೂಪಿನಲಿ ವೈ
ಶ್ರವಣಸುತನಮರೇಂದ್ರನಂದನರಿಂದು ಮನ್ಮಥರು
ಅವರುಗಳ ಶತಕೋಟಿಲಾವ
ಣ್ಯವನು ಮಿಕ್ಕಿದೆ ನೋಡಲೀ ನೃಪ
ನವಯವ[4]ದೊಳಿನ್ನಾ[4]ವನೋಯೆಂದೊಲದಳವಯವವ ೩

ನೋಡ ನೋಡಲಿಕಂಗಜನ ಹೂ
ಮೂಡಿಗೆಯ ಸರಳಂಗದೊಳಗ
ಕ್ಕಾಡಿದವು ಮೈಮಱೆದಳೊಂದೆರಡೆಂಬವಸ್ಥೆ[5]ಗಳ[5]

---

[1] ಕೊಯ್ದ (ಕ.ಣ), ಕಡಿದಿ (ಚ). [2] ಳೀ ರಘುರಾಮ (ಕ.ಣ), ಳಿವಳಾ ರಾಮ (ಟ.ಡ). [3] ದುದು (ಕ.ಜ.ಡ.ಣ). [4] ದಲಿವನಾ (ಕ), ದಲಿನ್ನಾ (ಜ.ಣ). [5] ಯಲಿ (ಚ.ಜ.ಣ).

ಜೋಡಣೆಯ ಜೋಕೆಗಳ ಝುಡಿತೆಯ
ಝಾಡಣೆಯ ಝೊಮ್ಮಿನಲಿ ಬಳಿಕೀ
ಡಾಡಿದಳು ವಿಕೃತಾತಿಶಯದ ನಿಶಾಟರೂಪಕವ ೪

ಹೊಳಹೊಳವ ನಿಡುಗಂಗಳಿನ ಕೋ
ಮಲದ ಕದಪಿನ ಹೆಱೆನೊಸಲ ಪ್ರ
ಜ್ವಲಿಪ ದಂತಾವಳಿಯ ಮಿಱುಗುವ ಪಲ್ಲವಾಧರದ
ಸೆಳೆನಡುವಿನುತ್ತುಂಗಕುಚವುಂ
ಡಲದ ನಳಿತೋಳುಗಳ ಮಾನವ
ವಿಲಸಿತಾಂಗದ ರೂಪ ಕೈಕೊಂಡೆಸದಳಿದಿರಿನಲಿ ೫

ಘಟಪಯೋಧರ ಭಾರದಲಿ ಸಂ
ಘಟಿಸಿತಧಿಕಶ್ರಾಂತಿ ನಡುವಿಗೆ
ಕುಟಿಲಕುಂತಳದುಬ್ಬರದ ಧಮ್ಮಿಲ್ಲದುರುಭರಕೆ
ನಟಣೆಯುಲಿ ಬಳುಕಿದುದು ಕೊರಳು
ತ್ಕಟನಿತಂಬ ಸಘಾಡತರದು
ಬ್ಬಟೆಗೆ ದಡದಡಿಸಿದವು ಪದಯುಗವಾ ನಿತಂಬಿನಿಯು ೬

ಅಂಗವಟ್ಟದ ಸುರಭಿ ಸೆಳೆದಾ
ಲಿಂಗಿಸಿತು ಗಗನದಲಿ ಸುಳಿವ ಸು
ರಾಂಗನೆಯರನು ಸುತ್ತ ಪರಿಮಳಿಸಿತ್ತು ಕಾಂತಾರ
ಅಂಗಜನ ಮೋಹರದ ಸುಭಟರ
ಮುಂಗುಡಿಯ ಮುಂಬರಿವ ಮದಮಾ
ತಂಗವೆನಲಿಭಗಮನೆ ಗರುವಾಯಿಯಲಿ ಗಮಿಸಿದಳು ೭

ನಿಱಿಯುನೊಯ್ಯಾರಿಸುತ ಮೇಲುದ
ನಿಱಕುತೆಡಗೈ[1]ದುದಿಯಲಾ[1] ಮುಂ
ಜೆಱಗ [2]ಸಂವರಿ[2]ಸುತ್ತ ನಸುನಾಚಿಕೆಯ ಭಾರದಲಿ
ತುಱುಗೆವೆಯ ನಿಡುಗಂಗಳಿನ ಕಡೆ
ಸೆಱಗ[3]ನಮುರಿ[3]ಸುತೊಯ್ಯನೊಯ್ಯನೆ
ಮುಱುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ ೮

---

[1] ತುದಿಯಲಾ (ಕ.ಣ), ಯಿಂದಲುರೆ (ಚ). [2] ನಳವಡಿ (ಗ.ಚ).
[3] ಹಾರಿ (ಗ), ಹಸರಿ (ಜ.ಝ). ಪಸರಿ (ಟ), ಲಹರಿ (ಣ).

ಬಿದ್ದುದರಸನ ದೃಷ್ಟಿ ಮೋಹನ
ಗದ್ದುಗೆಯ [1]ಮೋಹಿನಿ[1]ಯ ಮೇಲೊಡ
ನಿದ್ದುದೈ ನೃಪಗೇಕಪತ್ನೀವ್ರತಪರಿಜ್ಞಾನ
ಹೊದ್ದದಾದುದು ಚಿತ್ತ ಚಿತ್ತಜ
ನುದ್ದುರುಟುತನಕೇನು ದೃಢತರ
ವಿದ್ದುದೋ ನಿಮ್ಮಯ್ಯಗೆಲೆ ಕುಶ ಕೇಳಿದೈಯೆಂದ ೯

ದೇವಿ ನೋಡಿದಳೊಯ್ಯನಾ ಪೂ
ಯಾವಿಲಾಸದ ವಧುವನನುಪಮ
ಹಾವ ಭಾವ ವಿಲಾಸ ವಿಭ್ರಮ ರಂಜಕವ ಕಂಡು
ಆವಳೋ ತಾನಿವಳೆನುತ್ತಭಿ
ಭಾವದಲಿ ಹೆದಱಿದಳು ಮನದಲಿ
ದೇವ ರಾಘವನೀ ಲತಾಂಗಿಗೆ ಸೋಲದಿರನೆನುತ ೧೦

ಗಮನವೆಲ್ಲಿಗೆ ಮನುಜೆಯೋ ನೀ
ನಮರವಧುವೋ ವಹಿಸಿಕೊಂಡಿಹ
ರಮಣರಾರೀ ಕಾನನಕೆ ಬರವೇನು ನಿನಗೆಂದು
ಅಮಿತಬಲನಾ ಕಪಟರಾಕ್ಷಸ
ರಮಣಿಯನು ಮಾಧುರ್ಯವಚನದ
ಮಮತೆಯಲಿ ಕೇಳಿದನು ಮೆಲ್ಲನೆ ಮಂದಹಾಸದಲಿ ೧೧

ರಮಣರಿಲ್ಲೆನಗಾನು ಸ್ವೇಚ್ಛಾ
ರಮಣಿ ವಿಮಲಪುಲಸ್ತ್ಯವಂಶದ
ರಮಣರಿಂದೆನಗಾಯ್ತು ಜನನವು ಜಲಧಿಪರಿವೃತದ
ಕ್ಷಮೆಯವಲ್ಲಭರೆಲ್ಲರಲಿ ನಿ
ರ್ಮಮತೆಯಾಯಿತು ಮನಕೆ ನಿನ್ನಲಿ
ರಮಿಸುವೀಯನುರಾಗವೆನಗಾಯ್ತೆಂದ[2]ಳಿಂದುಮುಖಿ[2] ೧೨

ಏಕಪತ್ನೀವ್ರತಸುಭಾಷಿತ
ಸೋಕಿಹುದು ನಮ್ಮವನು ನಿನ್ನ ವಿ
ವೇಕದನುರಾಗತೆಗೆ ನಮ್ಮಯ ರೂಪು ಯೌವನಕೆ

---

[1] ಮಾನಿನಿ (ಗ.ಚ), ಮುನಿಜಟೆ (ಡ). [2] ಳರಸಂಗೆ (ಕ.ಜ.ಝ.ಣ).

ನಾಕುಮುಡಿಯುಹ ಪುರುಷನಾದಡೆ
ಸಾಕೆ ಹೋಗಾ ನಿಳಯುದಲಿ ಲೋ
ಕೈಕವೀರನುದಾರವಿಕ್ರಮ[1]ನಹನೆ ನೋಡೆಂ[1]ದ ೧೩

ಒಲಿಸಿಕೋ ನೀನಾತನನು ಕ
ಟ್ಟೊಲುಮೆ[2]ಯುವರಿಲ್ಲಾತ ನೀ ಹೋ
ಗೊ[2]ಲಿಯದಿರನತಿಶಯದ ನಿನ್ನಯು [3]ವಿಭ್ರಮಾನ್ವಿತಕೆ[3]
ಲಲನೆ ಹೋಗೆನುತವಳನಸಿತೋ
ತ್ಪಲನಿಭಾಂಗನು ಕಳುಹೆ ಲಕ್ಷ್ಮಣ
ನೆಲೆವನೆಗೆ ಬಂದಳು ನಿತಂಬಿನಿ ನಡೆಯ ಮುಱುಕದಲಿ ೧೪

ಸರಳ ಹಿಳುಕಿನ ಹೊಂಗಱಿಯ ತುದಿ
ವೆರಳಲೊಯ್ಯಾರಿಸುತ ಬಾಣವ
ತಿರುಹಿ ತಿದ್ದುತ ಕೂರಲ[4]ಗು[4]ಧಾರೆಯ ನಿರೀಕ್ಷಿಸುತ
ಇರಲು ಸಾರಿದಳಿವಳು ವಿಜಿತ
ಸ್ಮರನ ಸಾರುವ [5]ಜೋಡೆ[5]ಯುವೊಲದ
ಸರಕುಮಾಡದೆ ತಿದ್ದುತಿದ್ದನು ಮತ್ತೆ ಮಾರ್ಗಣವ ೧೫

ರೂಪಿನಲಿ ಸೊಬಗಿನಲಿ ಶೌರ್ಯಾ
ಟೋಪದಲಿ ಕುಂದಿಲ್ಲ ಮನ್ಮಥ
ತಾಪವನು ತಗ್ಗಿಸಲು ತಕ್ಕವನ[6]ಹನು[6] ನೋಡಲಿಕೆ
ಈ ಪುರುಷನೀತನನು ಮಧುರಾ
ಳಾಪದಲಿ ಮಾತಾಡಿಸುವೆನೆಂ
ದಾ ಪರಂತಪನನುಜನನು ನುಡಿಸಿದಳು ಶೂರ್ಪಣಖಿ ೧೬

ನೇಮವಾಯ್ತೆನಗಸಿತಕುಮುದ
ಶ್ಯಾಮನಿಂ ಕಗ್ಗೊಲೆಯ ಕಾಮನ
ಕ್ಷೈಮೆಯುನು ಕಳಲಿಸು ಕಟಾಕ್ಷದ ಕರುಣಭಾವದಲಿ
ಕಾಮಿಸಿದೆ ನಾ ನಿನಗೆ ಸುರತಕ
ಳಾಮನೋಜವಿಲಾಸನಾಗೆಂ
ದಾ ಮಗಧನಂದನೆಯುನಂದನಗೆಂದಳಿಂದುಮುಖಿ ೧೭

---

[1] ಪುರುಷನಹನೆಂ (ಗ), ನಹನೆ ನಡೆಯೆಂ (ಜ.ಡ), ನಹನೆ ಹೋಗೆಂ (ಝ ಟ.ಣ). [2] ಯುಳ್ಳವನಾತ ನೀ ಹೋಗೊ (ಕ.ಣ), ಯುವರಿಲ್ಲಾತಗೀಗಳು ವೊ (ಗ), ಯುವನಲ್ಲಾತನೀ ಬರಲೊ (ಜ.ಝ), ಯುಳ್ಳವನಾತ ಕೇಳ್ನಿನಗೊ (ಟ). [3] ರೂಪು ವಿಭ್ರಮಕೆ (ಕ.ಝ.ಣ), ರೂಪು ಯೌವನಕೆ (ಜ), ವಿಭ್ರಮವ ಕಂಡು (ಟ). [1] ಗ (ಗ.ಝ.ಣ). [5] ಜಾರೆ (ಕ), ಜೋಕೆ (ಚ.ಜ). [6] ಹುದು (ಕ.ಚ).

ತೊಡರ ಬಿಗಿ ಮದನಂಗೆ ಮದವನು
ತೊಡೆ ವಸಂತನ ಮಾರುತಗೆ ಮರು
ವಿಡಿಯನಿಕ್ಕು ಸುಧಾಂಶುವಿನ ಸುಮ್ಮಾನವನು ಕೆಡಿಸು
ನುಡಿಯನಡಗಿಸು ಕೋಕಿಲನ ಗಾ
ರುಡಿಸು ವಿಷಯ ವಿಷಾಹಿಯನು ಮೋ
ಲಾಡಿಯ ಹಾಯ್ ಹತ್ತನೆಯವಸ್ಥಾಂತರದ ದಳವುಳಕೆ ೧೮

ಎಂದು ನುಡಿವೀ ಸುರತದಭಿಗತ
ಸೌಂದರಿಯನೀಕ್ಷಿಸಿದನಿಂದ್ರಿಯ
ಬಂದಿಕಾಱಿನು ಬಳಿಕ ಮನದೊಳಗಱಿದನಾ ಸತಿಯ
ಸಂದ ಮಾಯಾಮೋಹನದ ರೂ
ಪಿಂದ ಸುಳಿದ ನಿಶಾಟವಧುವಿವ
ಳೆಂದು ಮೆಲ್ಲನೆ ನುಡಿದನಾ ರಾಕ್ಷಸನಿತಂಬಿನಿಗೆ ೧೯

ಕೃತಕವಲ್ಲ ಮದೀಯ ವಚನ
ಸ್ಥಿತಿಗೆ ನಾವೇ ಬ್ರಹ್ಮಚರ್ಯ
ವ್ರತಸುನಿಷ್ಠಿತರೀ [1]ವನಾಂತರ[1]ವಾಸ ಪರಿಯಂತ
ರತಿಯ [2]ಸೊಗಸಿಗೆ[2] ಸೋಲ[3]ವೆ[3]ವ್ಮಯ
ಮತಿ ಮನೋಭವನಸ್ತ್ರಧಾರಾ
ಹತಿಗೆ ತೆಕ್ಕುವ[4]ರ[4]ಲ್ಲ ತೆರಳೆಂದನು ನಿತಂಬಿನಿಯ ೨೦

ಎಲವೊ ಖೂಳನರಾಧಮರಿರಾ
ನೊಲಿದು ಬಂದರೆ ನಿಮ್ಮ ಬಿಱುನುಡಿ
ಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ
ಲಲನೆಯೊಬ್ಬಳ ವ್ರತವವಗೆ ಗಡ
ಹಳುವದಿರವಿಗೆ ಬೊಮ್ಮಚರಿಯದ
ಬಳಕೆ ಗಡ ನಿಮಗೆಲೆ ನಪುಂಸಕರೆಂದಳಾ ಕಾಂತೆ ೨೧

ಕಾತರಿಸಿ ವಿಷಯಾತುರರು ನೆಱೆ
ಬೂತುಗೆಡೆದರೆ ಗರುವರಾದವ
ರಾತು ಮಾಱುತ್ತರವ ಕೊಡುವರೆ ಕೆಲಕೆ ಸಾರೆನುತ

---

[1] ಮಹಾ ವನ (ಚ). [2] ಮನಸಿಗೆ (ಗ), ಸೊಬಗಿಗೆ (ಚ). [3] ದೆ (ಗ.ಜ.ಝ.ಟ.ಣ). [4] ನ (ಗ.ಜ.ಟ.ಡ.ಣ), ದ (ಚ).

ಆ ತಮಿಸ್ರಾಚರಿಯನಸುರಾ
ರಾತಿಯನುಜನು ಜಱೆಯೆ ಘನರೋ
ಷಾತಿಶಯದಲಿ ಮತ್ತೆ ಬಂದಳು ರಾಮನಿದ್ದೆಡೆಗೆ ೨೨

ಕಳುಹಿದನು ತಾ [1]ಬ್ರಹ್ಮ[1]ಚರ್ಯದ
ಬಳಕೆ ತನಗೆಂದಾತ ನಿನ್ನಯ
ಬಳಿಗೆ ನಿನ್ನಭಿಮತವದಾವುದು ಹೇಳು ತನಗೆನಲು
ಲಲನೆಯಿವಳಾಸುರವಿಕರ್ಮದ
ಲಲನೆ[2]ಯಹುದೆಂದ[2]ಱಿದು ಮೆಲ್ಲನೆ
ತೊಲಗ[3]ನುಡಿದೊಲಿದವರನಂಗೀಕರಿಸು ಹೋಗೆಂದ[3] ೨೩

ಮನದ ಮದದಕ್ಕಱಿನ ವಿಷಯದ
ನೆನಹು ನೆಗ್ಗಿತು ಸುರತರಸವಾ
ಹಿನಿಯ [4]ಹರಿ ಬತ್ತಿದುದು[4] ಬಿಟ್ಟುದು ಕೋಮಲತೆ ಮುಖದ
ಘನ ಮನೋರಥ ಶಿಶಿರಕಾಲದ
ವನಜದಂತಾಯ್ತುದಿಸಿ[5]ತ[5]ವಳಾ
ನನದಲಧಿಕಕ್ರೋಧಶಿಖಿ ಸಿಡಿದೊಗುವ ಕಿಡಿಗಳಲಿ ೨೪

ತಿಂಬೆನಿವದಿರನೀ ಮನುಷ್ಯನಿ
ತಂಬಿನಿಯ ಕೊಂಡೊಯ್ದು ಸುರನಿಕು
ರುಂಬದಲ್ಲಣಗೀವೆನೆಂದನುಮಾನಮಾರ್ಗದಲಿ
ಅಂಬುಜಾಕ್ಷನ ಮುಡಿಯ ಸರಿಸಕೆ
ಝೊಂಬಿಸಲು ಝಡಿತೆಯಲಿ ಬಳಿಕು
ಗ್ರಾಂಬಕನ ಹೊಳಹಿನಲಿ ಹೊಱಕೈಯಿಂದ ಝಾಡಿಸಿದ ೨೫

ಕಳಕಳವಿದೇನಣ್ಣದೇವನ
ನಿಳಯದೊಳ[6]ಗೆಂದೂ[6]ರ್ಮಿಳಾಪತಿ
[7]ಚಳಕ[7]ದಿಂದೈತಂದು ಕಂಡನು ಕಪಟರಕ್ಕಸಿಯ
ಸೆಳೆದಡಾಯುಧವವಳ ಗಂಟಲ
ಬಳಿಗೆ ಚಾಚಲು ಕಂಡು ರಘುಪತಿ
ನಿಲಿಸಿದನು ಕೈತಪ್ಪ ಮಾಡದಿರೆಂದು ಲಕ್ಷ್ಮಣನ ೨೬

---

[1] ಬೊಮ್ಮ (ಕ.ಝ.ಟ.ಡ). [2] ಯಿವಳೇದ (ಕ.ಝ.ಟ.ಡ.ಣ), ಯೆಂದಾಗ (ಜ). [3] ಮಾತಾಡಿದನು ಮಮಕರಿಸದೆ ನಿಶಾಚರಿಯ (ಕ). [4] ಲಾ ಹರಿ ಬತ್ತಿ (ಕ), ಭರ ತಗ್ಗಿದುದು (ಟ.ಡ), ನದಿ ಬತ್ತಿದುದು (ಣ). [5] ತಿ (ಕ.ಗ.ಝ.ಡ). [6] ಗೆನುತೂ (ಚ.ಜ). [7] ದಳಯ (ಗ), ನಿಳಯ (ಜ.ಝ).

ಚಲುವತನವನು ತೋಱು ನಿನ್ನುವ
ನೊಲಿಸ[1]ಬಂದವ[1]ಳಿವಳ ಲೋಕಕೆ
ಚಲುವತನವನು ಮಾಡಿಬಿಡು ಸಾಕೀ ನಿಶಾಚರಿಯು
ಕೊಲುವುದನುಚಿತವೆಂಬ ನುಡಿಯಿಂ
ದೊಳಗವಳ ನಾಸಿಕವನುದ್ವಕೆ
ಬಳಚಿದನು ಕಳಚಿದನು ಕರ್ಣದ್ವಯದ ಬೆಸುಗೆಗಳ ೨೭

ಬೆದಱದವನೀನಂದನೆಯು ವರ
ವದನ[2]ವರಳಿದುದಾ ನಿಜೇಶನ[2]
ವದನವಾರಿಜವನು ನಿರೀಕ್ಷಿಸಿ ನಗೆಯ [3]ನಟಣೆಯಲಿ[3]
ಮದುವೆಯಾಗಲು ಬಹುದು ಲೋಕದ
ಸುದತಿಯರಿಗೀ ಸೊಬಗು ಸಂಭವಿ
ಸಿದುದ ಕಾಣೆನು ವರಿಸಬಹುದೆಂದಳು ನಿಜೇಶಂಗೆ ೨೮

ನಿಮ್ಮ ಚಿತ್ತಕೆ ಬಾರದಿರೆ ನೀ
ವೆಮ್ಮ ಮೈದುನಗಾದರೆಯು ನ
ಮ್ಮೂರ್ಮಿಳಾಮಾನಿನಿಗೆ ಪಡಿಯಾಗಿರಲು ಮಾಡುವುದು
ನಿಮ್ಮ ರೂಪಿಗೆ ಸೋತವಳ ನೀವ್
ಗುಮ್ಮನನು ಮಾಡುವುದು ಗುಣವ
ಲ್ಲೆಮ್ಮ ಮನಕಿದು ಬಾರದೆಂದಳು ನಗುತ ನಳಿನಾಕ್ಷಿ ೨೯

ನಗುತ ಲಕ್ಷ್ಮಣದೇವನಾ[4]ಚೆ[4]ಯ
ಹೆಗಲ ಹದಿರಿನಲೌಕಿ ನಿನ್ನಯ
ಸೊಗಸಿಗನುಗುಣವಾದವರ ವರಿಸೆಂದು ಹೊಱವಡಿಸೆ
ಒಗುವ ಕಿವಿಮೂಗುಗಳ ರಕುತದ
ಹಗರಣದ ಹೊಸನಾಟಕದ ಹಲು
ದೆಗೆದ ರಕ್ಕಸಿ ಬಂದಳೊ[5]ದಱುತ[5] ಖರನ ಪಟ್ಟಣಕೆ ೩೦

---

[1] ಲೈದಿದ (ಝ.ಟ.ಡ). [2] ವಿಕಸಿತವಾಯ್ತು ಗಂಡನ (ಕ). [3] ಕಟಕಿಯಲಿ (ಗ), ಕಡಲಿನಲಿ (ಚ), ಹರುಷದಲಿ (ಜ.ಝ), ನದುಳಿನಲಿ (ಣ). [4] ಕೆ (ಕ.ಟ.ಡ). [5] ಱಲುತ (ಕ.ಝ.ಡ).

# ಐದನೆಯ ಸಂಧಿ

ಸೂಚನೆ: ತುಂಗಬಲ ಸೌಮಿತ್ರಿಯಿಂದುಱೆ
ಭಂಗಬಟ್ಟ ಮಹೋಗ್ರರಜನಿಚ
ರಾಂಗನೆಯ ದೂ[1]ಱಿಂದ[1] ಖರನೈತಂದನಾಹವಕೆ

ರಾಯ ರಾಘವಸೂನು ಕೇಳ್ ಕಮ
ಲಾಯತಾಂಬಕನನುಜನುರುಕೌ
ಕ್ಷೇಯಕದ ಧಾರಾವಿಭಿನ್ನಘ್ರಾಣಮುಖಿ ಬಳಿಕ
ಹಾಯಿದಳು ಹೊಱವಡುವ ನೆತ್ತರ
ಬಾಯ ತೂಪಿಱಿವಶ್ರುಜಲ ಪೂ
ರಾಯುದಭಿಮಾನಚ್ಯುತಿಯ ರೋದನನಿನಾದದಲಿ ೧

ಇವಳ ಕಾಣುತ [2]ಕೆ[2]ದಱಿದವು ಮೃಗ
ನಿವಹ ವನದಲಿ ತಾಪಸರು ತವ
ತವಗೆ ಹಾಯ್ದರು ಹಾಯ್ಕಿ ದಂಡು ಕಮಂಡಲಾವಳಿಯು
ಲವನೆ ಕೇಳ್ದ ಬಳಿಕ ಹಾಹಾ
ರವದ ರವಳಿಯುಲಾ ಜನಸ್ಥಾ
ನವನು ಹೊಕ್ಕಳು ಸಾರಿದಳು ಸಭೆಯನು ಖರಾಸುರನ ೨

ಬಿಸುಟ[3]ಳೊದಱುತ[3] ಶೂರ್ಪಣಖಿ ನಿವ
ಡಿಸಿದ ಕಟ್ಟಭಿಮಾನ[4]ವಿಲಸಿತ[4]
ಬೆಸುಗೆಗಳಚಿದ ನಾಸಿಕವ[5]ನಿದಿರಲಿ[5] ಖರಾಸುರನ
ಅಸುರನವ[6]ನಿದ[6] ಕಾಣುತೀ ಜಗ
ದಸುವಿನಳುವಿನ ಕಾಲರುದ್ರನ
[7]ವಿಷಮ[7]ಕೋಪಜ್ವಾಲೆಗಿಮ್ಮಿಗಿಲೆನಲು ಖತಿಗೊಂಡ ೩

---

[1] ಱುನಲ (ಟ.ಡ). [2] ಬೆ (ಕ.ಟ.ಡ). [3] ಳಿದಿರಲಿ (ಕ.ಟ), ಳೊಱಲುತ, (ಚ.ಝ). [4] ಭಂಗದ (ಕ.ಜ.ಟ), ವಿಳಸದ (ಗ). [5] ನೊದಱುತ (ಕ.ಟ). [6] ನದ (ಚ.ಡ.ಣ). [7] ನಿಶಿತ (ಡ.ಣ).

ಹೇಳು ಹೇಳಭಿಮಾನಭಂಗಥ
ಡಾಳವಾರಿಂದಾ[1]ಯಿತೆಂ[1]ಬುದ
ಹೇಳು ಹೇಳೀ ನಾಸಿಕಚ್ಯುತಿಯಾರ ದೆಸೆಯಿಂದ
ಮೇಳವಿಸಿ[2]ದುದನರಿಯ ಮೂಗನು[2]
ಸೀಳಿ ನಿಮಿಷಾರ್ಧದಲಿ ನಿನ್ನೀ
ಗಾಳಿತಘ್ರಾಣದಲಿ ಜೆಸುವೆನು ಬೇಗ ಹೇಳೆಂದ ೪

ಕಾಲನಾಗಲಿ ಕಾಲ[3]ಗಗ್ಗದ[3]
ಶೂಲಿಯಾಗಲಿ ಮೃತ್ಯುವಾಗಲಿ
ಕಾಲಭೈರವನಾದಡಾಗಲಿ ಹರಿವಿರಿಂಚಿಗಳು
ಹೇಳು ಸಾಕಾರಾದಡಾಗಲಿ
ಮೇಲೆ ನೋಡಾ ತನ್ನ ಕೈ[4]ಹದ[4]
ದೇಳಿಗೆಯ ಕೌತುಕವನೆನು[5]ತುಬ್ಬಣವ ಝಳಪಿಸಿದ[5] ೫

ಖರನ ಕರಕೋಪಾನಲನ ದ
ಳ್ಳುರಿಗೆ ಸೀದವು ತಾರೆ ಸಿಮಿಸಿಮಿ
ಗಱೆದುದಂಬರ [6]ಸಿಂಧು[6] ಸುರಪುರ ಹೊಗೆದುದಗಲದಲಿ
ತರುಣ ಕೇಳ್ಕೈ ಕುಶನೆ ರಾಕ್ಷಸ
ತರುಣಿಗಾದಭಿಮಾನಭಂಗದ
ಭರದ ಬವರಕೆ ಬಹಳಬಲಸಹಿತಸುರ ಹೊಱವಂಟ ೬

ಮೊರೆವ ವಾದ್ಯಧ್ವನಿಯುಲುಕ್ಕಿನ
ವರ ವರೂಥವನಡಱದನು ನಿ
ರ್ಜರರ ಜೀವಗಳಡಱ ನೆತ್ತಿಗೆ ನೆನೆಯಬಾರದೆನೆ
ಧುರಕೆ ಮುಂಚಿತು ಮುಂದೆ ದೂಷಣ
ದುರುಳ ದುರ್ಮದ ದುಷ್ಪರಣ ದು
ರ್ಧರ ಖರತ್ರಿಶಿರಾದಿ ರಕ್ಕಸರಳುಕೆ ಭುವನಚಯ ೭

ಧೂಳಿ ಧಟ್ಟಿಸಲಟ್ಟಿ ಸುಂಟರು
ಗಾಳಿ ಬೀಸಿತು ಸೂಸಿ[7]ದುದು[7] ಶುಂ
ಡಾಲಕುಲ ಕಂಬನಿಯ ತಲೆಗೊಡಹಿದವು ತೇಜಿಗಳು

---

[1] ದುದೆಂ (ಕ.ಝ.ಡ.ಣ). [2] ತಾ ರಿಪುವ ಮೂಗನು (ಕ), ತಾನವನ ಮೂಗನು(ಜ), ದುದು ರಿಪುವ ತಾನುಱ (ಡ). [3] ದಗ್ಗದ (ಕ.ಝ.ಡ.ಣ), ದಗ್ರದ (ಗ.ಜ). [4] ಹಸ (ಗ.ಣ), ಗುಣ (ಚ). [5] ತವೆ ಬಾಳ ಝಳಪಿಸಿದ (ಕ.ಝ.ಡ), ತವೆ ಖಂಡೆಯವ ಜಡಿದ (ಜ). [6] ಸೀದು (ಕ.ಟ), ಸಿಡಿದು (ಡ). [7] ದವು (ಝ.ಟ.ಣ).

ಮೇಳವಿಸಿ[1]ದವು[1] ಧೂಮಕೇತು ದಿ
ಶಾಳಿಯಲಿ ರಥ ಕೇತುದಂಡದ
ಮೇಲೆ ಹದ್ದೆಱಗಿದವು [2]ಕಲಿಖರ[2]ದೂಷಣಾದಿಗಳ ೮

ಅದಿರಿತಿಳೆ ರುಧಿರಾಂಬುಧಾರೆಯ
ನುದುಗಲಿಸಿತಾಕಾಶ ಕಾವಳ
ಕದುಬಿತಿನಮಂಡಲವನುದುರಿದವಿಳೆಗೆ ತಾರೆಗಳು
ಮದ[3]ಮುಖರಲೈ[3] ರಕ್ಕಸರು ತೋ
ಱಿದ ಮಹೋತ್ಪಾತವನು ಬಗೆಯದೆ
ಕದನಕೋಳಾಹಳರು ದಳವುಳಿಸಿದರು ಧಾಳಿಯಲಿ ೯

ಮುಸುಕಿತಭ್ರವನಸುರಸೇನಾ
ವಿಸರಪದಹತಧೂತಧೂಳಿ
ಪ್ರಸರವಡಿಗಡಿಗಳುಕಿಸಿತು ರಣವಾದ್ಯನಿರ್ಘೋಷ
ಬಿಸಜಗರ್ಭಾಂಡವನು ಕಿವಿಗೇ
ಳಿಸಿತಲೈ ನಿಮ್ಮವರನೀ ರಾ
ಕ್ಷಸರ ರಣರಭಸದ ಘಡಾವಣೆ ಪರ್ಣಶಾಲೆಯಲಿ ೧೦

ಆಗದಿರದೀಯಬ್ಬರವು ಕಿವಿ
ಮೂಗು ಮಸುಳಿಸಿದವಳ ಬವರದ
ಭಾಗೆಕಾಱರ ಬರವು ಭರತಾವರಜ ನೋಡೆನಲು
ಆಗಲಾ ಸೌಮಿತ್ರಿ ಸಕಲಕ
ಲಾಗಮಜ್ಞ[4]ನ ನುಡಿಗೆ ಗಿರಿದುದಿ
ಗಾಗಿ ಬಂದೇಱಿಳಿದು[4] ಬಿನ್ನೈಸಿದನು ರಘುಪತಿಗೆ ೧೧

ಅರಸ ಚಿತ್ತೈಸಹುದು ನಾವಂ
ದರಿದ ನಾಸಿಕದವಳ ತೆತ್ತಿಗ
ರುರವಣಿಸಿ ಬರುತಿದೆ ನಿರೂಪಿ[5]ಸು[5] ಜೀಯ ಸಂಗರಕೆ
ಸರಳ[6]ಸೂತ್ರ[6]ದಲಹಿತವೀರರ
ಶಿರವ ಸೂತ್ರಿಸಿ ಕಾಲಕಂಠನ
ಕೊರ[7]ಳಲಿ[7]ಕ್ಕುವೆನೆನುತ ಬಿಲುದುಡುಕಿದನು ಸೌಮಿತ್ರಿ ೧೨

---

[1] ದುದು (ಚ). [2] ಖರಕಲಿ (ಕ.ಗ.ಣ). [3] ದ ಮುಖದಲಿ (ಜ), ಮುಖರಲೇ (ಟ). [4] ನ ನುಡಿಗೆ ನಿಂದಿರದಾಗ ಬಂದಱುದಿಳಿದು (ಗ), ನು ನುಡಿಯೆ ಗಿರಿದುದಿಗಾಗಿ ಬಂದಱುದಿಳಿದು (ಚ), ನ ನುಡಿಗೆ ತುದಿಗಿರಿಗಾಗಿ ಬಂದಱುದಿಳಿದು (ಣ). [5] ಸಿ (ಗ.ಝ.ಡ). [6] ಸಾರ (ಚ.ಝ). [7] ಳಿಗಿ (ಚ.ಝ).

ಬೇಗಮಾಡದಿರಿರಿಸು ಸೀತೆಯ
ನೀ ಗಿರಿಯ ಶಿಖ[1]ರದಲಿ[1] ಕೈಮಿಗಿ
ಲಾಗಿ ಬಂದರಿಭಟರ [2]ಭಂಜಿಸು[2] ನೇಮ ನಿನಗಿನಿತು
ಭಾಗೆ ನಮಗೀ ರಕ್ಕಸರ ರಣ
ದಾಗು ತಾ ಕಾರ್ಮುಕವನೆಂದು ಸ
ರಾಗದಲಿ ಸಾಹಸ ಪರಾಕ್ರಮಿ ಸಮರಕನುವಾದ ೧೩

---

[1] ರಿಯಲಿ (ಚ.ಡ). [2] ನಂಜಿಸು (ಗ), ಭಂಗಿಸು (ಚ), ಭಂಜಿಪ (ಝ), ಭಂಜಿಸಿ(ಡ).

# ಆರನೆಯ ಸಂಧಿ

---

ಸೂಚನೆ : ಆಸುರದ ಸಂಗ್ರಾಮದಲಿ ಖರ
ದೂಷಣತ್ರಿಶಿರಾದಿಗಳ ಕೀ
ನಾಶನಗರಿಗೆ ಕಳುಹಿದನು [1]ಕಡುಗಲಿ ರಘುಪ್ರಭವ[1]

ಆದುದಾ ರಕ್ಕಸಿಯ ನಾಸಾ
ಚ್ಛೇದವೇ ಭೂಭಾರ[2]ತರ[2] ವಿ
ಚ್ಛೇದನಪ್ರಾರಂಭವೆಲೆ ಕುಶ ಕೇಳಿದೈ ಬಳಿಕ
ಐದಿತೀ ರಘುಪತಿಯನಾ ಕ್ರ
ವ್ಯಾದಬಲ ವೆಡ್ಡೈಸಿಕೊಂಡುದು
[3]ಕೊಯ್ದ[3]ಮೂಗಿನ ಖಳಸತಿಯ ಕೈಸನ್ನೆ[4]ಗಾಶ್ರಮವ[4] ೧

ಅದೆ ನಿಶಾಚರಮೇಘಮಾರುತ
ಸದನವಸುರಾನ್ವಯ ಪರಾಕ್ರಮ
ಸುದತಿ[5]ಯಗ್ಗದ ಕರ್ಣನಾಸಾಚ್ಛೇದನನ[5] ನಿಳಯ
ಅದೆ ರಣೋತ್ಸವ ಸಿರಿಯ ವಿಟನ
ಭ್ಯುದಯಶಾಲೆ ವಿಶಾಲಬಲಸಂ
ಪದನ ಭವನವಿದೀಗೆನುತ ತೋಱಿದಳು ಶೂರ್ಪಣಖಿ ೨

ಮುತ್ತಿ[6]ತಾ ರಿಪು[6]ಸೇನೆ ಸೂರ್ಯಕು
ಲೋತ್ತಮನ ದಳನಿಳಯವನು ದಿಗು
ಭಿತ್ತಿ ಬಿಱಿಯಲು ಮೊಱೆವ ಭೇರಿ ಮೃದಂಗ ಮೌವರಿಯ
ತಿತ್ತಿರಿಯ ತಂಬಟದ ಲಗ್ಗೆಯ
ಮತ್ತವಾರಣ [7]ಹಯದ ರಣರಥ[7]
ಪತ್ತಿಗಳ ಪಡಿತಳದ ಭಾರಿಯ ಘೋರಘೋಷದಲಿ ೩

---

[1] ಸಂಗ್ರಾಮದಲಿ ರಾಮು (ಟ.ಡ). [2] ಕೃತ (ಕ.ಜ.ಣ). [3] ಹೋದ (ಟ.ಡ). [4] ಗಾಶ್ರಮದ (ಕ.ಜ.ಟ), ಯಾಶ್ರಮವ (ಗ.ಡ). [5] ನಾಸಾಕರ್ಣ ಭೇದಕ್ಬ್ವರನ ನಿಜ (ಕ.ಣ), ಯಗ್ಗದ ಕರ್ಣ ನಾಸಾಚ್ಛೇದ ನಿಜ (ಡ). [6] ತಸುರರ (ಕ). [7] ವಾಜಿರಣರಥ (ಕ), ಹಯವರೂಥದ (ಜ.ಟ.ಣ).

ನಡೆ ಸುಮಿತ್ರಾಸೂನು ಕೇಳ್ ಕೆಲ
ಸಿಡಿ ಸರೋಜಾನನೆ ಸಹಿತ ಸಂ
[1]ಗಡಿಸಿ[1]ಕೊಡು ಕೋದಂಡ ಕೌಂಕ್ಷೇಯಕ ಕಳಂಬಕವ
ತೊಡೆವೆನೀ ತೋರ್ಪೀ ನಿಶಾಚರ
ಪಡೆಯ ಭಾಗ್ಯದ ಭಾಳಲಿಪಿಯನು
ನೆಡಿಸುವೆನು ನೈಶಾಟವಿಜಯಸ್ತಂಭಡಂಬರವ ೪

ಬಿಗಿದು ಬೆಳುವಟ್ಟೆಯ ಕಠಾರಿಯ
[2]ತಿಗಕೆ ಸಿಂಗರಗೊಳಿಸಿ[2] ಹೊನ್ನಾ
ಯುಗದ ಖಡುಗವನಕ್ಷಯದ ಮೂಡಿಗೆಯ ದಕ್ಷಿಣದ
ಹೆಗಲಿ[3]ಗೇಱಿಸಿ[3] ಹರದ ಜಡೆಗಳ
ಜಗುಳದವೊಲೊಳಚಾಚಿ ಚಾಪವ
ತೆಗೆದು[4]ಕೊಳುತ[4]ಲೆವನೆಯ ಹೊಱವಂಟನು ರಘುಪ್ರಭವ ೫

ಕುಶನೆ ಕೇಳಂದಾ ಹಿರಣ್ಯಕ
ನಸಮದೈತ್ಯಕದಂಬದಲಿ ರೂ
ಹಿಸಿದ ನರಕೇಸರಿಯ ರೌದ್ರಾಟೋಪದಂದದಲಿ
ಮಸಗಿ ಮಾರ್ಬಲದಿದಿರಿನಲಿ [5]ಮೋ[5]
ಹಿಸಿದನೈ ಲವ ಕೇಳು ಹುಂಕೃತಿ
ಮಸಗೆ ಹೊಡಿದನಹಿ[6]ಪನೆದೆ[6] ನಿಱಿನಿಳಿಲೆನಲು ಧನುವ ೬

ಧನುವ ನೇವರಿಸಿದನು ಕೊಪ್ಪಿನ
ಕೊನೆಯನಾರೈದುಭಯದಲಿ ಸಿಂ
ಜನಿಯ ದನಿದೋಱಿ[7]ಸಿದನಬು[7]ಜಭವಾಂಡಘಟ ಬಿಱಿಯೆ
ವನಧಿಗಳು ತುಳುಕಾಡೆ ತಾರಕಿ
ತನಿಗೆದಱೆ ತಳ್ಳಂಕಗೊಳೆ ಮೇ
ದಿನಿ ಸುರಾಚಲವಲುಗೆ ಬೊಬ್ಬಿಱಿದುಬ್ಬಿದನು [8]ರಘುಜ[8] ೭

ಅಱಿದರಾ ತ್ರಿಶಿರಾದಿಗಳು ಮೂ
ಕೊಱತಿ ಹೇಳಿದ ಹಳ್ಳಿಕಾಱನ
ಕುಱುಹ ಕವಿಕವಿಯೆನುತ ಖೋ ಎಂದುಬ್ಬಿ ಬೊಬ್ಬಿಱಿದು

---

[1] ಗರಕೆ (ಕ.ಗ.ಝ.ಥ.ಣ), ಗರದ (ಜ.ಟ). [2] ಮಿಗೆ ಕಟಿಗೆ ಸಿಂಗರಿಸಿ (ಗ.ಝ.ಡ). [3] ಗಾನಿಸಿ (ಗ.ಝ.ಡ). [4] ಕೊಂಡೆ (ಕ.ಟ.ಣ). [5] ರೂ (ಗ.ಡ). [6] ತರೆದೆ (ಚ.ಡ), ತನೆದೆ (ಝ). [7] ಸಿದನೈ (ಕ.ಣ), ದನು ವನ (ಗ). [8] ರಾಮ (ಕ.ಚ.ಝ).

ಹಱೆಯ ಹೊಯ್ಲಿನಲಮರಗಿರಿ ತಱಿ
ತಱಿಸೆ [1]ತೂಳಿ[1]ದರಸ್ತ್ರಶಸ್ತ್ರದ
ಹೊಱಿಗೆಯಲಿ ಹೂಳಿವರು ಹೊಗಿಸಿದರಾನೆ ಕುದುರೆಗಳ ೮

ಸರಳ ಸರಿ ಶಲ್ಲೆಯದ ಮಳೆ ಮು
ದ್ಗರದ ವೃಷ್ಟಿ ಮುಸುಂಡಿ ಮುಸಲದ
ವರುಷಧಾರಾಸಾರ ಗದೆ ಸಿಡಿಲಂಬು ಶಕ್ತಿಗಳ
ಬಱುಬಿನಗ್ಗದ ಸೋನೆ ರಜನೀ
ಚರಬಳಾಹಕಪಟಲದಿಂದ
ಬ್ಬರಿಸಿ [2]ಸದೆ[2]ದುದು ರಾಮಸುಮನೋದ್ದಾಮ ಶಿಖರಿಯಲಿ ೯

ಬೀಸಿದುದು ಬಱುಗಾಳಿ ರಾಮಶ
ರಾಸನದ ಸರ[3]ಳೋ[3]ಟದಲಿ ಹೊಱ
[4]ಬೀಸಿ[4] ಬಿದ್ದವು ಬಿರುದಿನಸುರರ ಸಾಲುದಲೆ ನೆಲಕೆ
ಸೂಸಿ ಸಿಡಿದರುಣಾಂಬುವಿನಲಾ
ಕಾಶದಮರವಿಮಾನವರಳಿದ
ದಾಸಣದ ಧಾತುಗಳಲಿದ್ದವು ಕೂಡೆ ಗಗನದಲಿ ೧೦

ಬೀಳುವಾಯುಧವನು ನಿವಾರಿಪ
ಕೋಲದೊಂದು ಪದಾತಿ ಹಯ ಶುಂ
ಡಾಲ ರಥಕೊಂದೊಂದು ಮೇಲಾರ್ಕೈಕೆಗೊಂದಂಬು
ಕೇಳುವುದು ಮೂಡಿಗೆಯಲೊಂದಂ
ಬೂಳಿಗವನಚ್ಚರಿಯಲಾ ರಣ
ಕೇಳು ಸಾಯಕವಲ್ಲದಿಲ್ಲೆಸುಗೆಯಲಿ ರಘುಪತಿಯ ೧೧

ಕಾಣೆನಿದಿರಲಿ ಕವಿವ [5]ಕಾದುವ
ಕೌಣಪರ ಕೋಳಾಹಳಿಕೆಗಳ[5]
ಕಾಣೆನೈ ಕಣ್ಣಳತೆಯಲಿ ಕುಂಭಿನಿಯ ವಿವರಣಪ
ಕಾಣಿಸಿತು ಕರ್ಬುರರ ಕದ[6]ನದ
ಶೋಣಿ[6]ತಾಂಬುಧಿಯಗಲದಲಿ ಬಿಲು
ಜಾಣರೊಳಗಿನ್ನಾವ ವೀರನೊ ನಿಮ್ಮ ಪಿತನೆಂದ ೧೨

---

[1] ತೂಱಿ (ಚ.ಜ.ಣ). [2] ಸುಱಿ (ಗ.ಜ). [3] ಳಾ (ಗ.ಚ). [4] ಸೂಸಿ (ಗ.ಡ). [5] ಕೊಣಪರ ಕಾಣೆ ಕೋಳಾಹಳಿಕೆಗಳನಾ (ಕ.ಗ). [6] ನ ಶ್ರೋಣಿ (ಕ.ಗ.ಣ).

ಸೀಳಿ[1]ಬಿದ್ದಿದ್ದವು[1] ಮದೇಭಘ
ಟಾಳಿ ಘೋಟಕನಿಕರ ನೆಲದಲಿ
ಹೋಳುಗಳೆದಿರ್ದವು ಕಳಲ್ಚಿ ನಭೋಗ್ರದಲಿ ರಥ[2]ದ[2]
ಗಾಲಿ ತಿಬ್ಬನೆ ತಿರುಗುತಿರ್ದವು
ಕೋಲ ಮೊನೆಯಲಿ ಭೂತಗಣ ಕರ
ತಾಳದಲಿ ಕುಣಿದಾಡುತಿರ್ದವು ಪಾಡಿ ರಘುಪತಿಯ ೧೩

ಎಲೆಲೆ ಕಪಿ ಕಪಿ ಕೊಲ್ಲು ಕೊಲ್ಲಿಬು
ತಲೆಯ ಹೊಯ್[6] ಹೊಯ್[6] ಕಾಲ ಹಿಡಿದ
ಪ್ಪಳಿಸು ನರನೊಚ್ಚೈಸುವನು ಗಡ ರಕ್ಕಸರನೆನುತ
ಬಳಿಯ ರಕ್ಕಸರಧಿಕರೆಸುಗೆಯ
ಚಳಚಮತ್ಕೃತಿಯಿಂದ ದೂಷಣ
ಹಳಚಿದನು ಹರಿದಶ್ವಕುಲಸರಸಿರುಹಭಾಸ್ಕರನ ೧೪

ಉರವಣಿಸಿದರು ರಾಯರಾವುತ
ಕರದ ಖಡ್ಗದ ನೆಗಹಿನಲಿ ನಿಡು
ವರಿಯ ಗಜ ತೂಳಿದವು ತೋಳಿನ ಬಾಳ ಹೊಯ್ಲಿನಲಿ
ಹರಿಗೆ ಖಡ್ಗ ಕಠಾರಿ ಕುಂತದ
ಲಿಖಿತಕಾಟಿರು ಹೊಕ್ಕರನಿಬರ
ಕೊರಳೊಳಾಡಿದವಂಬು ಖಳಕುಲಕಾಲಭೈರವನ ೧೫

ರುಂಡ ಕುಣಿದವು ಕೂಡೆ ನಭದಲಿ
ಮುಂಡ ಹೊರಳಿದವವನಿಯಲಿ ಕಡಿ
ಕಂಡಮಯವಾಯ್ತು ಭರಥಾಶ್ವ[3]ಕದಂಬ[3] ನಿಮಿಷದಲಿ
ಕಂಡ ಮೈಯಲಿ ಕರುಳ ರಕುತದ
ಜೊಂಡೆಯ[4]ಲಿ[4] ಜರಿದೆಲುಗಳಲಿ ಜವ
ನುಂಡು ಕಾಱಿದ ನೆಲ[5]ನವೋಲು[5] ರಣಭೂಮಿ ರಂಜಿಸಿತು ೧೬

ಬಣಗುಮಾನವ ಕೇಳು ಕಲಿದೂ
ಷಣಕಣಾ ಬಂದವನು ಮೃತ್ಯುವಿ
ನಣಲಗಾಂತ ಶರೀರಿಗುಂಟೆ ಪುನರ್ಭವಾಭ್ಯುದಯ

---

[1] ಬಿದ್ದವು ಹಯ (ಕ.ಣ), ಬಿದ್ದವು ವರ (ಜ), ಬಿದ್ದವು ಕರಿ (ಟ), ಬಿದ್ದವು ಮದ (ಡ). [2] ವ (ಕ.ಝ.ಟ.ಡ.ಣ). [3] ಪದಾತಿ (ಕ.ಗ). [4] ದ (ಕ.ಜ.ಝ). [5] ನೆನಲು (ಕ), ದವ್ರೇಲು (ಝ.ಣ).

ತೃಣಕೆ ಕೊಂಬೆನೆ ದೇವದಾನವ
ಗಣವನಕಟ ವೃಥಾ ನಿಶಾಟರ
ಕೆಣಕಿ ಕೆಟ್ಟೆಯೆನುತ್ತ ಕವಿದೆಚ್ಚನು ಕಕುತ್ಸ್ಥಜನ ೧೭

ಎಚ್ಚ ಮಾರ್ಗಣಗಣವನೆಡೆಯಲಿ
ಕೊಚ್ಚಿದನು ಗಹಗಹಿಸುತೆಲವೋ
ಕೆಚ್ಚು ಕದಳಿಯೊಳುಳ್ಳಡದು ತಾ ಜಗಕೆ ಚಿತ್ರವಲ
ಉಚ್ಚಡಿರು ದೋರ್ವಳತಟಾಕದ
ಮುಚ್ಚುದೂಂಬನು ನಮ್ಮ ಮುಂದೆನು
ತೆಚ್ಚು ಗಗನಕೆ ದೂಟಿ[1]ಸಿದ[1] ದೂಷಣನ ಮಸ್ತಕವ ೧೮

ದೂಟೆ ಮಸ್ತಕವಭ್ರಕಿಟ್ಟುದು
ಕೂಟದಲಿ ಮುಸಲದಲಿ ಗದೆಯಲ
ಘಾಟಶಕ್ತಿಯಲೀಟಿಯಲಿ ಶೂಲದಲಿ ನೆತ್ತರಿನ
ಓಟಪರಿಯಂತರ ಕಬಂಧನಿ
ಶಾಟರಿಪುವನು ಸುರರು ಬೆಱಗಿಡೆ
ದಾಟಿತಲ್ಲಿಂ ಮೇಲೆ ಮೆಲ್ಲನೆ ಜೀವವಾ ಖಳನ ೧೯

ನೂಕಿದನು ಕೈಯೊಡನೆ ರಥವ ಸ
ಮಾಕಸಾಹಸಮಲ್ಲನಾ ನರ
ಲೋಕನಾಥನ ಸರಿಸದಲಿ ಸರಳೆಸುಗೆಯಲಿ ತ್ರಿಶಿರ
ಓಕರಿಸಿದುದೊ ಗಗನವಾಶಾ
ನೀಕ ಬೆಸಲಾದುದೊ ಲಯಾಗ್ನಿಕ
ಣಾಕಲಿತ ಮಾರ್ಗಣವನೆನೆ ಮುಸುಕಿದವು ಶರಜಾಲ ೨೦

ಅಸುರಹರನೇನಲ್ಪನೇ ಸಾ
ಹಸದರಿದ್ರನೆ ಸುರನರೇಂದ್ರರ
ಲಸಮನಯನನ ನೋಟಕಿದಿರೆ ಚರಾಚರದ ವಿಭವ
ವಿಷಮವಿಕ್ರಮ ವೀರರಾಮನ
ವಿಶಿಖಮುಖದಲಿ ಸಮರದಲಿ ಜೀ
ವಿಸುವ[2]ನಾರೈ[2] ತ್ರಿಶಿರಮಸ್ತಕವಡಱಿ[3]ದುದು[3] ನಭವ ೨೧

---

[1] ದನು (ಕ.ಗ.ಜ.ಝ). [2] ರಾರೈ (ಕ.ಜ.ಝ.ಣ). [3] ದವು (ಕ.ಗ).

ಏನ ಹೇಳುವೆನಮಮ ಹರ ಚತು
ರಾನನಾಖಂಡಲರನಱಿಸಿದ
ವಾ ನಿಶಾಟನ ಮೂಱುಮಸ್ತಕವಟ್ಟಿ ಸುರಬಲವ
ಆನೆಯಿಂದಿಳಿದೋಡಿದನು ಸುರ
ಸೇನೆಸಹಿತಮರೇಂದ್ರನಜಗೆ ಪ್ರ
ಯಾಣವಾದುದು ಕಾಣೆನಭ್ರದೊಳಾ ತ್ರಿಯಂಬಕನ ೨೨

ನೋಡಿ ಕಂಡನು ಸುರರ ಮುಱಿಗೆಡ
ದೋಡಿಕೆಯು ಕಳಕಳವನಸುರವಿ
ಭಾಡ ನಸುನಗುತುಗ್ರವೈಷ್ಣವಬಾಣವನು ಬೆಸಸೆ
ಝಾಡಿಗಿಡಿಗಳ ಝಳದ ದಳ್ಳುರಿ
[1]ಜೋ[1]ಡಣೆಯು ಜವಗತಿಯಲಮರರ
ಬೀಡಿಗಭಯವ ಕೊಡುತಲಡಗಿಸಿತಾ ಶಿರತ್ರಯವ ೨೩

ತನುಜ ಕೇಳಚ್ಚರಿಯನಾ ಸ್ಯಂ
ದನದ ಮೇಲಣ ಮುಂಡ ಬೊಬ್ಬೆಯ
ನಿನದ ತಪ್ಪಿಸಿ ತಪ್ಪದೆಸುತಿರ್ದುದು ಕಕುತ್ಸ್ಥಜನ
ನೆನಹದೆಂತುಟೊ ಸವೆಯೆ ಸರಳು
ಬ್ಬಿನಲಿ ಚಕ್ರ[2]ದಲಿಟ್ಟುದಿ[2]ಟ್ಟುದು
ಕನಲಿ ಕೈದುಗಳೆನಿತನಿತಱಿಲಿ ರಾಘವೇಶ್ವರನ ೨೪

ತೀರೆ ಕೈದುಗಳಿಳಿದು ಬೊಬ್ಬೆಯು
ತೋಱಿ ಕಡಿಗೊರಳಿನಲಿ ಕೋಪಿಸಿ
ತೇರಿನಗ್ರವ ಹಿಡಿದು ತಿರುಹಿಟ್ಟುದು ಕಬಂಧಕವು
ವೈರಿಯನು [3]ಬಳಿಕಾ ಕಬಂಧದ[3]
ಭಾರಿಭುಜವಿಕ್ರಮವನಾ ರಘು
ವೀರ ಕಂಡಚ್ಚರಿಯ ತಾಳ್ದನು ತೂಗಿ ಮಸ್ತಕವ ೨೫

ಲೇಸು ಲೇಸೆನುತದಱ ಸಮರವಿ
ಲಾಸವಿಭವಕೆ ಮೆಚ್ಚಿ ನಗುತ ಶ
ರಾಸನಾಗ್ರದಲಿಱಿಯೆ ಬಿದ್ದುದು ಧರಣಿಗಪ್ಪಳಿಸಿ

---

[1] ಝಾ (ಕ.ಗ.ಜ.ಣ). [2] ದಲಿಟ್ಟುರಿ (ಕ.ಣ), ದೊಳಿಟ್ಟುದಿ (ಚ).
[3] ಕೊಂಡಾಡಿ ಮಿಗೆ ಬಲು (ಟ), ಬಳಿಕಾ ಕದಂಬದ (ಡ).

ಸೂಸುವರುಣಾಂಬುವಿನ ಧಾರೆಯ
ಭಾಸುರದ ಹರಿಗೊರಳ ತೋಳಿನ
ಬೀಸಿಕೆಯ ಬಿಱುಸಿನಲಿ [1]ಹೊರಳಿತು[1] ಮುಂಡವಾ ಖಳನ ೨೬

ಧರಣಿಜಾಸುತ ಕೇಳು ತ್ರಿಶಿರನ
ಮರಣವನು ಕಾಣುತ ಜಗತ್ಸಂ
ಹರಣರುದ್ರನ [2]ಕುಪಿತ[2]ರೌದ್ರಾವೇಶ[3]ರೋಷ[3]ದಲಿ
ಖರನು ನೂಕಿದನದ್ರಿಸಾರದ
ವರವರೂಥವನೊಡನೆ ಕರಿರಥ
ತುರಗಕಾಲಾಳೇಱಿ ಮುಸುಕಿತು ಮನುಕುಲೇಶ್ವರನ ೨೭

ಆಸುರದ ಬೊಬ್ಬಾಟ ಹಯದುರು
ಹೇಷಿತಧ್ವನಿ [4]ಕರಿಯ[4] ಬೃಂಹಿತ
ಘೋಷ ರಥ[5]ವಾಜಿ[5]ಗಳ ಚೀತ್ಕೃತಿ ಭಟರ ಸಿಂಹರವ
ಆ ಸಮರವಾದ್ಯದ ಘಡಾವಣೆ
ಯಾಸುರದಿ ಬೆದಱಿಸಿತು ರಾಮನು
ವಾಸಿನಿಯ[6]ನ[6]ಳವಳಿದು ನುಡಿದಳು [7]ರಘುಜನನುಜಂಗೆ[7] ೨೮

ದೇವ ರಾಮನ [8]ರೌದ್ರರಣದಭಿ[8]
ರಾವ ಕರ್ಣಕೆ ಬೀಳದಿದೆ ಭುವ
ನಾವಳಿಯ ಗಬ್ಬರಿಸುತಿದೆ ಕರ್ಬುರರ ರಣರಭಸ
ಆವ [9]ಹವಣೋ[9] ಹರಣದಲಿ ಮ
ಜ್ಜೀವಿತೇಶನು ಕೇಳಿದೈಯೆಲೆ
ದೇವ [10]ನರದೇವೇಶನಿರವೆಂತೆಂ[10]ದಳಬುಜಾಕ್ಷಿ ೨೯

ತಂದೆ ಲಕ್ಷ್ಮಣದೇವ ನಡೆ ರಘು
ನಂದನನ [11]ಬೆಂಬಲಕೆ[11] ರಿಪುಗಳ
ಬಂದಿಯನು ಬಿಡಿಸಮಿತಮಾರ್ಗಣಗಣವನುಣಲಿಕ್ಕಿ
ತಂದೆ ಹೋಗೈ ತಳುವಮಾಡದಿ
ರೆಂದು [12]ಜಾನಕಿ ನುಡಿಯಲಾ[12] ಪೂ
ರ್ಣೇಂದುಮುಖಿಗೀ ಮಾತ [13]ನುಡಿ[13]ದನು ಮಾಗಧೀಸೂನು ೩೦

---

[1] ಬಿದ್ದುದು (ಚ.ಜ). [2] ಘೋರ (ಕ.ಜ.ಣ). [3] ದಂಡ (ಕ.ಜ.ಣ). [4] ಗಜದ (ಗ.ಟ.ಡ). [5] ರಾಜಿ (ಕ), ಚಕ್ರ (ಗ.ಟ). [6] ರ (ಚ.ಜ.ಟ). [7] ರಾಘವಾನುಜಗೆ (ಕ), ರಾಮನನುಜಂಗೆ (ಣ). [8] ಸಿಂಹಗರ್ಜಿತ (ಗ), ರೌದ್ರ ರವದಭಿ (ಚ.ಡ), ರೌದ್ರರಣರಸ (ಜ). [9] ಹದನೋ (ಕ.ಗ.ಟ.ಣ). [10] ನರದೇವೇಶ ನಿರವೇನೆಂ (ಚ.ಜ), ಲಕ್ಷ್ಮಣದೇವನಿರವೇನೆಂ (ಝ). [11] ಸಮ್ಮುಖಕೆ (ಗ.ಟ.ಡ). [12] ನುಡಿಯಲು ನಗುತಲಾ (ಕ.ಣ). [13] ನೆಂ (ಕ.ಜ.ಣ).

ಹಲಬರುಂಟೇ ರವಿಗಳಿಡಿಗ
ತ್ತಲೆಯ ಮೊತ್ತಕೆ ಘನಬಳಾಹಕ
ಬಳಗಕೆನಿಬರು ಮಾರುತರು ಮದವೇಱಿದಂಬುಧಿಯ
ಸಲಿಲದುಬ್ಬರಕೆನಿಬರೌರ್ವಾ
ನಳರು ಹೇಳೌ ತಾಯೆ ರಾಮನ
ಕಲಹಕಾ ಕ್ಕೈನೆರವೆ ಕಳಕಳವೇಕೆ ನಿಮಗೆಂದ ೩೧

ಬಿಜಯಮಾಡೀ ಕುಧರದಗ್ರದ
ಕುಜದ ನೆಳಲಿಗೆ ಕೋಟಿವೃಷಭ
ಧ್ವಜಪರಾಕ್ರಮ ಪೌರುಷನ ರಣ[1]ಪದವ[1] ತೋಱುವೆನು
ಭಜಿಸದಿರಿ ಭೀತಿಯನೆನುತ ಭೂ
ಮಿಜೆಯ ಭೂಧರದಗ್ರಕೇಱಿಸಿ
ವಿಜಯವಿಕ್ರಮ ವೀರರಾಮನ ರಣವ ನೋಡೆಂದ ೩೨

ಅದೆ ರಘುಕ್ಷಿತಿಪಾಲಕನ ಚಾ
ಪದ ಚಡಾಳ[2]ಧ್ವನಿಯ[2] ಚಿತ್ರೈ
ಸಿದಿರೆ ಮುಂದಿದೆ ಸಮರಭೈರವನುಗ್ರಸಿಂಹರವ
ಅದೆ ಶಿಖಾಳಿಯನುಗುಳ್ವ ಸರಳಿನ
ಹೊದಱ ಹೋರಟೆ [3]ನೋಡಿ[3] ಮೂರುತಿ
ಯದೆ ಜಗದ್ವ್ಯಾಪಕನ ನಿಲವಿನ ನಿಗರದವೊಲೆಂದ ೩೩

ಹರಿಯ ಬಿಡಿ ಲೋಚನವನಿದಿರಿನ
ಉರವಣಿಸು[4]ತಿದೆ[4] ರಾಮಬಾಹು
ಸ್ಫುರಿತ ವಿಕ್ರಮವಹ್ನಿವಿದ್ವಿಷವಿಪಿನವೀಥಿಯಲಿ
ಉರುಳುತವೆ ಗಜವರುಣಜಲದಲಿ
ಹೊರಳುತವೆ ಹಯವಸುರರಸುಗಳು
ತೆರಳು[5]ತವೆ[5] ತಾರಾಧ್ವದಲಿ ತರಳಾಕ್ಷಿ ನೋಡೆಂದ ೩೪

ಕುಣಿವು[6]ತಿವೆ[6] ರಣಭೂತ ರಾಮನ
ಕಣೆಯ [7]ಭೀಂ[7]ಕೃತಿರವಕೆ ನಭದಲಿ
[8]ಮ[8]ಣಿವು[9]ತಿವೆ[9] ಮೌಳಿಗಳು ರಾಮನ ಸಂಗರಕೆ ಸುರರ

---

[1] ರಸವ (ಗ.ಝ), ಪಥವ (ಣ). [2] ಧ್ವಾನ (ಕ.ಗ.ಣ). [3] ನೋಡು (ಕ.ಟ.ಡ.ಣ). [4] ತದೆ (ಗ.ಚ.ಣ). [5] ತಿವೆ (ಗ.ಜ.ಟ.ಡ). [6] ತವೆ (ಕ.ಜ.ಝ), ತದೆ (ಟ.ಣ). [7] ಝೀಂ (ಕ.ಜ.ಟ.ಣ). [8] ಕು (ಕ.ಚ.ಣ). [9] ತವೆ (ಕ.ಜ.ಝ), ತದೆ (ಟ.ಣ).

ಎಣಿಕೆಯಾತನೆ ರಾಮನೀ ಧಾ
ರುಣಿಯ ಭಾರವ ಭಂಜಿಸಲು ಕಾ
ರಣಿಕನಾದನು ಕಮಲನಾಭನು ಕಾಂತೆ ಕೇಳೆಂದ ೩೫

ಈ ಪರಿಯ ರಣರಸವನಾ ಸತಿ
ಗಾ ಪರಂತಪ ತೋರುತಿರಲಾ
ಟೋಪ ಮಸಗಿದುದಿತ್ತ ಸಂಗರವುಭಯ ವೀರರಿಗೆ
ಆ ಪುಲಸ್ತ್ಯಾನ್ವಯನ ಚಾಪಕ
ಲಾಪಶರವೀಡಿಱಿದು ಮುಸುಕಿದ
ವೀ ಪತಂಗಾನ್ವಯ ಶಿರೋಮಂಡನನ ಮಳೆಯುದಲಿ ೩೬

ಮುಸುಕಿದರಿಶರಜಾಲವನು ಖಂ
ಡಿಸಿ ರಘುಕ್ಷಿತಿನಾಥ ಮೂಗು
ಬ್ಬಸವಮಾಡಿದನೆಸುಗೆಯಲಿ ಬಳಿಕಾ ನಿಶಾಟಂಗೆ
ವಿಶಿಖಹತಿಯಲಿ ನೊಂದು ಹಲುಮೊರೆ
ದಸುರನುಗಿದನು ಬತ್ತಳಿಕೆಯಿಂ
ದಸಮನಯನಕಳಂಬವನು ಕಳವಳಿಸೆ ಸುರನಿಕರ ೩೭

ಈ ಸುಭಟನುದ್ದಂಡಬಿಲ್ಲಿಂ
ದೈಸಲೇ ತಪ್ಪೇನೆನುತ್ತ ಮ
ಹೇಶದತ್ತ ಕಳಂಬವನು ಕಾರ್ಮುಕಕೆ ನೆಲೆಗೊಳಿಸಿ
ಆ ಸಮಸ್ತನೃಪಾಲಮಧ್ಯದ
ಲೀಶಚಾಪವ [1]ಮುಱಿದ[1] ವೈರದ
ವಾಸಿ [2]ನಿನಗಿನ್ನ[2]ಱಿಯಬಹುದೆನುತೆಚ್ಚು ಬೊಬ್ಬಿಱಿದ ೩೮

ಅದು ಮಹೇಶ್ವರಮಾರ್ಗಣವದೆಂ
ದದ[3]ನ[3]ನೊಮ್ಮೆಗೆ ಮನ್ನಿಸುತ ಚಾ
ಚಿದನು ಚಟುಳಚಡಾಳಚಾಪವನಾ ಚರಾಚರದ
ಹೃದಯದಂತರಿಯಾಮಿ ಸರಳೆ
ತ್ತಿದುದು ಬಳಿ[4]ಕರ್ಥವನು ಕೊಂಡೊ
ಯ್ದುದುಱಿಸಿತು ಸೀತಾಸುಮಿತ್ರಾಸುತರ[4] ಸರಿಸದಲಿ ೩೯

---

[1] ಗೆಲಿದ (ಗ.ಝ.ಡ.ಣ). [2] ನಿನಗಿಂದ (ಕ.ಜ.ಣ), ನಿನ್ನಿಂದ (ಗ). [3] ಟ (ಜ.ಝ.ಟ). [4] ಕೀ ಕೋದಂಡವನು ತ್ರಿದಶರಾಯನೆ ನಿರಿಸಿದನು ಲಕ್ಷ್ಮಣನ (ಕ), ಕರ್ಥವನು ಕೊಂಡೊಯ್ದುರಿಸಿದುದು ಸೀತಾ ಸುಮಿತ್ರಾಸುತರ (ಚ).

ಆಯೆನುತ ಮುಕ್ಕುಱುಕಿತಸುರನಿ
ಕಾಯ ನಿಶಿತಮಹೋಗ್ರತರ ನಿಖಿ
ಳಾಯುಧದ ಭಟರೌಕಿದರು ಗಜರಥತುರಂಗಮವ
ಬಾಯ ಬಿಟ್ಟುದು ಗಗನದಲಿ ರಘು
ರಾಯಗಾದುದೆ ರಣದುರಂಧರ
ದಾಯತಿಕೆಗವಸಾನ [1]ಹಾಯೆನುತ[1]ಖಿಳಸುರನಿಕರ ೪೦

ಬಳಿಕಲೇ[2]ವೊಗ[2]ಳುವೆನು ಕಂಚುಕಿ
ಗಳದ ಕಾಳೋರಗನ ಖಾತಿಯು
ಕಳಕಳಿಕೆ ಮಿಗಲುಗಿದನೊಱೆಯಿಂದುಗ್ರಖಂಡೆಯವ
ಕಳಲಿ ರಣದಲಿ ಕೆಡೆದ ರಕ್ಕಸ
ವಲಗೆಯಿರಲದ ಕೊಂಡು ಮುಂಗೈ
ಗೊಳಿಸಿ ಯಜ್ಞದ ವೀರಭದ್ರನ ರಣಕೆ ಗುರುವಾದ ೪೧

ಅಟ್ಟಿ ಹೊಯ್ದನು ಹೊಗುವ ತೇರಿನ
ಥಟ್ಟ ತೂಳುವ ತೋಳಿನಾನೆಯ
ಮೆಟ್ಟಿದನು ತಱಿದೊಟ್ಟಿದನು ತೇಜಿಗಳ ತಿಂತಿಣಿಯ
ಅಟ್ಟಿ ಕುಣಿಯಲು ಕುಬುಬಿಱಿದು ತಲೆ
ಯೊಟ್ಟಿಲನು [3]ತೂ[3]ಱಿದನು ಕಾಲಗೆ
ಕಟ್ಟುಱಿವೆಯಾಯ್ತೆನಲು ಕಡಿದಿಕ್ಕಿದನು ಖಳಬಲವ ೪೨

ಮತ್ತೆ ಮುಸುಕುವ ಕರಿಯ ಶಿರದಲಿ
ಮುತ್ತುಗಳ ಮಿಾಟಿದನು ಮಾವುತ
ರುತ್ತಮಾಂಗಕೆ ಹರಿವ ಕಂಡನು ಹಯದ ರಾವುತರ
ಎತ್ತಿಸಿದನಸು[4]ಗಳನು[4] ರಥಿಕರ
ಹತ್ತಿಸಿದನಂಬರವ ಭೀತರ
ಹುತ್ತ[5]ನೇ[5]ಱಿಸಿ ಹೊಳಕಿದನು ಹೊಳಹೊಳವ ಖಡುಗದಲಿ ೪೩

ನೀರೊಳೆಳೆದಸಿಯಂತೆ ಖಡುಗದ
ಧಾರೆ ಚತುರಂಗದಲಿ ವಿಹರಿಸಿ
ತಾರನುಪಮಿಸುವೆನು ಸುರಾಸುರನರಭುಜಂಗರಲಿ

---

[1] ವಕಟೆನುತ (ಕ), ಹಾಯೆಂದ (ಚ.ಣ). [2] ವೇ (ಕ.ಜ.ಟ). [3] ತೋ (ಕ.ಜ.ಝ.ಟ.ಡ.ಣ). [4] ರರಲ (ಚ.ಜ). [5] ವೇ (ಗ.ಜ.ಝ.ಟ.ಡ).

ವೀರರಾಮಗೆ ರಾಮನೇ ಪ್ರತಿ
ವೀರ ಕೇಳ್ಕೈ ಮುಗಿಲುಗಂಡ ಮ
ಯೂರನವೊಲುಬ್ಬಿದನು ಸಂಗರರಂಗಮಧ್ಯದಲಿ ೪೪

ಪುಟನೆಗೆದು [1]ತೆಗೆ[1]ದೆಸುವ ಖರನು
ಬ್ಬಟೆಯ ತೇರಿನ ತೇಜಿಗಳನಾ
ರ್ಭಟಿಸಿ ನೂಕುವ ಸಾರಥಿಯನಾ ಧ್ವಜಪತಾಕೆಗಳ
ಲಟಕಟಿಸಿ ಲಳಿಯೇಱು ತಱಿದು
ತ್ಕಟವ ತೋಱಿದನಂತಕನ ಬೆಳೆ
ಗಟಮಟವು ಫಲಿಸುವುದೆ ದೈವದಲಣುಗ ಕೇಳೆಂದ ೪೫

ಅಡಱಿದನು ಹೊಸರಥವನವನದ
ನುಡಿದುಹಾಯ್ಕಿದನೀತನಾ ಖಳ
ಪಡಿರಥಕೆ [2]ಧುಮ್ಮಿಕ್ಕಲದ ತಱಿದನು ಕೃಪಾಣದಲಿ[2]
ಬಿಡದೆ ನೂರೆಂಭತ್ತು ಪರಿಯಂ
ತಡಸಿ ಸಾರಥಿಸಹಿತ ರಥವಂ
ಗಡವ ವಿಂಗಡಿಸಿದನು ಸಂಗರರಂಗ ಮಧ್ಯದಲಿ ೪೬

ಏನಿದಚ್ಚರಿ [3]ಧನುಶಕಲವಿದು[3]
ಭಾನುಕುಲಜನದಾಗದಿರದಿದ
ನೀನು ಕಂಡ್ಯೈಯುಪಜಯುವನುಪಕರಿಸದಲೆ ಪತಿಗೆ
ಆ ನಿಭೃತಕೋದಂಡಚಂಡ
ಧ್ವಾನ[4]ವಿಲ್ಲಕಟ[4]ಕಟ ನೀನಿದ
ಕೇನುಪಾಯವ ಕಂಡೆಯೆಂದಳು ಸೀತೆ ಮೈದುನನ ೪೭

ಐಸಲೇ ಚಿತ್ತೈಸಿ ಚಿತ್ರಕ
ಳಾಸವನು ನೀವೆನುತ ಲಕ್ಷ್ಮಣ
ನಾ ಸುರೇಶ್ವರದತ್ತವಜ್ರಾವರ್ತಕಾರ್ಮುಕವ
ಭಾಸುರಾಸ್ತ್ರಮುಖಾಗ್ರದಲಿ ಮೇ
ಳೈಸಿ ಮಿಗೆ ಬೋಳೈಸಿ ಸಂಗರ
ಸಾಸಿಗ[5]ನ[5] ಬಲ್ಲಹನ ಬಳಿಗೈದೆಂದು ಬೀಳ್ಕೊಟ್ಟ ೪೮

---

[1] ಕವಿ (ಕ), ಮುರಿ (ಚ), ಕುಣಿ (ಝ.ಟ.ಡ). [2] ಧುಮ್ಮಿಕ್ಕಿದನು ತಱಿದನು ಕೃಪಾಣದಲಿ (ಕ), ಕಾಲಿಕ್ಕಿ ಕಱಿದನು ಮತ್ತೆ ಮಾರ್ಗಣವ (ಗ.ಝ.ಡ). [3] ಕಡಿದ ಬಿಲ್ಲಿದು (ಕ), ಧನುಸು ಕಡಿದುದು (ಗ). [4] ವೀಗಿಲ್ಲ (ಕ.ಗ.ಟ), ವಿನಿತಿಲ್ಲ (ಝ.ಡ.ಣ). [5] ರ (ಕ.ಗ.ಝ.ಡ).

[1]ಹಾ[1]ಯೆನುತ ಹರಿ ವರುಣ ಶಂಕರ
ವಾಯು ವಿತ್ತಪ ನಿರುತ ಶಿಖಿ ಯಮ
ರಾಯುಧದ ನಿರ್ಗಮಕೆ ಲಘುಸಂಧಾನ ಕೌಶಲಕೆ
ರಾಯರಾಘವ [2]ನಿಗಮಜಸ[2] ರಘು
ರಾಯ ಮಂದರಕೂರ್ಮರಾಘವ
ರಾಯ ಧರಣಿವರಾಹಯೆಂದುದು ಕೂಡೆ ಲಕ್ಷ್ಮಣನ ೪೯

ಸಿಡಿಲಮಱಿ [3]ತಾ ಕಾರ್ಮುಕ[3]ದೊಳು
ಗ್ಘಡಿಸುವಂತಿರೆ ಘಣಘಣತ್ಕೃತಿ
ಜಡಿಯೆ ಜಾಡಿಯ [4]ಜೋಡಣೆಯ[4] ಬೊಂಬಾಳಚೌರಿ[5]ಗಳ್
ಹೊಡಕರಿಸಿ [6]ಹೊಯ್ದೇಳ್ವ[6] ಮಿಂಚಿನ
ಕುಡಿವೆಳಗು ದೆಸೆದೆಸೆಗೆ ಪಸರಿಸು
ತಡಸಿ ಬಂದುದು ಚಾಪವಾ ರಘುಭೂಪನಿದ್ದೆಡೆಗೆ ೫೦

ಅಱಿದನಾ ಶತ್ರುಘ್ನನಗ್ರಜ
ನಱುಹಿದೆಂಬುದನಾ ಕೃಪಾಣವ
ನೊಱೆಗೊಳಿಸಿ ರಘುನಾಥ ಕೈಯಿಕ್ಕಿದನು ಕಾರ್ಮುಕಕೆ
ತೆಱವೆಯಾದುದು ಭೀತಿ ಬಲುಜೊ
ಬ್ಬಿಱಿತಕಸುರನ ಧೈರ್ಯ ಕಾಲನ
ಮಱೆಯಹೊಕ್ಕುದು ಹೊರಳಿಯೊಡೆದುದು ಮಿಕ್ಕ ರಕ್ಕಸರ ೫೧

ಮರುಳಲಾ ನೀನೆಲವೊ ಖಳ ಮೂ
[7]ಗಱಿಕಿ[7]ಗಾದಭಿಮಾನಭಂಗಕೆ
ಧುರವನೆಸಗುವನಪ್ರಬುದ್ಧನೊ ಮೇಣ್ ವಿಚಕ್ಷಣನೊ
ಶರಣುವೊಗು ಪಿತನಾಣೆ ಕಾವೆನು
ಹರಣವನು ಕೆಡಬೇಡ ಕಾಲಗೆ
ಕರುಣವಿಲ್ಲ ವೃಥಾ ವಿರೋಧಿಸಿ ಸಾಯಬೇಡೆಂದ ೫೨

ನಿನ್ನವೊಲು ಬಲುಬಾಹುಸಾಹಸ
ರಿನ್ನು ಜನಿಸರು ಜಗದೊಳಾಜಿಯ
ನಿನ್ನು ಕೊಂಡೆಸಗಿದರೆ ಮೂಡದು ಮೂಗು ಮಾನಿನಿಗೆ

---

[1] ಆ (ಗ.ಜ.ಝ.ಟ.ಡ.ಣ). [2] ನೀಗ ಮಝ (ಚ.ಜ.ಟ). ನಿರ್ಗಮನೆ (ಣ). [3] ಕಾರ್ಮುಕ ಮುಖ (ಚ.ಣ). [4] ಜೋಡಿಗಳ (ಗ.ಝ.ಡ). [5] ಯಲಿ (ಕ.ಗ.ಟ.ಣ). [6] ಹೊಳದೇಳ್ವ (ಕ.ಜ), ಹೊಡದೇಳ್ವ (ಟ). [7] ಗೊಱತಿ (ಕ.ಟ.ಣ).

ಹೊನ್ನಬಾಣವನೆಚ್ಚು ಕೆಡಿಸದಿ
ರೆನ್ನ ಮಾತನು ಕೇಳು [1]ಮಾತಿದು[1]
ನಿನ್ನ ಚಿತ್ತಕೆ ಬಾರದಿರೆ ಕಲಿಯಾಗು ಬೇಗೆಂದ ೫೩

ರಾಮು [2]ಕೇಳ್ಕೈ[2] ಕೊಂಡಚಲಪದ
ಕಾಮಿತವ ಬಿಡಲೇನು ತನುವಿದು
ತಾಮರಸಬಾಂಧವನ ಬಾಳಿಕೆಗಕಟ ಶಾಶ್ವತವೆ
ಈ ಮರುಳುತನವೇಕೆ ಬಲ ನಿ
ರ್ನಾಮವಾಯ್ತೆಂದುಬ್ಬಿ ವಚಿಸುವ
ಕೈಮೆಗಿದಕೋಯೆನುತ ಕವಿದೆಚ್ಚನು ಕಕುತ್ಸ್ಥಜನ ೫೪

ಎಚ್ಚ ಬಾಣವ ತಱಿದು ತೊಡಚಿದ
[3]ನುಚ್ಚ ತೋಮರದಂ[3]ಬನಮರರೊ
ಳೆಚ್ಚಶೌರ್ಯನನಱಿಸಿ ಕಾಲನ ಕರೆದು ನೆಲೆಗೊಳಿಸಿ
ಚುಚ್ಚುಗೊಂಡೆಯುದದಟಮುನಿ ಜಡೆ
ವಿಚ್ಚಿ ನರ್ತಿಸೆ ರಾಮು ಕುಬುಬಿಱಿ
ದೆಚ್ಚು ಕಡಿದನು ಶಿರವ ಸರಳಿನಲಾ ಖರಾಸುರನ ೫೫

ನೆಗಹಿಕೊಂಡವು ಭೂತ ಬೀಳುವ
ವಿಗಡರಕ್ಕಸದಲೆಯ [4]ಮುಂಡದೊ[4]
ಳೊಗುವ ರಕುತಕೆ ಬಾಯನೊಡ್ಡಿತು ಶಾಕಿನೀನಿವಹ
ಅಗಿದು [5]ನಲಿನಲಿದಳಿದ[5] ಹೆಣಗಳ
[6]ಬಿ[6]ಗಿದುಕೊಂಡವು ಚಂಡಿ ಚಾಮುಂ
ಡಿಗಳು ಚಪ್ಪರಿಸಿದವು ಭೇರಿಗಳಮರಕಟಕದಲಿ ೫೬

ರಣಕೆ ನಮಿಸಿ ಸಮಸ್ತಶಾಕಿನಿ
ಗಣಕೆ ಬೆಸಸಿ ಮಹೋಗ್ರಚಾಪದ
ಗುಣವ ಸಡಿಲಿಸಿ ಬಸಿವ ಮೈವಸೆಗಳನು ಬಳಿ[7]ದಿಕ್ಕಿ[7]
ಪ್ರಣುತಸುರಮುನಿ[8]ಜನದ[8] ಜಯಜಯ
ರಣಿತರವದುಬ್ಬಿನಲಿ ರಕ್ಕಸ
ರಣಭಯಂಕರನೈದಿದನು ನಿಜಪರ್ಣಮಂದಿರವ ೫೭

---

[1] ತಾನಿದು (ಕ.ಜ.ಟ.ಣ). [2] ಕೇಳ್ ಕೈ (ಗ.ಜ.ಝ.ಟ). [3] ನುಚ್ಚು ಮೂಡಿಗೆ ಯಂ (ಕ.ಟ.ಣ), ನುಚ್ಚಿ ಮೂಡಿಗೆಯಂ (ಜ.ಝ). [4] ನಟ್ಟೆಯೊ (ಕ.ಜ.ಝ.ಣ). ನೆಗನೆಗದುಗಿವ (ಕ.ಣ), ನಲಿನಲಿದಿಳಿದು (ಗ). [6] ಬ (ಕ.ಜ.ಝ.ಟ.ಣ). ಬಳಿದು (ಕ), ದಿಡುಕಿ (ಗ.ಜ.ಣ). [8] ಗಣದ (ಗ.ಝ.ಟ.ಡ).

ಸುಳಿದವಾರತಿಯುಮರಿಯರ ಹೊಂ
ದಳಿಗೆಗಳ ದೀಪಗಳ ಮುಕ್ತಾ
ಫಲದ ಸೇಸಾಕ್ಷತೆಯು ಮಳೆ ಸಿರಿಮುಡಿಯು ಸರಿಸದಲಿ
ಹೊಳಕಿದುದು ಬಳಿಕಿತ್ತಲೀ ಮೈ
ಥಿಳಿಯ ಕರಕರದಂಡದಾರತಿ
ಬಳುವೆಗಳ ಹರಕೆಗಳಲೊಳಹೊಕ್ಕನು [1]ದಳಾ[1]ಲಯವ ೫೮

———

[1] ನಿಜಾ (ಕ.ಜ.ಣ).

# ಏಳನೆಯ ಸಂಧಿ

ಸೂಚನೆ : ಭಾನುಕುಲನಿಂದಾದ ಭಂಗದ
ಮಾನಿನಿಯ ಮತವಿಡಿದು ಕುಮತಿ ದ
ಶಾನನನು ಮಾರೀಚರಾಕ್ಷಸನೆಡೆಗೆ ನಡೆತಂದ

ಕೇಳಿದೈ ಕುಶ ನಿಮ್ಮ ರಘುಭೂ
ಪಾಲಕನು ರಿಪುವಿಜಯವಿಭವದ
ಲೀಲೆಯಲಿ ನಿಜಪರ್ಣಭವನಕೆ ಬರಲು ಬಳಿಕಿತ್ತ
ಕಾಲಗಂಡಗ್ರಜ[1]ನ[1] ಕಾಯುದ
ಮೇಲೆ ಹೊರಳಿದು [2]ಪು[2]ದಿದ ಶೋಕದ
ಸೂಳಿನಲಿ ಸಾರಿದಳು ಲಂಕಾಪುರವ ಶೂರ್ಪಣಖಿ ೧

ಲವನೆ ಕೇಳ್ ಸುರನರಭುಜಂಗಮ
ಭುವನದಲ್ಲಣ ದಶವದನನು
ತ್ಸವದಿನೊಡ್ಡೋಲಗದೊಳಿದ್ದನು ಬಹಳವಿಭವದಲಿ
ಪವನ ಶಿಖಿ ಯಮ ನಿರುತಿ [3]ಹರಿ[3] ವೈ
ಶ್ರವಣ ವರುಣಾದಿಗಳು ಬೆಸನೇ
ನೆವಗೆತಮಗೆನುತಿರ್ದ[4]ರಿದ್ದೆಸೆಯಲಿ[4] ದಶಾನನನ ೨

ತುಡುಕಿ [5]ತರಣಿಯನಗಿವ[5] ರಾಹುವಿ
ನೆಡಬಲದ ಕಟವಾಯಲೊಸರುವ
ನಿಡಿಯ ರಸವೆನಲೆಸೆವ ದಾಡೆಯ ಹುರಿಯ ಹುಬ್ಬುಗಳ
ಇಡಿದ ಹೊಗರಿನ ಜವ್ವನದ ಕ
ಪ್ಪಿಡಿದ ಕಾಯದ ಸುಪ್ರತಾಪದ
ಸಡಗರದ ಸಾಹಸದ ರಕ್ಕಸರಾಯನೆಸೆದಿರ್ದ ೩

---

[1] ರ (ಚ). [2] ಹು (ಕ.ಜ.ಟ.ಡ.ಣ). [3] ಹರ (ಚ.ಣ). [4] ರೆಡಬಲದಲಿ (ಚ.ಜ.ಝ.ಣ). [5] ಚಂದ್ರನನಗಿವ (ಕ.ಜ), ತರಣಿಯನುಗುಳ್ವ (ಗ).

ತಮನ ಜಂಭನ [1]ಬಲನ ಕೈಟಭ[1]
ನಮುಚಿಯಂಧಾಸುರನ ಘನವಿ
ಕ್ರಮಸುಬಾಹು ಸುಪಾರ್ಶ್ವ ಸಾರಣ ಶೋಣಿತಾಂಬಕ[2]ರು[2]
ಕಮಲಜನ ಮಾಹೇಶ ಶಕ್ರರ
ಸಮರದೊಳಗೊಳವಾಲವಿಕ್ಕಿಸಿ
ದಮರವಿಜಯಿಗಳಿರ್ದ[3]ರೆಡಬಲದಲಿ[3] ದಶಾನನನ ೪

ಸಿಡಿಲು ಹೊಡೆದುಚ್ಚಳಿಸಿದುರದು
ಗ್ಗಡದ ಗಾಯದ ಘನಮದದ್ವಿಪ
ತುಡುಕಿ ತಿವಿದೇಱುಗಳ ಡೋಱುಗಳಮರರಾಯುಧದ
ಪಡಿಮುಖದ ಹಳಿಗಲೆಯ ಕರುಳ್ಗಳ
ನಡಸಿ ಬಸುಱಲಿ ಹೊಲಿದ ಹೊಲಿಗೆಯ
ದಡಿಗರಕ್ಕಸರಾಯರಿದ್ದುದು ಕೋಟಿಸಂಖ್ಯೆಯಲಿ ೫

ಕಲಹದಲಿ ಮೃತ್ಯುವಿನ ಗಂಟಲಿ
ಗಲಗಹೂಡಿದ ಲಯಕೃತಾಂತನ
ತಲೆಯನರೆಯರೆಗೊಯ್ದು ಕಡುಹಿನ ಕಾಲಭೈರವನ
ಹಲುಗಳೆದ ಹರಿಯಿಟ್ಟ ಚಕ್ರದ
ಲುಳಿಗೆ ಪಲ್ಲಟವಾಗಿ ಹತ್ತಿದ
ತಲೆಯ [4]ತಾಮಸರಿದ್ದುದದ್ಭುತ[4]ರೌದ್ರರೂಪಿನಲಿ ೬

ಹರಿಯ ಚಕ್ರವನಾ ಪಿನಾಕಿಯ
ವರಪಿನಾಕವನಮರಚಕ್ರೇ
ಶ್ವರನ [5]ಕುಲಿಶ[5]ವನಾ ಚತುರ್ಮುಖನುರುಸಿಳೀಮುಖವ
ವರುಣ ವಾಯು ಕುಬೇರ ರಜನೀ
ಚರ ಯಮಾದಿಗಳಸ್ತ್ರಶಸ್ತ್ರೋ
ತ್ಕರವ ಸೆಳೆದ ಸಮರ್ಥರಿದ್ದುದು ಮುಂದೆ ರಾವಣನ ೭

ಇದಿರಡರ್ದ ರೋಮಗಳ ಕೆಂಪುಗ
[6]ಳೊದವ[6] ಕಂಗಳ ಕಲಿತ ಕರ್ಕಶ
ವದನಗಳ ಕೆಮ್ಮೀಸೆಗಳ ಕುಡಿಯಿಡುವ ದಾಡೆಗಳ

---

[1] ಕೈಟಭನ ಬಲ (ಕ.ಝ.ಟ.ಣ). [2] ರ (ಕ.ಜ.ಡ.ಣ). [3] ರಿದ್ದೆಸೆಯಲಿ (ಗ.ಚ.ಡ). [4] ರಕ್ಕಸರಾಯರಿರ್ದುದು (ಗ), ತಾಮಸರಿರ್ದುದನುಪಮ (ಜ.ಝ) [5] ಚಾಪ (ಗ.ಟ.ಣ). [6] ಳುದಿತ (ಚ.ಜ).

ಕೆದಱುದಲೆಗಳ ತೋ[1]ರ[1]ಭಾರದ
ಮದದ ಮೈಯುಬ್ಬುಗಳ ಭಯರಸ
ದದುಭುತದ ಖಳರಿ[2]ದ್ದುದಿ[2]ದಿರಿನಲಾ ದಶಾನನನ ೮

ಶುಕ ಮಹೋದರ ವೀರದೇವಾಂ
ತಕ ನರಾಂತಕ ಕುಂಭ [3]ಯೂಪಾಂ[3]
ಬಕ ನಿಕುಂಭ ತ್ರಿಶಿರ ಯುದ್ಧೋನ್ಮತ್ತನತಿಕಾಯ
ಮಕರಲೋಚನ ಕಲಿ[4]ಮಹಾ[4]ಪಾ
[5]ರ್ಶ್ವಕ[5] ಸುಮಾಲಿ ಸುರೇಂದ್ರಜಿತು
ವಕ್ಷಕ ವಿರೂಪಾಕ್ಷಾದಿ [6]ರಕ್ಕಸರಿ[6]ದ್ದುದಪರಿಮಿತ ೯

ವೀರವಿದ್ಯುಜ್ಜಿಹ್ವ ದುರ್ಮದ
ಸಾರಣಾಸುರ ಶೋಣಿತಾಕ್ಷ ಕ
ಠೋರಬಲ ಧೂಮ್ರಾಕ್ಷ ವಿದ್ಯುನ್ಮಾಲಿ ಶಾರ್ದೂಲ
ಘೋರತರದುರ್ದರುಶನಾದಿ ಕು
ಮಾರಕರು ಸಚಿವರು ಸಮಸ್ತ ವಿ
ಶಾರದಾಹವಮಲ್ಲರಿ[7]ದ್ದುದು[7] ಮುಂದೆ ರಾವಣನ ೧೦

ಮಣಿದ ಮೌಳಿಯ ಭಯಭರಿತ ಭಾ
ರಣಿಯ ಹರಿ ಶಿಖಿ ಯಮ ನಿಶಾಟಾ
ಗ್ರಣಿ ಮಹೋದಧಿನಾಥ ವಾಯು ಕುಬೇರ ಮೊದಲಾದ
ಗಣನೆಯಿಲ್ಲದ ದೇವಗಣ ಸಂ
ದಣಿಯಲಿರ್ದುದು ಜೀಯ ಬಾಳೆಂ
ದಣಕುಗಳ ಮೈಮಱೆಯಲಪರಾಂಗದಲಿ ರಾವಣನ ೧೧

ಅಣುಗ ಕೇಳಾ ಸಮಯದಲಿ ನೆಱೆ
ಹಣಿದ ಮೂಗಿನ ಹಱಿದ ತುಟಿಗಳ
ಜುಣುಗುಗಿಪಿಗಳ ಜುರಿತ ಹುಣ್ಣಿನ ಕೊಱೆದ ಕದಪುಗಳ
ವ್ರಣದ ದುರ್ಗಂಧದ ಮಹಾಭೀ
ಷಣದ ರಕ್ಕಸಿ ಬಂದಳಾ ರಾ
ವಣನ ರಚಿತಸಭಾಂತರಾಳಕೆ ಮೃತ್ಯುರೂ[8]ಪಿನಲಿ[8] ೧೨

---

[1] ಳ (ಜ.ಝ.ಟ.ಪ). [2] ರ್ದರಿ (ಗ), ರ್ದುದಿ (ಚ). [3] ಘೋರಾಂ (ಕ.ಟ), ಘೂಕಾಂ (ಡ). [4] ವಿರೂ (ಕ.ಟ.ಡ). [5] ಕ್ಷಕ (ಕ.ಟ.ಡ). [6] ಭಟರುಗಳಿ (ಚ). [7] ರ್ದರು (ಗ), ರ್ದುದು (ಚ). [8] ಪದಲಿ (ಕ.ಗ.ಡ.ಣ).

ಇದುವೆ ಕಡುವೆಱಗೆನುತಲಾ ದಶ
ವದನ ಕದಪಿನ ಕೈಯಲಾ[1]ಬೆಯು[1]
ವದನವನು ನೋಡಿದನು ನೋಡಿದುದಖಿಳ[2]ಖಳನಿಕರ[2]
[3]ನದುಳು[3]ನಗೆಗಳ ಮೊಗದ ಮುರುಹಿನ
ವದನದರೆಮುಸುಕುಗಳಲಿದ್ದುದು
ಹೃದಯದಲಿ ಹೊಗೆ[4]ದೆ[4]ದ್ದುದುರಿ ಬಳಿಕಾ ದಶಾನನನ ೧೩

ಅಳಿವೆನೋ ಹದಿನಾಲ್ಕುಲೋಕವ
ಹಿಳಿವೆನೋ ಹರಿಯಜಭವಾದ್ಯರ
[5]ತಳಿವೆನೋ[5] ಬಾಹುಪ್ರತಾಪಾನಲನ ಬಲುಗಿಡಿಯ
ಉಳಿದಡಱಿಯಲುಬಹುದು ತಂಗಿಯ
ಬಳಲಿಸಿದ ಬಲುವೀರನೆನುತುರಿ
ಗೊಳುವ [6]ಕಡುಗೋಪದಲಿ[6] ಕಿಡಿಕಿಡಿಯೋದನಸುರೇಂದ್ರ ೧೪

ಝಳಪಿಸುತ ಹಿಮಕಿರಣಹಾಸವ
ನಿಳಿದನಾಸನದಿಂದ ವ್ಯೌಳಿಗ
ಳೊಲಹಿನಲಿ ಬೀಳ್ಕೊಟ್ಟ[7]ನಸುರಾಮರ[7] ಕದಂಬಕವ
ಹೊಳಕುವಂತಸ್ಥಾಪದಲಿ ಮೂ
ಗಳಿದ ರಕ್ಕಸಿಸಹಿತ ತನ್ನೊಳ
ನಿಳಯವನು ಹೊಕ್ಕನುಜೆಯನು ಬೆಸಗೊಂಡನಸುರೇಂದ್ರ ೧೫

ಏನಿದೇನೀ ಮಾನಭಂಗ [8]ವ[8]
ಧಾನವಾರಿಂದಾಯ್ತು ಹೇಳಭಿ
ಮಾನಗತವಿದು [9]ನಮ್ಮ[9]ದೈಸಲೆ ಹೇಳು [10]ಬೇಗೆನಲು[10]
ಹಾನಿ ತನ್ನಿಂ ತನಗೆ ಬಂದುದ
ನೇನುವನು ಪಸರಿಸದೆ ತನ್ನನು
ಮಾನವಾರ್ಗದ ಮತ[11]ವನೇ ಬಲಿದೆಂದಳೀ ಹದನ[11] ೧೬

ವಾಸಿ ತೋಱಿತು ಮನಕೆ ಜನಕಮ
ಹೀಶಸುತೆ ನಿನಗಂದು ಭವಬಾ
ಣಾಸನದ ಭಾರಣೆಯ ಬಿಗುಹಿನ ಜಗುಳುದಲೆಯಿಂದ

---

[1] ಕೆಯು(ಕ.ಡ). [2] ಬಲಯುತರ (ಗ), ಜನನಿಕರ (ಜ), ಸುರನಿಕರ (ಝ). [3] ಪುದಿದ (ಕ.ಟ.ಡ). [4] ರೆ (ಗ.ಟ). [5] ಬಲುತರದ (ಝ.ಟ), ತುಳಿವೆನೋ (ಣ). [6] ಕೋಪಾಗ್ನಿಯಲಿ (ಚ.ಜ). [7] ನಮರಾಸುರ (ಕ.ಣ), ನಖಿಳಾಮರ (ಝ). [8] ನಿ (ಚ. ಝ. ಡ). [9] ತನ್ನ (ಚ. ಝ), ನನ್ನ (ಜ), ನಿಮ್ಮ (ಟ), ಎನ್ನ (ಣ) [10] ಬೇಗದಲಿ (ಚ.ಝ.ಡ), ನೀನೆನಲು (ಜ), ನಮಗೆನಲು (ಟ). [11] ದಿ ಬಳಿಕಿಂ ತೆಂದಳಾಹದನ (ಗ), ವ ಬಲದಿಂತೆಂದಳಸುರಂಗೆ (ಡ).

ದಾಶರಥಿಗಾ ರಮಣಿ ರಾಣೀ
ವಾಸವಾದಳು ತನ್ನೃ[1]ಪಂಗೆ ನಿ[1]
ವಾಸ ಘಟಿಸಿತು ಬಳಿಕ ಪಂಚವಟಿಪ್ರದೇಶದಲಿ ೧೭

ಚಲುವಿಕೆಗೆ ಹಿಮವಂತಸುತೆಗ
ಗ್ಗಳೆ ರಮಾದೇವಿಯ ಮಹಾಮಂ
ಗಲತೆಗಿಮ್ಮಡಿ ನಾಲ್ಕುಮಡಿ ಸೊಬಗಿಗೆ ಸರಸ್ವತಿಯು
ಉಳಿದ ರತಿಗಿತಿಮುಖ್ಯ ಸುಮನೋ
ಲಲನೆಯರು ಪಾಡಲ್ಲವೇನ
ಗ್ಗಳೆಯೊ ಶಿವಶಿವ ಸೀತೆ ರೂಪಿನೊಳೆಂದಳಸುರಂಗೆ ೧೮

ಇದೆ ಚತುರ್ದಶಲಕ್ಕಸಂಖೆಯ
ಸುದತಿಯರು ನಿನಗರುಣ[2]ರಸದಂ
ಗ[2]ದಲಿ ಹುದುಗಿದ ಹೊಳೆವ ಗಾಜಿನ ಮಣಿಯ ಸರದಂತೆ
ಸದೆಗ[3]ರಿ[3]ವದಿರು ಬೆಲೆಗೆ ಬಾರದ
ತ್ರಿದಶರತ್ನವಿದೆಂಬ [4]ಮತಿ ತಾ
ನುದಿಸಿ[4]ತೆನಗಾನಱಿಯದಾದೆನು ಮೇಲಣೆಣಿಕೆಗಳ ೧೯

ನಿನಗೆ ಕಾಣಿಕೆಯಾಗಿ ತಹೆನಾ
ವನಿತೆಯನು ತಾನೆಂಬ ಮತಿ ಸಂ
ಜನಿಸಿ ಕೈಯಿಕ್ಕಿದೆನು ಕಪಟದಲಾ ನಿತಂಬಿನಿಯು
ಜನಪ[5]ನನುಜನು ಬಂದು[5] ಕಿವಿಮೂ
ಗಿನಲಿ ಕಂಡನು ಹರಿವನೆನ್ನಲಿ
ಹನನ ಬಳಿಕಾಯ್ತುದ[6]ಱಿನೀ[6] ಖರದೂಷಣಾದಿಗಳ ೨೦

ಎನುತ ಮುಂದಿಳುಹಿದಳು ಹೇಸಿಕೆ
ಹೊನಲಿಡುವ [7]ಹಂ[7]ದಲೆಯನಿದು ನಿ
ನ್ನನುಜ ವೀರಖರಾಸುರನ ತಲೆ ನೋಡೆನಲು ಬಳಿಕ
[8]ಮನದೊಳಗೆ ಮಱುಗಿದನು[8] ತಮ್ಮನ
ಹನನಕನುಜೆಯ ಮಾನಭಂಗಕೆ
ನೆನಹು ಬೇಱಿದ್ದುದು ಮನಸ್ಸಿನಲವನಿಜೆಯ ಮೇಲೆ ೨೧

---

[1] ಪಗೆ ವನ (ಚ), [2] ರಸದಂದ (ಕ), ರಸಪೂರ (ಗ), ಪಟದಂದ (ಚ). [3] ಳ(ಗ), ರ (ಜ.ಟ.ಣ.) [4] ಬಗೆ ಮನಕೊದಗಿ (ಕ), ನುಡಿ ತಾನುದಿಸಿ (ಟ.ಡ). [5] ನಿನಿತುವ ನೋಡಿ (ಜ), ನನುಜನು ತನ್ನ (ಝ), ನನುಜನು ಕಂಡು (ಟ). [6] ಱಿಲಾ (ಕ.ಡ), ಱಿನಾ (ಜ), ಱಿನಿಂ (ಣ). [7] ಹೆಂ (ಚ), ಹಱಿ (ಜ.ಝ), ಬಲು(ಡ). [8] ಕನಲಿದನು ಮನದೊಳಗೆ (ಕ), ಮನದೊಳತಿ ಮಱುಗಿದನು (ಗ.ಡ.ಣ).

ನಾಟುವವು ಸ್ಮರಶರಗ[1]ಳಾವೊಳ
ತೋಟಿಯಲಿ[1] ಜಾನಕಿಯ ನೆನಹಿಗೆ
ನಾಟು[2]ವುದು ಸ[2]ತ್ಕ್ರೋಧ ಹುತವಹನನುಜರಳಿವಿಂಗೆ
ಕೋಟಲೆಗಳೀಯೆರಡರೊಳಗವ
ಜೇಟವನೆ ಬಲುವಿಡಿದು ಹೂಡಿದ
ಘೋಟಕದ ಹೊಂದೇರಿನಲಿ ಹೊಱವಂಟನರಮನೆಯ ೨೨

ಅಳಿಬಲರು ನರರೆಂದು ಸಮ್ಮುಖ
ದಲಿ ಸಮೀಕವನೆಸಗದಿರು ಕೈ
ಕೊಳಿಸಿ ಕೈತವದಿಂದ ಕಮಲಾನನೆಯ ಕಳವಿನಲಿ
ಸೆಳವು[3]ದೀ ಮತದೊಳುಹು[3] ನಿಜಮಾ
ತುಳನೊಳಱಿವುದು ಹೋಗೆನುತ ದಶ
ಗಳನ ಗಳಿತಘ್ರಾಣಮುಖಿ ಕಳುಹಿದಳು ಶೂರ್ಪಣಖಿ ೨೩

ಬಂದು ವಿದ್ಯುಜ್ಜಿಹ್ವ ಬಳಿಕಾ
ಸ್ಯಂದನದ ಘೋಟಕ ಸಹಸ್ರದ
ಕಂದ[4]ವನು[4] ಬೋಳೈಸಿ ಪಕ್ಕದ [5]ಪಾರಿವಳ್ಳಿ[5]ಗಳ
ಮುಂದುವರಿಸಿದನಭ್ರದಲಿ ನಡೆ
ತಂದುದಾ ರಥ ಕಳಿದು ಕಾನನ
ವೃಂದವನು ಮಾಯಾವಿ ಮಾರೀಚನ ನಿಜಾಶ್ರಮಕೆ ೨೪

ಗರುಡನಂದಂಬಿಕೆಯ ನೇಮದ
ಲುರಗಸಂತಾನವನು ಜಠರಾಂ
ತರದೊಳಿಳುಹಲು ಜೀರ್ಣಪೂರ್ಣೋ[6]ದರದ[6] ಭಾರದಲಿ
ಚರಣಯುಗಳವನೂಱಿದಾಲದ
ಮರನ ಘನಶಾಖೋಪಶಾಖೆಯ
ಲಿರವ ಕಂಡನು ವಾಲಖಿಲ್ಯಮಹಾಮುನೀಶ್ವರ[7]ರ[7] ೨೫

ಬರಬರಲು ಮುಂದಖಿಳ ಮುನಿಸಂ
ತರುಗಳಿದ್ದರು ಕಂದಮೂಲಾಂ
ಕುರದ ಭೋಜನದುದಕದಾಹಾರದ ಪಲಾಶನದ

---

[1] ಳಂಗದೊಳ್ನಾಟಲೀ (ಚ), ಳಾವಿಟಕೋಟಿಯಲಿ(ಟ). [2] ವವು ತ (ಜ.ಟ).
[3] ದೀ ಮತದೊಲಹು (ಕ.ಣ), ದೀಯುನ.ಮತವ (ಚ), ದಿದು ಮತದುಳುಹ (ಝ), ವೀ ಮತದುಳುಹ (ಟ), ದೀಮತದೊಳವ (ಡ). [4] ರವ (ಕ. ಚ).
[5] ಕಾಲುವಳ್ಳಿ (ಕ), ಪಾಲುವೇಳೆ (ಗ.ಡ), ಸಾಲುವಳ್ಳಿ (ಜ), ಪಾರಿವೆಳಗು (ಝ). [6] ದ್ವಾರ (ಕ.ಗ.ಟ.ಣ). [7] ನ (ಕ.ಗ.ಜ.ಟ.ಡ.ಣ).

ನಿರಶನವ್ರತದುರುತಪೋನಿ
ಷ್ಠರುಗಳನಿಬರ ಮಧ್ಯದಲಿ ಕ
ರ್ಬುರ ಮುನೀಂದ್ರನ ಕಾಣುತಿಳಿದನು ರಥವನಸುರೇಂದ್ರ ೨೬

ಕುಶನೆ ಬಲ್ಲೈ ಹಿಂದೆ ಹೇಳಿದ
ಕುಶಿಕಸುತನಧ್ವರದಲವ ತಾ
ಪಸಶರೀರವ ತಾಳ್ದು ಜೀವಿಸಿದಂದು ಮೊದಲಾಗಿ
ವಸುಮತಿಯ ಬಲುಭಾರವನು ಭಂ
[1]ಜಿಸಿ ಭುಜಂಗಮಶಯನ[1] ರಘುಪತಿ
ವೆಸರಲುದಿಸಿದನೆಂಬ ಮತಿ ಗೋಚರಿಸಿತವಗೆಂದ ೨೭

ಯೋಗಮುಖದಲಿ ಸರ್ವಸಂಗ
ತ್ಯಾಗವನು ಮಾಡಿದನು ನಿಂದುದು
ಭೋಗಿಭೂಷಣಭಕ್ತಿ ಸಂಸಾರದ ವಿರಕ್ತಿಯಲಿ
ಆ ಗರುವಮಾರೀಚ ಮುಕ್ತಿ
ಶ್ರೀಗೆ ನೆಲೆಯಾದನು ಕಣಾ ನಿಗ
ಮಾಗಮೋಕ್ತಿಯ ಮಾರ್ಗವೇನತಿಶಯವೊ ಜಗಕೆಂದ ೨೮

ಜಪ ಸಮಾಧಿ ಧ್ಯಾನ ಮೌನದ
ತಪದಲಾ ಮಾರೀಚನಿರೆ ದಶ
ಲಪನ[2]ನೆಱಗಿದ[2]ನಂಘ್ರಿಗಾ ಮಾರೀಚರಾಕ್ಷಸನ
ವಿಪುಳ ಮಾಯಾಕುಶಲವಿದ್ಯಾ
ಚಪಲನೊಯ್ಯನೆ ಕಂಡೆಱೆದು ಕೋ
ಣಪಕು[3]ಲಾಗ್ರೇಶ್ವರನ[3] ಹರಸಿದು ಬರವ ಬೆಸಗೊಂಡ ೨೯

ಹೇಳಿದನು ಬಳಿಕವಗೆ ತಾ ತಂ
ದೂಳಿಗದ ಪೂರ್ವಾಪರವನದ
ಕೇಳಿದನು ಕಿವುಡಿಕೆಯ ಕೊಸರಿನ ಕೊನರ್ವ ಕೋಪದಲಿ
ಕಾಳ ನೆನದ[4]ನೆ[4] ಪಾಪಿಯುಕಟ ನೃ
ಪಾಲನೇ ರಘುನಾಥನಾತನ
ಬಾಲೆ ಮನುಜಾಂಗನೆಯೆ ಮಾರಿಯುತಂದನಿವನೆಂದ ೩೦

---

[1] ಜಿಸಲು ಹರಿ ನರನಾಗಿ (ಕ). [2] ನು ನಮಿಸಿ (ಕ), ನುಯೆಱಗಿ (ಡ).
[3] ಲೇಂದ್ರನನೆತ್ತಿ (ಚ). [4] ನು (ಚ.ಣ).

ಹರಿಬ ಹುರಿ[1]ಗೊಳಲೆಂದು[1] ಮಂತ್ರಾ
ಕ್ಷರವನುಪದೇಶಿಸಿದಳೀ ಕ
ಬುರ್ರಗೆ ಬಳಿಕಿಪನನುಜೆಯುದಱಿಂದಿವನು ಕಾಮುಕರ
ಹರುಹನಂಗೀಕರಿಸಿ ನಮ್ಮನು
ಕರಕರಿಸಲೈತಂದ ಮತಿ ಗೋ
ಚರಿಸುತಿದೆ[2]ಯಿನ್ನೇ[2]ನಮಾಡುವೆನಿವಗೆ ತಾನೆಂದ ೩೧

ಏನು ನಿನ್ನಂಗವಣೆ ನೀ ಪೇ
ಳ್ದೀ ನಿರೋಧಸ್ಥಿತಿಗೆ ಸೊಗಸೆಮ
ಗೇನು ತೋಱದು ತೋಱುತಿದೆ ಬಲುಚಿಂತೆ ಚಿತ್ತದಲಿ
ಹಾನಿ ನಿನಗುಪಕರಿಸದಿರದೆಂ
ಬೀ [3]ನಿಬುದ್ಧಿಗೆ[3] ನಿನ್ನ ಮನದನು
ಮಾನವಾವುದು ಹೇಳು ಕೇಳುವೆನೆಂದನಸುರಮುನಿ ೩೨

ಕೊಲೆಗೆ ಕೊಲೆಗೊಂಡಲ್ಲದೋಜೆಗೆ
ನಿಲಲಱಿಯದೀ ಮನವು ತಂಗಿಯು
ಚಲುವಿಕೆಯು ಚೈತನ್ಯವಳಿದುದಕಹಿತನಂಗನೆಯು
ಚಲುವನಂಗೀಕರಿಸಿದಲ್ಲದೆ
ತೊಲಗಲಱಿಯದು ಚಿತ್ತ ನಿಮ್ಮಡಿ
ಗಳ ಕಟಾಕ್ಷದ ಕೃಪೆಯದೇನದ ಬೆಸಸಿ ತನಗೆಂದ ೩೩

ಅಕಟ ಮರುಳಾದ್ಯೆ ನಿಶಾಟ
ಪ್ರಕಟವಂಶಾರಣ್ಯದಲಿ ಪಾ
ವಕನ ಪಸರಿಸಬೇಡ [4]ತಾನೀ[4] ಶೂರ್ಪಣಖಿ ನಿನ್ನ
ವಿಕಳಗೊಳಿಸಿದಳಂಗಜನ ಮೋ
ಹಕದ ಮದ್ದಿನಲಾದಿಪುರುಷನ
ಸಕತಿ ಸಾಧ್ಯವೆ ಸಾಕು ಕೊಳ್ಳದು ನಿನ್ನ ಬಗೆಯೆಂದ ೩೪

ರಾಮನಾರೆಂದಱಿಯಲಾ ಸು
ತ್ರಾಮಮುಖ್ಯರ ದೂಱಿನಲಿ ಬಳಿ
ಕೀ ಮಹೀಭಾರವನು ಭಂಜಿಸಲೆಂದು ನರನಾಗಿ

---

[1] ಗೊಂಡವನು (ಗ), ಗೊಳಲೆನುತ (ಚ.ಣ), ಗೊಂಬಂತೆ (ಝ). [2] ಮನಕೇ (ಗ.ಚ). [3] ನಿಬದ್ಧಕೆ (ಗ), ವಿಪತ್ತಿಗೆ (ಚ). [4] ವೀಗೀ (ಜ.ಡ), ವಕಟಾ (ಣ).

ಆ ಮಧುದ್ವಿಷನವತರಿಸಿದನು
ನೀ ಮರುಳಲಾ ಸುಲಭ[1]ವೇ[1] ರವಿ
ತಾಮಸಿಗೆ ತಾಮಸವನಂಗೀಕರಿಸಬೇಡೆಂದ ೩೫

ಎಲವವೇ ಸುರಭೂಜ ಗೊಡ್ಡಾ
ಕಳೆ ಸುಪರ್ವ ಸುಧೇನು ಪಳುಕಿನ
ಶಿಲೆಯೆ ಸುಮನೋರತ್ನ ಕಱುಗಲ್ಲೇ ಮಹಾಮೇರು
ಎಲೆ ಮರುಳೆ [2]ನರನೇ[2] ನೃಪಾಲಕ
ತಿಲಕನ[3]ಕಟಾ[3] ದೈವದೊಳಗ
ಗ್ಗಳಿಕೆ ಕೊಂಬುದೆ [4]ಕಾಳನೆಣಿಸಿದೆ[4] ಋಳ ಹೋಗೆಂದ ೩೬

ಉದಕದೊಳಗಿದ್ದಂದು ವೈರವ
ನೊದಗಿದಾ ಮಧುಕೈಟಭರ ಮೇ
ಧದಲಿ ಮುಸುಕಿ[5]ದನರ್ಣವವ[5] ನಿಲಿಸಿದನು ಮೇದಿನಿಯ
ಮೊದಲು ಬಳಿಕೀಚೆಯಲಿ ಬಹುರೂ
ಪದಲಿ ಬಂದು ತಮಾದಿಗಳ ಯಮ
ಸದನ[6]ಕಟ್ಟಿದನವರಿಗಿಂದತಿಬಲನೆ ನೀನೆಂದ[6] ೩೭

ಆತ[7]ನೀಗೀ[7]ತನು ಕಣಾ ಸ
ತ್ವಾತಿಶಯದುಬ್ಬರದ [8]ಮದಗೊ
ಬ್ಬೀತನಲಿ ಮೆಱೆವುದೆ[8] ಮಹೋತ್ಪಲಮಿತ್ರನಿದಿರಿನಲಿ
ಧಾತು ಧವಳಿಸಬಲ್ಲುದೇ ಖ
ದ್ಯೋತಕೀಟಕದಾಟವಿಕತನ
ಸೀತೆಯುರಸನಲೆಸಗಬಲ್ಲುದೆ ಕಂದ [9]ಕೇ[9]ಳೆಂದ ೩೮

ಬೇಡ ಮಗನೇ ಹರಿವಿರೋಧದ
ಲಾಡಿಕೆಟ್ಟರು ಕೆಲಬರದಱೊಳ
ಗಾಡದುಳಿದರು ಕೆಲರು ನಿನಗಿಂದಮರಸಂದೋಹ
ಖೇಡರಾಗಿಹು[10]ದಿನಿತು ಸುಖದ[10] ಸು
ರಾಡವನು ಕೊಂಡೆಯರ ನುಡಿಗೆ ನಿ
ವಾಡವನು ಮಾಡಿದರು ಕೂಡದಿರಪಜಯಾಂಗನೆಯ ೩೯

---

[1] ನೇ (ಚ). [2] ಕೇಳೀ (ಗ). [3] ರನೇ (ಗ). [4] ಕಾಳನೆಣಿಸದೆ (ಕ.ಟ.ಣ), ಕಾಕನೆಣಿಸದೆ (ಜ), ಕಾಕನೆಣಿಸಿದೆ (ಡ). [5] ಮಹಾರ್ಣವದಿ (ಝ.ಡ). [6] ದಲಿ ಕಟ್ಟಿಸಿದನವನತಿಬಲನು ನೋಡೆಂದ (ಚ). [7] ನೀನೀ (ಕ), ನಿಂದೀ (ಗ.ಜ.ಝ). [8] ಕೊಬ್ಬುಗಳೀತನಲಿ ಮೆಱೆವುದೆ (ಕ), ಕೊಬ್ಬಿನಲಾತು ಮೆಱೆದರೆ ನೀ (ಜ.ಝ). [9] ಹೇ (ಚ). [10] ದಧಿಕ ಸಿರಿಯ (ಚ), ದೆಂದು ಸುಖವ ಝ).

ಮುಱಿಯದಿ[1]ರಕಟ ಕಲ್ಪಭೂಜವ[1]
ನಿಱಿಯದಿ[2]ರಕಟ[2] ಕಾಮಧೇನುವ
ನುಱುಬದಿ[3]ರಕಟ ಕಾಮಿತದ ರತ್ನವನು[3] ಕಡಲೊಳಗೆ
ಉಱುವ ಮುನಿಪೌಲಸ್ತ್ಯವಂಶದ
ಮೆಱೆವ ಜವ್ವನಜಾಣವನಿತೆಯು
ತುಱುಬ ಬೋಳಿಸಬೇಡ[4]ವಕಟಕಟೀಗ[4] ನೀನೆಂದ ೪೦

ಹುಳಿಗಲಸಿದರೆ ಕೊಡನ ಹಾಲವೊ
ಲಳಿವುದೇ ಕ್ಷೀರಾಂಬುನಿಧಿ ಮೀ
ನ್ಬುಲಿಗನಂಕಿದಡಳುಕುವುದೆ ಮಕರೇಶ [5]ನೀನಿಂದು[5]
ಮುಳಿದು ಮದಗೊಬ್ಬಿನಲಿ ವೈರವ
ಬೆಳಸಿ [6]ಕೆಣಕಿ[6]ದೊಡಾ ನೃಪಾಲಕ
ತಿಲಕ ತೆಕ್ಕುವನೇ ವಿವೇಕಕೆ ಮನವ ಮಾಡೆಂದ ೪೧

ಬಲುಹದಾರೈ ತಾಟಕಿಗೆ [7]ವೆ
ಗ್ಗಳರದಾರು[7] ಸುಬಾಹುವಿಗೆ [8]ಕಡು
ಗಲಿಗಳಾರು[8] ವಿರಾಧಗೆವ್ಮೀ ಶೂರ್ಪಣಖಿಯಿಂದ
ಕಲಹದಲಿ ಮಿಗಿಲಾ[9]ವನ[9]ದು ಹೋ
ಗಲಿ ಖರಾದಿ ನಿಶಾಟಭಟರ
ಗ್ಗಳಿಕೆಯೇನಾಯ್ತೆಂಬುದನು ಲೇಸಾಗಿ ತಿಳಿಯೆಂದ ೪೨

ಹರನ ಧನು ತಾ ನೆರೆದ ಪೃಥ್ವೀ
ಶ್ವರರಿಗಳುಕಿತೆ ಹೇಳು ತಾರಾ
ಗಿರಿಯನೆತ್ತಿದ ಭುಜಬಲನಲಾ ನೀನು ನಿನಗಂದು
ಶಿರವ ಮಣಿದುದೆ ಹೇಳು ನಿಮ್ಮೆ
ಲ್ಲರನು ನಾಸಾಗ್ರದಲಿ ಸೀರೆಯ
ಸೆಱಗ[10]ನೆಳೆ[10]ದವನಿಜೆಯ[11]ನೊಯ್ದವನಾರು[11] ಹೇಳೆಂದ ೪೩

ಸಿಕ್ಕಲಱಿಯಳು ಸೀತೆ ಸಿಕ್ಕಿದ
ಡಕ್ಕಲಱಿಯಳು ಸತ್ಯವಿದು ಕೈ
ಯಿಕ್ಕೆ [12]ಕದನಕೆ[12] ಸೋಲಲಱಿಯನು ರಾಮನಿದು ಸಿದ್ಧ

---

[1] ರು ನಿಜಕಲ್ಪಭೂಜವ (ಕ), ರು ನೀ ಕಲ್ಪಭೂಜವ(ಗ), ರು ಸುರಭೂಜವನು ನೀ (ಜ.ಟ), ರು ಸುರಕಲ್ಪಭೂಜವ (ಝ). [2] ರು ನೆಱೆ (ಕ), ರು ನೀ (ಗ), ರು ವರ(ಝ). [3] ರು ಕಾಮಿತದ ರತ್ನವನಕಟ (ಕ.ಗ.ಜ.ಝ.ಟ.ಡ.ಣ). [4] ಬೇಡಕಟಕಟ (ಕ.ಗ.ಝ.ಟ.ಡ), ಕೆಡಬೇಡಕಟ(ಣ). [5] ನೀನಿನಿತು (ಕ), ನೀನಿನ್ನು (ಚ). [6] ಸೆಣಸಿ (ಕ.ಝ). [7] ಕಡುಗಲಿಗಳಾರು (ಕ.ಜ.ಝ.ಣ). [8] ವೆಗ್ಗಳರದಾ (ಕ.ಜ.ಝ.ಣ). [9] ರು ಅ (ಗ.ಟ.ಡ.ಣ.) [10] ಸೆಳೆ (ಜ.ಡ), ಹಿಡಿ (ಟ). [11] ನೊಯ್ದವರಾರು (ಗ), ವರಿಸಿದವನಾರು (ಚ), ತಂದವನಾರು (ಜ). [12] ಕಲಹಕೆ (ಕ.ಜ.ಣ), ಸಮರಕೆ (ಚ).

ಸೊಕ್ಕಿ [1]ಕರಿ[1] ಹರಿಯೊಡನೆ ಸೆಣಸುವ
ದಕ್ಕಜವಲಾ [2]ಲೋಕಕಂಟಕ
ಕಿ[2]ಕ್ಕದಿರು ಸಾರಿದೆನು ನಿನ್ನನುಜಾತ್ಮಜರನೆಂದ ೪೪

ಶಿವಶಿವಾ ಹಸನಾಯ್ತು ಧರ್ಮ
ಶ್ರವಣಪದ್ಧತಿ ಮಾಮದೀಯ
ಶ್ರವಣವನುರಾಗಿಸಿ[3]ದವ್ವೈ[3] ಕೇಳ್ದಮಮ ಹೊಸಕತೆಯ
ಅವಯುವದೊಳಾನಂದ[4]ಸುಖ ಸಂ
ಭ[4]ವಿಸುತಿದೆಯೆಲೆ ಸೂತ [5]ಕೇಳಿ
ನ್ನಿ[5]ವನವೊಲು ನಮಗಾಪ್ತರಾರೆಂದೊಲದನವಯುವವ ೪೫

ಒಸೆದು ಮುಂದಣ ತಾಗುಬಾಗಿನ
ಸಸಿನವನು ಹೇಳಿದನು [6]ಹಡೆದಡೆ[6]
ಹೆಸರಿಡಲು ಬೇಕಿವನ ರಾಮುಂಗಂಜಬೇಕಿನ್ನು
ಪಶುಪತಿಯ ಮೇಲಾಣೆ [7]ಹುಸಿದಡೆ[7]
ಶಿಶುವಿನಾಣೆಯೆನುತ್ತ ಕೆಲಬಲ
ಕಸವಳಿದು ಬಿಱುನಗೆಯ ಸೂಸಿದನಾ ದಶಗ್ರೀವ ೪೬

ಹರಹಿದನು ಬೆದಱಿಕೆಯನಹುದೋ
ಹಿರಿಯನೈ ನೀನಾತ ಸಾಕ್ಷಾ
ತ್ಪರಮಪುರುಷನು ಗಡ ಭವಬ್ರಹ್ಮಾಮರೇಶ್ವರರು
ಹಿರಿದು ದೂಱಲು ಜನಿಸಿದನು ಗಡ
ಹರಮಹಾದೇವೀ ವಿವೇಕ
ಸ್ಫುರಣೆ ನಿನಗಲ್ಲದೆ ಜಗತ್ತಿನೊಳಾರಿ[8]ಗುಂಟೆಂದ[8] ೪೭

ಕೊಂದ ಗಡ ಮಧುಕೈಟಭರ ಬಳಿ
ಕಂದು ಬಾರದ ಭವವ[9]ನೀತನು[9]
ಬಂದ ಗಡ [10]ಗೆಲಿದನು ಗಡಾಜಿಯುಲಖಿಳದಾನವರ[10]
ಚಂದವಾದುದು ಕತೆ ಕುತೂಹಲ
ವಿಂದು [11]ತೋಱಿತು ನಮಗೆ [11]ನಾವ್ ರಘು
ನಂದನನ ಪರದೈವವೆಂದೇ ಕಾಣಬೇಕೆಂದ ೪೮

---

[1] ನರಿ (ಜ.ಡ). [2] ಲೋಕಕಿನ್ನಿದಿರಿ (ಗ). ಬರಿದೆಯಂತಕಗಿ (ಚ). [3] ತಲ್ಯೈ (ಕ.ಗ). [4] ರಸಪ್ರಭ್ದ (ಕ.ಡ). [5] ನೋಡಿಂದಿ (ಕ), ಕೇಳಿಂತಿ (ಗ.ಝ.ಣ). [6] ಹೆತ್ತಡೆ (ಗ), ಪಡದಡೆ (ಚ.ಡ), ಹಡದರೆ (ಜ.ಝ.ಟ.ಣ). [7] ಹುಸಿದರೆ(ಕ.ಝ), ಪುಸಿದಡೆ (ಗ.ಡ). [8] ಗುಂಟೆನುತ (ಗ), ಗಿಲ್ಲೆಂದ (ಜ.ಟ). [9] ನತ್ತಲು (ಕ), ನೀಗಲು (ಗ), ನಿತ್ತಲು (ಜ.ಣ). [10] ಜಾನಕಿಯನೊಲಿಸಿದ ಗಡ ಮಹಾದೇವ (ಚ). [11] ವೊದಲಾಗಿನ್ನು (ಕ), ತೊಲಗಿತು ನಮಗೆ (ಗ).

ಏನೆಲವೊ ಮಾರೀಚ ಮಾರಿಯ
ದೇನು ಮನೆದೊತ್ತಲ್ಲವೇ ಚತು
ರಾನನಾದಿ ಸುರೌಘ ಸೇವಕರಲ್ಲವೇ ತನಗೆ
ನೀನು ಹೊಸಬನೆ ಹೊಗಳ[1]ಬ[1]ಹುದೇ
ಮಾನವನ [2]ಮಾರಮಣನೆಂದಭಿ[2]
ಧಾನದಲಿ [3]ಸ್ಯೈರಿಸಿದೆನಿಂದೆಲೆ[3] ಖೂಳ ಕೇಳೆಂದ ೪೯

ಅಂದು ನಾನಿರಲಳಿವರೇ ನೀ
ನೆಂದ ವೀರರು ಸಾಕದಾ ಮಾ
ತಿಂದು ನೀ ಬಹುದುಂಟೊ ಬಾರೆಯೊ ಹೇಳು ಬೇಗದಲಿ
ಬಂದಡುಳುಹುವೆ ಬಾರದಿರ್ದಡೆ
ಕೊಂದು [4]ಬಿಸುಡುವೆ[4] ನಿನ್ನನೀಗೆನು
ತಿಂದುಹಾಸವನುಗಿದು ನೆಗಹಿದನಧಿಕರೋಷದಲಿ ೫೦

ಅಸುರನಿವನಾಸುರವಿಕರ್ಮವ
ನೆಸಗಿದಲ್ಲದೆ ಮಾಣನದಱಿಂ
ದಸುವನಸುರಾರಿಗೆ ಸಮರ್ಪಿಸುವೆನು ಸಮಕ್ಷದಲಿ
ನಸಿಯದಿರ[5]ದಿನ್ನಸುರ[5]ವಂಶದ
ಸಸಿಯಬೆಳಸೆನುತೇಱಿದನು ಬೇ
ವಸದ ಬೇಳಂಬದಲಿ ಬೇಸಱುತವನ ಮಣಿರಥವ ೫೧

ಉಗಿದ ಖಡ್ಗವನೊಱೆಯ ಬಸುಱಲಿ
ಹೊಗಿಸಿದನು ದಶವದನ ವದನದ
ನಗೆಯಲೆಂದನು ಮಾವ ಕೇಳೆನ್ನಯ ದುರುಕ್ತಿಗಳ
ಬಗೆಯದಿರಿ ನೀವೆಂದು ಕೈಗಳ
ಮುಗಿದು ನಯದಲಿ ಬೇಡಿಕೊಂಡನು
ಚಿಗಿದುದಂಬರಕಾಗಿ ರಥ ಸಾರಥಿಯ ಸನ್ನೆಯಲಿ ೫೨

---

[1] ಲ (ಝ.ಟ.ಣ). [2] ಮಾರಮಣನೆಂಬಭಿ (ಚ), ನೀ ಮಾವನೆಂಬಭಿ (ಜ.ಝ). [3] ತಾಳಿದನು ಹೋಗೆಲೆ (ಚ), ಸ್ಯೈರಿಸಿದೆನೆಲವೋ (ಜ). [4] ಕಳವೆನು (ಕ.ಝ.ಣ). [5] ದಿಂದಿವನ (ಕ), ದಿನ್ನಿವನ (ಚ.ಜ).

# ಎಂಟನೆಯ ಸಂಧಿ

ಸೂಚನೆ : ಮಾಯೆಯಲಿ ಮೋಹಿಸಿದ ಕಾಂಚನ
ಕಾಯದೇಣನ ಗೋಣನನುಪಮ
ಸಾಯಕದಲೆತ್ತಿದನು ಗಗನಕೆ ರಾಯ ರಘುನಾಥ

ಕುಶನೆ ಕೇಳ್ ಮಾರೀಚ ಮನದಲಿ
ಘುಸಣಿಗೊಳುತಿರ್ದನು ಕಣಾ ರಾ
ಕ್ಷಸಕುಲಾಧೀಶ್ವರನ ದುಶ್ಚರಿತದ ದುರಾಗ್ರಹಕೆ
ಶ್ವಸನಗತಿಯಲಿ ಗಗನದಲಿ ಬಳಿ
ಕಸುರರಥ ಬರುತಿರ್ದು[1]ದತಸೀ
ಕುಸುಮಸನ್ನಿಭ[1] ರಾಮಚಂದ್ರನ ವರತಪೋವನಕೆ ೧

ಕಂಡ[2]ರೆ[2]ಡೆಯಲಿ ಖರನ ನಗರದ
ಹೆಂಡಿರುಗಳಕ್ಕೆಗಳ [3]ತಳುಕಿನ[3]
ಮಂಡೆಗಳ [4]ತೋಳುಗಳ[4] ಬಾಯ್ಗಳ ಬಸುಱ ಹೊಯ್ಲುಗಳ
ಕಂಡೆಯ್ಯೆ ದಶಕಂಠ ತಾನಿದು
ಖಂಡಿತದ ದುಶ್ಶಕುನಫಲವಿದ
ನುಂಡು ತೇಗುವ ಬೇಗ ನಡೆ ನಡೆಯೆಂದನಸುರಮುನಿ ೨

ಬರಬರಲು ಮುಂದುಡಿದ ಮಕುಟದ
ಹರಹುಗಳ ಹೊಳೆಹೊಳೆವ ಕೈದುಗ
ಳರೆಗಡಿದ ಹಸರಗಳ ಹರಹಿನ ರಥದ ಹಂತಿಗಳ
ಕರುಳನುಗಿವ ಸೃಗಾಲ ವೃಕ ಭೀ
ಕರತರಕ್ಷು ಧ್ವಾಂಕ್ಷಕುಲಸಂ
ಚರದ ಸಂಗರಭೂಮಿಯನು ಕಂಡಸುರ ನೋಡೆಂದ ೩

---

[1] ದಾ ಸಾಹಸ ಪರಾಕ್ರಮಿ (ಚ), ದತಿ ಸಾಹಸದ ಸನ್ನಿಭ (ಜ). [2] ನೆ (ಚ ಟ). [3] ತುಳುಕಿನ (ಗ.ಟ), ಕೆದಱಿದ (ಚ). [4] ಬಿಱುನುಡಿಯ (ಚ).

ಬುಡಬುಡಿಸುವೇಱಿನಲಿ ದುರ್ವ್ರಣ
ದೊಡನೆ ಸೂಸುವ ಬಸೆಯು ನಾಱುವ
ಮೊಡೆವೆಣನ ಮಿಗೆ ಬೀಗಿ ಬಿದ್ದಿರ್ದಿಭಘಟಾವಳಿಯು
ಸೆಡೆದ ಕಾಲ್ಗಳ ಕುದುರೆಗಳ ಬಸಿ
ದೊಡೆವ ಹೆಣಸಾಲುಗಳ ಸಂದಣಿ
ಯಡವಿಯನು ಕಂಡಿವರು ನಿನ್ನವರಹರೆ ನೋಡೆಂದ ೪

[1]ಅಱಿತ ನೆತ್ತರ ಬೀಟೆಗಳನೆಲು[1]
ದೆಱೆದ ಹಂಜರವೆಣನ ತೊಗಲುಗಿ
ದೊಱತು ಸೂಸಿದ ಡೋ[2]ವಿ[2]ಗೆಯ ಹುಳುವಾಡುವವಯವದ
ಒಱಲೆಗೊಂಡಳ್ಳೆಗಳ ನೆತ್ತರ
ಸುಱಿದು ಮರುಳ್ಗಳು ಬಿಸುಟ [3]ಬೆಸಳಿಗೆ[3]
ಗುಱುಬಿನೆಡೆಗಳ ಕಂಡು ಕಂಡೈ ಕೇಡ ನೀನೆಂದ ೫

ಕಳಲಿಬಿದ್ದಿಪೆ ಹತ್ತುಯೋಜನ
ದಳತೆಯಲಿ ಹೆಣಸಾಲು ಸೋಲದೆ
ಹಳಚಿದತಿಬಲ[4]ರಿವರೊಳುಂಟೇ[4] ನೋಡು ಲೇಸಾಗಿ
ಎಲವೊ ನಿನ್ನಯ ಬಾಯಹವಣಿಂ
ಗಳವಡದ ಬಲುದುತ್ತನಂಗೈ
[5]ಗಳಲ[5] ಧರಿಸಿದೆ ಪಾಪಿ ಕೆಡಿಸಿದೆ ಕರ್ಬುರಾನ್ವಯವ ೬

ಎಲೆ[6]ಲೆ[6] ಪಾಪಿ ಪರಾಂಗನೆಗೆ ಮನ
ವೆಳಸಲೆಳಸುವರವರ ಹೆಂಡಿರಿ
ಗಿಳೆಯ ಮಿಂಡರು ತಪ್ಪದಿದು ತಾ ಸುಪ್ರಸಿದ್ಧವಲೆ
ಅಳಿವು ತನಗಿಮ್ಮಡಿಸಿ ಬಾರದು
[7]ನೆಲೆಯನುಸುರಿದೆ[7] ಹಿಂಗು ಹಿಂದಕೆ
ಸುಲಭವಲ್ಲ ಸುಬಾಹು[8]ಹರನ ವಿರೋಧ[8] ನಿನಗೆಂದ ೭

---

[1] ಹಱಿದ ತಲೆಗಳ ಮುಂಡಗಳನೆಲು (ಕ), ಒಱವ ನೆತ್ತರ ಬೀಡೆಗಳಲೆಲು (ಗ), ಒಱತ ನೆತ್ತರ ಬೀಡುಗಳನೆಲು (ಡ), ಅಱಿತ ನೆತ್ತರ ಬಿರಡೆಗಳನೆಲು (ಣ). [2] ರಿ (ಚ). [3] ಚಿಗಿಳಿಗೆ (ಗ), ಬೆಸಣಿಗೆ (ಚ.ಟ), ಬೆಳಸಿಗೆ (ಣ). [4]ವೀರರುಂಟೇ (ಗ), ರಿದಿರೊಳುಂಟೇ (ಚ.ಟ), ವಿದರೊಳುಂಟೇ (ಡ.ಣ). [5] ತ್ರಳದಿ (ಕ.ಜ). [6] ವೃಾ (ಚ.ಡ). [7] ನೆಲೆಯನಱುಹಿದೆ (ಕ), ಖಳಶಿರೋಮಣಿ (ಗ.ಟ). [8] ವೈರಿಯ ಕದನ (ಕ).

ಮರುಳಲಾ ಮಾರೀಚ ಮಾರಿಯ
ಸರಸ [1]ಸಾವಿಗೆ[1] ಸೊಗ[2]ಸೆ[2] ತನ್ನಯ
ಪರಿಯನಱಿಯಾ [3]ಹೆಡ್ಡನೇ[3] ತಾನಕಟ ನೀನಿನಿತು
ಜಱಿದು ಮಾತಾಡುವರೆ ವೈರವ
ಬೆರಸಿ ಬದುಕಲು ಬಲ್ಲರೇ ಸುರ
ನರಭುಜಂಗಮರೆನ್ನೊಡನೆ ನೀ ಹೊಸಬನೇಯೆಂದ ೮

ಅಹುದು ಮತ್ತೇನಾರ ಚಿತ್ತದ
ಲಿಹ ಪರಾಕ್ರಮಪೌರುಷದ ನಿ
ರ್ವಹವನವರೇ ಬಲ್ಲರೆಮ್ಮವು ಸ್ವಲ್ಪಬುದ್ಧಿಗಳು
ಬಹಳಮತಿಯುತ ನೀನೆನುತಲಾ
ಬಹುಮುಖನ ಮೈವಳಿಯಲೈದಿದ
ನಹಿಮಕರಕುಲನಾಶ್ರಮವನಪರಾಹ್ನಸಮಯದಲಿ ೯

ಇಳಿದರಾ ವನಸನ್ನಿವೇಶಾ
ಚಲದ ಶಿಖರದ ಮಱೆಯಲೀ ನೃಪ
ರುಲುಹನಾಲಿಸಿ ಹಾಯ್ವವೇ ಕಗ್ಗೊಲೆಯನೆಂದವನು
ಅಲೆಯಲಾ ಮಾರೀಚನಾ ದಶ
ಗಳನ ದಟ್ಟಿಸಿ ಕೆಲವುದಿನ ನೀ
ನುಳಿವುಪಾಯವ ಮಾಡುವೆನು ತಂದುದಕೆ ತಾನೆಂದ ೧೦

ಮುಸುಡಗಂಡಡೆ ರಾಮಶರ ಖಂ
ಡಿಸದೆ ಬಿಡುವುದೆ ನಮ್ಮನಕಟಾ
ಮುಸುಕಿಕೊಂಡಿದೆ ನಿನ್ನನುನ್ಮತ್ತಗ್ರಹಾವೇಶ
ಉಸುರದಿರು ಸಾಕಿನ್ನು ಮಾಯಾ
ಮುಸಕವನು ಮಱೆಗೊಂಡು ನೋಡುವ
ವಸುರಕರ್ಮದ [4]ಕಡೆಯ ಕಾಣಿಸಲಱಿಯದೀಗೆಂದ[4] ೧೧

---

[1] ವಾರಿಗೆ (ಚ). [2] ಸು (ಚ). [3] ಹೇಡಿಯೇ (ಕ.ಗ). [4] ಕಣೆಯುವಿಂದೇ ಕೇಡ ಶಹುದೆಂದ (ಕ), ಕಡೆಯ ಕಾಣಿಸಲಱಿಯೆ ನೀನೆಂದ (ಗ), ಕಣೆಯ ಕಾಣಿಸ ಲರಿಯದೀಗೆಂದ (ಟ).

ಕಳಿದರಿಬ್ಬರು [1]ಕತ್ತಲೆಯ ಕಡು[1]
ವೆಳಗಿನಲಿ ಕಾಮಾತುರದ ಕಳ
ವಳಿಗನಾ ಮಾರೀಚಗೆಂದನು [2]ಮಧುರವಚನ[2]ದಲಿ
ನಳಿನಮುಖಿ ಕೈಸಾರುವೀ ಮತ
ದೊಳುಹನೇ ನಿಶ್ಚೈಸಿ ಹರಣವ
ನುಳುಹಿ[3]ಕೋ ನೀನೆನುತ ಬಿದ್ದನು[3] ಮಾವನಂಘ್ರಿಯಲಿ ೧೨

ಆದಡೆಲವೋ ಕೇಳು ತೋರ್ಪಿ
ರೈದುತಲೆಗಳ ಬೈತಿರಿಸಿ ಬಲು
ಗೈದುಗಳ ಬಿಸುಟಡಗಿಸೀ ರಾಕ್ಷಸಕಳೇವರವ
ಐದು ತಾಪಸವೇಷವನು ಬಳಿ
ಕೈದು ಪರವನಿತಾವ್ಯಸನಿಗಳಿ
ಗಾದ ಗತಿಯನು ಹೊಱುವ ಪಾಪಕೆ ಹೊಱಗು ತಾನೆಂದ ೧೩

ತೋಱಿದನು [4]ತಾ ಬಳಿಕವಗೆ[4] ಹದಿ
ನಾಱುಬಣ್ಣದ ಪುಟದ ಚಿನ್ನಕೆ
ನೂಱುಮಡಿಯೆನೆ ಹೊಳೆಹೊಳೆವ ಹೊಮ್ಮಱಿಯ [5]ರೂಪಕವ[5]
[6]ಬೇಱುಬಿತ್ತಿನ ತಾಯ[6] ತಾಣವ
ಮೀಱಿ ತಳಪಟದೊಳಗೆ [7]ಹಾರಕ[7]
ಹಾಱುವಭಿನವಭಾವಭಂಗಿಯ ಬಹಳ ಕೌತುಕವ ೧೪

ಹೊಳೆಹೊಳೆವ ಕಿಱುಗೊಳಗುಗಳ ಥಳ
ಥಳಿಪ ವದನದ ತರಳನಯನದ
ಮಿಳಿರ್ವ ಕಿವಿಗಳ ಮಿಡುಕು[8]ವಳ್ಳೆಯ[8] ಮಿಱುಪ ನಾಸಿಕದ
ಚಳಗತಿಯ ನಿರ್ಮಾಂಸಜಂಘೆಯ
ಲುಳಿಯ ಲಾಗಿನ ಲಂಘನೆಯಲ
ವ್ವಳಿಪ ಹೊಸಜವ್ವನದ ಹೊಮ್ಮಱಿ ಹೊಳಕಿತಿದಿರಿನಲಿ ೧೫

---

[1] ನಿಶಿಯನಾ ಕಡು (ಕ), ನಿಶಿಯನಾ ಕಡೆ (ಚ). [2] ದೈನ್ಯಭಾವ (ಕ.ಚ). [3] ಕೊಳಬೇಕೆನುತ ಮಣಿದನು (ಕ), ಕೋ ನೀಯೆಂದು ಬಿದ್ದನು (ಗ), ಕೋ ನೀನೆಂದು ಬಿದ್ದನು (ಟ.ಡ). [4] ಬಳಿಕವಗೆ ತಾ (ಕ), ಬಳಿಕವಗೆ ಮಿಗೆ (ಗ.ಣ). [5] ರೂಪಿನಲಿ (ಜ.ಟ.ಡ). [6] ಬೇಱುಬೆಚ್ಚಿನ ಕಾಯ (ಕ.ಣ), ಬೀಱು ಬಿಚ್ಚಿನ ಕಾಯು (ಚ), ಬೇಱು ಬೀಜವು ತಾಯ (ಜ), ಬೇಱೆ ಬೇಱುಱೆ ಮಾಯ (ಟ), ಬೇಱೆ ಬಿಚ್ಚತ್ತಾಯ (ಡ). [7] ಘಾತಕ (ಜ), ಹಾತಕ (ಣ). [8] ವಂಘ್ರಿಯ (ಟ.ಡ).

ಮಾಯೆಯಿದು ತಾನೆಂದು ಹರ ನಾ
ರಾಯಣರಿಗಱಿವೆತ್ತಣದು ಪಾ
ನೀಯಜಾಸನ ಸೃಷ್ಟಿಗಿದು ನೂತನವಲೇಯೆಂಬ
ಮಾಯೆಯಲಿ ಮಾರೀಚನಾ ವಾ
ತಾಯು[1]ವಾಗಿಯೆ ಸುಳಿಯಲಾ[1] ಖಳ
ರಾಯ ಮಾ ಮಱು ಮಾಯೆ[2]ಮಾಯೆಂ[2]ದೊಲೆದನವಯವವ ೧೬

ಎಲೆ ದಶಾನನ ಕೇಳಧೋಗತಿ
ಗಿಳಿವ[3]ವನು ನೀನಿನ್ನು[3] ಸುಗತಿಯ
ಸುಳಿವು ತನ್ನದು ಭಾಗೆಯಿದು ನಿನಗೆನಗೆ ನೋಡೆನುತ
ಸುಳಿದನವ ಸೂಚನೆಯ ಮುಖದಲಿ
ಖಳಪತಿಗೆ ಚಿಂತಿಸುತ ರಾಮನ
ನಿಳಯವನು ಸಾರಿದನು ಸೂರ್ಯೋದಯದ ಸಮಯದಲಿ ೧೭

ಇಳಿದುದೋ ಚಂದ್ರಮನ ಸಾಂದ್ರೋ
ಜ್ಜ್ವಲಸುಚಂದ್ರಿಕೆಯನು ನಭೋಮಂ
ಡಲ[4]ದೊಳಗೆ ಕದ್ದಮಮ ಪೂರ್ಣಸುಧಾಂಶು[4]ಮೃಗವೆನಲು
ಸುಳಿದುದಾ ಮೃಗ[5]ಪೋತ[5] ಪರಿಮಳ
ಮಿಳಿತ ತೇಜೋಲತೆಯ ತಱಿತಱಿ
ದಿಳುಹುತವನೀನಂದನೆಯ ಪೂಗೊಳನ [6]ಹೊರೆ[6]ಗಾಗಿ ೧೮

[7]ವಸುಮತೀಪತಿಸೂನು ಕೇಳ್[7] ನಿ
ಮ್ಮಸುರವೈರಿಯ ಶಯನಸಂಗದ
ಸಸಿ[8]ವದನೆ ಸುಪ್ರಾತರೋಚಿತನಿಯಮನಿರ್ಣಯಕೆ
ಮಿಸುಪಚಂದ್ರಸುಕಾಂತಶಿಲೆ ಸಂ
ಧಿಸಿದ ಘನಸೋಪಾನ ಪಂಕ್ತಿಯ
ವಿಸರುಹಾಕರಕಿಳಿದಳಾ ಮೃಗಸುಳಿವ ಸಮಯದಲಿ ೧೯

---

[1] ವಿನ ರೂಪಾಗಲಾ (ಕ), ರೂಪಲಿ ಸುಳಿಯಲಾ (ಚ.ಜ). [2] ಯೆಂದೊಲಿ (ಚ.ಟ). [3] ಮತ ನಿನಗಿನ್ನ (ಕ), ಮನ ನಿನಗಿನ್ನು (ಜ), ಗತಿ ನಿನಗಿನ್ನು (ಗ.ಣ), ಮತಿ ನಿನಗಿನ್ನು (ಡ). [4] ದೊಳಗೆ ಕದ್ದಮಮ ಬಾಲಹಿಮಾಂಶು (ಕ), ದಿ ತಳಿದಾ ವಿಮಳಪೂರ್ಣಸುಧಾಂಶು (ಗ). [5] ವಮಮ (ಕ.ಟ). [6] ಬಳಿ (ಚ), ತಡಿ (ಟ) [7] ಕುಶನೆ ಕೇಳಾ ಸಮಯದಲಿ (ಕ). [8] ಶಶಿ (ಕ.ಡ.ಣ).

ಮುಗಿದವೀ ಚಂದ್ರಾನನೆಯ ಬರ
ವಿಗೆ ಸರೋರುಹಷಂಡ ವಿರಹದ
ಢಗೆ ವಿತಾಳಿ[1]ಸೆ[1] ಜಕ್ಕವಕ್ಕಿಗಳೊಕ್ಕವಶ್ರುಗಳ
ನಗೆಯಲೆಸೆದವು ಕೂಡೆ ಕುಮುದಾ
ಳಿಗಳು ಕರಣಭ್ರಮೆಯಲಿಂದುವ
ಗಗನದಲಿ ಮೃಗ ನೋಡಿ ಮುರಿದೀಕ್ಷಿಸಿತು ಮಾನಿನಿಯ ೨೦

ಶಿವಶಿವಾ ಸರಸಿರುಹಭವನು
ದ್ಭವ ಪರಂಪರೆಯಿಂದ ಜನಿಸಿದ
ಯುವತಿಯರೊಳೀ ರೂಪದೆಲ್ಲಿಯದೇನು ವಿಸ್ಮಯವೊ
ತವಿ[2]ಸಿದಿಂ[2]ದ್ರಿಯನಿಕರ ಮುಗುಳು
ದ್ಭವಿಸುತಿದೆ ದರುಶನದಲಾ ವೈ
ಶ್ರವಣ[3]ನಳುಪದೆ ಮಾಣನಳಿಯದೆ ಮಾಣನ[3]ಕಟೆಂದ ೨೧

ಮಾಯೆಯೆಮ್ಮ[4]ದಿದ[4]ಲ್ಲವಾದಿಯ
ಮಾಯೆಯಾಗದೆ ಮಾಣಳೀ ಸತಿ
ಮಾಯೆಯಲಿ ಮತಿಗೆಡಿಸಿ [5]ಕೆಡಿಸಿ[5]ದಳುದಿಸಿ ರಕ್ಕಸರ
ಮಾಯುವಹುದಿನ್ನಸುರಕುಲ ನಿ
ರ್ಮಾಯನುದಿತದ್ವೇಷ ಸಮರದ
ಸಾಯಕದ ಮುಮ್ಮೊನೆಯಲೆಂದನು ತನ್ನ ಮನದೊಳಗೆ ೨೨

ಈಕೆ ಕರಚರಣಾನನಾಬ್ಜಾ
ನೀಕವನು ತೊಳೆದಂತರಂಗದ
ಲಾ ಕಕುತ್ಸ್ಥಾನ್ವಯನ ಪಾದಸರೋಜವನು ನೆನೆದು
ಕೋಕನಯನಂಗೆಱಗಿ ನೊಸಲಲಿ
ಕೋಕನದ ಕರ್ಣಿಕೆಯನಿಟ್ಟು ನಿ
ರಾಕುಳದಿ ನೋಡಿದಳು ನೆಳಲನು ನೇವರಿಸಿ [6]ನವಿರ[6] ೨೩

ಕಂಡಳುದಕದ ನೆಳಲಿನಲಿ ಕೈ
ಕೊಂಡ ಮಾಯಾಮೃಗದ ಮೂರ್ತಿಯ
ದಂಡಿಸರದಭಿನವದ ಶಿಶುಲೀಲಾಕಳಾಪಕವ

---

[1] ಸಿ (ಗ.ಚ.ಜ). [2] ಸುವಿಂ (ಗ.ಚ). [3] ನಣ್ಣನ ಬೇಟ ಕೊಲ್ಲದೆ ಮಾಣದ (ಚ). [4] ವಿದ (ಕ), ವಿವ (ಗ.ಣ). [5] ಕೊಲಿಸಿ (ಜ.ಟ), ಕೆಡಹಿ (ಣ). [6] ಮುಡಿಯ (ಚ.ಜ).

ಮಂಡೆಯನು ಮುರಿದೆತ್ತಿ ಸರಸಿಯ
ದಂಡೆಯಲಿ ನೋಡಿದಳು ಕಾಣದೆ
ಮಂಡಿಸಿದವಕ್ಷಿಗಳು ತಿಳಿಗೊಳ[1]ನಲಿ[1] ತಳೋದರಿಯು ೨೪

ಸುಳಿಸುಳಿದು ಸಂಭ್ರಮಿಸಿ ನಾಸಿಕ
ದೆಲರ ಪರಿಮಳಪೂರಭಾರವ
ಸುಳಿಸಿದುದು ಸರಸಿರುಹಗಂಧಿಯು [2]ಲಲಿತನಾಸ್ಯದಲಿ[2]
ಜಲದ ನೆಳಲಿನಲೆವೆ[3]ಚಲಿಸ[3]ದಾ
ಜಲಜಲೋಚನೆ [4]ನೋಡುತಿರ್ದಳು[4]
ವಿಲಸದಭಿನವಚಿತ್ರಗತಿಯು ಕುರಂಗಶಾಬಕವ ೨೫

ತೋಱುವುದು ನೀರಿನಲಿ ನೋಡಲು
ಜಾಱುವುದು ತೀರದಲಿ ಮಿಗೆ ಮೆ್ಯ
ದೋಱುವುದು ನೀರಿನಲಿ ತೀರದಲುಭಯಸಂಗದಲಿ
ಏಱುವಿಳಿವಕ್ಷಿಗಳು ಬಳಲಿದು
ಬೇಱೆ ಬುದ್ಧಿಯ ಕಂಡು ಗಂಡಗೆ
ದೂಱಬೇ[5]ಕೆನುತ[5]ಡಱಿದಳು ಸೋಪಾನಪಂಕ್ತಿಗಳ ೨೬

ಗಮಿಸಿದವು ಹಂಸೆಗಳು ಲಲಿತ
ಕ್ರಮದ ಸೋಂಕಿನಲಳಿಕತತಿಗು
ಭ್ರಮಿಸಿದುವು ಭ್ರಮರಾಳಿ ಬೆಂಬಳಿಯಲಿ ನಿತಂಬಿನಿಯು
ಅಮಲತರ ಪಾನೀಯರುಚಿಯಾ
ಕ್ರಮಿಸಿ ಸರಸಿಯ ಶಶಿಮುಖಿಯು ವಿ
ಭ್ರಮಸುಲಾವಣ್ಯಾಂಬುರುಚಿಯುಂ ಬೆರಸಿತಾಕ್ಷಣಕೆ ೨೭

ಬಂದುದೀ ಮೃಗಪೋತ ಭೀತಿಯು
ಮಂದಗತಿಯಲಿ ಮೃಗ ಸುನೇತ್ರೆಯು
ಹಿಂ[6]ದುಗೊಂಡೀಕ್ಷಿಸಿದಡೊ[6]ಯ್ಯನೆ ನಿಲುತ [7]ನಿಲುಕಿದಡೆ[7]
ಮುಂದಣಿಗೆ ಲಂಘಿಸುತ ಮುರಿದಡೆ
ಸಂಧಿಸುತ ಸುಮ್ಮಾನರಸದು
ಕ್ಕಂದವನು ಕಾಮಿನಿಗೆ ಕಾಣಿಸುತ್ತೈದಿತಡಿಗಡಿಗೆ ೨೮

---

[1] ದಲಿ (ಗ.ಚ). [2] ಲಲಿತನಾಸದಲಿ (ಗ), ಸುಲಲಿತಾಸ್ಯದಲಿ (ಚ), ಲಲಿತಕ ಣ್ಮನಕೆ (ಝ), ಲಲಿತನಾಸೆಯಲಿ (ಡ). [3] ಚರಿಸ (ಗ), ಹಳಚ(ಚ). [4] ನೋಡಿದಳು ಬಹು (ಚ.ಡ). [5] ಕೆಂದ (ಕ.ಜ.ಡ.ಣ). [6] ದಣಿಂದೀಕ್ಷಿಸುತಲೊ (ಗ), ದುಗೊಂಡೀಕ್ಷಿಸುತಲೊ (ಚ). [7] ನಿಗುರಿದೊಡೆ (ಕ), ನಿಲುಕಿದರೆ (ಚ.ಝ.ಟ.ಣ).

ಕೊಳಗುದಾಗಿದ ಕಲ್ಲ ರತುನಾ
ವಳಿಯುಮಾಡುತ ನೊರೆವನಿಯುಲು
ಜ್ಜ್ವಲಸುಮುಕ್ತಾಫಲವ [1]ಕೆದ[1]ಱುತ ವಿವಿಧ ತರುಲತೆಯ
ಲಲಿತಕಾಯುದ ಕಾಂತಿಯಲಿ ಹೊಂ
ಬೆಳ[2]ಗ ಪಸರಿಸುತೊಯ್ಯನೊಯ್ಯನೆ[2]
ಬಳಿವಿಡಿ[3]ದು[3] ಪರಿವೇಷದವೊಲೈದಿತು ನಿತಂಬಿನಿಯ ೨೯

ಉಟ್ಟ ಹೊಸಬೆಳುವಟ್ಟೆ ಹೊಮ್ಮಱಿ
ಮುಟ್ಟವಿಸೆ ಹೊಂಬಣ್ಣವಾದುದು
ತೊಟ್ಟ ರತ್ನಾಭರಣ ಪಲ್ಲಟಿಸಿದವು ಧಾತುಗಳು
ದಿಟ್ಟಿ ಹರಿಣನ ಮೇಲೆ ನೇಹದ
[4]ನ[4]ಟ್ಟು ಹರಿಣನ ಮೇಲೆ ಹಜ್ಜೆಗ
ಳಿಟ್ಟಣಿದಲೈದಿದಳು ನಗೆಮೊಗದಲಿ ನಿಜೇಶ್ವರನ ೩೦

ಇದ್ದನರಸ ಚಮೂರಚರ್ಮದ
ಗದ್ದುಗೆಯ ಗರುವಾಯಿಯಲಿ ಸತಿ
ಹೊದ್ದಿದಳು ಹೊಮ್ಮಱಿಯ ನೋಟದ [5]ಹೊರೆದ[5] ಹರುಷದಲಿ
ಹೊದ್ದಿತಿದು ಬೆಂಬಳಿಯಲೀ ನೃಪ
ನಿದ್ದ ಮಂದಿರದಗ್ರಭಾಗವ
ಕದ್ದುದಗ್ಗದ ಮನವ ದರುಶನದಲಿ ಧರಾಧಿಪನ ೩೧

ದೇವ ಚಿತ್ತೈಸಿದಿರಿನಲಿ ಸಂ
ಭಾವಿಸಿದಿರೇ ಕನಕರುಚಿಯ ಕ
ಳೇವರದ ಕಮನೀಯಕಲಿತ ಕುರಂಗಶಾಬಕವ
ತೀವಿಕೊಂಡಿದೆ ವಿವಿಧರುಚಿ ವಿಪಿ
ನಾವಳಿಯನಿದ ತಂದುಕೊಡಬೇ
ಕಾವ ಪರಿಯಿಂದಾದಡೆಯು ತನಗೆಂದಳಿಂದುಮುಖಿ ೩೨

ಸಲಹುವೆನು ನಾನಿಲ್ಲಿ[6] ನಮ್ಮಯ
ಹೊಳಲಿಗೊಯ್ವೆವರಣ್ಯವಾಸವ
ಬಳಸಿದದಱಿಂ ಮೇಲೆ ಬಯಕೆಯ ಸಲಿಸಬೇಕೆಂದು

---

[1] ತೋ (ಜ.ಝ). [2] ಗ ಮಾಡುತ ಚಂದ್ರಲೇಖೆಯ (ಕ.ಜ), ಗು ಗೆಯ್ಯು ತಲೊಯ್ಯನೊಯ್ಯನೆ (ಗ). [3] ದ (ಕ.ಜ). [4] ಥ (ಚ), ಗು (ಟ). [5] ಹೊಗರ (ಚ), ಹೊದರ (ಡ). [6] ವು ನಾವಿಲ್ಲಿ (ಕ.ಗ.ಜ.ಡ).

ಹಲವುಪರಿಯಲಿ ಲಲ್ಲೆಮಾತಿನ
ಲಲದು ರಾಮನ ಕೋಮಲಾಂಘ್ರಿಯೊ
ಳಿಳುಹಿದಳು ಮೂರ್ಛೆಯನು ಮುಗ್ಧಭಾವ[1]ಭಾರದಲಿ[1] ೩೩

ಐಸಲೇ ವೈದೇಹಿ ನೀನಿಂ
[2]ದೀ[2]ಸು ನಿರ್ಬಂಧದಲಿ ದಿಟ ಬಿ
ನ್ನೈಸಲೇನಿದು ದೊಡ್ಡಿತೇ ತನಗೆನುತಲೆಕ್ಕಡವ
ಬಾಸಣಿಸಿ ಪದತಳಕೆ ಪೀತಸು
ವಾಸವನು [3]ತೆಗೆ[3]ದುಟ್ಟು ಬಿಲುಬಾ
ಣಾಸನವ ಕೊಳುತೆಲೆವನೆಯು ಹೊಱವಂಟನಾ ರಾಮ ೩೪

ಅರಸಿಯಿಚ್ಛೆಯ ಸಲಿಸಲಿನಕುಲ
ದರಸ ಹೊಱವಡಲೂರ್ಮಿಳಾ[4]ಸತಿ[4]
ಯರಸ ಕಂಡನು ತನ್ನ ಭವನ[5]ದಲಿರ್ದ ಭೂ[5]ಪತಿಯು
ಸರಸರಿಸಿ ಶರಚಾಪವನು ಸಂ
ವರಿಸಿಕೊಳುತೆಲೆವನೆಯ ಹೊಱವಂ
ಟರಿದಿಶಾಪಟ[6]ಪಟುಪರಾಕ್ರಮಿಯೆ[6]ಡೆಗೆ ನಡೆತಂದ ೩೫

ತಿರುಗಿ ನೋಡಿದನೆಣ್ದೆಸೆಯನಹಿ
ತರಲಿ ಭಯವನು ಕಾಣದಣ್ಣನ
ಭರವಸಿಕೆ ತಾನೆಲ್ಲಿಗೆಂದನುಮಾನಮಾರ್ಗದಲಿ
ಹರಹುಗಾಣದೆ ಕೈಮುಗಿದು ಭಯ
ಭರಿತ ಭಕ್ತಿ[7]ಯಲೊ[7]ಯ್ಯನೀ ಬಿಲು
ಸರಳಸಂವರಣೆಯ ಸಘಾಡವಿದೇನು ಬೆಸಸೆಂದ ೩೬

ತಮ್ಮ ನೋಡೀಮೃಗವನಬುಜಜ
ನಿರ್ಮಿಸಿದ ಸೃಷ್ಟಿಗೆ ನವೀನವಿ
ದೆಮ್ಮರಸಿ ಬೇಡಿದಳು ಬಯಕೆಯ ಸಲಿಸಬೇಕೆಂಬ
ಹೆಮ್ಮೆ ನಮಗಾಯ್ತೆಂದು ನಾವೀ
ಹೊಮ್ಮಱಿಯ ತಪ್ಪನ್ನಬರವೀ
ಧರ್ಮಪತ್ನಿಯ [8]ಕಾದು[8]ಕೊಂಡಿರು ನೇಮ ನಿನಗೆಂದ ೩೭

---

[1] ಭಕ್ತಿಯಲಿ (ಖ.ಙ), ದಲಿ ಬಳಿಕ (ಜ). [2] ತೀ (ಗ.ಚ). [3] ಬಿಗಿ (ಜ.ಟ.ಙ). [4] ಪ (ಜ.ಝ.ಟ.ಙ). [5] ದೊಳಿದ್ದು ಭೂ (ಗ.ಟ), ತಿದೊಳಿರ್ದರಘು (ಚ.) [6] ಮಲ್ಲನಗ್ರಜನೆ (ಚ.ಜ), ಪಟುಪರಾಕ್ರಮನೆ (ಖ.ಙ). [7] ಯೊಳೊ (ಗ.ಚ). [8] ಕಾಯ್ದು (ಕ.ಗ.ಡ.ಙ).

ರಾಯ[1]ನಾಡಿದ[1] ನುಡಿಗೆ ನೋಡಿದ
ನಾಯತಾಕ್ಷನು ಹೊಮ್ಮಱಿಯನಿದು
ಮಾಯೆಯಲಿ ರೂಪಾ[2]ಯಿತೆಂದೇ ನಿಜವ[2] ನಿಶ್ಚೈಸಿ
ಜೀಯ ಬಿನ್ನಹ ಕಪಟವಿದು ಕಮ
ಲಾಯತಾಕ್ಷಿಯ ಕಾಮ್ಯ[3]ವಾಕ್ಯಕೆ[3]
ವಾಯುವಹುದಿಗಱಿಂದ ಬಳಲಿಕೆ ಬಹುದು [4]ನ[4]ಮಗೆಂದ ೪೮

ತೊಳಲದಡವಿಗಳಿಲ್ಲ ತೋಹಿಗೆ
ಸಿಲುಕದಿಹ ಮೃಗವಿಲ್ಲ ಬೇಂಟೆಯೊ
ಳಲಗು[5]ಗಾಣ[5]ಸದಿರ್ದ ಮೃಗವಿಲ್ಲಿಂದುಪರಿಯಂತ
ಬಳಕೆಗಿದು ಬಯಲೆಂಬ ಬಗೆ ಮಿಗೆ
ಹೊಳಕುತಿದೆ ಹೃದಯದಲಿ ಮಾತಿದ
ನಿಳಿಕೆಗಾಣದೆ ಮನೆಗೆ ಬಿಜಯಂಗೈಯಿ ನೀವೆಂದ ೪೯

ಎನಲು ಕೇಳಿದು ಬಂದು ಸೀತಾ
ವನಿತೆ ನುಡಿದಳು ಜಱೆದು ನಿಜಮೈ
ದುನನ [6]ಬಯಸಿದು ಬೇಡಲೀ ಹೊಮ್ಮಱಿಯ[6]ಲವಗುಣವ
ಅನುವರಿಸಿ ಮಾತಾಡುವುದು ನಿನ
ಗನುನಯವೆ ಸಾರತ್ತಲೆನೆ ಮಾ
ನಿನಿಯ ಝುಂಕಿಸಿ ಕಳುಹಿ ಲಕ್ಷ್ಮಣದೇವಗಿಂತೆಂದ ೫೦

ಕೇಳಿದೈ[7]ಯೆಲೆ ತಮ್ಮ[7] ನಮ್ಮಯ
ಲೋಲಲೋಚನೆ[8]ಗಾಡಿದುಕ್ತಿಯ[8]
ನಾಲಗೆಗೆ ಪುನರುಕ್ತಿಯಾಗೆ ಪುರಂಧ್ರಿ ನಗುವಳಲೆ
ಮೇಲೆ ನಾವ್ ನುಡಿದೆಡಹೆವೆಂಬುದು
ಮೇಲುಮಾತಾಗಿಹುದು ನಿನ್ನಯ
ಮೇಲುದಾಗಿನ ಮತಿಗೆ ಮತಿಯನು ಕೇಳು ನೀನೆಂದ ೫೧

---

1 ನುಡಿದಾ (ಕ.ಜ.ಝ.ಟ.ಡ.ಣ). 2 ದುದೆಂಬುದನಱಿದು (ಚ), ಯಿತೆಂಬುದ ನಿಜವ (ಜ.ಟ) 3 ದಗ್ರಕೆ (ಕ.ಣ), ವಗ್ರಕೆ (ಗ.ಝ.ಟ). 4 ತ (ಜ), ನಿ (ಝ.ಟ). 5 ದಾಗಿ (ಚ.ಜ). 6 ನೀ ಹೊಮ್ಮಱಿಯ ಬಯಸಿದು ಬೇಡ (ಕ). 7 ಸೌಮಿತ್ರಿ (ಚ). 8 ಯಾಡಿದುಕ್ತಿಯ (ಗ.ಟ.ಡ), ಗಾಡಿದುತ್ತರ (ಚ.ಜ).

ಧಿಟಕೆ ಹೊಮ್ಮುಖಿಯಾದಡಿದ ಕರ
ಪುಟದೊಳಡಗಿಸಿ ತಹೆನು ತಾನಿದು
ಕುಟಿಲಕರ್ಬುರನಾದಡಿಳುಹುವೆನಿದಱ ಮಸ್ತಕವ
ನಿಟಿಲದಲಿ ವಿಧಿ ಬರೆದ ಬರಹವ
ನಟಮಟಿಸ[1]ಲಿದಱಳವೆ[1] ಕಾದಿರು
ಕುಟಿಲಕುಂತಳಭರೆಯೆನೆನುತಡಿಯಿಟ್ಟನಾ ರಾಮ ೪೨

ಕಂಡುದಾ [2]ಕಡುಕಪಟ[2]ಮೃಗ ಕೋ
ದಂಡರಾಮನ ಮನದ ನೆನಹಿನ
ದಂಡಿಸರವನು ದಾರಿದೆಗೆದುದು ಘೋರ[3]ವಿಪಿನದಲಿ[3]
ಕೊಂಡುಹೋಹ ಕುಬುದ್ಧಿಲತೆ ಕುಡಿ
ಗೊಂಡು[4]ದುದಕರಸನನು[4] ಕಪಟಕ
ರಂಡಮೃಗ ಕಡುಚಿತ್ರಗತಿಯಲಿ ಚಿಮ್ಮಿತಿದಿರಿನಲಿ ೪೩

ಗತಿಗೆ ಗತಿ ಮುಂಚುವುದು ನಿಲವಿನ
ಗತಿಗೆ ನಿಲುವುದು ಮುರಿಯೆ ಮುರಿವುದು
ಪ್ರತಿದನಿಗೆ ದನಿದೋಱುವುದು ಲಂಘಿಸಲು ಲಂಘಿಪುದು
ಯತಿಗೆ ಸಾಧನ ಸದಮಲಜ್ಞಾ
ನ[5]ತೆಗೆ[5] ನಿಗುರ್ವವೊಲೊಡನೆ ನಿಗುರುವು
ದತುಳಮಾಯಾಮಹಿಮ ಮಾರೀಚಪ್ರತಾಪಮೃಗ ೪೪

ಮುಗಿದ ಮುಂಗಾಲುಗಳ [6]ಮುಂ[6]ದಕೆ
ಹೊಗುವ ಹಿಂಗಾಲುಗಳ ಮುರುವಿನ
ಮೊಗದ ಬೆದಱಿನ ಬಳಿಯು ನೋಟದ ನೀಳ್ದ ಕರ್ಣಗಳ
[7]ನಿಗುರೊಡಲ[7] ಮುಂಬಱಿವ ಚಿಮ್ಮುವ
ಚಿಗಿವ ಚಲನೆಯ ಚಂಗುವಾಱಿನ
ಮೃಗ [8]ಮೃಗೀ[8]ನಿಕುರುಂಬದೊಳಗಡಹಾಯ್ದು[9]ದಗಲದಲಿ[5] ೪೫

---

[1] ಲಾರಳವು (ಚ). [2] ತನ ಕಪಟ (ಕ), ಮಾಯಾವಿ (ಚ.ಜ). [3] ಗಹನದಲಿ (ಕ.ಜ.ಡ), ಗಂಹರಕೆ (ಚ). [4] ದೀ ರಘುಪತಿಯ (ಕ). [5] ತೆ (ಚ.ಝ). [6] ಹಿಂ (ಕ.ಗ.ಜ.ಝ). [7] ಮುಗಿದೊಡಲ (ಕ.ಣ), ಮುಗಿಹಿಡಲು (ಟ), ನಿಗುರುವಡಲಿನ (ಡ). [8] ವು ಮುನಿ (ಕ), ಮುನಿ (ಗ.ಝ.ಟ), ಮುನಿಯ (ಜ). [9] ದಲ್ಲಲ್ಲಿ (ಕ.ಣ), ದಡವಿಯಲಿ (ಚ), ದಿದಿರಿನಲಿ (ಡ).

ಇದೆಯಿದೆಂಬಂತೊಡನೆ ಹಿಡಿಹಿಂ
ಗೊದ[1]ಗಿಹುದು[1] ಬಯಲಾಸೆಯಲಿ ಬಿಸಿ
ಉದಕದವೊಲಡಿ ಮುಂಚುವುದು ಕೈಸೋಂಕಿಗವನಿಪನ
ಚದುರತನವನು ಮಿಕ್ಕಿಹುದು ಸದು
ಹೃದಯನನು ವಂಚಿಸುವ ಮಾಯಾ
ವಿದನವೊಲು ಮೈದೋಱಿ ತೋಱಿದೆ ಹಾಯ್ದುದ[2]ಡವಿಯಲಿ[2] ೪೬

ಇಡುಕುರಲಿ ಕುತ್ತುಱಿಲಿ ಕುಹರದ
ತೊಡಕು[3]ಮೆಳೆಗಳಲದ್ರಿ[3]ಕೂಟದ
ಲೆಡಬಲದ ತಪ್ಪಲಲಿ ತುರುಗಿದ ತರುಕದಂಬದಲಿ
ಅಡಗಿ ತೋಱುತ ನಿಲು[4]ತ[4] ನಿಗುರುತ
ತೊಡಹದಳಿಮನದಧಮಪುರುಷನ
ನುಡಿಯವೊಲು ವಂಚಿಸುತ ಹಾಯ್ದುದು ವಿಪಿನದಲಿ ನೃಪನ ೪೭

ದಾರಿಯಿದು ದರಿಯಿದು ಗುಹಾಕಾಂ
ತಾರವಿದು ಕಲುಮರನಿದದ್ಭುತ
ಘೋರದುರ್ಗವಿದುಗ್ರಕಂಟಕ ಕಠಿಣಪಥವೆಂಬ
ಆರಯಿಕೆಯಿಲ್ಲ[5]ದ[5] ಮೃಗವ್ಯಾ
ಪಾರಚಿತ್ತನುದಾತ್ತಗುಣಗಂ
ಭೀರ[6]ಗರ್ವಿತ[6]ನೈದಿದನು [7]ಕೌಳಿಕ[7] ಕುರಂಗಮವ ೪೮

ಭುಜದ ಸೋಂಕಿಗೆ ಭೂಭೂಜ
ವ್ರಜವು ಬುಡಮೇಲಾದವದ್ರಿಗ
ಳಜಿಗಿಜಿಗಳಾದವು ನಿಶಾಂತಪದಪ್ರ[8]ಘಾತ[8]ದಲಿ
ಗಜದ ಕಾಲ್ದುಳಿಪಾಳೆ[9]ಯೋ ಭೂ
ಮಿಜವೊ[9] ತಳಪಟವಾಯ್ತು ಕಾನನ
ವಜಿನಯೋ[10]ನಿ[10]ಯ ಬಳಿಯ ರಾಮನ ಪಾದಮಾರ್ಗದಲಿ ೪೯

---

[1] ಗುವುದು (ಗ.ಜ.ಟ), ವಿಹುದು (ಝ). [2] ವನಿಯಲಿ (ಗ.ಟ), ಗಲದಲಿ (ಚ.ಝ). [3] ಮೆಳಗುಗಳದ್ರಿ (ಗ), ಮೆಳೆಗಳಲದ್ರಿ (ಝ.ಟ). [4] ಕಿ (ಕ.ಚ). [5] ದೆ (ಕ.ಗ.ಜ.ಡ). [6] ವಿಕ್ರಮ (ಚ.ಜ). [7] ಗೈರಿಕ (ಕ.ಡ), ಮಾಯಾ (ಚ.ಝ). [8] ಹಾರ (ಚ.ಜ). [9] ಗಳೊ ಭೂಮಿಜವು (ಕ), ಯೊಲ್ ಭೂಮಿಜವು (ಚ). [10] ಗಿಯು (ಚ.ಜ).

ಸರಳಿಸುವ ಸಮ್ಮುಖದೊಳಡಹಾ
ಯ್ದೆರಳೆಗಳ ತೂ[1]ಳಿ[1]ದನು ತೂಳುವ
ಕರಿಗಳನು ಸೀಳಿದನು ಸೀವರಿಸುವ ತರಕ್ಷುಗಳ
ಸುರಗಿಯಲಿ ಸೆಕ್ಕಿದನು ಕುಕ್ಕಿದ
ನುರುಶರಾಗ್ರದಲಿದಿರಲೊದಗುವ
ಶರಭ [2]ಸಿಂಹ ಲುಲಾಯ[2]ಗಳನುಬ್ಬರದ ಗಮನದಲಿ ೫೦

ಕದಳಿ ಕಡ[3]ವ[3]ಮ್ಮಾವುಗಳ ಬಿಲು
ದುದಿಯಲಿಱಿದನು ಮರೆ ವರಾಹನ
ನೊದೆದು ಕೊಂದನು ಕರಡಿ ಖಡ್ಗಪ್ರಮುಖ [4]ಕೋಳ್ಮೃಗವ[4]
ಕೆದಱಲೆಚ್ಚನು ಲೋಚನಾಗ್ರವ
ನದಱಮೇಲಿರಿಸಿದನು ಮಾಯಾ
ವಿದ ಮೃಗವ್ಯಸನದಲಿ ಮಾಯಾತೀತ ಮರುಳಾದ ೫೧

ಲಾಗು ಹಿಂಗದೆ ಕಂಗಳೆವೆ ಮಱೆ
ಯಾಗದಾ ವಾತಾಯುವಿನ ಮೈ
ಲಾಗು ಲಂಘನೆಗೊಡನೆ ಲಂಘಿಸುತಂಗವಣೆ ಮಿ[5]ಗಿ[5]ಲು
ಮೇಗೆ ಮೇಗುಬ್ಬೇಳ್ವ ಸುಯ್ಲಿನ
ತಾಗುವಳ್ಳೆಯ ತೋದ ಬೆಮರಿನ
ಬಾಗುಗಳ ಗಿಡುಮರನ ಮಱೆಗಳಲಟ್ಟಿದನು ಮೃಗವ ೫೨

ತುಱುಗಿ ತೂಳುವ ಮುಗಿಲ ಮಂಡೆಯ
ಮಱೆವಿಡಿದು ನಡೆಗೊಂಬ ನಭದೆಳೆ
ವೆಱೆಯವೊಲು ನಿಗುರಿದುದು ನಿಬಿಡ ನಿಕುಂಜ ಪುಂಜದಲಿ
ತೆಱಹು[6]ಗೊ[6]ಡದೀ ಪರಿಯಲಾ ನೇ
ಸಱಗುಲಾಧೀಶಂಗೆ ಮಾಯೆಯ
ಮಱೆವಿಡಿದು ನಡೆವವರ ಗೆಲುವವರಾರು ಲೋಕದಲಿ ೫೩

---

[1] ರಿ (ಕ.ಜ.ಝ.ಟ.ಣ). [2] ಹರಿಶಾರ್ದೂಲ (ಚ.ಜ). [3] ವಿ (ಗ.ಚ). [4] ದೊಳ್ಮೃಗ (ಗ), ಮೃಗಕುಲವ (ಚ.ಜ). [5] ಗ (ಕ.ಗ.ಜ.ಝ). [6] ಗು (ಗ.ಚ).

ಸಿ[1]ಕ್ಕಿ[1]ತಿದೆಯೆಂಬಾಸೆ ಮನದಲಿ
ಮಿಕ್ಕಿಹುದು ತನ್ಮನವನದು ಹಿಂ
ದಿಕ್ಕಿಹುದು [2]ಮಿಕ್ಕಿಹುದು ಮನವನು ಮೃಗವು ರಘು[2]ಪತಿಯು
ಇಕ್ಕಿದರ್ಥಕೆ ಧಾತು ಮೈಗೊಡ
ದಕ್ಕರಿನ ರಸವಾದಿಗಳ ಕೈ
ಸಿಕ್ಕನವೊಲಳಿಯಾಸೆಯಲಿ ಬೆಂಬತ್ತಿದನು ರಾಮು ೫೪

ಚಿಗಿಯಲಂಬರ ಹೊಂಬಿಸಿಲ [3]ನೆಲ
ಕು[3]ಗುಳುವುದು ನೆಲಕಿಳಿಯಲಂಬರ
ದಗಲದಲಿ ಹೊಂಬಣ್ಣ[4]ವಹುದಾ[4] ಮೃಗದ ಕಾಂತಿಯಲಿ
ಒಗುವ ನಿಶ್ವಾಸದಲಿ ದಶದಿ
ಕ್ಕುಗಳು ಪರಿಮಳಿಸುವವು ಸೊಬಗಿನ
ಸೊಗ[5]ಸ ಬೀಱುತ ಬೀದಿವಱಿದುದು[5] ಬನದೊಳಗಲದಲಿ ೫೫

ಆಸೆಬಿಡದಟ್ಟಿದನು ಮತ್ತೆ ಪ
ಹೀಶ ಮಾರುತವೇಗದಲಿ ಮಾ
ಯಾಸುರನ ಮೃಗ ಘನಮನೋವೇಗದಲಿ ಸರಳಿಸಿತು
ಗಾಸಿಯಾದನು ಭೂಪ ಬಹಳ
ಶ್ವಾಸಲಹರಿಯ ಲಳಿಯ ತಾಳಿಗೆ
ಯಾಸರಿನ ಸರಣಿಶ್ರಮದ ಭಾರಣೆಯ ಬಿಗುಹಿನಲಿ ೫೬

ದರಿಗಳೊಳು [6]ದುಸ್ಸರಣಿಯೊಳು[6] ಡೊಂ
ಗರಗಳೊಳು ಗುಹೆಗಳೊಳು ಗಿರಿನಿ
ರ್ಜರ ತರಂಗಿಣಿ ವಾಪಿ ಕೂಪ ತಟಾಕ ಪಲ್ವಲದ
ಹೊರೆಗಳೊಳು ಹೊಲ[7]ಮೇರೆ[7]ಗಳೊಳು
ಬ್ಬರದ ಹುಲುವೊದಱುಗಳೊಳಗಲಕೆ
ಹರಿದು ಹೋರಟೆಗುಟ್ಟಿದನು ಹೊಮ್ಮಱಿಯ ಬೆನ್ನಿನಲಿ ೫೭

---

[1] ಕ್ಕು (ಕ.ಝು.ಟ.ಣ). [2] ನೋಡಲಿಕೆ ಮನವನು ಮೃಗವು ರಘು (ಕ), ಮನ ಮೃಗವಸೀ ಮೃಗಮನವನು ಮಹೀ (ಗ), ಮನಮೃಗವ ತನ್ಮೃಗವಾ ಮಹೀ (ಜ), ಮಿಕ್ಕಿಹುದು ಮನ ಮೃಗವನು ಮಹೀ (ಝು.ಣ), ಮನಮೃಗದ ಮೇಲಾಗಾ ಮಹೀ (ಡ). [3] ನಿಳೆಗು (ಗ.ಜ.ಝು.ಟ). [4] ವಾದುದು (ಚ.ಜ). [5] ಸಿನಲಿ ಸೋಜಿಗವ ಬೀಱುತ (ಚ). [6] ತತ್ಸರಸಿಯೊಳು (ಕ), ದಸಿಕುಳಿಯೊಳಾ (ಗ), ತತ್ಸರಣಿಯೊಳು (ಟ.ಡ). [7] ವೇರಿ (ಗ.ಜ.ಡ).

ಗೊಲ್ಲಪಳ್ಳಿಗಳೊಳು ಗುಹಾಂತರ
ಬಿಲ್ಲಪಕ್ಕಣದೊಳು ಮುನೀಂದ್ರರ
ಪಲ್ಲವಾಲಯನಿಕರದೊಳು ನಗರೋಪಕಂಠದೊಳು
ಹಳ್ಳವಳಿಯೂರುಗಳ ಮೇರೆಗ
ಳಲ್ಲಿ ನಗರಗ್ರಾಮಸೀಮೆಗ
ಳಲ್ಲಿ ಜೆಂಬತ್ತಿದನು ಬಿಡದಾ ಕನಕಮಯಮೃಗವ　೫೮

ತೊಳಲಿಸಿತು ಸೌರಾಷ್ಟ್ರದವನೀ
ತಳದೊಳಾ ಗೌಳಾವನಿಯ ಮಂ
ಡಲದೊಳಂಗ ಕಳಿಂಗ ಗುರ್ಜ್ಜರ ನಿಷಧ ಕಾಂಭೋಜ
ತುಳು [1]ವಿದರ್ಭ ದ್ರಾವಿಡಾವನಿ
ಗಳಲಿ[1] ಕೇರಳ ಸಿಂಧು ಮರು ಕುಂ
ತಳದ ವಿಷಯಂಗಳಲಿ ವಿವಿಧಾರಣ್ಯವೀಥಿಯಲಿ　೫೯

ಬಿಸಿಲ ಬೇಗೆಗೆ ಕಂದಿ ಕುಂದಿದ
ಮುಸುಡ ಮಸುಳಿಸಿದಂಗರೋಚಿಯ
[2]ಮುಸುಕು[2] ಕೆಂಪಿನ ಲೋಚನದ ನಿರ್ದ್ರವದ ನಾಲಿಗೆಯ
ಉಸಿರಿನುಬ್ಬ[3]ಸ[3]ದೆಡಹುವೆರಳಿನ
ಕುಸಿದ ಗಮನದ ಗಳಿತ ಸಾಹಸ
ದಸಮವೀರರ ದೇವ ಧೈರ್ಯವಿಸಂಚಮಾನನಾದ　೬೦

ಅಡಿಗಡಿಗೆ ಹಸಿವೌಕುವುದು ನೀ
ರಡಿಕೆ ನಿರ್ಬಂಧಿಸಿತು ಸಾಕಿದ
ರೊಡನೆ ಬಳಲಿ[4]ಕೆಯೆಂಬ[4] ಬಗೆ [5]ಬಲುಕರಿಸಿತವನಿಪನ[5]
ನುಡು ವೃಥಾ ಪೌರುಷವನಕಟಾ
ಬಡ ಕುರಂಗಾರ್ಭಕನ ಸಾಹಸ
ತಡೆದುದೇ ತನ್ನುವನೆನುತ ಸಾರ್ದನು ವನಸ್ಪತಿಯ　೬೧

---

[1] ವಿದರ್ಭದ್ರವಿಡವವನೀತಳದ (ಕ.ಜ), ವಿದೇಹಾದ್ರಾಪಿಡಾವನಿಗಳಲಿ (ಗ), ಪಿದರ್ಭದ್ರವಿಡಭೂಮಿಾತಳದ (ಟ). [2] ಝುಷಕ (ಕ), ಮಿಸುಪ (ಗ), ನಸಿದ (ಣ). [3] ರ (ಗ.ಚ). [4] ದೆನೆಂಬ (ಚ). [5] ಮಿಗೆಬಲದುದವನಿಪಗೆ (ಚ), ಮಿಗೆ ಬಲದುದ ವನಿಪನ (ಜ.ಟ).

ಎಳೆದಳಿರ ಸೊಂಪಿನಲಿ ಕುಸುಮದ
ಕಳಿಕೆಗಳ ಹೆಂಪಿನಲಿ ಘನಪರಿ
ಮಳದ ಪಸರದ ಕಂಪಿನಲಿ ತಂಬೆಲರ ತಂಪಿನಲಿ
ಸಲಿಸಿತಾ ಸಹಕಾರ [1]ಸೊಗಸಿನ[1]
ಸುಲಭತೆಯನರಸಂಗೆ ಬಲುಬಿಲು
ಗೊಲೆಗೆ ಗಲ್ಲವನೂಱಿ ನಿಂದಿದನೀಕ್ಷಿಸುತ ಮೃಗವ ೬೨

ಬಳಲಿದನು ಮಾರೀಚ[2]ನಾ[2] ನೃಪ
ತಿಲಕರಾಮಂಗೆಂಟುಮಡಿಯಲಿ
ಬಲುಮೆಗತಿಬೆಱಗಾದನಾ ರಾಜೇಂದ್ರಚಂದ್ರಮನ
ಛಲವ ಬಿಡ[3]ನವನೀಶನೀಗೆ
ನ್ನ[3]ಳಿವ ಹೊಡದೆ ಮಾಣನೆಂದೊಳ
ಗೊಳಗೆ ಚಿಂತಿಸುತಿದಿರಿನಲಿ ನಿಂದಿದನು ರಘುಪತಿಯು ೬೩

ಕಂಗಳನು ಹರಹಿದನು ರಾಮನ
ಮಂಗಳಶ್ರೀಮೂರ್ತಿಯಲಿ ನೆಱೆ
ಹಂಗ ಕಳೆದನು ಭವಭವದ ದುಷ್ಕರ್ಮವಾಸನೆಯ
ಸಂಗಿಯಾದನು ಸುಖಮಯದ ಮೋ
ಕ್ಷಾಂಗನೆಯ [4]ಘನಪೀನಜಘನ[4]ಕು
ಚಂಗಳಿಗೆ ಕೈನಿಲುಕಲುದ್ಯೋಗಿಸಿದನವ ಬಳಿಕ ೬೪

ಮೃಗವಿದಲ್ಲೆಂದೆಂಬ ಮತಿ ಮನ
ದೆಗಹನಿಕ್ಕಿತು ರಾಘವಂಗಾ
ಬಗೆಯಱಿದು ಮೋಹಿಸಿತು ಮಾಯಾಮೃಗವು [5]ರಘುಪತಿಯ[5]
ಚಿಗಿವುದೆಡಬಲಕುದಿರ್ದ ತರಗೆಲೆ
ಜಗುಳೆ ಬೆದಱು[6]ವುದ[6]ವನಿಜೇಶನ
ಸೊಗಡನಾಸ್ವಾದಿಸು[7]ವುದಂಜುವುದನಿಲದುಱುಬೆಯಲಿ[7] ೬೫

---

[1] ಸಾರದ (ಗ.ಝ.ಟ.ಡ). [2] ನೀ (ಕ.ಚ.ಜ). [3] ನವನೀತನಾತಂಗ (ಕ.ಝ.ಣ), ದಿಹನೀತನಾತಂಗ (ಗ), ದವನೀಶ ತನಗಿನ್ನ (ಟ). [4] ಪೀವರ ನಿತಂಬ (ಕ), ಘನಪಿಪಿನಜಘನ (ಗ). [5] ರಾಘವನ (ಕ.ಣ), ಮಹಿಪತಿಯ (ಚ.ಜ), ವಹಿಲದಲಿ (ಝ). [6] ತ್ತ (ಚ.ಜ.ಟ). [7] ತ ರಂಜಿಸಿತರಸನಿದಿರಿನಲಿ (ಚ), ತ ರಂಜಿಸಿತನಿಲನುಱುಬೆಯಲಿ (ಜ).

ನೋಡುವುದು [1]ಭವ[1]ವೈರಿಯನು ಮೆಲು
ಕಾ[2]ಡುವುದು ವಾಗೀಶರ[2]ಜ್ಞರ
ನೇಡಿಸುವವೊಲು ಸವಿದುದೆಳೆವೊಳೆವುಲ್ಲ ಮೊಗೆಮೊಗೆದು
ಕೂಡೆ ಭಕ್ತಿರಸಾಮೃತದಲೋ
ಲಾಡುವಂತಿರೆ ಸುಖಮಯದ[3]ಲ
ಕ್ಕಾ[3]ಡಿದುದು ಚಿನ್ಮಯಸದಾನಂದೈಕಭಾವದಲಿ ೬೬

ಇದ್ದುದಾ ಮೃಗವೀ ಪರಿಯ ನೆನ
ಹಿದ್ದುದೈ ರಘುಪತಿಗೆ ರಾಣಿಯ
ಲಿದ್ದ ಮನದನುಭವದ ಭಾರಿಯ ಚಿಂತೆ ಹೊಮ್ಮಳಿಯ
ಹೊದ್ದಿದನು ರವಿಯಪರದಿಗ್ವಧು
ವಿದ್ದ ಮಂಚವನಿನ್ನು ನಿಳೆಯವ
ಹೊದ್ದಬೇಕೆನುತಡಸಿ ಮೇಲ್ವಾಯಿದನು ಹೊಮ್ಮಳಿಯ ೬೭

ಲಂಘಿಸಲು ಲಾಗಳಿದು ಮೃಗವು
ಲ್ಲಂಘಿಸಿತು ರಘುಪತಿಯ ನೃಪ ನಿಡು
ಜಂಘೆಯಲಿ ನಿಗುರಿದಡೆ ನಿಗುರಿತು ನಿಮಿಷನಿಮಿಷದಲಿ
ಸಂಘಟಿತ ಸಂದರ್ಭಗತಿಗಳ
[4]ಲಂಘನೆಯ[4] ಸಂಧಾನದಟವೀ
ಸಂಗದಲಿ ಸೈವರಿದು ಸೈರಣೆಗುಂದಿದನು ರಾಮ ೬೮

ಬಳಲಿದೆನು ಬಲುಹಾಗಿ ಸಾಕಿ
ನ್ನೆಳತಟವು ತನಗೆಂಬ [5]ಬಗೆ[5] ಮುಂ
ಕೊಳಿಸಿದುದು ಮುಂಬಳಿದುದುಗ್ರಾಟೋಪಕೋಪಶಿಖಿ
ಸೆಳೆ[6]ದನಿಷುಧಿಯ[6]ಲಂಬ ತಿರುವಿಗೆ
ತುಳುಕಿ ಕೋಲನು ಕೋಡಕೈಯಿಂ
ದಳವಿಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ ೬೯

---

[1] ಖರ (ಚ.ಜ.ಟ). [2] ಕಾಡಿಸುವುದು ನಿರಕ್ತದ (ಗ), ಕಾಡಿಸುವದನೀತಿ ತ (ಣ). [3] ಲೋಲಾ (ಕ.ಗ.ಝ.ಡ.ಣ). [4] ಸಂಗಣೆಯ (ಗ), ಭಂಗಿಗಳ (ಚ), ಸಂಗದಲಿ (ಜ.ಟ), ಸಂದಣಿಯ (ಡ.ಣ). [5] ಮತಿ (ಚ.ಜ.ಟ). [6] ದು ನಿಮಿಷದ(ಜ).

ಸಾರೆ ತನಗಿನ್ನಸುರ[1]ಭವ[1]ಸಂ
ಸಾರ ಸುಖ[2]ತರವೆನುತ[2] ಜನ್ಮೋ
ತ್ತಾರಕದ ರಮಣೀಯತರ ರಾಮಾಭಿಧಾನಕ[3]ವ[3]
ಸಾರತರಜಿಹ್ವಾಗ್ರದಿಂದು
ಚ್ಚಾರಿಸುವ ಸಮಯದಲಿ ರಾಮನ
ಕೂರಲಗು [4]ಕಡಿದಿ[4]ಳುಹಿತಾ ಮಾರೀಚಮಸ್ತಕವ ೭೦

ಹಾ ಸುಮಿತ್ರಾಸೂನು ಹಾ ಸೀ
ತಾಸರೋರುಹ[5]ನಯನೆ[5] ಹಾ ಎಂ
ಬೀ ಸಗಾಢಧ್ವನಿಯಲಿಳೆಗೊಱಗಿದನು ಮಾರೀಚ
ಆ ಸುರಾರಿಗೆ ಸನ್ನೆಯಿದು ಬಳಿ
ಕೀ ಸರೋಜಾಂಬಕನ ರಾಣೀ
ವಾಸ ಕೇಳಿದು ಹಾ ಎನುತ ಹಮ್ಮೈಸಿದಳು ಧರೆಗೆ ೭೧

ಕರವ ಕದಪಿನಲಿಟ್ಟು ರಘುಕುಲ
ದರಸ ಶಿವಶಿವಶಿವಮಹಾದೇ
ವರಿದಲಾ ಸೌಮಿತ್ರಿಯಱಿದನೆನುತ್ತ ಬೆಱಗಾಗಿ
[6]ಮರಳಿದೆನು ನಾನೊಂದುಪಾಯವ[6]
ನೆರೆ[7]ಹುತಿರಲೇ[7]ನಾಗಿಹರೊ ಸರ
ಸಿರುಹಮುಖಿ ಸೌಮಿತ್ರಿಯೆನುತಳವಳಿದನಾ ರಾಮು ೭೨

ಮುಗುಳೆ ಮುಗುಳಸುರಾರಿ ಮಾಯಾ
ಮೃಗವು ಮಾಡಿದ ಮಱೆಯ ಮಱುಕದ
ದುಗುಡದಲಿ ತಿರುಗಿದನು ತಡಬಡ[8]ವೋಗುತಡವಿ[8]ಯಲಿ
ಮಗನೆ ಕೇಳ್ಕೈ ಕುಶನೆ ಜನಕನ
ಮಗಳಿಗಾದಾ[9]ಪತ್ತನುಳಿದೀ[9]
ಜಗದ ಮನುಜರ ಪಾಡದಾವುದು ಲವನೆ ಕೇಳೆಂದ ೭೩

---

[1] ಕುಲ (ಜ.ಡ). [2] ವೆನುತವನು (ಕ), ವೆಂದವನು (ಗ.ಝ). [3] ದ (ಜ.ಝ.ಟ.ಡ). [4] ಕೊಂಡಿ (ಕ.ಗ.ಟ.ಣ). [5] ವದನೆ (ಕ.ಚ). [6] ಮರಳಿದೇನಾನೊಂದುಪಾಯವ (ಕ), ಮುರಿದೆ ನಾನೀಗೊಂದು ಭಯನನು (ಗ). [7] ಹದಿರದೇ (ಕ.ಝ.ಟ), ಹಲವರೇ (ಜ), ಹದಿಂದೇ (ಡ). [8] ವೊಗುತಲಡವಿ (ಚ.ಟ.ಡ), ಹೋಗುತವನಿ (ಣ). [9] ತ್ತನುಸುರಲು (ಕ), ದವನುಳಿದೀ (ಗ.ಣ).

# ಒಂಬತ್ತನೆಯ ಸಂಧಿ

---

ಸೂಚನೆ : ಧರಣಿಜೆಯ ಬಿಱುನುಡಿಗೆ ಲಕ್ಷ್ಮಣ
ತೆರಳಿದಭಿಸಂಧಿಯಲಿ ಸೀತಾ
ತರುಣಿಯನು ಕದ್ದೊಯ್ದನಡವಿಯಲಾ ದಶಗ್ರೀವ

ಕೇಳು ಕುಶ ಲವ ಕೇಳು ಕುಶಲದ
ಕೌಳಿಕದ ಮಾರೀಚನವನಿಗೆ
ಬೀಳುತೊದಱಿದ ಬೆದಱುದನಿ ರಘುಪತಿಯು [1]ದನಿ[1]ಯಂತೆ
ಮೇಲು[2]ಡಿಯು[2] ಬಿದ್ದುದು ವಿದೇಹನೃ
ಪಾಲಕನ ಕನ್ನಿಕೆಯ ಕರ್ಣದೊ
ಳೋಲಗಿಸಿದುದು ಮನವನಪಗತರಾ[3]ಘುಪಾ[3]ಳಾಪ ೧

ಏಕೆ ಬೇಡಿದೆನಕಟ ಮೃಗವನ
ದೇಕೆ ಬಲುಹಿಂದೆನ್ನ ಗಂಡನ
ನೂಕಿದೆನೊ ಹೊಮ್ಮಱಿಯ ಬೆನ್ನಲಿ ಬಹಳಕಾನನಕೆ
ಏಕೆ ಮೈದುನನೆಂದ ಮಾತ ನಿ
ರಾಕರಿಸಿದೆ[4]ನೊ[4] ಕೆಟ್ಟೆನೈ ವಿಧಿ
ಯಾಕರಣೆಗೊಳಗಾದೆನೇ ಹಾ ಎಂದಳಿಂದುಮುಖಿ ೨

ಕೇಳಿದೈ ಸೌಮಿತ್ರಿ ಮಿತ್ರವಿ
ಶಾಲವಂಶೋದ್ಭವನ ವಚನದ
ಹಾಳಿಯನು ಹಾ ಸೀತೆ ಹಾ ಸೌಮಿತ್ರಿಯೆ[5]ಂದು[5]ದನು
ಓಲೆಗಸ್ಥಿರವಾಗದಲೆ ಭೂ
ಪಾಲನೇನಾದನೊ ಮಹಾಗ್ನಿ
ಜ್ವಾಲೆ ಜಠರದೊಳೇಳುತಿದೆ ತನಗೆಂದಳಾ ಸೀತೆ ೩

---

[1] ನುಡಿ (ಚ). [2] ದನಿ (ಚ), ನುಡಿ (ಡ). [3] ಗದಾ (ಚ). [4] ನು (ಗ.ಝ.ಣ). [5] ಬು (ಕ.ಝ.ಟ.ಡ.ಣ).

ನಡುಗಿದನು ಸೌಮಿತ್ರಿ ತಾನಾ
ನುಡಿಯ ಕೇಳಿದು ಚಿತ್ತದಲಿ [1]ಕಿ[1]
ತ್ತಡಕೆ ಬಿದ್ದುದು ಬುದ್ಧಿ ಬುದ್ಧಿಗೆ ಸಂಶಯಾಳಾಪ
ತೊಡಚಿಕೊಂಡುದು ಮನವನುತ್ತರ
ಗೊಡಲಱಿಯದವನಿಜೆಗೆ ಕಂಗ[2]ಳ[2]
ಘುಡುಘುಡಿಸುವಶ್ರುಗಳಲವನಿಗೆ ಬಾಗಿದನು ಶಿರವ ೪

ಅಕಟ ಲಕ್ಷ್ಮಣದೇವ ರಘುನಾ
ಯಕನ ಮರಣದ ನುಡಿ ನಿನಗೆ ರಂ
ಜಕವೆ ರಾಗವೆ ರಹಿಯೆ ರಸಭಾವಕವೆ ರುಚಿಕರವೆ
ವಿಕಳಗೊಂಡುದೆ ವಿಷಯವೆನ್ನಲಿ
ಯುಕುತಿಯುಂತರವೇನು ಸಾಪ
ತ್ನಕ ವಿವೇಕಕೆ ಸೊಗಸ ತಂದ್ಯೆಯೆಂದಳಿಂದುಮುಖಿ ೫

ತಾಯೆ ಚಿತ್ತೈಸಕಟ ರಾಘವ
ರಾಯನಾರೆಂದಱಿಯಲಾ ವಾ
ತಾಯುವಿನ ಮಾತ್ಯೆಸೆ ಮಾತಲ್ಲಿದು ಮಹೀಪತಿಯ
ಮಾಯೆಯನು ಮಿಕ್ಕಾದಿಪುರುಷನ
ಕಾಯ[3]ವೆಂದಱಿಯದ[3]ವಿವೇಕ
ಸ್ಥಾಯಿ ತಾಮಸಬುದ್ಧಿ ನಿಮಗೇಕೆಂದನವನಿಜೆಯ ೬

ರಾಮನಳಿದರೆ ಕಮಲಭವಸು
ತ್ರಾಮರುಳಿವರೆ ದೇವಿ ಕೈರವ
ತಾಮರಸಬಾಂಧವರು ಬೆಳಗುವರೆ ನಭಸ್ಥಳವ
ಈ ಮರುತ್ ಶಿಖಿ ಶರಧಿ ಭೂಮಿ
ವ್ಯೋಮವಿವು ಕಾಣಿಸುವವೇ ನರ
ಭಾಮಿನಿಯರೇ ನಿಮ್ಮ ನೀವು ವಿಚಾರಿಸುವುದೆಂದ ೭

ಕೃತಕಮೃಗವದು ದೇವಿ ಕೇಳಾ
ಹುತಿಯ ಕೊಟ್ಟನು ನಿಶಿತತೋಮರ
ಹುತವಹಂಗದು ಬೀಳುತೊದಱಿದುದಾಸುರಾಂಗದಲ

---

[1] ಯಿ (ಚ). [2] ಳು (ಚ.ಝ.ಣ). [3] ವೆಂದಱಿವುದು (ಕ.ಡ), ವೆಂದಱಿವುದೆ (ಚ.ಟ), ವಳಿವುದು ಕೇಳ್ (ಝ).

[1]ಹತಿ[1] ರಘುಕ್ಷಿತಿನಾಥಗಿಲ್ಲೀ
ಸ್ಥಿತಿಗೆ ನಂಬುವುದೆನ್ನ[2]ನಮಳಾ
ಚ್ಯುತನ ಭುವನಸ್ತುತ[2]ನ ರಾಮನ ತೋಱುಸುವೆನೆಂದ ೮

ಅಕಟ ಲಕ್ಷ್ಮಣದೇವ ಪ್ರತ್ಯ
ಕ್ಷಕೆ ಪ್ರಮಾಣವದೇ[3]ಕೆ[3] ಪರಮಾ
ತ್ಮಕ ಪರಾಪರನೆಂದು ನೆಱೆ ಬಾಯಾರಲೇಕೆನ್ನ
ಯುಕುತಿಗಿದು ಮಱೆಯಲ್ಲವೇ ಕೌ
ಳಿಕದ ಮಾತೇಕೆನ್ನೊಡನೆ ಸಾ
ಕಕಟ ಗಂಡನ ಕೊಂಡುಬಾ ಹೋಗೆಂದಳಿಂದುಮುಖಿ ೯

ವಿಷವ ಕೊಂಬೆನು ತಾರದಿರಲೀ
ವಸತಿಗುರಿಯನು ಚಾಚಿ ಜೀವವ
ಬಿಸುಡುವೆನು ಬೀಳುವೆನು ಘಾತೋದಕದ ಕೂಪದಲಿ
ರಸನೆಯನು ಕಿತ್ತಸುವ ನಿನಗೊ
ಪ್ಪಿಸುವೆನೆಂದಾಕ್ಷೇಪಮುಖದು
ಬ್ಬಸದ ರೋಷಾವೇಶದಲಿ ಗಜಱಿದಳು ಲಕ್ಷ್ಮಣನ ೧೦

ಬಗೆಯನಱಿದೆನು ನಿನ್ನ ಚಿತ್ತವ
ಬಗೆವ[4]ವಳು ತಾನಲ್ಲವ[4]ನ್ಯರ
ಬಗೆಗೆ ಸಿಲುಕುವಳೆಂದು ಬಗೆದೆಯಲಾ ಮನಸ್ಸಿನಲಿ
ಸೊಗಸುವವಳಹುದಲ್ಲವೆಂಬು
ಜ್ಜುಗವ ನೀನೇ ಬಲ್ಲೆಯೆನೆ ಕರ
ಯುಗಳದಲಿ ಮುಚ್ಚಿದನು ಕಿವಿಯನು ರಾಮರಾಮೆನುತ ೧೧

ತಾಯೆ ಕೇಳರೆಘುಳಿಗೆ ಮಾತ್ರಕೆ
ರಾಯನನು ತಹೆ ತಾರದಿರ್ದಡೆ
ರಾಯನಂಘ್ರಿಗಳಾಣೆ ಪುಸಿದಡೆ ನಿಮ್ಮಪದದಾಣೆ
ಈಯುಟವಿಯಲಿ ತೊಳಲುವಸುರರು
ಮಾಯೆಯಲಿ ಬಲ್ಲಿದರು ಬಹಳೋ
ಪಾಯಕುಶಲ[5]ರು[5] ಬುದ್ಧಿವಂತಿಕೆ ನಿಮ್ಮೊಳಿರಲೆಂದ ೧೨

---

[1] ಮೃತಿ (ಕ), ಹತ (ಚ). [2] ಭುವನಸ್ತುತನನಮಳಾಚ್ಯು (ಚ.ಜ.ಡ). [3] ನು (ಝ.ಟ.ಡ.ಣ). [4] ಳಲ್ಲುಳಿದವರನ (ಕ.ಗ.ಝ.ಣ). [5] ದ (ಚ.ಜ).

ಅಣ್ಣನಾಜ್ಞಾಭಂಗ[1]ಕಿದು ತಾ[1]
ತಿಣ್ಣವೀ ದೇವಿಯರ ನುಡಿ ಮು
ಕ್ಕಣ್ಣನುಗ್ರಾಟೋಪದಂತಿ[2]ರೆ[2] ಕೋಪದುಱುಬೆಯಲಿ
ಕಣ್ಣಳಿದ ಕಾಪಥ[3]ನವೊಲು ಮನ[3]
ಬಣ್ಣ[4]ಬಿ[4]ಡುತಿದೆ ಬುದ್ಧಿ ಚಿಂತೆಯು
ಕಣ್ಣಿಯಲಿ ತಾ ಕಟ್ಟುವಡೆದೆನೆ ಶಿವಶಿವಾ ಎಂದ ೧೩

ಎರಡುಚಿಂತೆಯನುಗಿದು ಸಮವಿ
ಟ್ಟೆರಡು ಕೈತೂಕದಲಿ ತೂಗಿದು
ಗುರುಲಘುವನಱಿದಿದುವೆ ಬಲವತ್ತರವಲಾಯೆನುತ
ಶರಶರಾಸನ ಖಡ್ಗ ಕವಚವ
ಧರಿಸಿ ಧಾರಿಡುವಶ್ರುಕಣದು
ಬ್ಬರದ ಚಿಂತಾಭಾರದಲಿ ಹೊಱವಂಟನಾಶ್ರಮವ ೧೪

ಕಾದುಕೊಂಡಿರಿ ಸತಿಯನೆಂದಭಿ
ವಾದನಂಗೈದನು ಮಹೀಜಲ
ವಾದಿ ಭೂತಂಗಳಿಗೆ ದಿಕ್ಕಿನ ದೇವಸಂತತಿಗೆ
ಮೇದಿನೀಶ ಬಹನ್ನಬರ ನಿಮ
ಗೈದುವುದು ಭರಭಾರವೆಂದತಿ
ಖೇದದಲಿ ಕಾಲಿಕ್ಕಿದನು ಕಾನನಕೆ ಸಂಜೆಯಲಿ ೧೫

ಮನದ[5]ಬಹಳಾಂದೋಳ[5]ದಲಿ ಭಾ
ಮಿನಿಯ ಬಿಡೆ[6]ಬೀಸಿದನು ನಡೆತಂ[6]
ದನು ಮಹಾರಣ್ಯದಲಿ ಮಾಯಾಮೃಗದ [7]ಪಥ[7]ವಿಡಿದು
ತನುಜ ಕೇಳೀಚೆಯಲಿ ಖಳಸೂ
ತನಲಿ ಸಂದುದು ಬೇಹು[8]ನಿಕಷಾ[8]
ತನುಜನವ ಯತಿಯಾದ[9]ನಾಕ್ಷಣ ಕಪಟರೂಪಿನಲಿ[9] ೧೬

---

[1] ಕೇಡಿಗೆ (ಕ), ವಿದು ತಾ (ಗ). [2] ದೆ (ಕ.ಗ.ಜ.ಝ.ಣ). [3] ರ ವನದೊಲ್ (ಕ), ನ ಮನದೊಲು (ಗ), ದವನವೊಲು (ಜ.ಡ), ದವೊಲು ಮಿಗೆ (ಝ.ಣ). [4] ಗೆ (ಕ.ಜ.ಝ.ಣ). [5] ಜನಿತವಿಷಾದ (ಕ), ಬಹುಸಂತಾಪ (ಜ), ಬಹಳಧ್ಯಾನ (ಟ). [6] ಬಿಸುಟೊಬ್ಬನೈತಂ (ಕ.ಣ). [7] ಗತಿ (ಕ.ಗ.ಝ.ಣ). [8] ರಾಕ್ಷಸ (ಕ), ಜನಕಾ (ಜ), ಕೈಕಸಿ (ಝ.ಣ). [9] ನವ ಮಾಯಾವಿಲಾಸದಲಿ (ಕ), ನಾಕ್ಷಣ ಕಪಟಕೌಶಲದ (ಗ.ಝ.ಣ).

ಶಿರದ ಮುಂಡನದಕ್ಷಮಾಲೆಯ
ಕರದ ದಂಡು ಕಮಂಡಲದ ಬಂ
ಧುರದ ಕಾಷಾಂಬರದ ಕೌಪೀನದ ಕಳೇವರದ
ಜರೆಯಜರುಗಿದ ಬೆನ್ನಿನಲುಗುವ
ಶಿರದ ಶೂಲಿಯ ಸಟೆಯ ನಾಮ
ಸ್ಮರಣೆಯಲಿ ಮೈದೋಱಿದನು [1]ಮಾಯಾಮಹೀಸುತೆಗೆ[1] ೧೭

ಇದೆ ದಿಲೀಪಾನ್ವಯನ ವಿಶ್ರುತ
ಸದನ ವಿಪ್ರಪ್ರಿಯನ ಗೃಹವಿಂ
ತಿದೆ ಮಹಾಧಾರ್ಮಿಕನ ಪುಣ್ಯಾಶ್ರಮವಿದೇಯೆನುತ
ಮುದದ ತುದಿಯಲಿ ತೋಱುವಧಿಕಾ
ಸ್ಪದದವೊಲು ಪುಣ್ಯಾಂಗನೆಯನಘ
ಹೃದಯನೈದಿದನಪರಸಂಧ್ಯಾಸಮಯದಗ್ರದಲಿ ೧೮

ಮಾತಿದೆಲ್ಲಿಯದೆನುತ ಬಾಗಿಲ
ಲಾ ತಪೋಧನವೇಷದಲಿ ಕಾ
ಮಾತುರನ ಕಪ[2]ಟಾನ್ವಿತನ ಕಡು[2]ನರಕಭಾಜನನ
ಪಾತಕನ ಪರಿಯಱಿಯದಾ ಭೂ
ಜಾತೆ ಯತಿಯೆಂದೇ ಬಗೆದು[3] ಸಂ
ಪ್ರೀತಿವಚನದಲಸುರಮುನಿಗಿಂತೆಂದಳುಚಿತದಲಿ ೧೯

ಅಹುದಿದೀಗ ಮಹೀಸುರಪ್ರಿಯ
ಗೃಹವು ಧಾರ್ಮಿಕನಿಳಯವಿದು ತಾ
ನಹುದು ನೀವೆಲ್ಲಿಂದ ಬಂದಿರಿ ಬಿಜಯಮಾಡೆನಲು
ಮಹಿಳೆ ಕೇಳ್ ಯಜಮಾನನಿಲ್ಲದ
ಗೃಹ[4]ವು ನಮಗಸ್ವಾಮ್ಯ[4] ಸಂಧ್ಯಾ
ವಿಹಿತಕೃತ್ಯಕೆ [5]ಠಾವು ಸಾಕೆ[5]ಮಗಿದುವೆ ಸೊಗಸೆಂದ ೨೦

---

[1] ಮಹಿಳಾಶಿರೋಮಣಿಗೆ (ಕ), ಮಾಯೆಯಯಲಿ ಭೂಸುತೆಗೆ (ಗ), ಮಾಯೆಯಯಲ ಮಾನಿನಿಗೆ (ಜ). [2] ಟದಲಿ ನೋಡುವ (ಗ). [3] ದೆಂಬ ಗುರು (ಗ.ಚ), ದೆಂಬ ಘನ (ಣ). [4] ವಯೋಗ್ಯವು ನಮಗೆ (ಕ). [5] ಸಾಕು ಠಾವೆ (ಕ.ಗ.ಝ.ಣ).

ಬಿಜಯಮಾಡಿ ಗೃಹಾಂತರಾಳಕೆ
ಭಜಕರಾವ್ ನಿಮಗೈಸೆ ಭವದಾ
ತ್ಮಜೆಯಲಾ [1]ಭಾವಿಸಲು[1] ಕುಳ್ಳಿರಿ ಲೇಸು ಮಾಡಿದಿರಿ
ವಿಜಯರಾಮನನಗಲ್ದ ಚಿಂತಾ
ರಜನಿಗಾದುದು ನಿಮ್ಮ ಪದಪಂ
ಕಜಪತಂಗೋದಯದ ಬೆಳಗೆಂದಳು ಸರೋಜಮುಖಿ ೨೦

ಮನದೊ[2]ಳವನೀವನಿತೆ[2] ತನಗಹ
ನೆನಹು ನೆಲೆಗೊಳದೆಂಬ ದೃಢಯೋ
ಚನೆಯನೇ ನಿಶ್ಚೈಸುತೊಳಹೊಕ್ಕನು ದಳಾಲಯವ
ಜನಕಸುತೆ ಭಕ್ತಿಯಲಿ ದರ್ಭಾ
ಸನವನಿತ್ತುಪಚರಿಸಿ ನಮ್ಮಯ
ಜನಕ ಬಂದವೊಲಾಯಿತೆಂದಳು ಮುಗಿದು ಕರಯುಗವ ೨೧

ಆವ ಕಡೆ [3]ನಿಜದೇಶವಾಸವ[3]
ದಾವುದಮಳಕ್ಷೇತ್ರ ತೀರ್ಥದ
ಠಾವು ತಾ ನಿಮಗೆಲ್ಲಿ ನಮ್ಮಾಶ್ರಮಕೆ ಬರವೇನು
ನೀವು ವೃದ್ಧರು [4]ನಿಮಗೆ[4] ಶುಶ್ರೂ
ಷಾವಲಂಬನವಿಲ್ಲವೆಂದಭಿ
ಭಾವಭಕ್ತಿಯಲುಪಚರಿಸಿದಳು ಕಪಟತಾಪಸನ ೨೨

ವಾಸವೆಮಗೇನಿದ್ದುದುತ್ತಮ
ವಾಸ[5]ನಾ[5] ಜನದುಪಚರಿಯದಿಂ
ದೀ ಶರೀರವ ಸಲಹುವೆವು ಪ್ರಾರಬ್ಧಫಲವಿಡಿದು
ದೇಶದೇಶವ ತೊಳಲಿದೆವು ಹಿಂ
ದೀಸುದಿನವಿನ್ನೊಂದು ಲಂಕಾ
ದೇಶವಿದೆ ಸಂಕಲ್ಪಸೀಮೆಗೆ ಕಾಂತೆ ಕೇಳೆಂದ ೨೪

ಗಮನವಲ್ಲಿಗೆ ಘಟಿಸಿದರೆ ನಾವ್
ಸುಮನಸರಿಗಿಂದಧಿಕ ಕೇಳೆಲೆ
ಕಮಲಮುಖಿ ಕಾಮ್ಯಾರ್ಥವಿದು ಸಮನಿಸೆ ಕೃತಾರ್ಥರಲೆ

---

[1] ನಾ ನಿಮಗೆ (ಕ.ಝ). [2] ಳಾ ಖಳನೀಕೆ(ಗ), ಳವನೀತನುಜೆ (ಝ), ಳವನವನೀಕೆ (ಡ). [3] ನಿಜವಾವದೇಶವ (ಕ.ಣ), ನೀವಾವದೇಶವ (ಗ.ಟ). ನಿಜವಾಸದೇಶವ (ಡ.ಣ). [4] ನಿಮ್ಮ (ಕ.ಗ). [5] ವಾ (ಗ.ಝ.ಣ.), ನೆಯ (ಟ)

ಶ್ರಮವಳಿದುದಿಂದಿನಲಿ ನಿಮ್ಮಾ
ಶ್ರಮಕೆ ಬಂದುದರಿಂದ ನೀನು
ತ್ತಮೆಯಃಲಾ ಪ್ರಿಯವಿದ್ದುದೆಮ್ಮಯ ಮೇಲೆ ನಿನಗೆಂದ ೨೫

ಎನುತ ಕಂಗಳ ಹರಹಿದನು ಕಾ
ಮಿನಿಯ ಕೋಮಲ ಕಾಯದಲಿ ತನು
ಮನಸಿಜಗೆ ಗುಱಿಯಾಯ್ತು ಕಳವಳಿಸಿದವು ಕರಣಚಯ
ನೆನಹಿನನುರಾಗತೆ ಧರಿತ್ರೀ
ತನುಜೆಯಲಿ ನೆಲೆಯಾಯ್ತು ಯೋಗದ
ಜಿನುಗು ಜಾಱಿತು ಜಪದ ಜಿಹ್ವೆಗೆ ಜಾಡ್ಯ[1]ತನವಾಯ್ತು[1] ೨೬

ಅಡಗಿತಾಕ್ಷಣ ದಂಡು ಮೆಲ್ಲನೆ
ಸಡಿಲಿಹೋಯಿತು ಕರಕಮಂಡಲ
ಮಿಡುಕು ನಿಂದುದು ಬೆರಳನಾಮಸ್ಮರಣೆಗಳು ಹರನ
ಸಿಡಿದು ಹಾಱಿತು ಜರೆಯ ಜಾಡ್ಯದ
ತೊಡಹದರ್ಥವಯೋವಿಲಾಸದ
ಜಡೆಯ ತಾಪಸಿಯಾಗೆ ಮನದಲಿ ಹೆದಱಿದಳು ಸೀತೆ ೨೭

ಮರಳಿ ಮರಳಿ ಮನೋವಿಕಾರದ
ಹರಹುಗುಂದದೆ ದೇವಿಯರ ಸೌಂ
ದರಿಯದಂಗೋಪಾಂಗದಲಿ ಹರಹಿದನು ಕಣ್ಮನವ
ಅರರೆ ಮನ್ಮಥನೀ ಸತಿಯಲವ
ತರಿಸಿದನೊ ಶಿವ ಎನುತ ಮನದಲಿ
ಮರುಳುಗೊಂಡನು ಮೃತ್ಯುವೆಂಬುದನಱಿಯದ[2]ಸುರೇಂದ್ರ[2] ೨೮

ನೆಱೆವವೇ ಕಣು ನಾಲಗೆಗಳನಿ
ತಱಲಿ ಶಕ್ರನ ಸರ್ಪರಾಜನ
ಮಱೆಯ ಮಾತೇನೀ ಸತಿಯ [3]ನೋಡುವರೆ ಹೊಗುಳುವರೆ[3]
ಹೆಱೆಯ ಹೊತ್ತನ ಹೊಕ್ಕಳಲಿ ಹೊ
ಮಱುಬಿದಾತನ ಮಗಳಿಗಳುಪಿದ
[4]ಮೊಱೆಯುವನ ಹೆಂ[4]ಡಿರನು ಬಲ್ಲೆನು ಕಂಡು ತಾನೆಂದ ೨೯

---

[1] ಗುಣವಾಯ್ತು (ಗ), ತರವಾಯ್ತು (ಚ), ವಾಯ್ತೆಂದ (ಝ), ...ವ ಬಳಿಕ (ಗ.ಚ.ಟ). [3] ಹೊಗಳುವರೆ ನೋಡುವರೆ (ಕ.ಣ), ನೋಡುವಡೆ ...ಗಳುವಡೆ (ಗ). [4] ಮೊಱೆಯುವರ ಹೆಂ (ಕ.ಟ.ಣ), ಮೊಱೆಯಲಿಯ ಪೆಂ (ಗ).

ಈಸು ಚೆಲುವಿಕೆ [1]ಹೊತ್ತುದಿಲ್ಲ[1] ಮ
ಹಾಸತಿಯರವರ್ಗಳಿಗೆ ರಾಣೀ
ವಾಸದಭ್ಯಂತರವು ಮಿಕ್ಕಿನ ಸುರವಧೂನಿಕರ
ಈ ಸೊಬಗು [2]ಸೌಭಾಗ್ಯ ವಿಭವ[2]ವಿ
ಲಾಸ ವಿಭ್ರಮ ಹಾವ ಭಾವ ಸು
ರಾಸುರೋರಗನರವಧೂ[3]ಜನನಿಕರಕಿ[3]ಲ್ಲೆಂದ ೩೦

ತಂಗಿ [4]ತಪ್ಪದೆ ನುಡಿದಳೀ[4] ಲಲಿ
ತಾಂಗಿಗೋಸುಗ [5]ನಾಸಿಕದ ಬಲು[5]
ಭಂಗ [6]ಭಾರಿಸಿತಳಿ[6]ದರದಱಿಂ ದೂಷಣಾದಿಗಳು
ಹಿಂಗದಾ ಬಳಿಹುಯ್ಯಲೆ[7]ಮ್ಮನ[7]
ನಂಗಕೇಳಿಗೆ ತಂದುದಿದಕೆ
ಮ್ಮಂಗವಣೆ ಮುಂಚಿದರೆ ಮೂಜಗಕಧಿಕರಾವೆಂದ ೩೧

ಎಲೆ ಪಯೋಧರಭಾರೆ ಶಶಿಮಂ
ಡಲನಿಭಾನನೆ ಪೀನಜಘನ
ಸ್ಥಳೆ ಸರೋರುಹನಯನೆ ಸಿಂಧುರಗಮನೆ ಶುಕವಚನೆ
ಲಲಿತಚಂದನಗಂಧಿ ಕೇಳೀ
ಗಳು ಮಹಾಮಾರೀಚನೆಂಬ
ಗ್ಗಳದ ಮಾಯಾಮೃಗದಲಳಿದನು ರಾಮನೆಂಬ ನೃಪ ೩೨

ಆತ ನಿನಗೇನಹನು ನೀ ತಾ
ನಾತಗೇನಹೆ ಹೊಲಬಿನಿಂದವೆ
ಮಾತಿನಿಂದವೆ ದಂಪತಿಗಳೆಂಬಂತೆ ತೋಱುತಿದೆ
ಏತಕಕಟಾ ಕಳುಹಿ ಕೆಡಿಸಿದೆ
ಶಾತಕುಂಭಕುರಂಗದೆಡೆಗಿ
ನ್ನೀತ್ರ[8]ಕೌ[8] ಮರುಳಾ[9]ಡಲದು ತಾ[9] ವಿಧಿಯ ಲಿಪಿಯೆಂದ ೩೩

---

[1] ಯುದಿಸಿತ್ತಿಲ್ಲಿ (ಕ), ಎಸೆದುದಿಲ್ಲ (ಟ). [2] ಸೌಂದರ್ಯ ಸೌಖ್ಯ (ಕ). [3] ಜನತತಿಯೊಳ್ (ಕ.ಣ), ನಿಕುರುಂಬಕಿ (ಝ.ಟ). [4] ನುಡಿದುದು ತಥ್ಯವೀ (ಕ). [5] ಸೋದರಿಯ ಮುಖ (ಕ). [6] ವಾದುದು ಮಡಿ (ಕ), ವಾದುದು ತಳಿ (ಗ.ಜ.ಝ). [7] ನ್ನನ (ಚ.ಜ.ಡ). [8] ಕಾವ್ (ಕ.ಗ.ಡ.ಣ), ಕಿದು (ಟ). [9] ಗಲದು ತಾ (ಗ.ಚ.), ದೆ ತಾನಿದು (ಟ).

ಹೋಗುತಾತನ ಬಳಿಯಲೊಬ್ಬನು
ನೀಗಿದನು ನಿಜತನುವ ನಿನ್ನುಪ
ಭೋಗ[1]ವಿನ್ನೇನಿದ್ದುದೋ[1] ಶಿವಶಿವಮಹಾದೇವ
ಹೋಗಿ[2]ಬಹೆವೇ ನಾವೆನುತ್ತನು
ರಾಗದಲಿ[2] ನಿಂದಿರಲು ಕಾಮುಕ
ನಾಗದಿರನಿವನೆನುತ ಕಳವಳಿಸಿದಳು ಕಮಲಾಕ್ಷಿ ೩೪

ಏಳುತವ[3]ನಾ ಭಿಕ್ಷು[3]ವೇಷವ
ಬೀಳುಕೊಟ್ಟನು ತೋಱಿದನು ದಶ
ಮೌಳಿಗಳ ಮದದುಬ್ಬುಗೊಬ್ಬಿನ ಬಾಹುದಂಡಗಳ
ನೀಲಮೇಘನಿಭಾಂಗದುರುದಂ
ಷ್ಟ್ರಾಳಿಗಳ ಮಣಿಕಾಂಚನದ ಮಕು
ಟಾಳಿಗಳ ವಿವಿಧಾಭರಣದಭಿನವದ ರೂಪಕವ ೩೫

ಸುರರ ಬಿರುದಿನ ಹಾಹೆಗಳ ಸುರು
ಚಿರದ ಶೋಣಾಂಬರದ ಜವ್ವನ
ಹೊರೆದ ಹೊಗರಿನ ವೀರರಸ ಬಿಡದೊಸರ್ವ ಮೊಗರಸದ
ಸ್ಮರವಿಕಾರದ ಮನದ ನೋಟದ
ಗರುವಿಕೆಯಲೀ ಮಾತ [4]ನುಡಿದನು[4]
ತರುಣಿ ನೋಡಾ ತನ್ನ ತಾನಾರೆಂದು [5]ಕೇಳೆಂದ[5] ೩೬

ನಳಿನಮುಖಿ ಕೇಳಖಿಳ ಭುವನಾ
ವಳಿಗಳೆನ್ನವು ಸಕಲ ದಿವಿಜಾ
ವಳಿಗಳೆನ್ನಯ ಬಂಟರೂರ್ವಶಿಮುಖ್ಯ ಸುರಕುಲದ
ಲಲನೆಯರು ತೊತ್ತಿರು ಸುರೇಂದ್ರನ
ಹೊಳಲ ಸುರತರು ಕಾಮಧೇನುಗ
ಳೊಳಗುಗೊಟ್ಟಿಹವೆನಗೆ ತನ್ನಯ ಹೆಸರ ಕೇಳೆಂದ ೩೭

---

[1] ಮೋಣೇನಿದ್ದುದೋ (ಕ), ನಿನಗೆನುತಿರ್ದುದೋ (ಗ), ನಿನಗೇನಿದ್ದುದೋ (ಜ), ಫಲವೇನಿದ್ದುದೋ (ಝ.ಣ), ನಿನಗೆಂತಿದ್ದುದೋ (ಡ). [2] ಬಹೆವೇ ನಾವೆನುತ್ತಘಸಾಗರನು (ಕ), ಬಹೆವಾವೆಂದೆನುತ್ತಘಸಾಗರನು (ಗ), ಬರಲೇ ನಾವೆನುತ್ತನುರಾಗದಲಿ (ಝ.ಟ.ಡ.ಣ). [3] ಸನ್ಯಾಸಿ (ಜ.ಟ.ಡ). [4] ನೆಂದನು (ಗ.ಝ.ಡ.ಣ). [5] ಬೆಸಗೊಂಡ (ಚ), ನೋಡೆಂದ (ಡ.ಣ).

ಚಂಡವಿಕ್ರಮನುರುತ್ರಿಲೋಕೀ
ಗಂಡ ರಾವಣನೆಂಬ ಜಗದು
ದ್ದಂಡವೆಸರೆನ್ನೈಶ್ವರಿಯಕಜಹರರು ಪಾಡಲ್ಲ
ಕಂಡೆನೆನ್ನದೆ ಕಾಣೆನೆನ್ನದ
ಖಂಡಶೌರ್ಯ[1]ನ ನೋಡು ನಿನಗಾ[1]
ದಂಡಿಯುಳ್ಳವನೇ ವಿವೇ[2]ಕಕೆ ಮನವ ಮಾಡೆಂದ[2] ೩೮

ಪುರುಷರೊಳಗುತ್ತಮನು ತಾ [3]ನರ[3]
ತರುಣಿಯರೊಳುತ್ತಮೆ ಕಣಾ ನೀ
ಸುರನರೋರಗಲೋಕದೊಳಗಿದು ಸುಪ್ರಸಿದ್ಧ[4]ವಲ[4]
ಸ್ಮರಕಣಾ ತಾ ರತಿಕಣಾ ನೀ
ಮರಳಿ ಮಾತಿನ್ನೇಕೆ ನಡೆ ಸಂ
ಕರದ ಸಂಶಯವಿನ್ನದೇಕೆ ಲತಾಂಗಿ ಕೇಳೆಂದ ೩೯

ಚೆಲುವೆ ನೀನೆಂದಱಿದು ಬೀಸಿದ
ಬಲೆಯಿದೀಗಿಟ್ಟೋಲೆ ಸುಸ್ಥಿರ
ವೆಲೆ ಮಹೀಸುತೆ ಕೇಳು ತನ್ನಿಂದಾವ ಭಯಬೇಡ
ತಳಿರಡಿಗಳಿಂದಿತ್ತ ಮೆಲ್ಲನೆ
ಚಲಿಸುವುದು ಸುಪ್ರೌಢಿಯೆನೆ ನಿ
ರ್ಮಳಪತಿವ್ರತೆ ತಾಯಿ ಕೆಡೆನುಡಿದಳು [5]ಸರೋಷದಲಿ[5] ೪೦

ಎಲವೊ ಪಾತಕಿ ಹೊಲೆಯ ಹೊಱವಡು
ತಲೆಗಳಿವು ನಿನಗುಳಿ[6]ಯದಕಟ[6]
ಗ್ಗಳಿಸು ದೈವವ ಕೆಣಕಿ ನೀರಲಿ ನೆರೆದೆ ಹೋಗೆನುತ
ನಳಿನಮುಖಿ ಹಲವಂಗದಲಿ ಬೈ
ದೊಳಗುಗೊಡದಿರೆ [7]ಕೋಪದಲಿ ಕಳ
ವಳಿಗ ಕಾಂತೆಯ[7] ಕಬರಿಯನು ಹಿಡಿದೆಳೆದನಂಗಳಕೆ ೪೧

---

[1] ನು ತಾನು ನಿನಗಾ (ಗ.ಝ). [2] ಕಿಸಿ ನೋಡು ನೀನೆಂದ (ಗ), ಕದಿ ನೋಡು ನೀನೆಂದ (ಚ.ಝ.ಡ). [3] ವರ (ಕ.ಜ.ಝ.ಡ.ಣ). [4] ಕಣ (ಕ.ಗ.ಝ.ಟ). [5] ದಶಾನನನ (ಕ), ನಿಶಾಚರನ (ಜ.ಝ.ಡ.ಣ). [6] ವದಕಟ (ಗ.ಟ), ವವೇನ (ಜ), ವವೇಕ (ಡ). [7] ಕಳವಳಿಗ ಕೋಮಲಲತಾಂಗಿಯ (ಕ), ಕೋಪದಲಿ ಕಳವಳಿಸಿ ಕಾಂತೆಯ (ಗ.ಝ.ಟ).

ಬೇಡಬೇಡೆಂಬಂತೆ ಮರನ
ಲ್ಲಾ[1]ಡುತಿರ್ದುವು ಬನದ ಖಗಕುಲ[1]
ವೀಡಿಱಿದು ನೆರೆದಱಿಚಿ ಹೊಯ್ದುವು ಖಳನ ಮಸ್ತಕವ
ನೋಡದವನಪಶಕುನ ಮುಖದಲಿ
ಜೋಡಿಸಿದನೆಳೆದೊಯ್ದು ರಥದಲಿ
ಕೂಡೆ ಹಾಹಾ[2]ಕ್ರಂದ[2]ನಧ್ವನಿ ತುಂಬಿತಂಬರವ ೪೨

ಬಾಯ ಹೊಯ್ಗುಳಲಬಲೆ ದಿಗುಸಮು
ದಾಯ ಮಾರ್ದನಿದೋಱಲೊ[3]ಱಲಿದ[3]
ಳಾಯತಾಕ್ಷನ ದುಷ್ಟಶಿಕ್ಷನ ಸುಜನರಕ್ಷಕನ
ರಾಯರಾಮನ ವೈರಿಗಿರಿವ
ಜ್ರಾಯುಧನನುದ್ದಂಡಶೌರವೆಯ
ರಾಯನನು ಕರೆಕರೆದು ಮೊಱೆಯಿಡು[4]ತಿರ್ದಳಾ ಸೀತೆ[4] ೪೩

---

[1] ಡುತಿರ್ದುವು ಬನದ ಖಗಮೃಗ (ಕ.ಣ), ಡಿದವು ಖಗಕುಲವಿಹಂಗಗಗ (ಚ). [2] ಕ್ರಾಂತ (ಜ.ಝ.ಟ.ಡ). [3] ದಱಿ (ಕ.ಜ.ಟ.ಡ.ಣ). [4] ತಾ ವಿದೇಹಸುತೆ (ಕ.ಝ.ಣ), ತೈದಿದಳು ಸೀತೆ (ಚ).

# ಹತ್ತನೆಯ ಸಂಧಿ

---

**ಸೂಚನೆ :** ರಾಯದಶರಥ ಪರಮಬಂಧು ಜ
ಟಾಯುವನು ಗೆಲಿದದಟರಕ್ಕಸ
ರಾಯ ಲಂಕಾಪುರವ ಹೊಕ್ಕನು ಜನಕಸುತೆಸಹಿತ

ಕುಶನೆ ಕೇಳಂಬರವನವಲಂ
ಬಿಸಿದುದಸುರವರೂಥ ಬಾಯಲಿ
ಬಸುಱಿನಲಿ ಕರವಾಡಿದವು ಕುಂಭಿನಿಯನಂದನೆಯ
ದೆಸೆದೆಸೆಗೆ ಬಾಯ್ಬಿಟ್ಟಳಮರ
ಪ್ರಸರದಲಿ ಮೊಱೆಯಿಟ್ಟಳಿನಕುಲ
ದಸಮುವೀರ[1]ರ[1] ಕರೆಕರೆದು ಕಂಗೆಟ್ಟ[2]ಳಬುಜಾಕ್ಷಿ[2] ೧

ಸೆಳೆವುತಿದೆ ಕಾಳ್ಗಿಚ್ಚು ಕಡುಕೋ
ಮಲದ ಲತೆಯನು ಕೊರಳ ಹಿಡಿದೆಳೆ
[3]ದುಲಿವು[3]ತಿದೆ ಹೆಬ್ಬುಲಿ ಸುಧೇನುವನಕಟ ಬಲುಕರಿಸಿ
ಬಳಸುತಿದೆ ದುಷ್ಕೀರ್ತಿ ಕೀರ್ತಿಯ
ನೆಲೆ ರಘುಕ್ಷಿತಿನಾಥ ಬಿಡಿಸೈ
ಖಳನ ಕೈಸೆರೆಯಂಗನೆಯನೆಂದೊ[4]ಱಲಿ[4]ದಳು ಸೀತೆ ೨

ರಾಮ ಬಿಡಿಸೈ ಖಳಕುಲಸ್ಮರ
ಭೀಮ ಬಿಡಿಸೈ ರಾಕ್ಷಸಾನ್ವಯ
ಸೋಮ[5]ಸಂಭವ ಬಿಡಿಸು ವಿದಳ[5]ಮೃಗೇಂದ್ರ ಬಿಡಿಸಕಟ
ತಾಮಸನ ತಡೆಗಡಿದು ಭೂತ
ಸ್ತೋಮಕುಣಬಡಿಸೈ ನಿಶಾಚರ
ಕಾಮುಕನ ಕೈಸೆರೆಯ ಬಿಡಿಸೆಂದೊಱಲಿದಳು ಸೀತೆ ೩

---

[1] ನ (ಜ.ಝ.ಟ.ಡ). [2] ಳಾ ಸೀತೆ (ಜ.ಟ.ಡ). [3] ದೊಯ್ಯು (ಕ.ಟ.ಣ), [4] ದಱು (ಕ.ಜ.ಝ.ಣ). [5] ಸಂಭವವಿದಳ ವಿದಿತ (ಗ), ಸಂಭವ ಸಂಗದಳನ (ಜ.ಟ.ಡ), ಸನ್ನಿಭ ಬಿಡಿಸು ವಿದಳ (ಣ).

ಕೇಳದಿಹುದುಚಿತವೆ ರಘುಕ್ಷಿತಿ
ಪಾಲ ನಿನ್ನಂಗನೆಯು ಭಂಗದ
ಮೇಲುಹುಯ್ಯಲ [1]ಕೇಳಿ ಮನುಕುಲದವರು ಕುಂದುಗಳ[1]
ತಾಳುವರೆ ಸೈರಿಸುವರೇ ದು
ಶ್ಶೀಲಚರಿತವನೂರ್ಮಿಳಾವರ
ಲೋಲ ನಿನಗೇಕಕಟ ನಿಷ್ಕೃಪೆಯೆಂದ[2]ಳಬುಜಾಕ್ಷಿ[2] ೪

ಜಱೆದು ಕಳುಹಿದಳೆಂದು ಮನದಲಿ
ಕಱುಬುತನವನು ಮಾಡೆಯೆಲೆ ದಿಟ
ಕೊಱತೆಬಾರದೆ ನಿನಗೆ ಕುಲದಭಿಮಾನಭಂಗದಲಿ
ಉಱಿಸ[3]ಲ[3]ಹುದೇ [4]ಕಂದ[4] ರಘುಕುಲ
ದೆಱೆಯನನ್ಯನೆ ನಿನಗೆ [5]ಸೀತೆಯ[5]
ಸೆಱೆಯ ಬಿಡಿಸೈ ತಂದೆಯೆಂದೊಱಲಿದಳು ನಳಿನಾಕ್ಷಿ ೫

ಎಲೆ ವಸಂತನೆ ಚಂದ್ರಮನೆ ಚಾ
ಪಲಚಕೋರಿಯೆ ಚಂದ್ರಿಕೆಯೆ ಮಾಂ
ದಳಿಗೆ ಮನ್ಮಥನೇ ಮದಾಳಿಯೆ ಮತ್ತಕೋಕಿಲನೆ
ಕುಲಯುತೆಯ ಕುಂಭಿನಿಯತನುಜೆಯ
ಕಲುಷರಹಿತೆಯ ಖಳಕುಲಾಧಮ
ಬಲುಕರಿಸಿ ಕೊಂಡೊಯ್ದನೆಂದುಸುರುವುದು ರಾಮಂಗೆ ೬

ಬೇಡಿಕೊಂಡೆನು ನಿಮ್ಮ ನೀವ್ ಕೃಪೆ
ಮಾಡಲಾಗದೆ [6]ಮಾನ್ಯರಲಿ ಮಾ
ತಾಡಬಾರದೆ ಸಕಲವನದೇವತೆಗಳಿರ[6] ಪತಿಗೆ
ಮಾಡಿತಿಲ್ಲಪರಾಧವನು ಹರಿ
ಕ್ರೋಡ ಖಡ್ಗಿ ಕುರಂಗಿಗಳಿರೆಲೆ
ನಾಡೊಡೆಯ ರಾಮಂಗೆ ಹೇಳುವುದೆಂದಳಾ ಸೀತೆ ೭

---

[1] ಸೂರ್ಯಕುಲಜರು ಕೇಳಿರೈಯಕಟ (ಕ), ಕೇಳಿ ರಘುಕುಲದವರು ಕುಂದುಗಳ (ಜ.ಡ), ಬಳಿಯ ಮನುಕುಲದವರ ಕುಂದುಗಳ (ಟ). [2] ಳಾ ಸೀತೆ (ಕ.ಜ.ಟ.ಡ), ಳಾ ಕಾಂತೆ (ಝ). [3] ಬ (ಕ.ಚ). [4] ಮನವ (ಕ), ನೀನು (ಜ.ಝ.ಡ). [5] ತನ್ನಯ (ಕ), ತನ್ನನು (ಚ). [6] ಸಕಲವನದ ಸಘಾಡದೇವತೆಗಳಿರ ನೀವೇ ಹೇಳಿ ರಘು (ಕ).

ದಶವರೂಥ ಮಹಾಮಹೀಶನ
ಸೊಸೆಯ ಜನಕನಮಗಳ ರಾಮನ
ಶಶಿಮುಖಿಯನಪ್ರತಿಮಲಕ್ಷ್ಮಣದೇವನತ್ತಿಗೆಯ
ಅಸುರವಂಶಾಧಮನು ದುರಿತ
ವ್ಯಸನಿ ದುಷ್ಟ ದುರಾತ್ಮನಡವಿಯ
ಲಸ[1]ವ[1]ಳಿಸಿ ಕೊಂಡೊ[2]ಯ್ದನೆಂದುಸುರುವುದು ರಾಮಂಗೆ[2] ೮

ಕೇಳಿಸಿದುದಾ ನುಡಿ ವಿಹಂಗಮ
ಭಾಳನೇತ್ರನ ವೈರಿಸಮರಾ
ಭೀಳ ಚಂಚುಪುಟಪ್ರಹಾರನ ಪದನಖಾಯುಧನ
ಕಾಲಶತವಿಕ್ರಮನ ರಘುನೃಪ
ಲೋಲುಪನ ರವಿಸೂತಜನು ಬಿಡ
ದಾಲಿಸಿದನಾನನದ ನೆಗಹಿನಲಾ ಮಹಾಧ್ವನಿಯ ೯

ಪದಗತಿಯ ಪಲ್ಲಟಿಸಿ ಪಕ್ಕವ
ಕೆದಱಿ ಚಂಚುವ ಮಸೆದು ನಖಮುಖ
ದುದಿಯಲವನಿಯ ಝಡಿದು ಝಾಡಿಸಿ ಝಡಿತೆಯಲಿ ನೆಲನ
ಒದೆದು ಹಾರಿದನಬುಧಿಯಬುಧಿಯ
ನೊದೆಯೆ ಸುಮ[3]ನಸ[3]ಶೈಲ ಶಿರವನು
ಬಿದಿರೆ ಭೂತಳವದುರೆ ಪದಹತಪಕ್ಷಘಾತದಲಿ ೧೦

ಆರೆಲವೊ ಜಗದಂಬಿಕೆಯನಸು
ರಾರಿಪತ್ನಿಯ ಪರಮ[4]ನೃಪಋಷಿ[4]
ವೀರವಿಮಳವಿದೇಹತನುಜೆಯನುರುಪತಿವ್ರತೆಯ
ಚೋರತನದಲಿ ಕೊಂಡುಹೋಹ[5]ವ
ನಾರು[5] ಹೆಸರೇನೆನುತ ತಾಗಿದ
ನಾರುಭಟೆಯಲಿ ನಭಕೆ ಲಂಘಿಸಿ ರಾವಣಾಸುರನ ೧೧

ಕಡಲ ಸುಳಿಯಲಿ ಸಿಕ್ಕಿ ತಿರುಗುವ
ಹಡಗಿನಂ[6]ತಿರೆ[6] ಕಲಿಜಟಾಯುವಿ
ನೆಡಬಲದ ಪಕ್ಷಪ್ರಹತಪವಮಾನನುಱುಬೆಯಲಿ

---

[1] ದ (ಕ.ಗ.ಜ.ಟ.ಡ.ಣ). [2] ಯ್ಯುತಿಹನೆಂದೊದಱಿದಳು ಸೀತೆ (ಕ), ಯ್ಯುತಿಹನೆಂದೊಱಲಿದಳು ಸೀತೆ (ಚ). [3] ನೋ (ಕ.ಜ.ಟ.ಡ.ಣ). [4] ಋಷಿನೃಪ (ಕ.ಗ.ಝ), ನೃಪಮುನಿ (ಟ). [5] ನದಾರು (ಕ.ಝ.ಣ). [6] ದದಿ (ಚ.ಡ).

ಬಿಡದೆ ತಿರುಗಿತು ತೇರು ಮಗುಳು
ಗೃಡದ [1]ರೋಷಾ[1]ವೇಶದಲಿ ಘುಡು
ಘುಡಿಸುತೆಱಗಿದನಾ ನಿಶಾಚರಪತಿಯು ಮಸ್ತಕವ ೧೨

ಚೆಲ್ಲಿದವು ದೆಸೆದೆಸೆಗೆ ಗಗನದ
ಫುಲ್ಲಣೆಯಲುಡುನಿಕರ ಲಯದೊಳ
ಗೆಲ್ಲೊಗುವ[2]ವೊಲು ಮಣಿಗಣಾವಳಿ ಮಕುಟ[2]ಬದ್ಧರದ
ತಲ್ಲಣಿಸಿದನು ತರಣಿವಂಶಜ
ನಲ್ಲಲೇ[3]ಯೆಂದೆನುತಲಾ ಖಗ[3]
ವಲ್ಲಭನು ಬೊಬ್ಬಿಱಿದು ಬಳಿಕ ದಶಾಸ್ಯಗಿಂತೆಂದ ೧೩

ಎಲವೊ ಕೂರ್ಮನ ಬೆನ್ನು ಗಡಿ ಧ್ರುವ
ನಿಳಯ ಗಡಿ ಹೊಕ್ಕಲ್ಲಿ ಹೊಕ್ಕದೆ
ಯೆಲುವ ಮುಱಿವೆನು ಹವಣ[4]ನಾರೆಂ ದಱಿಯಲಾ ತನ್ನ
ಕಲಿಜಟಾಯು ಕಣಾ ನಿಶಾಚರ
ಜಲಧಿ ವಡಬಾನಳ ಕಣಾ ರಿಪು
ನಳಿನವನಮದಗಜ ಕಣಾಯೆನುತೆಱಗಿದನು ಖಳನ ೧೪

ದಿಟಕೆ ನೀನಿಂದೆಲವೊ ಸೀತೆಯ
ನಟಮಟಿಸಿ ಕೊಂಡೊಯ್ವ ರಕ್ಕಸ
ಭಟನೆ ಹೋಗದಿರೆಲವೊ ಹೋದರೆ ನಿನ್ನ ತಲೆ ಹಲವ
ಕುಟುಕ ಕೊಂಬೆನು ನಿಲ್ಲೆನುತಲಾ
ರ್ಭಟಿಸಿ ಹೊಯ್ದನು ಮತ್ತೆ ಕುಲಗಿರಿ
ತಟದೊಳಗೆ ಪ್ರತಿಸಬುದಗೊಡೆ ಪತಗೇಂದ್ರ ರಿಪುರಥವ ೧೫

ತುಂಗಬಲನುರುಪಕ್ಷಹತಿಗೆ ರ
ಥಾಂಗವಜಿಗಿಜಿಯಾಯ್ತು ರಥದ ತು
ರಂಗ ತಲೆಕೆಳಕಾಗಿ ಕೆಡೆವವು ಕೊಡಹುತಂಘ್ರಿಗಳ
ಜಂಗು ಜರಿದವನಿಜೆಯನೆಡದ ಕ
ರಂಗಳಲಿ [5]ಬಿಡದವಚಿ[5] ಖೇಚರ
ರಂಗದಲಿ ನೆಲಕಿಳಿಯಲಿಳಿದನು ಕೂಡೆ ವಿಹಗೇಂದ್ರ ೧೬

---

[1] ಕೋಪಾ (ಚ). [2] ವೊಲು ಮಕುಟಮಣಿಗಳ ರತುನ (ಗ), ವೊಲ್ಮಕುಟಮಣಿಗಳ ರತ್ನ (ಚ). [3] ಯೆನುತವನು ಖಗಕುಲ (ಜ.ಡ), ಯೆನುತಸುನಾಖಗ (ಝ.ಣ). [4] ನೇನಂ (ಕ.ಟ.ಡ). [5] ಖಳನೌಕಿ (ಕ), ಪಿಡಿದವಚಿ (ಜ.ಟ.ಡ), ಬಿಗಿದವಚಿ (ಝ), ಹಿಡಿದೌಕಿ (ಣ).

ತೊಲಗು ಹಳಚದೆ ಹಳೆಯು ಹದ್ದಿಗೆ
ಸುಲಭವೇ ತ್ರೈಲೋಕ್ಯವೀರನ
ಕಲಹವೆನುತಿದಿರಾಗಿ ಚಾಪಕೆ ತೊಡಚಿ ತೋಮರವ
ತೊಲತೊಲಗು ತೊಲಗೆನುತ ಮೈದು
ಪ್ಪುಳುಗಳಗಲಕೆ ಕೆದಱೆ ಬಾಣಾ
ವಳಿಯು ಸುರಿದನು ಸುರಿವ ಕಡುಹಿನ ಕಾರಮಳೆಯಂತೆ ೧೭

ತುಱುಗಿದಂಬಿನ[1]ಲೆಯ್ಯುವ್ಯಗ[1] ಮೈ
ಯುಱುಬೆಯಲಿ ಮುಳುಗೆದಱು[2]ವಂದದ[2]
ಲುಱುಬಿ ಝಾಡಿಸಿ ಝಡಿತೆಯಲಿ ಮೇಲ್ವಾಯ್ದು ರಿಪುಶಿರವ
ತಱಿದು ತುಂಡದಲಭ್ರಮಂಡಲ
ಕುಱುಬಿ ಮುಂಡದಲೇಳ್ವ ತಲೆಗಳ
ತಱಿದು ತಿಱಿಕಲ್ಲಾಡುತಿರ್ದನು ವೀರವಿಹಗೇಂದ್ರ ೧೮

ಉಗಿದು ಬಳಿಕಸುರೇಂದ್ರ ಮಂದರ
ನಗನಿಭಾಂಗನ ವಜ್ರಮಯಪ
ಕ್ಕಗಳ ಪಡಿಮುಖದೊಳಗೆ ಲಾವಣಿಸಿದನು ಖಂಡೆಯವ
ಚಿಗುರುವವು ತುದಿಗಱಿಗಳವ ಕೈ
ಮಗುಚುವನು ಖಡ್ಗದಲಿ ರಣರಭ
ಸಿಗ[3]ರ[3] ಘನರೌಕುಳದ ರಣ ರಂಜಿಸಿತು ರಾತ್ರಿಯಲಿ ೧೯

ಮೂಡುವವು ತಲೆ ಹಱಿದ ಗಱಿ ಹೊಱ
ಬೀಡ ಬಿಡುವವು ಸುಭಟರಿಬ್ಬರ
[4]ಝಾಡಣೆಯು[4] ಖಂಡೆಯದ ತುಂಡದ [5]ತೋರತೋಟಿಯಲಿ[5]
ಆಡಲೇನದನಿಂದ್ರಜಂಭರ
ಜೋಡಿಗಲಹವಿದೆನಲು ಗಗನವ
ಘಾಡಿಸಿತು ರಣರಭಸವಾ ರಣರಂಗ ಭೈರವನ ೨೦

---

[1] ಗಾಯುವ್ಯಗ (ಕ), ಲೈ ವ್ಯಗದ (ಚ), ಲೊಯ್ಯುವ್ಯಗ (ಡ), ವ್ಯೈಯುವ್ಯಗ (ಣ). [2] ವಂತಿರ (ಗ.ಚ). [3] ಳ (ಗ.ಟ.ಣ). [4] ಘಾಡಿಕೆಯ (ಕ.ಟ.ಣ), ಘಾಡಣೆಯು (ಜ.ಡ). [5] ತ್ರಾಣ ಕೋಟಿಗಳ (ಚ), ಲೇಳ್ವ ಧಾರೆಗಳ (ಜ.ಡ).

ನಿಕಟನಿಭೃತಪಟುಪ್ರತಾಪ
ಪ್ರಕಟಶೌರ್ಯರ ಪದಹತಿಗೆ ವಾ
ಸುಕಿಯ [1]ಹೆ[1]ಡೆಯೊಗ್ಗುಡಿಸಿದವು ಚಂಡಿಸಿದ ಯುದ್ಧದಲಿ
ಭ್ರುಕುಟಿಬದ್ಧನಿಶಾಚರ[2]ನ ಪೇ
ಚಕದ ಪೀನ ವಿಯಚ್ಚರನ ಸು
ವ್ಯಕುತ[2] ಸಮರಪ್ರೌಢಿ ಪಡಿತಳಿಸಿತು ಸುರಾಸುರರ ೨೧

ಎಲವೊ ರಾವಣ ಬೇಡ ಬಿಡು ಮೈ
ಥಿಳೆಯನನ್ಯವಧೂವ್ಯಸನದಲಿ
ಸಿಲುಕಿ ಸತ್ತಪಕೀರ್ತಿ ಕಮಲಜನುಸುರಿಹನ್ನಬರ
ತೊಲಗಲಱಿಯದು ಮೇಲೆ ನಿನ್ನಯ
ಬಳಗ ಘನವದ ಕೊಂದು ದುರ್ಗತಿ
ಗಿಳಿಯಬೇ[3]ಡೆನುತೆಱಗಿದನು ಖಗಪತಿ ಖಳಾಧಮನ[3] ೨೨

ಕೇಳಿದೈ ಖಗರಾಜ ಖಡ್ಗದ
ಮೇಲೆ ಬಹೆವಾವೈ[4]ಸೆ ಕಲುಷಿತ
ದಾ[4]ಲಯಕೆ ನಾವಂಜೆವಳುಪಿದ ಬಳಿಕ ಪರಸತಿಗೆ
[5]ಕೋಳುವೋಗಲ[5] ಕೀರ್ತಿ ಬಿಡೆನೀ
ಬಾಲಕಿಯನಿದು ಸುಪ್ರಸಿದ್ಧ ಸು
ರಾಲಯವು ನಿನಗೆನುತ ಖಳನೆಱಗಿದನು ಖಗಪತಿಯ ೨೩

ಸಿಡಿಲು ಸಿಡಿಲೆ[6]ಱಗಿದ[6]ವೊಲಿಬ್ಬರ
ಖಡುಗ ಚಂಚುಪುಟಪ್ರಹತಿಯು
ಗ್ಘಡಿಸುತಿರ್ದುದು ವೀರರಿಬ್ಬರ ಘೋರಪೌರುಷ[7]ವ[7]
ನಡುಗಿದನು ಖಳನವನಿಪತಿ ಮೇ
ಲುಡಿಯ ಬೀಳುವನೆಂದು ಮಾಯೆಯ
ನಡಪನೊಡ್ಡಿ ಜಟಾಯುವಿಂಗಿಂತೆಂದನ[8]ಸುರೇಂದ್ರ[8] ೨೪

---

[1] ಪೆ (ಗ.ಚ.ಝ.ಟ). [2] ನ ನಿಷ್ಕಪಟಯುದ್ಧವಿಯಚ್ಚರನ ಸುವ್ಯಕುತ (ಕ), ಪಂಚಕಘನಧ್ವನಿಯುಚ್ಚರನ ಸವ್ಯಕುತ (ಗ), ನಕಲಿಚಕಪಿ ನಡವಿಯಚರನ ಸವ್ಯಕ್ತಿಕದ (ಚ), ನ ಕಂಟಕಪಿನಾಕಧ್ವನಿಯಚ್ಚರನ ಸುವ್ಯಕುತ (ಝ.ಟ). [3] ಡಕಟಕಟ ಬಿಡು ಸಾರಿದೆನು ನಿನಗೆಂದ (ಗ.ಝ.ಟ), ಡೆನುತೆಱಗಿದನು ಖಗಪತಿ ಖಳೋತ್ತಮನ (ಜ.ಡ.ಣ). [4] ಸಲೇ ಯಮುನಾ (ಚ). [5] ವೇಳೆ ಬರಲಪ (ಚ.ಝ). [6] ಱಗುವ (ಗ.ಚ). [7] ವು (ಚ), ದ (ಜ.ಡ). [8] ವ ಬಳಿಕ (ಗ.ಝ).

ಸಮಬಲರು ನಾವಿಬ್ಬರಿಬ್ಬರ
ಸಮರ ನುಡಿಯ[1]ದು[1] ಸೋಲ ಗೆಲವಿ[2]ವು[2]
ಸಮನಿಸವು ಕದನದಲಿ ಧರ್ಮದಲೆಮ್ಮ ವರ್ಮಗಳ
[3]ಕ್ರ[3]ಮಿತವಚನದಲುಸುರಿದಡೆ ವಿ
ಕ್ರಮದ ಬಗೆ ಬಳಿಕಱಿಯಬಹುದೆನ
ಲಮರರಿಪುವಿನ ನುಡಿಗೆ ನಂಬುಗೆವಿಡಿದನರುಣಸುತ ೧೫

ತಪ್ಪದೇ ತವವಚನವೆನೆ ಖಳ
ತಪ್ಪ[4]ದೆಂದನು ನಂಬುಗೆಯನದ[4]
ನೊಪ್ಪುಗೊಂಡು ಖಗೇಂದ್ರ ಬಳಿಕಿಂತೆಂದನಸುರಂಗೆ
ಒಪ್ಪುವೀ ಘನ[5]ಪಕ್ಷಮೂಲ[5]ದೊ
ಳಿಪ್ಪುದೆನ್ನಸು ನಿನ್ನ ಜೀವದ
ತಪ್ಪುಗಂಡಿಯು ತೋಱಿಕೆಯ ತಳುವಿಲ್ಲದುಸುರೆಂದ ೧೬

ಪರಸತಿಗೆ ಮನವಿ[6]ಕ್ಕುವ[6]ವದಿರು
ನರಕಭಯಕಂಜುವರೆ ತನ್ನಯ
ಚರಣತಳದಲಿ [7]ಪರಮ[7]ತರ ಚೈತನ್ಯ[8]ವಿಹುದೆನಲು[8]
ನಿರುತವೆಂದೇ [9]ಬಗೆದು[9] ರಜನೀ
ಚರನ ಚರಣಕೆ ಲಾಗಿಸಲು ನಿ
ರ್ಭರದ ನಿಸ್ತ್ರಿಂಶಕದಲೆಱಗಿದನಸುರನರುಣಜನ ೧೭

ಕಳಚಿ ಬಿದ್ದವು ಪಕ್ಷವಿಂದ್ರನು
ಕಳಚಿದದ್ರಿಯ ಪಕ್ಷದಂತಿರೆ
ಬಳಲಿದನು ಬೊಂಬಾಳಿಸಿದ ಭಾಸುರದ ರಕ್ತದಲಿ
ಜಲರುಹಾಕ್ಷ ಜನಾರ್ದನ ಶ್ರೀ
ನಿಳೆಯ ನೀನೇ ಗತಿಯೆನುತ ಬಸ
ವಳಿದು ಬಿದ್ದನು ಮಥನದಗ್ರದ ಪೃಥುಳಗಿರಿಯಂತೆ ೧೮

---

[1] ವು (ಗ.ಜ.ಡ). [2] ದು (ಕ.ಟ). [3] ಪ್ರ (ಕ.ಝ.ಟ.ಣ). [4] ದೆನೆ ನಂಬುಗೆಯ ಮೇಲದ (ಗ.ಜ). [5] ಮೂಲಪಕ್ಷ (ಕ.ಗ.ಜ). [6] ಕ್ಕಿದ (ಕ.ಗ.ಜ.ಣ). [7] ಚಪಲ (ಕ.ಗ.ಜ.ಝ.ಣ). [8] ವೆಂದೆನಲು (ಗ.ಝ), ವಿಹಃದೆಂದು (ಜ), ವಿದೆಯೆನಲು (ಡ). [9] ಮಾಡಿ (ಕ.ಗ.ಜ.ಝ.ಣ).

ಹಾ ವಿಹಂಗಮರಾಜ ದಶರಥ
ಭೂವಧೂವರಬಂಧು ಹಾ ಹಾ
ಮಾವ ಕೆಟ್ಟೆನೆನುತ್ತ ಹರಿತಂದರುಣನಂದನನ
ಆ ವಿಮುಕ್ತವಿಪಕ್ಷಶೋಣಿತ
ಜೀವನದಲುಱೆ ಹೊರಳಿ[1]ದಳು ತನ
ಗಾ[1]ವ ಹದನೈ ಮಾವ ಮಾತಾ[2]ಡೆನುತ ಮಱುಕದಲಿ[2] ೧೯

ಹಾಯಿದಳು ಕಲುಮರನನಗಲಕೆ
ಬಾಯ ಬಿ[3]ಟ್ಟಳ[3]ಲಿದಳು ರಾಘವ
ರಾಯನಭಿಮಾನವನು ಕಾ[4]ವ[4]ವರಿಲ್ಲಲಾಯೆನುತ
ಕಾಯವನು ಕೆಡಹಿದಳು ಬಳಿಕ ಜ
ಟಾಯುವಿನ ಚರಣದಲಿ ಬಿಡಬೇ
ಡಾಯುವನು ಕಂಡಲ್ಲದರಸನನೆಂ[5]ದು ಶೋಕದಲಿ[5] ೨೦

ಸಾಕು ನಡೆ ಸಾವವನೊಡನೆ ಮಾ
ತೇಕೆ ಕೇಳು ಜಟಾಯು ನಿನಗೆ ಸ
ವಿಾಕ ಸುಸರವೆ ಹೋ[6]ಗಲೇ ನಾವ[6] ನಮ್ಮ ಪಟ್ಟಣಕೆ
ಈಕೆಯರಸನು ಬಹುದು ಹುಸಿ ನೀ
ನಾಕನಗರಿಗೆ ತೆರಳು ಜಂಬುಕ
ಘೂಕತತಿ ಗುಡುಗಾಡಿಸದ ಮುನ್ನೆಂದನಸುರೇಂದ್ರ ೨೧

ಕಳವಳಿಸಿದನು ಮೇಲುಹುಯ್ಯಲು
ಸುಳಿದುದಾದಡೆ ಮಾವ ಹೇಳಿದ
ಹೊಲಬು ಹೊದ್ದದೆ ಮಾಣ[7]ದೆನುತತಿ[7]ಶೀಘ್ರಗಮನದಲಿ
ಇಳೆಯತನುಜೆಯ ಕೊಂಡು ನಭದಲಿ
ತಳರ್ದನವನಪರಾರ್ಧರಜನಿಯ
ಲಳವಳಿದು ಬಾಯ್ಬಿಟ್ಟಳಂಗನೆ ಬಹಳ ಶೋಕದಲಿ ೨೨

---

[1] ತನಗಿನ್ನಾ (ಚ.ಡ). [2] ಡೆಂದಳಾ ಸೀತೆ (ಗ.ಡ), ಡೆನುತ ಹೊರಳಿದಳು (ಚ), ಡೆಂದು ಶೋಕದಲಿ (ಜ), ಡೆಂದು ಮಱುಗಿದಳು (ಝ.ಣ), ಡೆನುತ ವೈದೇಹಿ (ಟ). [3] ಟ್ಟೊಱ (ಝ.ಡ). [4] ಯ್ವ (ಗ.ಜ.ಝ.ಣ). [5] ದಳಾ ಸೀತೆ (ಚ.ಡ). [6] ಹೆವಾವ್ (ಕ), ಹೆವೇ ನಾವ್ (ಗ.ಜ). [7] ದೆಂದತಿ (ಚ).

ಗಿರಿಗಳಿರ ತರುಗಳಿರ ವನವ
ಲ್ಲರಿಗಳಿರ ಮೃಗಗಳಿರ ರಾಮನ
ತರುಣಿಯನು ರಾವಣನು ಕಳವಿನಲೊಯ್ದನೆಂಬುದನು
ತರಣಿಕುಲಜಂಗಱುಹುವುದುಯೆಂ
ದರಸಿ ಭಾಳಸ್ಥಳದ ಕುಟ್ಮಲ
ಕರದ ಕರಣದಲೊದಱಿದಳು ದೆಸೆದೆಸೆಗೆ ಬಾಯ್ವಿಡುತ ೩೩

ಬರಬರಲು ವರರುಷ್ಯಮೂಕದ
ಗಿರಿಯ ತುದಿಯಲಿ ಕಂಡಳತಿಬಲ
ಹರಿಕುಲೇಂದ್ರನ ತರಣಿಸುತ ಸುಗ್ರೀವದೇವನನು
ಧುರವಿಜಯ ಹನುಮಂತ ನೀಲಾ
ದ್ಯರು ಸಹಿತಲಿರೆ ಕಂಡು ಕಾರಣ
ಪುರುಷ[1]ರಿವರಹರೆನುತ[1] ಸಡಿಲಿಸಿದಳು ವಿಭೂಷಣವ ೩೪

ಹಾರ ಕಂಕಣ ಕರವಳಯ ಕೇ
ಯೂರ ಕಾಂಚೀಧಾಮ ನೂಪುರ
ವೀರಮುದ್ರಿಕೆ ಮುಖ್ಯ ಮಣಿಭೂಷಣವ ಮೇಲುದಿನ
ಸೀರೆಯಗ್ರವ ಸೀಳ್ದು ಕಟ್ಟಿ ಕ
ಠೋರಬಲ ರಘುನಾಥ ಬರಲಿ[2]ವ[2]
ಸೇರಿಸುವು[3]ದೆಂದಿ[3]ಟ್ಟಳಾ ಸುಗ್ರೀವನಿದ್ದೆಡೆಗೆ ೩೫

ಅವನು ಬೈ[4]ತಿ[4]ರಿಸಿದನು ಬಳಿಕಾ
ರವಿಜಗಾ ಖಳನಂಜಿ ಮನದಲಿ
ತವಕ[5]ದಲ್[5] ತೆರಳಿದನು ತಾಗದೆ ಮಾಣರಿವರೆನುತ
ಅವರ ವಂಚಿಸಿ ಹಾಯ್ದನಭ್ರಕೆ
ಸವೆದ ನಿಶಿಯಲಿ ನಿಶಿತಬಲಸಂ
ಭವನು ಕಂಡನುದಗ್ರಬಲ ಸಂಪಾತಿ ಖಳಪತಿಯು ೩೬

---

1 ರಿವರಹುದೆಂದು (ಕ.ಣ), ರಹರಿವರೆನುತ (ಗ), ರಿವರೆಂದಱಿದು (ಡ)
2 ದ (ಕ.ಗ.ಡ.ಣ). 3 ದೆನುತಿ (ಕ.ಚ). 4 ಚಿ (ಕ.ಜ). 5 ದಿಂ (ಗ), ಮಿಗೆ (ಝ.

ಬಿಡು ಬಿಡೆಲವೊ ಪರಾಂಗನೆಯ ಮೊಱೆ
ಯಿಡುವ ಹುಯ್ಯಲ [1]ಕೇಳ್ದು[1] ಸ್ವೈರಿಸಿ
ನಡೆವವರು ನಾವಲ್ಲವೆನುತ ಸುಪಾರ್ಶ್ವನಡ್ಡೈಸೆ
ತಡೆದ[2]ನಾತನನೀತನವ ನಡ[2]
ನಡುಗಿ ಮಾಯೆಯನಾಶ್ರಯಿಸಿ ಕಾ
ಲಡಿಯ ನುಸುಳಿದು ಹಾಯ್ದನುದಧಿಯ ದಾಂಟಿ ನಿಜಪುರಿಗೆ ೩೭

ಪುರವ ಹೊಗಲಾಕ್ಷಣದೊಳಿಳೆ ಬಾ
ಯ್ದುಱೆದುದೂರಶಿಲಾಪ್ರತಿಮೆ ಬೊ
ಬ್ಬಿಱಿದವಂಬರ ಕಾಱುತರು[3]ಣೋದಕದ[3] ಧಾರೆಗಳ
ಮುಱಿದು ಬಿದ್ದವು ಸೌಧ ಬೀಸಿತು
ಬಿ[4]ಱುಬಿ[4]ನಲಿ ಬಿಱುಗಾಳಿ ಬಾಗಿಲ
ಲೊಱಲಿದವು ನರಿ ಹದ್ದು ಕಾಗೆಗಳಾ ಮಹಾಪುರದ ೩೮

ಆ ತತೂಕ್ಷಣ ಮಯ[5]ತನುಜೆ ಸುವಿ
ನೀತರುಗಳೊ[5]ಡಗೂಡಿ ಬಂದು
ತ್ಪಾತಮುಖವನು ಕಂಡು ಕಡುನೊಂದಾ ದಶಾಸ್ಯಂಗೆ
ಧಾತಱಿದು ವ್ಯೈವಳಿಯಲೇ ನಯ
ನೀತಿಯಲಿ ಹೇಳಿದಳು ಧರಣೀ
ಜಾತೆಯನು ತಹುದುಚಿತವಲ್ಲೆಂದಾಪ್ತವಚನದಲಿ ೩೯

*ಅಸುರನವನಾಸುರವಿಕರ್ಮದ
ಸಸಿನವನೆ ಬಲುವಿಡಿದು ಸತಿ ಕೈ
ವಶಕೆ [6]ಸಿಕ್ಕಿ[6]ದಳೆಂಬ ಸಂತೋಷದ ಸಘಾಡದಲಿ
ಒಸಗೆ ಮಿಗಲೈತಂದು ಹೊಕ್ಕನು
ವಸತಿಯನು ವಸುಮತಿಯಸುತೆ ರಾ
ಕ್ಷಸರವಂಶಕೆ ಮೃತ್ಯುವೆಂಬುದನಱಿಯದಸುರೇಂದ್ರ ೪೦

---

[1] ಕೇಳಿ (ಕ.ಗ.ಜ.ಣ). [2] ನೀತನನಾತನದನಡ (ಕ), ವಾಕ್ಷಣವಾತ ಖಳನಡ (ಗ), ನಾತನನೀತ ಗಡಗಡ (ಜ). [3] ಣಾಂಬುವಿನ (ಚ.ಡ). [4] ಱುಸಿ (ಚ.ಝ.ಣ). [5] ತನೂಜೆ ವಿನೀತರುಗಳೊ (ಗ), ತನುಜೆ ಲಲನಾತತಿಗಳೊ (ಝ), ನ ತನುಜೆ ಸುನೀತೆಯರೊಳೊ (ಡ). [6] ಸಾರಿ (ಕ.ಣ), ಸಿಲುಕಿ (ಗ.ಝ), ಸೇರಿ (ಜ.ಟ).

* 'ಚ.ಜ.ಡ.' ಪ್ರತಿಗಳಲ್ಲಿ ೪೦ನೆಯ ಪದ್ಯವು ೪೩ನೆಯ ಪದ್ಯವಾದಮೇಲೆ ಬಂದಿದೆ.

ಉಚಿತವಿದು ನಿನಗಲ್ಲವೆಂದಾ
ಸಚಿವಪತಿ ನಯನೀತಿಯಿಂದವೆ
ವಚನಿಸಿದನನ್ಯಾಯವೆಂದನು [1]ಕಲಿ[1]ವಿಭೀಷಣನು
ಪ್ರಚುರವಾಗಿಯೆ ಕೇಡು ರಾಕ್ಷಸ
ನಿಚಯಕಹುದೆಂದೊಱಲಿದಳು ತಾಯ್
ರಚನೆ [2]ಕೆಡುವುದು ನಮ್ಮದೆಂ[2]ದನು ಮಾಲ್ಯವಂತಖಳ ೪೧

[3]ಅವರ[3] ಲೆಕ್ಕಿಸದಾದನವನುಳಿ
ದವರು ಹೇಳಿದ ಮಾತನುರುವೈ
ಭವವನಾ ಸಪ್ತಾಂಗಸಾಮ್ರಾಜ್ಯದ [4]ಸಘಾಡಿಕೆಯ[4]
ಅವನಿಜೆಗೆ ತೋಱಿಸಲು ನೋಡದೆ
ನಿವಸನದ ಮುಸುಕಿನಲಿ ಚಿಂತಾ
ರ್ಣವದೊಳಗೆ ಮುಳುಗಿರ್ದಳಾತ್ಮಪ್ರಿಯನ ನೆನಹಿನಲಿ ೪೨

ಪರಿಪರಿಯ ಮಂತ್ರಿಗಳ ನಾನಾ
ಪರಿಯ ಮಾಯಾಲಲನೆಯರ ಬೋ
ಸರಿಗ ವೃದ್ಧಸ್ತ್ರೀಜನಂಗಳ ಕೈಯಲವನಿಜೆಯ
[5]ಪರಿಯ[5]ನಱಿಯಲು ಮಾತನಾಡಿಸಿ
ತಿರುಹುಮುರುಹಿನಲೊಡಬಡಿಸಿ ನಯ
ಸರವ ಕಾಣದೆ ಕಂಗುರುಡನಂತಿರ್ದನಸುರೇಂದ್ರ ೪೩

ಶಾಪ ತನಗುಂಟಾಗಿ ಮನ್ಮಥ
ತಾಪಕಂಗವನಿತ್ತು ಬಳಿಕವ
ನಾ ಪತಿವ್ರತೆಯನು ನಿಶಾಚರಗುರುವಚನದಿಂದ
ತಾಪವನು ಹಿಂಗಿಸುವಶೋಕೆಯ
ತೋಪಿನಲಿ ಸರಮೆ ತ್ರಿಜಟೆಯರ
ಕಾಪಿನಿಂದಿರಿಸಿದನು ತೊರವೆಯರಾಯನಂಗನೆಯ ೪೪

---

[1] ವರ (ಚ.ಡ). [2] ನಮ್ಮದು ಕೆಡುವುದೆಂ (ಗ), ಕೆಡುವುದು ನಮಗೆಯೆಂ (ಚ), ನಮಗನುಗೆಡುವುದೆಂ (ಜ). [3] ಲವಕೆ (ಗ.ಜ.ಣ), ಅವಕೆ (ಝ). [4] ಸಗಾಢತೆಯ (ಙ.ಝ.ಟ), ಗಡಾವಣೆಯ (ಡ). [5] ಹರುಹ (ಕ.ಗ.ಝ.ಟ.ಣ).

# ಹನ್ನೊಂದನೆಯ ಸಂಧಿ

---

ಸೂಚನೆ: ಆದಿಮಾಯಾತೀತನನುಪಮ
ವೇದಸಿದ್ಧನು ಜಗದ ನರರೋ
ಪಾದಿಯಲಿ ಹಲುಬಿದನು ಹಲವಂಗದಲಿ ಜಾನಕಿಯ

ಕುಶನೆ ಕೇಳ್ ಮಾರೀಚ ರಾಕ್ಷಸ
ನುಸುರು ಹಿಂಗಿದ ಬಳಿಕ ನೃಪ ಚಿಂ
ತಿಸುತ ತಿರುಗಿದನನುಜನವನೀನಂದನೆಯ ದೆಸೆಗೆ
ಸಸಿನವಾಗಿರದೇನು ಕಣು ಕಂ
ಪಿಸುತಲಿದೆ ವಾಮದಲಿ ಸಲೆ ಸಂ
ಧಿಸದೆ ಮಾಣದಪಾಯವೆಮಗೆನುತರಸನೈತಂದ ೧

ಬರಬರಲು ದುಶ್ಶಕುನಚಯ ಗೋ
ಚರಿಸಿದವು ಸವ್ಯಾಪಸವ್ಯದ
ಲರಸ ನಿಶ್ಚಯಿಸಿದನು ಬಹಳಾ[1]ಪದದ ಪರಿಸರವ[1]
ಕೊರಗಿದಾನನದಶ್ರುಕಣದು
ಬ್ಬರದ ಖೇದದ ವಾಮಕರಕಂ
ಧರದ ಬಿಲುಬಡಿಗೋಲ ತಮ್ಮನ ಕಂಡನಿದಿರಿನಲಿ ೨

ಅಕಟ ಗಂಟಲ ಕೊಯ್ದನಬುಜಾಂ
ಬಕಿಯನುಳಿ[2]ದೇಕೈದಿದನೊ[2] ಜಾ
ನಕಿಯ ಜವ್ವನಭರೆಯ ವದನಾಲೋಕನಂಗೈವ
ಯುಕುತಿಯಿಲ್ಲೆಂಬೆಣಿಕೆ ಮನ[3]ದಲಿ[3]
[4]ಮಕರಿ[4]ಸುತ್ತಿದೆ ಗಮನಚೇಷ್ಟಾ
ಪ್ರಕರಣದಲೆಂದರಸ ಜಗ್ಗನೆ ಜರಿದನಿದಿರಿನಲಿ ೩

---

[1] ಯಾಸ ಬಹುದೆನುತ (ಚ). [2] ದೈತಂದನಾ (ಚ.ಜ.ಡ). [3] ವನು (ಗ. ಜ.ಡ). [4] ಪ್ರಕಟಿ (ಚ.ಜ.ಡ).

ಈ ಗ[1]ಮಿಸುವೀ[1] ಪುರುಷನಿನಕುಲ
ನಾಗದಿರನೆಂದೀತ ಮನದಲಿ
ರಾಗಿಸಿದನಾ ಕಣೆಯುದಲಿ ಕೈಯೊಡನೆ ಜಾನಕಿಯ
ನೀಗಿ ಬಂದುಮ್ಮಳದ ಬೆದಱಿನ
ಬೇಗೆಯಲಿ ಬೆಂಡಾಗಿ ಶಿರವನು
ಬಾಗಿದನು ಬಿಸುಗುದಿಯ ಕಂಗಳ ನೀರ ಧಾರೆಯಲಿ ೪

ಹೇಳು ಹೇಳೇನಾಯ್ತು ಜನಕನೃ
ಪಾಲಜೆಯ ಹದನೇನು ಹವಣಿನ
ಕೀಲಣಿಕೆ ತಾನೇನು ನುಡಿ ನೀನಂಜಬೇಡೆನಲು
ಹೇಳಿದನು ದೇವಿಯುರು [2]ಕೆರ[2]ಳ್ದ ಕ
ರಾಳವಚನವನದಱಿನೆನ್ನನು
ಬೀಳುಕೊಡೆ ಬರವಾಯ್ತೆನುತ ಬೀಳಿಸಿದನಶ್ರುಗಳ ೫

ಕೆಡಿಸಿದೆಯಲಾ ತಮ್ಮ [3]ದುರ್ಭಯ[3]
ದಡವಿಯಲಿ ಭಯಭರಿತವನಿತೆಯ
ಬಿಡುವರೇಯಕಟಕಟ ಬಲ್ಲವನೆಲ್ಲರಿಗೆ ನೀನು
ಮಡದಿಯನು ನಾವಿನ್ನು ಕಾಬುದು
ಕಡೆಗೆ ಹುಸಿ ಹೊಮ್ಮಱಿಯ ಮಾಯೆಯ
ತೊಡ[4]ಕಿನಿಂ ಚಿತ್ತದಲಿ[4] ತೋಱಿದೆ ತಮ್ಮ ತನಗೆಂದ ೬

ಏನಹಳೊ ವೈದೇಹಿ ದೇಹಾ
ಧೀನೆಗಾವು[5]ದೊ[5] ಹದನು ಸೀತಾ
ಮಾನಿನಿಯ [6]ಮುಖಸಂದರುಶನವಸಾಧ್ಯ ನಮಗೆನುತ[6]
ಜಾನಕಿಯ ಧ್ಯಾನದಲಿ ಚಿತ್ತ
ಗ್ಲಾನ[7]ದಲಿ ಗತಿ[7]ಗುಂದುತಡವಿಯ
ಲೂನಹರುಷಿತನೈದಿದನು [8]ನಿಜಪರ್ಣ[8]ಮಂದಿರವ ೭

---

[1] ಗಮಿಸುವ (ಟ.ಡ). [2] ಕೇ (ಕ.ಜ.ಣ), ಪೇ (ಗ). [3] ದುರ್ಧರ (ಕ.ಣ), ದುರ್ಧರ (ಚ). [4] ಕ ನೀ ಮೊದಲಱಿಹಿ (ಚ). [5] ದು (ಚ.ಝ.ಟ). [6] ಮುಖಸಂದರುಶನವಸಾಧ್ಯವೆಮಗೆನುತ (ಗ.ಣ), ಸಂದರುಶನವು ನಮಗಿನ್ನಸಾಧ್ಯವಲೆ (ಚ), ಸಂದರುಶನ ತಾನಸಾಧ್ಯ ನಮಗೆನುತ (ಝ). [7] ದಿಂ ಮನ (ಕ), ವನು ಗತಿ (ಜ). [8] ಪಾಲಾಶ (ಕ.ಣ).

[1]ಕಳೆಗಳಳಿದ[1] ಹಿಮಾಂಶುಬಿಂಬದ
[2]ಹೊಳಹಿನ[2]ವೊಲಳಿಗಬ್ಬಿಗ[3]ನ[3] ಹೆ
ಕ್ಕಳದ ಕೃತಿಯವೊಲುಬ್ಬರದ ಜವ್ವನದ ಜಾಣುವೆಯು
ಸುಳಿವು ಸಡಿಲಿದ ಸತಿಯ ರತಿಯವೊ
ಲಿಳೆಯನಂದನೆಯಿಲ್ಲದಾ ದಳ
ನಿಳಯವಿರೆ ಕಂಡಿವರು ಕಳವಳಿಸಿದರು ಕರಣದಲಿ ೮

ಎಲೆ ಸುಮಿತ್ರಾಸೂನು ಸೀತೆಯ
ಸುಳಿವು ನಿಳಯದೊಳಿಲ್ಲದಿದೆ ಕಂ
ಬೆಳಗು ಕಾಣಿಸದಿದೆ ಮದೀಯವಿಶಾಲಭವನದಲಿ
ಲಲಿತದರಹಸಿತಾನನಾಬ್ಜಾ
ಕಲಿತ[4]ನಾಸಾಶ್ವಾಸ[4]ಪರಿಮಳ
ಸುಳಿಯದಿದೆ ಸೀತೆಯನು ತೋಱೈ ತಮ್ಮ ತನಗೆಂದ ೯

ಇಲ್ಲದಿದೆ ಸುಳಿವನುಜ ಕೇಳು
ತ್ಫುಲ್ಲನಯನೆಯ ನೋಟ ಘನಧ
ಮ್ಮಿಲ್ಲ ಭುಜಲಂಬಿತೆಯ ಕೊಂಕಿದ [5]ಕುರುಳ ತೇರವದ[5]
ಭುಲ್ಲವಣೆಯ ವಿಶಾಲಮುಖವೆ
ಮ್ಮಲ್ಲಿ ತೋಱದಿದೇನು ಸೀತೆಯ
ನೆಲ್ಲರಿಸಿ ನೀ ಬಂದೆ ಹೇಳೈ ತಮ್ಮ ತನಗೆಂದ ೧೦

ತೋಱದಿದೆ ಕಳಹಂಸಗಮನೆಯ
ತೋಱಿಕೆಯ ಗತಿ ಕಂಗಳಿಗೆ ಮೈ
ದೋಱದಿದೆ ಲಾವಣ್ಯರುಚಿ ಹಿಮರುಚಿನಿಭಾನನೆಯ
ಬೀಱದಿದೆ ಸೌಭಾಗ್ಯಸಾರದ
ಸೂಱೆ ಸೊಬಗಿನ ಸಿರಿಯಿದೇನೈ
ಮಾಱುವಾತಿಲ್ಲೇಕೆ ಹೇಳೈ ತಮ್ಮ ತನಗೆಂದ ೧೧

---

[1] ಕಲೆ ಕಳಲ್ದ (ಕ.ಝ), ಕಳೆ ಕಳಲ್ದ (ಗ.ಣ). [2] ಸುಳುವಿನ (ಚ.ಡ). [3] ಳ (ಚ.ಟ.ಡ), ರ (ಝ). [4] ವಿಲಸದ್ಭಾಸ (ಗ), ಲಲಿತಶ್ವಾಸ (ಚ). [5] ಕೊರಳ ತೆಳುವಸುರ (ಕ), ಕೊರಳ ನೇವುರದ (ಚ).

ಹಿರಿದು ಮುನಿಸಿಲ್ಲವನಿಜೆಗೆ ನಿ
ಷ್ಠುರತೆ ಜನ್ಮದೊಳಿಲ್ಲ ಗರ್ವದ
ಗರಗರಿಕೆ ಮುನ್ನಿಲ್ಲ ಜಡತೆಯ ಜೋಕೆ ತಾನಿಲ್ಲ
ಹರಹುವಳು ಹರುಷವನು ತನ್ನಯ
ದರುಶನದಲೆಲೆ ತಮ್ಮ ಹೇಳ
ಚ್ಚರಿಯಿದೇನೈ ಕಾಣಬಾರಳು ಸೀತೆ ತನಗೆಂದ ೧೨

ಕನಕಮೃಗವನು ತಾರನೆಂಬೀ
ಮುನಿಸದೊಂದಿದೆ ತಮ್ಮ ತನ್ನಯ
ಮನದ ಸಂಶಯವನು ನಿವಾರಿಸು ಹೊಗು ಗೃಹಾಂತರವ
ಕನಕಮೃಗವನು ತಂದೆನೆಂದೇ
ವನಿತೆಗನೃತವ ನುಡಿದು [1]ಮಡದಿಯ[1]
ನೆನಗೆ ತೋಱಿಸು ಸಾಕು ಬಳಿಕ ಕೃತಾರ್ಥ ತಾನೆಂದ ೧೩

ಭ್ರಮಿಸಿತೀತನ ಮನ [2]ವಿವೇಕದ[2]
ಸಮತೆ ಸಡಿಲಿತು ಸ್ಮೈರಣೆಯನಾ
ಕ್ರಮಿಸಿದುದು [3]ಧೃತಿ[3] ಕಳವಳಿಸಿ[4]ದುದು[4] ಕರಣವಂಗದಲಿ
ವಿಮುಖವಾಯ್ತುಱಿವಕಟ ಸೀತಾ
ರಮೆ [5]ಪಲಾಯನ[5]ವಾಗದಿರಳೆಂ
ದಮರಿದನುತಾಪದಲಿ ಲಕ್ಷ್ಮಣ ಹೊಕ್ಕನೆಲೆವನೆಯ ೧೪

ಹೊಗುತಲುತ್ತರ ಪೂರ್ವ ಪಶ್ಚಿಮ
ದಿಗುವಿಭಾಗವ ನೋಡಿ ಕಾಣದೆ
ಮುಗಿದುದಿನ್ನೇನೆನುತ ಮುಸುಕಿದ ಮನದ ಮಱುಕದಲಿ
ಒಗುವ ಕಂಬನಿಗಳಲಿ ಕಾಯದ
ಬೆಗಡಿನಲಿ ಬೆಳವಿಗೆಯ ಶೋಕದ
ಸೆಗಳಿಕೆಯ ಶಶಿಯಂತೆ ಲಕ್ಷ್ಮಣದೇವನಳವಳಿದ ೧೫

ಏನನೆಂಬೆನು ರಾಘವಂಗಿ
ನ್ನೇನ ಹೇಳುವೆ ರಾಮ[6]ಚಂದ್ರಂ[6]
ಗೇನ ಮಾಡುವೆನಕಟ ರಘುಕುಲಸಾರ್ವಭೌಮಂಗೆ

---

[1] ಸೀತೆಯ (ಝ.ಟ). [2] ವು ನೆನಹಿನ (ಕ). [3] ಮತಿ (ಕ.ಗ.ಝ.ಟ.ಣ).
[4] ದವು (ಕ.ಗ.ಝ.ಟ.ಡ). [5] ಪರಾಯತ (ಕ.ಗ). [6] ಭದ್ರಂ (ಕ.ಗ.ಝ.ಟ.ಣ).

ಜಾನಕಿಯ ಹೋಗಾಡಿದವ ದಿಟ
ತಾನಲಾ ಹಾಯೆನುತ ಮಱುಗಿದ
ನಾ ನಿಕೇತನಮಧ್ಯದಲಿ ಮಾಗಧಿಯ ಮಗ ಬಳಿಕ ೧೬

ಆಸೆ ಬಿಡದಲಿಮನದಲಾ ಸೀ
ತಾಸತಿಯನಾ ದಕ್ಷಿಣಾಶಾ
ವಾಸದಲಿ ನೋಡಿದನು ಹರಿಣಾಜಿನದ ಹಾಸಿನಲಿ
ಆ ಸರೋಜಾಂಬಕನ ರಾಣೀ
ವಾಸವನು ಕಾಣದೆ ಮಗುಳ್ದಾ
ವಾಸವನು ಹೊಱವಂಟು ಕೈಸನ್ನೆಗಳಲಿಲ್ಲೆಂದ ೧೭

[1]ಹಾಹ ಮಾನಿನಿಯೆನುತ ಭೀತಿಗೆ[1]
ಮೋಹಿ ಮೌಳಿಯ[2]ನಣೆದು[2] ಗೇಹದ
ದೇಹಳಿಯ[3]ಲ[3]ಪ್ಪಳಿಸಿ ಬಿದ್ದನು ರಾಮ ಮೂರ್ಛೆಯಲಿ
ಈ ಹದನ ಕಂಡಾಕ್ಷಣದೊಳು ವಿ
ದೇಹನೆರಡನೆಯುಳಿಯನಾ ವೈ
ದೇಹಿಯುರಸನ ಚರಣಸೀಮೆಯಲಿಳುಹಿದನು [4]ತನುವ[4] ೧೮

ಘಳಿಗೆ ಪರಿಯಂತರ ಮಹೀಪತಿ
ಚಲಿಸದಿರ್ದನು ಚಂಡಿಸಿದ ಕಳ
ವಳದ [5]ಕರಣದ[5] ಕಾಮತಾಪ ವಿಲಾಸವಚನದಲಿ
ತಿಳಿವು ಮಱವೆಯು ಸುರತಸೌಖ್ಯದ
ಕಳೆಯು ಕಾಮಾತುರದ ಭಂಗಿಯ
[6]ಬಳಕೆಗಳ ಬೆಳೆಸಿರಿಯಲಿರ್ದನು ಭ್ರಾಂತಿಯೋಗ[6]ದಲಿ ೧೯

ಬಯಲನಪ್ಪುವನೊಪ್ಪವಿಡುವನು
ನಯನದಲಿ ನಗೆನುಡಿಯ ಚದುರಿನ
ನಯವ ತೋಱುವ ನಗುವನಾಲಿಂಗಿಸುವ ಚುಂಬಿಸುವ
ನಿಯುತವಚನಪ್ರಣಯಪರಿಸಂ
ಚಯದ ಸುರತಾಳಾಪಸುಖದಭಿ
ನಯವ ತನ್ನೊಳೆ ಮಱೆದನೆರಡಿಟ್ಟಾ ಮಹೀಪಾಲ ೨೦

---

[1] ಹಾ ಹಿಮಾಂಗಿಯೆನುತ್ತ ಭೀತಿಗೆ (ಕ.ಜ.ಣ), ಹಾಹ ಮಾನಿನಿಯೆನುತ ಧರಣೆಗೆ (ಚ), ಹಾ ಹಸಿತಮುಖಿಯೆಂದು ಭೀತಿಗೆ (ಝ). [2] ನೊಲದು (ಕ.ಗ.ಝ.ಣ). [3] ನ(ಗ.ಚ). [4] ಶಿರವ (ಚ). [5] ಕನಸಿನ (ಕ.ಜ.ಟ.ಡ.ಣ). [6] ಬಳಕೆಗಳ ಬೆಳೆಸಿರಿಯ ಬೇಳಂಬದ ವಿಹಾರ(ಕ), ಬೆಳೆಸಿರಿಯ ಮತಿವಂತನಿದ್ದನು ಭ್ರಾಂತಿಯೋಗ(ಝ.ಟ).

ಒಂದೆರಡು ನಾಲ್ಕೆಂಟರೆಣಿಕೆಗ
ಳೊಂದಿದಾ ಸ್ಮರತಾಪದ ಭ್ರಮೆ
ಯಿಂದ ಬೆದಱಿದು ಕಂದೆಱೆದು ಕಾಮಿನಿಯ ಕರೆಕರೆದು
ತಂದೆನಿದಕೋ ಹೊಮ್ಮಱಿಯನಿದೆ
ಯೆಂದು ಬಿಲ್ಲನು ಬಿಸುಟು ಬಾಗಿಲ
ಮುಂದೆ [1]ಕರಕರದಂಗಲಾಚಿದನಾ ಮಹೀಪಾಲ[1] ೨೧

ಎಲೆ ಸುಮಿತ್ರಾಸೂನು ಕೇಳೀ
ನಿಳೆಯದೊಳಗಿಲ್ಲವನಿಸುತೆ ನೀ
ತಿಳಿದುಕೋ ಮನೆಯಲ್ಲವಿದು ನಾವ್ ತಪ್ಪಿಬಾರವಲೆ
ನಿಳೆಯವಿದು ತಾ ನಮ್ಮದಾದಡೆ
ಸುಳಿಯದಿಹಳೇ ಸೀತೆ ನೀನ
ಸ್ಖಲಿತಮೂರ್ಖನಲಾ ಮತಿಭ್ರಮೆಯಾಯ್ತು ನಿನಗೆಂದ ೨೨

ಅಹು[2]ದು ಜೀಯ[2] ಮದೀಯ ಪೂರ್ವದ
ಗೃಹವು ದಿಟವೇ ದಿಟವೆನಲು ನಿಜ
ವಹುದು ಸೀತೆಯ ತೋಱಿದಡೆ ನೀನೆಂದ ನುಡಿ ನಮಗೆ
ಸಹಜ ನೀ ಲಕ್ಷ್ಮಣನೊ ಕಪಟದ
ಸಹಭವನೊ ನೀನಾರು ಸತ್ಯದ
ಲಹಿಮಕರಕುಲದವರವೊಲು ನಿರ್ಧರಿಸಿ ಹೇಳೆಂದ ೨೩

ದೇವರೊಡಹುಟ್ಟಿದನು ತಾನಹು
ದಾವ ಸಂಶಯವಿಲ್ಲವೆನೆ ನಿಜ
ವೇ ವಿದೇಹಕುಮಾರಿಯನು ನಾವ್ ನಮ್ಮ ಪುರದಿಂದ
ಈ ವಿಪಿನಕೊಡಗೊಂಡು ಬಂದೆವೊ
ದೇವಿಯನು ನಾವಿರಿಸಿ ಬಂದೆವೊ
ಭೂವರನ ಮೇಲಾಣೆ ತಪ್ಪದೆ ಹೇಳು ತನಗೆಂದ ೨೪

ತಂದೆವಾವ್ ದೇವಿಯರನಾದಡೆ
ತಂದಡೆಲ್ಲಿ ವಿದೇಹಸುತೆ ರಘು
ನಂದನನು [3]ತಾನಹುದೆ[3] ಪಲ್ಲಟವಾಗೆನಲೆ ನೋಡು

---

[1] ಕೂಗಿಟ್ಟಿಱಿಸಿ ಕರೆದನು ರಾಮ ನಿಜಸತಿಯ (ಚ), ಕೂಗಿಡುತಂಗಲಾಚಿದ ನಾ ಮಹೀಪಾಲಿ (ಜ). [2] ದಿದೀಗ (ಚ.ಜ.ಡ). [3] ತಾನಹುದೊ (ಗ), ನಾನಹುದೊ (ಚ.ಝ).

ಎಂದೆನಲು ಕೈಮುಗಿದು ದಿಟ ರಘು
ನಂದನನು [1]ನೀನ[1]ಹುದೆನಲು ನಗು
ತೆಂದನಿದು ಹುಸಿಮಾತು [2]ಮಾತನಿದೊಂದ[2] ಕೇಳೆಂದ ೨೫

ಘನಮುದೋತ್ಕಟಧಾರೆಯಿಲ್ಲದ
ವನಮುದದ್ವಿಪವುಂಟೆ ತೀಕ್ಷಣ
ವಿನುತದೀಧಿತಿಯಿಲ್ಲದಿನನುಂಟೇ [3]ಜಗತ್ತಿನಲಿ[3]
ವನಜವಿಲ್ಲದ ಕೊಳನು ವರವಾ
ಹಿನಿಗಳಿಲ್ಲದ ವಾರ್ಧಿ ಸೀತಾ
ವನಿತೆಯಿಲ್ಲದ ರಾಮನುಂಟೇ ಭೂಮಿಯೊಳಗೆಂದ ೨೬

ಜೀಯ ಚಿತ್ತೈಸಜ್ಞ[4]ರೇ[4] ನರ
ರಾಯತವು [5]ನಿಮ[5]ಗೇಕೆ ನೀ ನಾ
ರಾಯಣ[6]ನಲಾ[6] ನಿಮ್ಮ ನೀವು ವಿಚಾರಿಸುವುದೆನಲು
ಮಾಯೆಯಭಿರಂಜನೆಯ ನುಡಿ ರಮ
ಣೀಯ[7]ನೇಯೆಲೆ[7] ತಮ್ಮ ದಿಟ ನಾ
ರಾಯಣನು [8]ತಾನಾದಡಂಗನೆಯಿಲ್ಲವೇಯೆಂದ[8] ೨೭

ಆದಡೆಲೆ [9]ರಘುನಾಥ[9] ಚಿತ್ತೈ
ಸಾದಿಲಕ್ಷ್ಮಿಯನವನಿತನುಜೆಯ
ನೀ ದಿವಿಜಮಾನವ ಭುಜಂಗಮ ಭುವನ ಮೂಱಿರಲಿ
ಶೋಧಿಸುವೆನಿಲ್ಲದಿರೆ ವಿಧಿವೊದ
ಲಾದ ದೇವರ ಹಿಂಡಿ ಹಿಳಿವೆನು
ಕೈದುವಿದು ತಾನಿದ್ದುಫಲವೇನೆಂದು ಘರ್ಜಿಸಿದ ೨೮

ತಡೆದರೆಂದೇ ದೇವ ಧೈರ್ಯವ
ಹಿಡಿಯಲಱಿಯದೆ ದೇವಿಯರು ನ
ಟ್ಟಡವಿಯಲಿ ನಡೆದಱಸುತಿರಲೆಲೆ ದೇವ ನಮ್ಮವನು
ತಡೆಯ[10]ದಾವೀ[10] ಗುಲ್ಮ ಲತೆ ಮರ
ಗಿಡಗಳಿಱುಬಿನಲಱಸಿ ನೋಡುವ
ನಡಯಿಯೆಂದಗ್ರಜನ ನಿಂದಿರಿಸಿದನು ಸೌಮಿತ್ರಿ ೨೯

---

[1] ನೀವ (ಗ.ಡ). [2] ಮಾತಿನ್ನೊಂದ (ಕ.ಗ.ಣ). [3] ಧರಿತ್ರಿಯಲಿ (ಜ.ಝ.ಟ.ಡ). [4] ನೇ (ಕ.ಝ.ಡ.ಣ). [5] ನಿನ (ಕ.ಜ.ಡ.ಣ). [6] ರಲಾ (ಚ). [7] ತರವಲೆ (ಕ), ಕವೆಯೆನೆ (ಝ), ವಲ್ಲಲೆ(ಟ). [8] ನಾನಾಗೆ ಲಕ್ಷ್ಮಿಯದೆಲ್ಲಿ ತೋಱೆಂದ ಕ), ನಾನಾದಡಂಗನೆಯಿಹಳು ತೋಱೆಂದ (ಚ). [9] ನರನಾಥ (ಕ), ರಘುರಾಯ (ಗ.ಝ). [10] ದೀ ಗಿರಿ (ಚ).

ಮಗುಳೆ ಮನಸಿನ ಸಂಶಯದಲೆಲೆ
ದಗಡ ಹೊದಕೆಯ ಮನೆಯ ಹೊಕ್ಕ[1]ವ
ರು[1]ಗಿದು [2]ಸೂರಿನ[2] ಶಿಖಿಯ ಬೆಳ[3]ಕಿ[3]ನಲಱಸಿದರು ಸತಿಯ
ಸೊಗಸ ಕಾಣದೆ ಧನುಶನುತ್ರವ
ತೆಗೆದುಕೊಂಡರು ತೆರಳಿದರು ಕ
ಪ್ಪೊಗುವ ಕತ್ತಲೆಯೊಳಗೆ ಕೈಗೊಳ್ಳಿಗಳ ಬೆಳಕಿನಲಿ ೩೦

ಅಱಸಿದರು ತಾವಿದ್ದ ತಾಣದ
ತೆಱಪುಗಳ ತರುಗುಲ್ಮ[4]ಲತಿಕೆಗ
ಳ[4]ಱುಬಿನಲಿ ಕಿನ್ನರಿಯರಾಡುಂಬೊಲನ ಸೀಮೆಯಲಿ
ಮಱುಕೊಳಿಸಿ ಮತ್ತೊಮ್ಮೆ ಮನೆಯೊಳ
ಗಱಸಿ ಕಾಣದೆ ಕಂಬನಿಯ ಕ
ಟ್ಟೊಱತೆಯಲಿ ಕರೆಕಗೆವುತೈತಂದರು [5]ವನಾಂತದಲಿ[5] ೩೧

ವಿವಿಧ ಗುಲ್ಮ ನಿಕುಂಜದಲಿ ಭೂ
ವಿವರ ವಳಯಂಗಳಲಿ ಭೂರುಹ
ನಿವಹದಲಿ ನಿರ್ಜರನಿಕುಂಚಿತ ಪಲ್ವಲಂಗಳಲಿ
ಪವನನಿಸ್ವನಪರ್ಣರವ ಪ್ರ
ಸ್ರವಣಧಾರಾಧ್ವಾನಖಗಮೃಗ
ನಿವಹ ನಿನದ[6]ದಲಱಸಿ ನೋಡಿದರಿವರು ಜಾನಕಿಯ[6] ೩೨

ಮುನಿಮುನಿಗಳಾಶ್ರಮದ ವಿಮಳಾಂ
ಗನೆಯರಲಿ ವನವೀಥಿಯಲಿ ಕುಮು
ದಿನಿ ಕುಶೇಶಯದುರುತಟಾಕಂಗಳ ತಟಂಗಳಲಿ
ಧ್ವನಿಗಳಿದ್ದೆಡೆಗಳಲಿ ತನುಸಂ
ಜನಿತ ಖೇದದ ಘನವಿಷಾದದ
ಮನದ ಮನುಕುಲರಾಜಸೂನುಗಳಱಸಿದರು ಸತಿಯ ೩೩

---

[1] ನು ಸು (ಕ), ರು ಸು (ಝ.ಟ). [2] ಶೂರನು (ಕ.ಝ.ಣ). [3] ಗಿ (ಗ.ಜ.ಝ.ಟ.ಡ). [4] ಲತೆಗಳ ಯ (ಗ.ಜ.ಝ.ಟ). [5] ವನಾಧ್ವದಲಿ (ಕ.ಚ), ವನಾಂತಗಕೆ (ಟ). [6] ಧ್ವನಿಯಱಿದು ನೋಡಿದರು ಜಾನಕಿಯ (ಕ.ಝ), ದಲಱಸಿದರು ಸೀತಾ ಮಹಾಸತಿಯ (ಚ).

ವನಜವನು ಕಂಡರಸ ವನಜಾ
ನನೆಯ ಕಂಡಿರೆಯೆಂದು ಕೈರವ
ವನು ನಿರೀಕ್ಷಿಸಿ ಕೈರವಾಕ್ಷಿಯ [1]ಕಂಡಿರೇ[1]ಯೆಂದು
ವಿನುತಕೋಕ[2]ವ[2] ಕಂಡು ಕೋಕ
ಸ್ತನೆಯ ಕಂಡಿರೆಯೆಂದು ಬೆಸಗೊಂ
ಡನು ಮದಾಳಿಯ ಕಂಡು ಕೇಳಿದನಳಿಕುಳಾಳಕಿಯ ೩೪

ಕಂಡು ಹಂಸೆಯ ಹಂಸಗಮನೆಯ
ಕಂಡುದುಂಟೇಯೆಂದು ಕೋಗಿಲೆ
ಗಂಡು ಕೋಕಿಲ[3]ಲಲಿತನಿನದೆಯ ಕಾಣಿರಲೆ[3]ಯೆಂದು
ಮಂಡಳಿಯ ಮಧುರಧ್ವನಿಯ ಗಿಳಿ
ವಿಂಡಿನಲಿ ಕಳಕೀರವಚನದ
ಹೆಂಡತಿಯ ನೀವ್ ಕಾಣಿರಲೆಯೆಂದರಸ ಬೆಸಗೊಂಡ ೩೫

ಎಲೆ ಹರಿಣ ಹರಿಣಾಕ್ಷಿಯನು ಕರಿ
ಕಳಭವೇ ಕರಿಕುಂಭಕುಚಮಂ
ಡಲೆಯನೆಲೆ ಹರಿಯಕ್ಷ ಬಡನಡುವಿನ ನಿತಂಬಿನಿಯ
ಒಲುಮೆಕಾತಿಯ ಸಾತಿಶಯನಿ
ರ್ಮಲೆಯ ಸಂಭೋಗಪ್ರವೀಣಾ
ಕಲಿತಕೌತೂಹಲೆಯ ಕಂಡಡೆ [4]ತೋಱಿ[4] ತನಗೆಂದ ೩೬

ಎಲಲೆ ಮಾಲತಿ ಜಾತಿ ಕೇತಕಿ
ಗಳಿರ ನೀವಾಮೋದಭಾರಾ
ಕಲಿತ [5]ಲಲಿತಸ್ಮಿತ[5]ಲತಾಂಗಿಯ ತುಂಗಕುಚಭರೆಯ
ಸುಳಿವ ಕಾಣಿರಲೇ ಸುಧಾರಸ
[6]ಲ[6]ಲಿತಬಿಂಬಾಧರೆಯ ವೇಣೀ
ವಿಲಸಿತೆಯ [7]ವಿಲುಳಿತಕಟಾಕ್ಷೆಯ[7] ಕಾಣಿರಲೆಯೆಂದ ೩೭

---

[1] ಕಾಣಿರಲೆ (ಚ.ಟ), ಕಾಣಿರೇ (ಝ). [2] ನ (ಕ.ಗ.ಝ.ಣ).
[3] ಲಲಿತ ನಿನದೆಯ ಕಂಡಿರೇ (ಕ.ಣ), ನಾದ ಸೀತೆಯ ಕಾಣಿರಲೆ (ಗ.ಡ).
[4] ಹೇಳಿ (ಚ.ಣ). [5] ಲಲಿತಸ್ಮರ (ಕ.ಟ), ಮಂದಸ್ಮಿತ (ಗ.ಜ.ಡ).
[6] ಕ (ಕ.ಟ.ಣ). [7] ಸುಮನೋಮದಾಳಿಯ (ಚ).

ಬದರಿ ಬಿಲ್ವ ತಮಾಲ ವಟ ಹಿಂ
ಗುದ ಕಪಿತ್ಥವಶೋಕ ಕುರವಕ
ಕದಳಿ ಖರ್ಜೂರಾಮ್ರ ಜಂಬು ಕದಂಬದೆಡೆಗಳಲಿ
ಚದುರೆಯನು ಚಪಲಾಕ್ಷಿಯನು ಮೃಗ
ಮದಸುಗಂಧಿಯ ಮಾನಗುಣಸಂ
ಪದೆಯ ಸೀತೆಯ ಕಂಡುದುಂಟೇಯೆಂದು ಬೆಸಗೊಂಡ ೩೮

*ಕೆದಱಿ [1]ನೋಡಿದನುದುರಿದೆಲೆಗಳ[1]
ಹೊದಱೊಳೆಳೆಲತೆಯೊವರಿ[2]ಗಳೊಳು[2]
ಬೆದಕಿ ನೋಡಿದನೇಱಿ ನೋಡಿದನಾಮ್ರಪಲ್ಲವವ
ಕದಳಿ ಖರ್ಜೂರಾದಿ ತರುಗಳ
ನದುರಿನೋಡಿದನಬುಜದೆ[3]ಲರನು[3]
[4]ಕೆದಱಿ[4] ನೋಡಿದನುದಿತವಿರಹಭ್ರಮೆಯಲವನಿಜೆಯ ೩೯

ಮಿಸುಪ ಚಂದ್ರೋಪಲದಲುಱೆ ಬಿಂ
ಬಿಸುವ ತನ್ನಯ [5]ರೂಹನೇ[5] ತ
ನ್ನಸಿಯಳೆಂದೇ [6]ನೋಡಿ[6] ಮಾತಾಡಿ[7]ಸುವ[7]ನಡಿಗಡಿಗೆ
ಶಶಿಮುಖಿಯೆ ಸಾರಸಮುಖಿಯೆ ಶೋ
ಭಿಸುವ ದರ್ಪಣಮುಖಿಯೆ ಮುಖದೋ
ಱಿಸುವಿದನು ಸಲಹೆಂದು ಕರುಣವ ತೋಱಿದನು ರಾಮ ೪೦

ಸೀತೆ ಸೀತೆ ಸಮುದ್ರ[8]ಸುಮನೋ[8]
ಜಾತೆ ಜಾನಕಿ ಜನಕನೃಪಸಂ
ಭೂತೆ ಓ ಎಂದೆನಲು ಬಾರದೆ ಕರುಣವಿಲ್ಲವಲ
ಏತಕಕಟಾ ತನ್ನನೀಪರಿ
ಧಾತುಗೆಡಿಸುವುದುಚಿತವೇ ಸಂ
ಪ್ರೀತಿವಚನದ [9]ರಚನೆ ನಮ್ಮೊಳ[9]ಗಿಲ್ಲಲಾ ಎಂದ ೪೧

---

* 'ಚ.ಟ' ಪ್ರತಿಗಳಲ್ಲಿ ೩೯ನೆಯ ಪದ್ಯವಿಲ್ಲ. [1] ದೆಲೆಗಳನೊದರಿ ನೋಡಿದ (ಗ). [2] ಯೊಳಱೆ (ಕ.ಟ). [3] ಲೆಗಳ (ಕ.ಟ.ಡ). [4] ಬಿದಿಱಿ (ಗ.ಜ.ಝ). [5] ರೂಪನೇ (ಕ.ಟ), ರೂಹ ತಾ (ಗ.ಜ.ಡ). [6] ಮಾಡಿ (ಕ.ಝ.ಟ.ಣ). [7] ಸಿದ (ಕ.ಗ.ಝ.ಟ.ಣ). [8] ವಸನಾ (ಗ.ಜ.ಟ.ಡ), ಮಥನಾ (ಝ). [9] ರುಚಿಕರವು ನಿನ (ಕ), ರಚನೆ ತನ್ನೊಳ (ಗ.ಝ.ಟ).

ಹಸಿದ ಬಳಲಿಕೆಯೊಂದು ಹೊಮ್ಮಱಿ
ಹುಸಿದ ಬಳಲಿಕೆಯೊಂದು ಕಟ್ವಾ
ಯಸದ ವಿಪಿನಭ್ರಮಣದಗ್ಗದ ಬಳಲಿಕೆಯದೊಂದು
ಎಸಗ[1]ದಿರ್ದ[1] ಸತಿಯು ದರುಶನ
ದೆಸಕದಾಸೆಯಲಾಸೆಯುಳಿವಿನ
ಲೆಸಗಿದವು ಕುಶ ಕೇಳು ಕುಸುಕಿಱಿದವು ಕಕುತ್ಸ್ಥಜನ ೪೨

ಕನಸು ಕಳವಳ ಬೆದಱು ಭ್ರಮೆ ಭಾ
ವನೆ ವಿವೇಕ ವಿಲಾಸ ವಿಕಳ
ಸ್ತನಿತತಾಪಶ್ರಮ [2]ಗತಶ್ರಮ ಚಿಂತೆ ಸಂತೋಷ[2]
ಇನಿತು ಸಂಧಿಸಿದವನಿಪನ ಕಂ
ಡನುಜ ಮನದಲಿ ಬೆದಱಿ ಮಱುಗಿದ
ನನುಗತದ ಶೋಕದಲಿ ಸೂಸುವ ನಯನವಾರಿಯಲಿ ೪೩

[3]ಕುಸುಮಶರವಿರಹಾಗ್ನಿ ಮಿಗೆ ವಿಹ
ರಿಸಿತಲ್ಲೈ[3] ಬಳಿಕಂಗದಲಿ ಭಾ
ರಿಸಿತಲ್ಲೈ ಸೀತಾಪ್ರಳಾಪವಿಲಾಪಪರಿತಾಪ
ಪಸರಿಸುವ ತಂಬೆಲರು ಸುಳಿ[4]ದೂ
ಷ್ಣಿ[4]ಸಿತಲ್ಲೈ ಮಗ್ಗು[5]ಲಲಿ[5] ನೆಲನುರಿ
ಮಸಗಿದುದಲ್ಲೈ ಕಂದ ಕೇಳ್ ನರ[6]ರಂದದ[6]ಚ್ಯುತನ ೪೪

ತಾಪ ಬಲುಹಿನ್ನೇನ ಮಾಡುವೆ
ನೀ ಪರಂತಪ ಪುರುಷರವಿಗಕ
ಟಾ ಪುರಂಧ್ರಿಯ ವಿರಹಶಿಖಿ ವೆಡ್ಡೈಸಿತೇಯೆನುತ
ಆ ಪುರಾತನ ಶೇಷನಾ ನರ
ರೂಪಕದ ನಾರಾಯಣಗೆ ಶೈ
ತ್ಯೋಪಚಾರವ ಮಾಡಿ ನೋಡುವೆನೆನುತ ಮನದಂದ ೪೫

---

[1] ದಿರ್ದವು (ಕ.ಜ.ಡ.ಣ), ದಾದುದು (ಚ). [2] ಘನಶ್ರಮ ಚಿಂತೆ ಸಂತೋಷ (ಕ.ಝ.ಣ), ಣ ಚಿಂತೆ ದುರಂತರಾಯಾಸ (ಗ), ಣ ಚಿಂತೆ ದುರಂತ ಸಂತೋಷ (ಟ). [3] ವಿಷಮವಿರಹಾನಲನ ದಳ್ಳುರಿ ಮಸಗಿತ್ತೈ (ಗ), ವಿಷಮಶರ ವಿರಹಾಗ್ನಿ ಮಿಗೆ ವಿಹರಿಸಿತಲ್ಲೈ (ಚ.ಝ), ವಿಷಮ ವಿರಹಾಗ್ನಿಯಲಿ ಮಿಗೆ ವಿಹರಿಸಿತಲ್ಲೈ (ಜ.ಡ). [4] ದೆಬ್ಬಿ (ಗ.ಜ.ಡ). [5] ಲಿನ (ಗ), ಲನು (ಚ). [6] ರೂಪಿನ (ಗ), ರಂಗದ (ಜ.ಟ).

ಬಾಳೆಗಳ ಮೃದುದಳದ ನಳಿನಮೃ
ಣಾಳದಡಕಿಲುವಾಸಿನಲಿ ಭೂ
ಪಾಲಕನ [1]ನೂಕಿದನು[1] ಹಿಮರುಚಿಕಾಂತದೊಸರಿಕೆಯ
ಕಾಲುವೆಯ ತಿದ್ದಿದನು ಕರ್ಪುರ
ವಾಳೆಯೆಲೆಯಲಿ ಬೀಸಿದನು ಬಿಱು
ಗಾಳಿಗೆದ್ದುಗಿಯು[2]ದದಲಿ ಹೆಚ್ಚಿದುದು[2] ವಿರಹಾಗ್ನಿ ೪೬

ಸೀದವಾ ಮಗ್ಗುಲಿನ ಮೈಯಲಿ
ನೈದಿಲಿನ ತಾವರೆಯ ಕದಳಿಯ
ನಾದಿಕೆಯ ನಾಳಂಗಳುರಿನೊರೆಗುದಿಯ ಸಬುದದಲಿ
ಕಾದು ಕುದಿದುಕ್ಕಿದವು ಘನಶೈ
ತ್ಯೋದಕದ ಧಾರೆಗಳು ನೆಱೆಬೆಂ
ಡಾದನುಪಚರಣೆಯಲಿ [3]ತಪನ ನಿಜಾ[3]ನ್ವಯಾಧಿಪನ ೪೭

ಸೀತೆ ಸೀತೆ ಸರೋರುಹಾನನೆ
ಸೀತೆ ಸೀತೆ ಸರೋಜಲೋಚನೆ
ಸೀತೆ ಸೀತೆ ಸರೋಜಪರಿಮಳೆಯೆಂಬ ನಾಲಗೆಯ
ಮಾತು ಮುಱಿಯದ ಮನದ ಮನುಕುಲ
ಜಾತನಿರೆ ಮೈದೋಱಿದುದು ಪುರು
ಹೂತ ದಿಗ್ಭಾಗದಲಿ ಮಂಡಲವಾ ಹಿಮಾಂಶುವಿನ ೪೮

ತೋಱೆ ಕಂಗಳಿಗಿಂದು ತನು ಕಾ
ಹೇಱಿದುದು ಕಂದರ್ಪನಡ್ಡಣೆ
ಬೀಱುಗಳ [4]ಬಡುಗ[4]ಡೆಯ ಬಿರುದರ ಮನಕೆ ರಂಜಕವೆ
ತೋ[5]ಱದಂಗಜ[5]ಭಟನ ಖಂಡೆಯ
ದೇಱಿನವರಿಗೆ ಸುಖತರವೆ ಹದಿ
ನಾಱುಕಳೆಯಣ್ಣನ ವಿಲೋಕನವಣುಗ ಕೇಳೆಂದ ೪೯

ಕಿರಣವವು ದಾವಾನಲನ ದ
ಳ್ಳುರಿಯವೊಲು ಮೈದೋಱಿದವು ಮೊಗ
ಮುರಿದು ನೋಡಿದನನುಜನನು ಘನತರದ ತಾಪದಲಿ

---

[1] ನಿಲಿಸಿದನು (ಗ), ಮಲಗಿಸಿದು (ಚ), ನಿರಿಸಿದನು (ಜ.ಝ), ನೊಯ್ದಿರಿಸಿ (ಟ). [2] ತೆ ಹೆಚ್ಚಿತು ಮತ್ತೆ (ಕ.ಝ.ಟ.ಣ). [3] ದಿವಸಕರಾ (ಚ.ಝ), ತಪನಕುಲಾ (ಡ). [4] ಬೆಳುಗೊ (ಗ.ಜ.ಡ). [5] ಱದಂಗದ (ಕ.ಣ), ಱತಂಗಜ (ಗ.ಜ.ಟ.ಡ).

ತರಣಿಯುಗ್ರಕೆ ತನುವಿದಕಟಾ
ತರಹರಿಸು[1]ವುದೆ[1] ತಮ್ಮ ನೀ ನಿ
ಷ್ಕರುಣಿಯೈ ನೆಳಲಿಂಗೆ ಕೊಂಡೊ[2]ಯ್ದೆನ್ನನುಳುಹೆಂದ[2] ೫೦

ತರಣಿಯಲ್ಲಲೆ ಜೀಯ ಶಶಿಯುವ
ತರಣವೈಸೆನೆ ನಸುನಗುತ ಹಿಮ
ಕಿರಣಗುಂಟೇ ಚಟುಳತರ ಚಂಡಾಂಶುವೆಂದೆನಲು
ತರಣಿಕುಲ ಚಿತ್ತೈಸು ನುಡಿಗಪ
ಸರಣಿಯುಂಟೇ ತನಗೆನಲು ಹಿಮ
ಕಿರಣನಾದಡೆ ಕುಱುಹದೇನೆಂದರಸ ಬೆಸಗೊಂಡ ೫೧

ಕಂಗಳೀಕ್ಷಿಸಲಮೃತ[3]ಕರನು[3]
ತ್ತುಂಗಬಿಂಬವನದಱ ನಡುವೆ ಕು
ರಂಗವದೆ ಕುಱುಹೀ ಜಗತ್ರಯಕರಸ ಚಿತ್ತೈಸು
ಹಂಗಿಗನೆ ಹುಸಿಯೆನಲು ನೋಡಿ ಕು
ರಂಗವನು ಕಂಡರಸ ಬಾಲಕು
ರಂಗಲೋಚನೆ ಹಾಯೆನುತ ಹಮ್ಮೈಸಿ[4]ದನು ಭೂಪ[4] ೫೨

ಧರಣಿಪತಿ ಚಿತ್ತೈಸು ಸಾಕಿ
ನ್ನಿರಲಿ ಚಿತ್ತದಲಱಿಕೆ ಸೀತೆಯ
ಪರಿಯನುದಯದೊಳಱಿಯದಿರೆ ಬಳಿಕೀ ಜಗತ್ರಯವ
ಜರುಗಿಸುವೆನು ಮಹಾಜಲದಲಜ
ಸುರಕುಲೇಂದ್ರ ಯಮಾದಿಗಳ ಸಿಡು
ಗರುಳನುಚ್ಚುವೆನಚ್ಚರಿಯ ಬೀಱುವೆನು ಜಗಕೆಂದ ೫೩

ತೋಳ ಬಲುಹಿದೆ ಜೀಯ ದಿವ್ಯಶ
ರಾಳಿಯಿ[5]ದೆ[5] ಮೃತ್ಯುವಿನ ಬಲುಗೋ
ನಾಳಿಗಿಕುವ ಖಡ್ಗವಿದೆ ಕರಣದಲಿ ಖಾತಿಯಿದೆ
ನಾಳಿಗಿನನುದಯದಲಿ ವಿಮಲವಿ
ಶಾಲನೇತ್ರೆಯ ಸುದ್ದಿಯನು ಕಿವಿ
ಗೇಳಿಸದಿರಾನೇಕೆನುತ ಕಾರ್ಮುಕವನೊದಱಿಸಿದ ೫೪

---

[1] ತ್ರಿದೆ (ಚ). [2] ಯ್ದುರಿಸು ಬೇಗೆಂದ (ಗ.ಜ), ಯ್ದುರಿಸು ನೀನೆಂದ (ಝ.ಟ.ಡ), ದೆನ್ನ ನಿರಿಸೆಂದ (ಣ). [3] ಕಿರಣೋ (ಗ.ಜ.ಡ). [4] ದನು ಮಗುಳೆ (ಕ.ಝ.ಣ), ವಾರಾಂತ (ಗ), ದನು ರಾಮ (ಜ.ಟ). [5] ವೆ (ಚ.ಜ.ಝ.ಟ).

ನಡುಗಿತವನೀತಳ ಮಹೋದಧಿ
[1]ಯಡಿಮಗುಚಿದುದು[1] ಮೇರು ಮಂಡೆಯ
ಕೊಡಹಿಕೊಂಡುದು ಕಳವಳಿಸಿದವು ನಗರ ನಿರ್ಜರರ
ಸಿಡಿದುದಣ್ಣನ ಸತಿಯ ವಿರಹದ
ಕಡುಹು ತತ್ಕಾರ್ಮುಕದ ಬಿಱುದನಿ
[2]ಗಡಿಮಗುಚಿ[2]ದುದು ಧೈರ್ಯತನುವಿನಲಾ ಕಕುತ್ಸ್ಥಜನ ೫೫

ಇದು ಕಣಾ ಜಾನಕಿಯ[3]ನೊಯ್ದವ
ನೆದೆಯ ಶೂಲವಿದೀಗ ಸೀತಾ
ಸುದತಿಯನು ಕದ್ದೊಯ್ದವನ ಗಳಮಂಡಲಾಗ್ರ[3] ಕಣ
ಇದು ವಿದೇಹನೃಪಾಲತನುಜೆಯ
[4]ನಿದಿರಿಗೊಂಡರಿಭಟನ[4] ನೆತ್ತಿಯ
ನೊದೆವ ಕುಂತ ದುರಂತಧನುವಿದೆಯೆನುತ ಬೊಬ್ಬಿಱಿದ ೫೬

ಜೀಯ ಜಂಜಡವೇಕೆ ಲೋಕದ
ತಾಯನೀ ಲೋಕತ್ರಯದ ರಮ
ಣೀಯನೇತ್ರನ ಜನನಪರಿಯಂತಱಸುವೆನು ಬಳಿಕ
ಆಯತಾಕ್ಷಿಯ ಕಾಣದಿರೆ ತ
ನ್ನಾಯತವ [5]ನೋಡೆ[5]ನುತ ತೊರವೆಯ
ರಾಯ ನರಕೇಸರಿಯ ಸಂತೈಸಿದನು ಸೌಮಿತ್ರಿ ೫೭

———

[1] ಗಡಿಯ ಮೀಱುತು (ಚ.ಝ.ಟ). [2] ಗೊಡೆ ಮುಱು (ಗ.ಜ), ಗೊಡೆ ಮೆಱೆ (ಡ). [3] ಕೊಂಡೋಡಿದನೆದೆಯ ಬಲುಶೂಲ ಮೆತ್ತೀಗಿದು ಕಣಾ ಸೀತೆಯನು ವಂಚಿಸಿದವಗೆ ಗರಳ (ಚ). [4] ಸದನದಿಂದೊಯ್ದವನ (ಚ), ನಿದಿರುವಂದರಿಭಟನ (ಜ). [5] ದೇಕೆ (ಚ).

# ಹನ್ನೆರಡನೆಯ ಸಂಧಿ

ಸೂಚನೆ : ಅರುಣಜನ ಕಂಡರಿಕಬಂ[1]ಧನ
ಹರಣವನು ಕೊಂಡಧಿಕಸುಜನೋ[1]
ದ್ಧರಣಕೈದಿದರಮಳತರ ಪಂಪಾಸರೋವರವ

ಕುಶನೆ ಕೇಳೈ ಕಳಿದರಗ್ಗದ
ನಿಶಿಯ [2]ನಿಮ್ಮಯ್ಯದಿರು ನಿಮ್ಮಯ[2]
ವಸುಮತೀನಂದನೆಯ ಸುದ್ದಿಯ ತನ್ನ ಸಂತತಿಯ
ಬಿಸರುಹಾಂಬಕ ರಾಘವಂಗಳು
ಹಿಸುವ ತವಕದಿನಬುಜಬಾಂಧವ
ನೆಸಗಿದನು ಮಣಿಮಯವರೂಥವನುದಯ[3]ಶೈಲದಲಿ[3] ೧

ಎಲೆ ಕುಶಾನುಜ ಕೇಳಿದೈ ಮನು
ಕುಲ[4]ಲಲಾಮರ[4] ಮುಂದೆ ಸೂಚಿಸಿ
ಸುಳಿದವೈ ಹರಿಣಾಳಿ ಸೀತೆಯನೊಯ್ದ ಪಥವಿಡಿದು
ಹೊಲಬುಗಾಣಿರ ಹೆಜ್ಜೆದೆಗಹಿನ
ಚಲಿತ ಚಪಳದ ಚಾಳಿಯವೊಲ
ಗ್ಗಳಬಲಾನ್ವಿತರೈದಿದರು ಬಳಿಕವರ ಬಳಿವಿಡಿದು ೨

ಬಲನೆಡನ ಭಾಗದಲಿ ಸುದ್ದಿಯ
ಸುಲಭತೆಯ ಶಕುನವನು ಕೈಕೊಳು
ತಿಳಿದುಬರಲುದಿರ್ದಲರ ಕಂಡರು ಸತಿಯ ಸೋರ್ಮುಡಿಯ
ಹೊಲಬುದಪ್ಪದೆನುತ್ತ ಮನದಲಿ
ಹಲವನೆಣಿಸುತ ಬರಬರಲು ಸಿಡಿ
ದಲಗು ಗಱಿಗಳ ಕಂಡು ಕಂಡರು ಕಲಿಜಟಾಯು[5]ವನು[5] ೩

[1]ಧಾ ಸುರನ ಹರಣವ ಕೊಂಡು ಸುಜನೋ (ಕ), ಧನ ಹರಣವ ಕೊಂಡಧಿಕ ಸುಮನೋ (ಗ.ಜ.ಡ). [2] ನಿಬ್ಬರನೂಱು ಸುತನಿಂ (ಕ.ಣ). [3] ಶಿಖರದಲಿ (ಕ.ಟ.ಣ), ಶಿಖರಿಯಲಿ (ಗ.ಝ). [4] ದ ರಾಯರ (ಕ), ಲಲಾಮನ (ಟ.ಡ). [5] ವಿನ (ಚ.ಝ.ಡ).

ಅರೆಮುಗಿದ ಲೋಚನದ ಬಳಲುವ
ಕೊರಳ [1]ಬಿಱಿತೆ[1]ಱಕೆಗಳ ನಭಕು
ಪ್ಪರಿಸಿದಂಘ್ರಿಯ ನಿಶಿತಖಡ್ಗನಿಘಾತವೇದನೆಯ
ನರಳಿಕೆಯ ರಘುರಾಮನಾಮ
ಸ್ಮರಣೆಯರುಣಕುಮಾರಕನ ಬಳಿ
ಕರಸ ಕಂಡನು ನೆನೆದುಕೊಂಡನು ಪೂರ್ವದರುಶನವ ೪

ತಮ್ಮ ಕೇಳೀತನು ಜಟಾಯುಷಿ
ನಮ್ಮ ತಾತನ ಮಿತ್ರ ಬಲ್ಲೈ
ಮೊಮ್ಮನೀತನು ವಿನತೆಗಾತ್ಮಜ ಸೂರ್ಯಸಾರಥಿಯ
ನಮ್ಮ ಭರಭಾರವನು ಹಿಂದಾವ್
ನೆಮ್ಮಿಸಿದೆವೀತನಲಿ ಕೇಡಿದು
ನಮ್ಮದಾಗದೆ ಮಾಣದೆಂದುಗಿಸಿದನು ಕಂಬನಿಯ ೫

ಅಹುದು ಜೀಯ ಮದೀಯ ಜನಕನ
ಸಹಭವನು ನಾವಂದು ವರುಣನ
[2]ಮಿಹಿರ[2]ಪುತ್ರನ ಬೀಳುಕೊಂಡೆಡೆವಟ್ಟೆಯಲಿ ಕಂಡ
ವಿಹಗಪತಿ ಸಂದೇಹವಿಲ್ಲೆನು
ತಹತಬಲ ನಡೆತಂದು ನುಡಿಸಿದ
ನಹಿಮಕರಸೂತಜನನಾ ಸೌಮಿತ್ರಿ ದುಗುಡದಲಿ ೬

ಏನುಕಾರಣ ನಿನಗೆ ಹರಣದ
ಹಾನಿ ಯಾರಿಂದಾಯ್ತು ನಿನ್ನನು
ದಾನವರೊ ದಿವಿಜರೊ ಭುಜಂಗಮರೋ ಸಮೀಕದಲಿ
ಈ ನಿರೋಧಕೆ ತಂದವ[3]ರು[3] ಹೇ
ಳೈ ನಿಧಾನವ ನಾವು ದಶರಥ
ಸೂನುಗಳು ನಿನಗಾವು ಪುತ್ರರು ಹೇಳು ತಮಗೆಂದ ೭

ಆರು ನೀ ರಾಘವನೊ ಲಕ್ಷ್ಮಣ
ವೀರನೋ ಹೇಳೆನುತ ಶ್ರಮದ ಶ
ರೀರನೊಯ್ಯನೆ ನಿಂದು ಕಂದೆಱೆ[4]ದಱಿದನಿವರುಗಳ[4]

---

[1] ಬಿದ್ದ (ಚ). [2] ವಿಹಿತ (ಗ.ಚ.ಡ). [3] ರ (ಜ.ಟ.ಡ.ಣ). [4] ದಱಿದನ ವರುಗಳ (ಕ.ಜ.ಣ), ದೀಕ್ಷಿಸುತ ಬಳಿಕ (ಝ.ಟ).

ಸೋರುವಶ್ರುಗಳಿಂದ ಸೀತಾ
ಚೋರನಲಿ ತಾ ತಾಗಿ ತೊಲಗಿದ
ಶೌರಿಯುದ ಸಂಗತಿಯು ಹೇಳಿದು ಮುಗಿದನಕ್ಷಿಗಳ ೮

ಆದಡೆಲೆ ವಿಹಗೇಂದ್ರ ಕೇಳು ಸ
ಹೋದರನಲಾ ನಿನಗೆ ದಶರಥ
ಮೇದಿನೀಪತಿಗಱುಹಬೇಡೀ ಹದನ ನೀ ಹೋಗಿ
ಆ [1]ದಿತಿಜರಿಪು[1] ಸಭೆಯೊಳಬಲೆಯು
ನೊಯ್ದವನ ತಾನಱುಹಲೆಂದಭಿ
ವಾದನಂಗೈದರುಣಜನ ಬೀಳ್ಕೊಟ್ಟನಾ ರಾಮು ೯

ತಂದೆ ಮೃತವಾದಂದು ವಿಪಿನಕೆ
[2]ಸಂದೆವೈ[2] ಸೌಮಿತ್ರಿ ಮಿತ್ರನು
ತಂದೆಗೀತನು ಪಿತೃಸಖರು ತತ್ಪಿತೃಸಮಾನರಲೆ
ಎಂದು ನುಡಿವರು ಹಿರಿಯರದಱಿಂ
ತಂದೆ [3]ನಮಗೀ[3]ತನು ಕಣಾ ವಿಧಿ
ಯಿಂದ ವಿಹಿತ ಪರೇತಕೃತ್ಯವ ಮಾಡಬೇಕೆಂದ ೧೦

ನಿಯ[4]ಮ[4]ವಿಧಿಪೂರ್ವಕದಲೂರ್ಧ್ವ
ಕ್ರಿಯೆಯ ಮಾಡಿದರಲ್ಲಿ ರಿಪುನಿ
[5]ರ್ಣಯ[5] ಮನೋ[6]ರಾಗಿ[6]ಗಳು ತಾಳ್ದರು ರೋಷಪಾವಕನ
ಲಯುದ ಭಾಳಾಂಬಕನವೊಲು ನಿ
ರ್ಭಯಮನೋರಾಗಿಗಳು ದಕ್ಷಿಣ
ದಯನವಿಡಿದೈತಂದರಲ್ಲಿಂ ಮೇಲೆ ವಿಪಿನದಲಿ ೧೧

ತನುಜ ಕೇಳ್ಳೈ ಕಂಡರಿವರಾ
ವನದ ಪಥದಲಧೋಮುಖಿಯೆನುವ
ಳಿನಕುಲೇಂದ್ರನ ತಡೆದು ನಿಂದಳು ಪರಿಘಹಸ್ತದಲಿ
ಕನಲಿ ಲಕ್ಷ್ಮಣದೇವನಾ[7]ಬೆ[7]ಯ
ಜನನಿಯಂದವ ಮಾಡಿ ಮುಂದಣ
ವನಕೆ ಗಮಿಸಿದರಧಿಕದುಸ್ತರದುಗ್ರದುರ್ಭಯದ ೧೨

---

[1] ದಿವಿಜಪತಿ (ಕ.ಣ), ದನುಜರಿಪು (ಜ). [2] ಸಂದೆವಾವ್ (ಕ), ಬಂದೆವ್ಮೆ (ಗ). [3] ತಾನೀ (ಕ.ಣ), ತಮಗೀ (ಟ). [4] ತ (ಗ.ಜ.ಡ). [5] ರ್ಭಯ (ಗ.ಚ.ಣ). [6] ವ್ಯಸನಿ (ಕ.ಗ.ಡ.ಣ). [7] ಕೆ (ಕ.ಟ).

ದಾರಿದೋಱಿದ ವಿಪುಳತರಕಾಂ
ತಾರದುಬ್ಬರದೊಳಗೆ [1]ಘೀರೆಂ[1]
ಬಾರುಭಟೆಗಳ [2]ಕಾಮರನ[2] ಸಂದಣಿಯ ಸಾಲಿನಲಿ
ಭೂರಿವೃಕ ಶಾರ್ದೂಲ ಸೂಕರ
ಸೈರಿಭ ದ್ವಿಪ ಹರಿ ತರಕ್ಷು ವಿ
ಹಾರ ವಿಪಿನದಲಿವರು ಬರುತಿರ್ದರು [3]ಸಗಾಢ[3]ದಲಿ ೧೩

ತೋಱಿತಾ ವನಮಧ್ಯದಲಿ [4]ಸಿಡಿ[4]
ಲೇಱಿಕೆಯ ಮುಂಗುಡಿಯು ಸಿಡಿಲಿನ
ಚೀಱಿಕೆಯ ಚಡ್ಡಣದ ರವ ರಾಘವನ ಕಿವಿಗಳಿಗೆ
ಬೇಱೆಬೇಱಿಕ್ಕಲಿಸಿ ಬಿಲುಗಳ
ನೇಱಿಸಿದರೆಡಬಲದಲಬ್ಬರ
ದೋಱಿಸುತ ನಡೆತಂದರಡವಿಯಲೊಂದು ಯೋಜನವ ೧೪

ಮುಱಿಗೆಡದು ಕಾಡ್ಕೋಣ ಹೆಮ್ಮರೆ
[5]ಕಿಱುಬ[5] ಚಿತ್ರಕ ಶಿಖರಿ ಹಾಯ್ದವು
ಮಱಿಗಳನು ಮುಂದಿಕ್ಕಿ ವನಕರಿ ಕಂಡ ಬೀದಿಯಲಿ
ನಿಱಿನಿಳಿಲು ನಿಟಿಲೆನಲು ಮರಗಿಡು
ಗುಱುಬಿನೊಳಗಡಹಾ[6]ಯ್ದವಿ[6]ವರು
ಬ್ಬಿಱಿತಕಾ [7]ವ[7]ನವಳಯ ಕಾಲ್ದುಳಿಯಾಯ್ತು ಮೃಗಕುಲದ ೧೫

ಆಲಿಸಿದನಬ್ಬರವನೊಯ್ಯನೆ
ತೋಳುಗಳ ಪಸರಿಸುತ ಮುಂದಕೆ
ಮೇಲುಡಿಯ ಬಿದ್ದಿಭ ಲುಲಾಯ ಕುರಂಗ ಕರಡಿಗಳ
ತಾಳಿಗೆಯ ತಳಕಿಳುಹುತಗಿವುತ
ಮೇಲುಮುಂಡ[8]ದಲ[8]ಖಿಳ ಭೂತಗ
ಳೋಲಗದ ಖಳನೆದ್ದನಾಚರಿಸಲು ಸುರವ್ರಾತ ೧೬

ವೀರರಿವರಿಬ್ಬರ ಸಮೀಪಕೆ
ಸಾರಿದವು ತೋಳೆರಡು ಕಂಡರು
ಭೈರವಾಡಂಬರದ ಘೋರಕಬಂಧರಕ್ಕಸನ

---

[1] ಭೋರೆಂ (ಕ.ಣ). [2] ನಾಮರದ (ಚ), ಕಮ್ಮರನ (ಜ.ಝ.ಟ.ಡ). [3] ಸರಾಗ (ಕ.ಚ). [4] ಮಾಗಿ (ಕ.ಝ.ಟ.ಣ). [5] ಹರಿಣಿ (ಗ), ಚಿರತೆ (ಜ.ಡ.ಣ). [6] ಯ್ದುದಿ (ಚ), ಯ್ದರಿ (ಝ.ಡ.ಣ). [7] ನ (ಚ). [8] ಗಳ (ಕ.ಝ.ಣ).

ಸೈರಿಸುವರೇ ಬಳಿಕಿವರು ಕೈ
ಹಾರದಲಿ [1]ಕಣೆದೊಟ್ಟು[1] ಕೈಕೊಂ
ಡಾರುತೆಚ್ಚರು ಕೈಗಳನು ಕಳಚಲು ಕಬಂಧಕನ ೧೭

ಮೊದಲು ತಲೆ [2]ತಾನಿಲ್ಲ[2] ತೋಳುಗ
ಳುದುರಿದವು ನೆಲಕೆರಡುಯೋಜನ
ದದುಭುತದ ನೀಳದಲಿ ನಿಲವಿದ್ದುದು ನಿಶಾಚರನ
ಒದೆದ ಸಿಡಿಲಿನ ಪದಹತಿಗೆ ಕಳ
ಚಿದ ಮಹಾಕಂದರದ ಗಿರಿಯವೊ
ಲಿದಿರಲಿದ್ದನು ಕಂಡನು[3]ರದಕ್ಷಿಯಲಿ ರಾಘವನ[3] ೧೮

ಅಱಿದನವನೀ ನರರ ವೇಷದ
ನಿಱಿಗೆಯನು ಚಿತ್ತದಲಿ ತನಗಂ
ದಱಿಪಿದಗ್ಗದ ದೀರ್ಘಶಿರಮುನಿವರನ ನುಡಿವಿಡಿದು
ಅಱಿಸಿ ಕಾಣವು ವೇದತತಿ ಕಂ
ದೆಱೆದು ಕಾಣರು ಕಮಲಭವಭವ
ರುರುವದೈವವ ಕಂಡೆನೆಂದಾನಂದವ[4]ಯ[4]ನಾದ ೧೯

ದೇವ ನಿನ್ನವತಾರಲೀಲಾ
ಭಾವಕವನಱಿದೆನು ಕಣಾ ಮಾ
ಯಾವಿಲಾಸತೆ ಲೇಸು ತನಗಿನ್ನದಱ ಮಾತೇನು
ದೇವ ರಾಕ್ಷಸಭವದ ಬದುಕಿಗೆ
ಹೇವರಿ[5]ಸಿದುದು[5] ಚಿತ್ತ ಮುಕ್ತಿ
ಶ್ರೀವಧುವ ಕಾಣಿಸುವ ಕೃಪೆಯನು ಮಾಡಬೇಕೆಂದ ೨೦

ದೇವ ನೀ ಬಂದುದನು ಬಲ್ಲೆನು
ದೇವಿಯರನೊಯ್ದವನ ಬಲ್ಲೆನು
ರಾವಣನ ಸಾಧಿಸುವ ಮಿತ್ರನ ಬಲ್ಲೆನೆನ್ನುವನು
ಪಾವನವ ಮಾಡುವ ಕೃಪಾಸಂ
ಭಾವನೋಚಿತವುಳ್ಳಡುಪಕಾ
ರಾವಲಂಬನನಹೆನೆನಲು ರಘುನಾಥನಿಂತೆಂದ ೨೧

---

1 ತಱಿದೊಟ್ಟಿ (ಗ.ಜ.ಟ.ಡ), ಕಣೆಗಱೆದು (ಚ). 2 ಕಾಲಿಲ್ಲ (ಚ). 3 ದರಾಕ್ಷಿಗಳಲವನಿಪರ (ಗ.ಜ), ರದಕ್ಷಿಯಲಿಯವನಿಪನ (ಝ), ರದಕ್ಷಿಗಳಲವನಿಪನ (ಡ). 4 ನ (ಚ.ಝ). 5 ಸುತಿದೆ (ಚ).

ದನುಜ ಕೇಳಾಪ್ ಮಾಳ್ಪ ಲೇಸಿನ
ನೆನಹದಾವುದು ಪೇಳೆನಲು ಸಂ
ಹನನವಿದು ಶಿಖಿಮುಖದೊಳಲ್ಲದೆ ಮುಕ್ತಿವಡೆಯದೆನೆ
ಅನುಜ ಲಕ್ಷ್ಮಣನ್ಯೆಸಲೇಯೆಂ
ದೆನುತ ತಂದೊಟ್ಟಿದನು ಬಳಿಕಿಂ
ಧನವನುರಿಗೊಳಿಸಿದನು [1]ಹುತವಹನಲಿ[1] ನಿಶಾಚರನ ೨೨

ಬಂದುದಾ ಸಮಯದಲಿ ಹಂಸೆಗ
ಳಿಂದ ಹೂಡಿದ ವರವಿರಿಂಚಿ
ಸ್ಯಂದನವು [2]ಸ್ವಾಯಂಭು[2]ಪುರದಿಂದವನ ಹೊರೆಗಾಗಿ
ನಿಂದನವ ರಥದೊಳಗೆ ಕೈಮುಗಿ
ದೆಂದನೆಲೆ ರಘುನಾಥ ನುಡಿ ಮನ
[3]ದಂದವನು[3] ಬೇಗೆನಲು ಬಳಿಕವಗರಸನಿಂತೆಂದ ೨೩

ಧಾರುಣಿಯ ನಂದನೆಯನೊಯ್ದ[4]ನ[4]
ನಾರದೆಸೆಯಿಂದಱು[5]ಕೆ[5] ನಮಗನು
ಸಾರಿಯಹುದಾ ಹದನ ಹೇಳೆನಲವನು ಕೈಮುಗಿದು
ವೀರ ಕೇಳಾದಡೆ ಸುಪಂಪಾ
ತೀರದನುಪಮಋಷ್ಯಮೂಕದ
ಸೂರಿಯನ ಸುತನಿಂದ ನಿಮ್ಮಿಷ್ಟಾರ್ಥವಹುದೆಂದ ೨೪

ತಳರ್ದನವನೀ ಮಾತ ನುಡಿದಜ
ನಿಳಯಕಿವರಾ ವಿಪಿನ ವೀಥಿಯ
ಕಳಿದು ಬಂದರು ಕುಂತಳದ ಕಮನೀಯ ಮಂಡಲಕೆ
ಹೊಳೆಯ ಹರಿಗಾಲುವೆಯ ಹರಹಿನ
ಬೆಳೆದ ನಂದನದುಬ್ಬುಗೊಬ್ಬಿನ
ಕಳಮೆ ಕದಳಿ ದ್ರಾಕ್ಷಿ ಧವಳೇಕ್ಷುಗಳನೀಕ್ಷಿಸುತ ೨೫

[6]ಅಸ[6]ಮಬಲ ಸುಗ್ರೀವದೇವನ
ಬಿಸರುಹಪ್ರಿಯಸುತನ ಗಿರಿಯನು
ಬೆಸಗೊಳುತ ಬಟ್ಟೆಗ[7]ರನಖಿಳ[7]ಗ್ರಾಮಸೀಮೆಗಳ

---

[1] ದೇಹವನಾ (ಗ.ಜ.ಡ). [2] ಪರಮೇಷ್ಠಿ (ಝ.ಟ). [3] ಬಂದುದನು (ಕ.ಝ.ಟ.ಣ). [4] ವ (ಗ.ಜ.ಝ.ಣ). [5] ವೆ (ಚ). [6] ವಿಷ (ಕ.ಝ.ಣ). [7] ಳಲಖಿಳ (ಕ.ಣ), ರ ನಗರ (ಗ).

ಪಶುಗಳಾಡುಂಬೊಲನ ಪಥವಿಡಿ
ದೆಸಗಿದಶ್ರಮಭಾರದಲಿ ರಾ
ಕ್ಷಸಕುಲಾಂತಕರೈದಿದರು ಶಬರಿಯ ನಿಜಾಶ್ರಮವ ೨೬

ಸೊಗಯಿಸುವ ತಾಪಸ ತಪೋವೇ
ದಿಗಳಲನುಪಮಪುಣ್ಯಪುಷ್ಕರ
ಣಿಗಳಲ[1]ಧ್ವರಶೂನ್ಯ[1] ಶಾಲಾವಳಿಯಲನುಪಮದ
ಅಗರು ಚಂದನ ಚಂಪಕಾಮೋ
ದಗಳಲುಲಿವ ಶುಕಾಳಿ ಪಿಕ ಕೇ
ಕಿಗಳಿದಿರಿನಲೆಸೆದುದಾಶ್ರಮ [2]ಧರ್ಮಚಾರಿಣಿಯ[2] ೨೭

ಸಲಹುತಿರ್ದವು ಹುಲಿಯಮಱಿಗಳ
ಮೊಲೆಯನಿತ್ತು ಕುರಂಗಿ ವನಕರಿ
ಕಳಭನಿಚಯವನೋವುತಿರ್ದವು ಸಿಂಹವಹಿನಿಕರ
ನಲಿವುತಿರ್ದವು ನವಿಲೆಡೆಯಲರೆ
ಗಿಳಿಯ ವಚನೋದಯದ ನುಡಿಗಳ
ಕಲಿವುತಿರ್ದವು ಕೂಡೆ ವನಮಾರ್ಜಾಲವಿದಿರಿನಲಿ ೨೮

ಕುಶನೆ ಕೇಳ್ಕೈ ನರೆತ ಮಂಡೆಯ
ಕುಸಿದ ತೊಗಲಿನ ಜೋಲ್ವ ಹುಬ್ಬಿನ
ನಸಿದ ನೋಟದ ಬಾಗಿದೊಡಲಿನ ಬತ್ತಿದಾನನದ
ಸಸಿದ ಹಲುಗಳ ಕೆತ್ತ ಕಿವಿಗಳ
ಮಸುಳಿದಂಗದ ಮುಪ್ಪಿನಲಿ ಲಂ
ಬಿ[3]ಸಿದ[3] ಶಬರಿಯು ಸುಪ್ರಸಿದ್ಧೆಯ ಸಾರ್ದರೊಲವಿನಲಿ ೨೯

ಮುರಹರನ ನಿಜಮೂರ್ತಿಯನು ಹೃ
ತ್ಸರಸಿರುಹಕರ್ಣಿಕೆಯ ಮಧ್ಯದ
ಲಿರಿಸಿ ಪರಮಾನಂದಸುಖಮಯಭಾವಶುದ್ಧಿಯಲಿ
ಇರಲು ಹೊಳಕಿದುದವನಿಜೇಶನ
ಪರಮಮಂಗಳಮೂರ್ತಿ ಮನದ
ಚ್ಚರಿಯಲೊಯ್ಯನೆ ಕಂದೆಱೆದು ನೋಡಿದಳು ರಘುಪತಿಯ ೩೦

---

[1] ವಧೃತಯಜ್ಞ (ಕ), ಧ್ವರಪೂತ (ಝ), ಧ್ವರಪೂರ್ಣ (ಟ), ಧ್ವರಬಹಳ (ಡ).
[2] ವಾ ತಪಸ್ವಿನಿಯು (ಕ). [3] ಸುವ (ಕ.ಗ.ಝ.ಣ).

ಹರಿಯಲಾ ಸಾಕ್ಷಾತ ಲಕ್ಷ್ಮೀ
ವರನಲಾ ಪರಿಪೂರ್ಣ ವಿಶ್ವಂ
ಭರನಲಾ ಜಗದಂತರಂಗನಲಾ ಮಹಾದೇವ
ಅರರೆ ಶಿವಶಿವ ವಿಷ್ಣುಪದಸಂ
ದರುಶನವು ತಾ ಮುನ್ನ ಮಾಡಿದ
ಪರಮಸುಕೃತವಲಾಯೆನುತ್ತಿದಿರೆದ್ದಳಾ ಶಬರಿ ೩೧

ಆದಿಪುರುಷನ ಕಂಡೆನೆನುತ
ತ್ಯಾದರದಿ[1]ನಾ ಹರಿಪದವನಾ
ರಾಧಿಸಿದಳಾಗಮದಿ[1] ನವವಿಧಭಕ್ತಿಭಾವದಲಿ
ಆ ದಯಾಂಬುಧಿಗೆಂದಳೆಲೆ ದೂ
ರ್ವಾದಳಶ್ಯಾಮಳನೆ ಕೇಳ್ ನೀ
ನೈದಿದುದ ನಾ [2]ಬಲ್ಲೆ[2]ನಱಿದೆನು ನಿನ್ನ ನಾಟಕವ ೩೨

ಖಳ ಕಬಂಧನು ನಿ[3]ಮ[3]ಗೆ ಹೇಳಿದ
ಕಲಿಲಲಾಟಲಲಾಮನೆನಿಪ
ಗ್ಗಳ ಕಪೀಂದ್ರನ ಋಷ್ಯಮೂಕನಗೇಂದ್ರ ದಕ್ಷಿಣದ
ಕೆಲದೊಳ[4]ದೆ[4] ವರತುಂಗಭದ್ರಾ
ಕಲಿತ ಪಂಪಾಕ್ಷೇತ್ರಸೀಮಾ
ವಳಯವದಱಲಿ ಕಾಬಿರೆಂದಳು ಶಬರಿ ಕೈಮುಗಿದು ೩೩

ಮನದ ಬಗೆ ಕೈಗೂಡುವುದು ರಿಪು
ಹನನ ನೆಱೆ ಸಿದ್ಧಿಪುದು ನಿಮ್ಮಯ
ವನಿತೆ ನಿಮಗಹಳೊಲಿವಳಲ್ಲಿಂಮೇಲೆ ಭೂವನಿತೆ
ವಿನುತಕೀರ್ತ್ಯಂಗನೆ ಜಯಾಂಗನೆ
ಜನಪ ಚಿತ್ತೈಸೆಂದು ಮಾಯಾ
ಮನುಜನನು ಬೀಳ್ಕೊಟ್ಟು ಬಿಜಯಂಗೈದಳಜಪುರಿಗೆ ೩೪

ಶಬರಿಯನು ಬೀಳ್ಕೊಂಡು ಶೌರ್ಯ
ಸ್ತಬಕರಲ್ಲಿಂಮೇಲೆ ಬಂದರು
ವಿಬುಧರಿಗೆ ದುರ್ಲಭದ ಪಂಪಾಕ್ಷೇತ್ರ ಮಂಡಲಕೆ
ಪ್ರಬಲತರ ಘೂರ್ಣಿತದ ಬಹ[5]ಳಿತ[5]
ಸಬುದದುಬ್ಬಿನ ಸುಳಿಗಳಬ್ಬರ
ದಬುಧಿಭಂಗದ ತುಂಗಭದ್ರೆಯ ಕಂಡರಿದಿರಿನಲಿ ೩೫

---

[1] ಪೂಜಿಸಿದಳಾ ಹರಿಪಾದಪದ್ಮಂಗಳನು (ಕ.ಚ). [2] ನಱಿದೆ (ಗ ಜ.ಝ.ಡ.ಣ). [3] ನ (ಕ.ಜ.ಝ.ಡ.ಣ). [4] ಗೆ (ಕ.ಝ.ಟ). [5] ಳದ (ಗ.ಜ.ಟ.ಡ).

ಆ ನದಿಯನುತ್ತರಿಸಿ ಪಂಪಾ
ಶ್ರೀನಿವಾಸನ ಕಂಡು ಬರೆ ಸು
ಮ್ಮಾನಮುಖದಲಿ ಸುಳಿದುದನುಪಮಕುಸುಮಮಯ ಸಮಯ
ಮೌನಿಗಳ ನೈಷ್ಠಿಕತಪೋನು
ಷ್ಠಾನಶೀಲರ ಸಲೆವಿಯೋಗಿಗ
ಳಾನನದ ಮೇಲೆಳೆವುತಸಿಯನು[1]ದಾರತೇಜ[1]ದಲಿ ೩೬

ಗಿಳಿಗಳುಗ್ಗಡಣೆಗಳ ಮಱಿಗೋ
ಗಿಲೆಯ ಹೊಗಳಿಕೆಗಳ ಮದಾಳಿಯ
ಲಲಿತಕಹಳಾರವದ ಶಿಖಿಸಂಕುಲದ ನರ್ತನದ
ಅಲರುಗಣೆಗಳ ಕಬ್ಬುವಿಲ್ಲಿನ
ತಳಿತಮಾವಿನ ಝಲ್ಲರಿಯ ಮಂ
ಡಳಿಯ ಮನ್ಮಥರಾಜ ಸುಳಿದನು ರಾಮನಿದಿರಿನಲಿ ೩೭

ತರುಣ ಕೇಳೈ ಕುಶನೆ ಕಾಮಾ
ತುರರಿಗಗ್ಗ[2]ಳ[2] ವಿರಹಿಗಳಿಗೀ
ಸ್ಮರನ [3]ಕಾಣಿಕೆ ಸೋಂಕೆ ಸೋಲರೆ[3] ಶಂಬರಾಂತಕಗೆ
ಅರಸಿ ಸೀತೆಯ ನೆನೆದು ಹುಟ್ಟಿದ
ವಿರಹಶಿಖಿಯುಬ್ಬರದ ತಾಪಕೆ
ತರಹರಿಕೆದೋಱದೆ ಸರೋವರದೊಳಗೆ ಮಂಡಿಸಿದ ೩೮

ಬಿಸಜವನು ಮುಖವೆಂದು ಮಿಗೆ ಚುಂ
ಬಿಸುವನುಭಯಕರಂಗಳಲಿ ಝೊಂ
ಪಿಸುವನಮಳರಥಾಂಗಗಳನುತ್ತುಂಗಕುಚವೆಂದು
ಒಸೆದು [4]ನೋಡಿದನಕ್ಷಿಯೆಂದೆವೆ[4]
ಮಿಸುಕದೆಳೆಮೀನುಗಳ ಕಳೆಗಳ
ಕೊಸರುವನು ಸಂಭೋಗಸಮಯೋಚಿತಸುಭಾಷಿತವ ೩೯

---

[1] ವಿಷಮ ಗರ್ವ (ಕ.ಡ). [2] ದ (ಗ.ಚ). [3] ಸುಮುಖತೆ ಸೊಗಸೆ ಸೋತನು (ಕ), ಕಾಣಿಕೆ ಸೊಗಸೆ ಸೋತನು (ಝ.ಣ). [4] ನೋಡಿದವಕ್ಷಿಯೆಂದೇ (ಕ.ಣ), ನೋಡುವನಕ್ಷಿಯೆಂದೆವೆ (ಗ.ಜ.ಡ).

ಅನುಜ ಕೇಳೆಮ್ಮರಸಿ ನಮ್ಮನು
ವನದೊಳಗೆ ಬಿಡದಱಿಸಿ ಕಾಣದೆ
ವನರುಹಾಕರವಾಗಳೆಲೆ ತನ್ನಂತರಂಗದಲಿ
ಅನುಕೊಳಿಸುತಿದೆ ಸೀತೆಯೆಂಬೀ
ನೆನಹು ನಿನ್ನಯ ಚಿತ್ತದಲಿ ಸಂ
ಜನಿಸಿದುದ ಹೇಳೆಂದು ಸೌಮಿತ್ರಿಯನು ಬೆಸಗೊಂಡ ೪೦

ಅಕಟ ರಘುಕುಲದರಸುಗಳು ಕಾ
ಮುಕರೆ ಕಾತರರೇ ವಿಚಾರಿಸೆ
ವಿಕಳಮತಿಗಳೆ ವಿಷಯಿಗಳೆ ಲಲನಾಜನಂಗಳಲಿ
ಯುಕುತಿ[1]ವಿದರ್ಕೆ ನಿಮಗಿದೀ[1] ಭ್ರಾ
ಮಕಪರಿಗ್ರಹವೇಕೆ ನರನಾ
ಟಕದ ನಟನೆಯನನ್ನ ಬರ ಬಿಡಿ ಬಿಜಯಮಾಡೆಂದ ೪೧

ಎಂದು ಮೆಲ್ಲನೆ ಕೊಳನ ತೀರಕೆ
ತಂದು ತಾಪವ ಬಿಡಿಸಿ ನಯಮುಖ
ದಿಂದಲೊಯ್ಯನೆ ನಡೆಸಿ ತಂದನು ತರಣಿನಂದನನ
ನಂದನದ ಗಿರಿಗಾಗಿ ಕೆಂದಳಿ
ರೊಂದಿ[2]ದೆಳೆನನೆದೋಱಿಕೆಯ[2] ಮಾ
ಕಂದವನು ಸಾರಿದನು ತೊರವೆಯರಾಯನೊಡಗೂಡಿ ೪೨

---

[1] ನಿನಗಿದು ಸಲ್ಲದೀ (ಕ.ಝ), ವಿದ ನಿನಗೀ ವಿವಿಧ (ಙ). [2] ಕೆಯ ನನೆದೋಱಿಕೆಯ (ಕ.ಟ), ದೆಳೆಗಾಯ್ದೊೀಱಿಕೆಯ (ಗ), ದೆಳೆಲತೆಯೋವರಿಯ (ಝ).

# ಮೊದಲನೆಯ ಸಂಧಿ

---

ಸೂಚನೆ : ಚಂಡಕರಕುಲತಿಲಕ ತನ್ನನು
ಕಂಡ ಪವನಜನಿಂದ ಕಾಣಿಸಿ
ಕೊಂಡು ಕೈವಿಡಿದೊಲಿದು ಪಾಲಿಸಿದನು ಪತಂಗಜನ ॥

ತರುಣ ಕೇಳ್ ರಂಜಿಸಿತು ಯವ್ವನ
ದಿರವು ನಿಮ್ಮಯ್ಯಂದಿರಿಗೆ ಕುಡಿ
ವರಿವ ಮೀಸೆಯ ಕಪ್ಪುದೋ[1]ಱುವ[1] ಬವರಿಗಡ್ಡಗಳ
ಭರದ ಭುಜಬಲ [2]ಲೋಚನದ ಸಿತ
ದರುಣ[2] ಸುರಗಿ ಕೃಪಾಣ ಬಲುಬಿಲು
ಸರಳ ಹೊಗರಿನಲೆಸದರಿಂದುದಿನೇಶರಂದದಲಿ ೧

ಆಳುತಿರ್ದನು ಸಕಲ ಗೋಲಾಂ
ಗೂಲ ಸಾಮ್ರಾಜ್ಯವನು ದಿವಿಜರ
ಶೈಲಕೆಣೆಯೆನಿಪದ್ರಿಶಿಖರದ ರಾಜಧಾನಿಯಲಿ
ನೀಲ ನಳ ಹನುಮಂತ ತಾರ ಕ
ರಾಳಬಲ ಕೇಸರಿ ರುಮಾದ್ಯರ
ಮೇಳದಲಿ [3]ಕಪಿವಿಪುಳ[3]ಕಾಲಗ್ರೀವ ಸುಗ್ರೀವ ೨

ಕಂಡನೊಡ್ಡೋಲಗದೊಳಿದ್ದೀ
ಚಂಡಕರಕುಲಕಮಲವನಮಾ
ರ್ತಾಂಡರನು ರಿಪುವಿಜಯ ಮಾಯಾಮನುಜ ವಿಗ್ರಹರ
ಖಂಡಪರಶು ಪರಾಕ್ರಮರ ಕೋ
ದಂಡ [4]ಕಾಂಡ[4] ಕೃಪಾಣ ಸುರಗಿ ಸು
ಮಂಡನರ ರಾಜಸ[5]ದ[5] ತೇಜೋವಿ[6]ಮಲ[6]ವಿಗ್ರಹರ ೩

---

[1] ಱದ (ಜ.ಝ.ಟ.ಣ). [2] ದರುಣಸೀತಕೆ ಕರದ (ಕ), ದರುಣನಯನದ ಕರದ (ಗ), ದರುಣಸಿತಕೇ ಕರದ (ಣ). [3] ರಿಪುವಿಪಿನ (ಚ), ರಿಪುವಿಪುಳ (ಟ). [4] ಖಂಡ (ಕ), ಖಡ್ಗ (ಗ.ಜ.ಟ.ಡ), ತುಂಗ (ಣ). [5] ಸು (ಕ.ಣ). [6] ಪುಳ (ಕ.ಣ).

ಏನಿದಚ್ಚರಿ ನಮ್ಮ ರಾಷ್ಟ್ರವ
ಮಾನುಷಸ್ಥಳವಿಲ್ಲಗೆತ್ತಣ
ಮಾನವರ ಸಂಚಾರ ಸಂಘಟನವು ವಿಚಿತ್ರವಲ
ದಾನವರೊ [1]ಮೇಣ್ ದಿವಿಜರೋ[1] ಹರಿ
ಸೂನುವಿನ ಗುಪ್ತಿಗರೊ ಬರವು ನ
ವೀನವಾಗಿದೆ ಹನುಮ ನೋಡವರುಗಳ ನೀನೆಂದ ೪

ನೋಡಿಬಾ [2]ಹೋಗಾ[2] ನರೇಂದ್ರರ
ಗಾಢಗಮನಸ್ಥಿತಿಯನಱಿ ಮಾ
ತಾಡು ಮನದಂತರವ ತಿಳಿ ಹಗೆಕೆಳೆಯ ಕೈ[3]ಮನದ[3]
ಮೋಡಿಯನು ನಿರ್ಧರಿಸು ನೀ ಮೊದ
ಲಾಡದಿರು ಮುನಿವೇಷದಲಿ ಮೈ
ಗೂಡು [4]ನಡೆಯೆಂ[4]ದಟ್ಟಿದನು ಸುಗ್ರೀವನನಿಲಜನ ೫

ಆ ಕಪೀಂದ್ರನ ಬೀಳುಕೊಂಡು ಪಿ
ನಾಕಧರವಿಕ್ರಾಂತನೈಂದ್ರ
ವ್ಯಾಕರಣಕೋವಿದ[5]ನು ಸಕಲ[5]ಸ್ಮೃತಿಕಲಾವಿದನು
ಲೋಕಲೋಚನ ಭೀಕರನು ಜಗ
ದೇಕವೀರನುದಾರಗುಣರ
ತ್ನಾಕರನು ರಾಘವನ ಕಾಣ್ಬುತ್ಸವದಲೈತಂದ ೬

ವಿತತ ವಿಮಳಾಮ್ನಾಯ[6]ಮಯ[6]ವಿ
ಶ್ರುತದ ಮಣಿಕುಂಡಲದ ವಿವಿಧ
ಸ್ಮೃತಿವಿಲಾಸಬ್ರಹ್ಮದಂಡದ ನಿರ್ಜಿತೇಂದ್ರಿಯದ
ನುತಕನಕ ಕೌಪೀನದಾಗಮ
ದತಿಶಯದ ಯಜ್ಞೋಪವೀತದ
ಯತಿಕುಲೋತ್ತಮನೈದಿದನು ನರರೂಪಿನಚ್ಯುತನ ೭

---

[1] ದಿವದವರೊ ಮೇಣ್ (ಕ.ಡ). [2] ಹೋಗೀ (ಚ.ಟ), ನೀನಾ (ಜ). [3] ಮೊಗಳ (ಚ). [4] ಹೋಗೆಂ (ಗ.ಝ). [5] ನಶೇಷ (ಕ.ಝ.ಣ). [6] ತರ (ಗ), ದಲಿ (ಜ.ಟ.ಡ).

ಕಾಣುತೀ [1]ರಘುಜನ ಸುದರುಶನ[1]
ಪಾಣಿಯೆಂದೇ ಮಾಡಿದನು ಪ[2]ರಿ
ಮಾಣವೆಂ[2]ತುಟೊ ಪವನಸುತನ ಪರೇಂಗಿತಜ್ಞತೆಯು
ಕಾಣವಟಿಸಿ ಸಮಸ್ತನಿಗಮ
ಶ್ರೇಣಿ ತನ್ನಯ ತಾಯ ನುಡಿ ತಾ
ಕರ್ಣಿಯಾಯ್ತೆಂದಂಘ್ರಿಗಾನತನಾದನಾ ಹನುಮ ೮

ನೀವು ವಿಪ್ರರು ವೀರಪಾರ್ಥಿವ
ರಾವು ನಮಗಭಿವಂದಿಸುವುದಿದು
ಭಾವಿಸಲು ಮಾಯಾವಿಲಾಸಕವೆಂಬ ಬಗೆ [3]ಮನವ[3]
ತೀವಿಕೊಂಡಿದೆ ತತ್ತ್ವಕಾರ್ಯವ
ದಾವುದಾರಟ್ಟಿದರು ನೀ ತಾ
ನಾವನಿಲ್ಲಿಗೆ ಬಂದ ಹದನೇನೆಂ[4]ದು ಬೆಸಗೊಂಡ[4] ೯

ಆದಡೆಲೆ ರಾಜೇಂದ್ರ ಚಿತ್ತೈ
ಸಾದಿಯಾಗಲಿ ನೀವು ಬಿಜಯಂ
ಗೈದ ಬಗೆಯಭಿವಚನ ಬಿನ್ನಹ ಬಳಿಕ ತನ್ನದೆನೆ
ಆ ದಯಾಂಬುಧಿಯೈಸೆ ಮತ್ತೇ
ನಾದಡಾಧರಿಸಾವು ಬಂದ ವಿ
ನೋದವಿಭವವ ಹೇಳಿದರೆ ಹುರುಳಿಲ್ಲ ನುಡಿಗೆಂದ ೧೦

ಕೇಳಿ ಬಲ್ಲೈ ದಶರಥ ಕ್ಷಿತಿ
ಪಾಲಕನನಾವಾನರೇಂದ್ರನ
ಬಾಲಕರು ಬರವಾಯ್ತು ತನ್ನೃಪನಾಜ್ಞೆ[5]ಯಿಂ[5] ಬಳಿಕ
ಕಾಲಗತಿಯಿಂದೆಮಗೆ ಕಾನನ
ದಾಲಯವು ಸಮನಿಸಿತು ಕಷ್ಟದ
ಮೇಲೆ ಕಷ್ಟವ ಕಾಬ ಕಥೆ ನಮಗಾಯ್ತಲೇಯೆಂದ ೧೧

---

[1] ಪವನಜನು ಪಂಕಜ (ಕ.ಣ), ರಘುಪತಿಯ ಪಂಕಜ (ಝ). [2] ರ ಮಾಣುಯೆಂ (ಕ.ಣ), ಡಿ ಗಾಣೆವೆಂ (ಝ). [3] ನಮಗೆ (ಚ). [4] ದನಾ ರಾಮ (ಕಡ .ಣ). [5] ಯಲಿ (ಜ.ಟ.ಡ.ಣ).

ಸುಳಿದುದಿದಿರಲಿ ನಮ್ಮ ವಿಪಿನ
ಸ್ಥಳದಲೊಂದು ಕುರಂಗವದ ಕಂ
ಡೆಳಸಿ ಬೇಡಿದಳೆಮ್ಮ ವಧು ನಾವ್ ಮಾಯೆಯೆಂಬುದನು
ತಿಳಿಯಲಱಿಯದೆ [1]ತನ್ಮೃ[1]ಗದ ಬೆಂ
ಬಳಿಯ[2]ಲೈದಿ[2]ದ ಹಿಂದೆ ರಾವಣ
ಕಳವಿನಲಿ [3]ಕದ್ದೊ[3]ಯ್ದನಡವಿಯಲೆಮ್ಮ ಭಾಮಿನಿಯ ೧೨

ಸತಿಯ ಹೋಗಾಡಿದೆವು ಮಾನ
ಸ್ಥಿತಿಗೆ ಮೈಮಱೆಯಾಯ್ತು ಬಂದೆವು
ಗತಿವಿಡಿದು ದಶಶಿರನ ಮೇಲಣ ವೈರಬುದ್ಧಿಯಲಿ
ದಿತಿತನೂಜ ಕಬಂಧನಿಂ ವಿ
ಶ್ರುತ ಕಪೀಂದ್ರನ ಕಾಬ ಬಗೆಯಾ
[4]ಯ್ತು ತದೀಯ ಕಪೀಂದ್ರನನು ನಾವ[4]ಱಿಯಬೇಕೆಂದ ೧೩

ಬಳಲಿದೆವು ನಾವ್ ಹಿಂದೆ ಹೊ[5]ಮ್ಮಱಿ
ಯೆ[5]ಳತಟದ ಮಾಯೆಯಲಿ ಮಾಯಾ
ವಿಲಸಿತರು ರಕ್ಕಸರು ನಾವ್ ನಿಷ್ಕಪಟಮಾನಸರು
ತಿಳಿಯಬಾರದು ನಿನ್ನ ವೇಷದ
ನೆಲೆಯನೆನೆ ಕೈಮುಗಿದು ಕಪಿಕುಲ
ತಿಲಕ ಬಿನ್ನಹಮಾಡಿದನು ಮನುಕುಲಶಿರೋಮಣಿಗೆ ೧೪

ಜೀಯ ನೀವೀಗೆಂದ ವಾನರ
ರಾಯ ಸಚಿವರು ನಾವು ನಮ್ಮಯ
ತಾಯಿ ತಂಗಿ ತದೀಯ ಕಪಿಕುಲಸಾರ್ವಭೌಮಂಗೆ
ವಾಯುವೆನ್ನಯ ತಾತ ತನ್ನಭಿ
ದೇಯವನಿಲಜನೆಂದು ಮಿಕ್ಕಿನ
ಮಾಯೆಯುವರಾವಲ್ಲವೆಂದನು ಹನುಮನರಸಂಗೆ ೧೫

ಆತ ಕಪಿ [6]ಯತಿ ನೀನ[6]ಸಂಗತ
ಮಾತು ಮೊದಲಿದು ಮನದ [7]ಮನಿತಕೆ[7]
ಕೌತುಕದ ಕಥೆ ತೋಱುತಿದೆ ನೀನೇ ವಿಚಾರಿಸೆನೆ

---

[1] ಹೊಮ್ಮೃ (ಗ.ಜ.ಡ). [2] ಬಳಲಿ (ಕ.ಟ). [3] ಕೊಂಡೊ (ಜ.ಡ). [4] ಯ್ತತಿಶಯದಲಿನ್ನಾ ಕಪೀಂದ್ರನನ (ಚ). [5] ಮೃಗ ದೆ (ಕ). [6] ನೀ ಯತಿಯ (ಚ); ಯಲೆ ಸೀನ (ಜ.ಝ). [7] ನಿಲವಿಗೆ (ಕ), ನೆನಹಿಗೆ (ಗ), ನುವ ಮಿಗೆ (ಜ), ಗಮನಕೆ (ಝ), ಮಂತ್ರಕೆ (ಟ), ಮನುವಿಗೆ (ಡ.ಣ).

ವಾತಸುತ ಬಳಿಕನ್ವಯದ ಪರಿ
ಜಾತದಭ್ಯುದಯವನು ಬಹುರೂ
ಪಾತಿಶಯವಹ ಪರಿಯ ಬಿನ್ನೈಸಿದನು ರಘುಪತಿಗೆ ೧೬

ಐಸೆ ಮತ್ತೇನಾದಡೀ ನುಡಿ
ಮಾಸಿಕೆಗೆ ಮೈದೋಱ[1]ದಿದ ನೀ[1]
ಕೀಶಕುಲಕುಂಜರನನೀ[2]ಗಲೆ ನ[2]ಮಗೆ ಕಾಣಿಸಲು
ದೋಷಕೃತಮುಖನಲ್ಲ ಮಾಯೆಯ
ವೈಸಿರಿ[3]ಯ[3] ಮನಕೆಮಗೆ ಬಹುದೆನ
ಲಾ ಸಮೀರಕುಮಾರ ಬಳಿಕಿಂತೆಂದನರಸಂಗೆ ೧೭

ದೇವ ಚಿತ್ತೈಸಿನ್ನು ಮಱೆಯೇ
ಕಾವು ಕಪಿಗಳು ಕಾಮರೂಪಿಗ
ಳಾವು ನಮ್ಮಂಗವನು ತೋಱಲುಬೇಕು ನಿಮಗೆನುತ
ಆ ವಿಮಲಯತಿರೂಪವನು ಬಹಿ
ರಾವರಣ [4]ನಭಕೊ[4]ತ್ತಿ ಲಯದಿನ
ದಾ ವಿರೂಪಾಕ್ಷಂಗೆ ಪಡಿಯೆನೆ ಬೆಳದನಾ ಹನುಮ ೧೮

ಥಳಥಳಿಸಿತಿನಬಿಂಬ ನಾಭೀ
ವಳಯದಲಿ ನಭದಮಳತಾರಕಿ
ತೊಳಗಿದವು ತುದಿಮಸ್ತಕದಲುತ್ತಾನಪಾದಜನ
ನಿಳಯದಲಿ ಲಾಂಗೂಲ ಲಂಬಿಸಿ
ತೊಲದುದಿಳೆ ದಿಗುವಳಯ ಬಂಧದ
ಹೊಲಿಗೆ ಹಱಿಯಲು ಹನುಮ ಮೈದೋಱಿದನು ರಘುಪತಿಗೆ ೧೯

ಸಾಕು ಸಾಕೊಡಬಟ್ಟೆವಾವ್ ಲೋ
ಕೈಕಬಲ[5]ರ್[5]ಹುದುಳಿದ ಹುಲುವಿಪಿ
ನಾಕಸರಿಗೀ ಬಲುಹದೆಲ್ಲಿಯದಲ್ಲದಿರೆ ನಮಗೆ
ಆ ಕಬಂಧನು ಹೇಳುವನೆ ನ
ಮ್ಮಾಕೆವಾಳತನಕ್ಕೆ ವೈರಿಸ
ಮೀಕ ಜಯಕೃತಮುಖಕೆ ಸಖನೆಂದಬುಜಸಖಸುತನ ೨೦

---

1 ದಿದ್ದಡೆ (ಕ ಝ.ಣ). 2 ನಿಂದೆ (ಕ.ಝ.ಡ.ಣ). 3 ಗೆ (ಗ.ಡ.ಣ).
4 ಕಬಕೊ (ಕ), ಕಬಗೊ (ಚ), ತನಕೊ (ಟ). 5 ನ (ಕ.ಜ.ಝ.ಡ).

ಎಲ್ಲವಿನ್ನೇತಕೆ ವನೌಕಸ
ವಲ್ಲಭನ ತಾ ಹೋಗು ಸಂಶಯ
ವಿಲ್ಲ [1]ನ[1]ಮುಗೆನೆ ಹಾಯ್ಕಿ ಹಸಾದವನು ಬಳಿಕ
ಸಲ್ಲಲಿತ ಹರುಷದಲಿ ನೃಪಪದ
ಪಲ್ಲವಕ್ಕಭಿನಮಿಸಿ ರವಿಸುತ
ನಲ್ಲಿಗೈತಂದಱುಹಿದನು ಬರವನು ಕಕುತ್ಸ್ಥಜನ ೨೧

ತೂಳಿ [2]ಹರುಷದೊಳು[2]ಬ್ಬರದ ರೋ
ಮಾಳಿಗಳ ಹೊದಱಿನಲಿ ಹರಿಕುಲ
ಮೌಳಿ[3]ಗಳ ಗಡಣದಲಿ ರಾಮನ ಕಾಬ ತವಕ[3]ದಲಿ
ಶ್ರೀ ಲತಾಂಗಿಯ ಪತಿಯು ಬಳಿಗೆ ಸ
ಲೀಲೆಯಲಿ ನಡೆತಂದು ಪದಕೆ ಫ
ಲಾಳಿಗಳ ಕಾಣಿಕೆಯನಿತ್ತೆಱಗಿದನು [4]ಸುಗ್ರೀವ[4] ೨೨

ಬರಸೆಳೆದು ತಕ್ಕೈಸಿ ಮೈತ್ರ
ಸ್ಫುರಣೆಯಲಿ [5]ಮನವು[5]ಬ್ಬಿ ವಾನರ
ರರಸನನು ಮನ್ನಿಸಿದನುಚಿತ ಸುಭಾಷಿತಂಗಳಲಿ
ಧುರವಿಜಯನಳ ನೀಲ ತಾರಾ
ದ್ಯರು[6]ಗಳನುಮತದಿಂದ[6] ತೊರವೆಯ
ಪುರವರಾಧಿಪನಿದ್ದನಾ ವರಋಷ್ಯಮೂಕದಲಿ ೨೩

---

[1] ವೆ (ಕ.ಜ.ಝ). [2] ದುತ್ಸವದು (ಕ.ಜ.ಝ.ಣ), ದುದು ಬಳಿಕ (ಟ).
[3] ಮಣಿಗಳ ನೀಲತಾರಾದಿಗಳ ಗಡಣ (ಕ.ಝ.ಟ.ಣ). [4] ಹರುಷದಲಿ (ಕ.ಝ.ಟ.ಣ). [5] ವ್ಮೈಯುಬ (ಜ.ಟ.ಡ). [6] ರನು ನಗುತಾದರಿಸಿ (ಕ.ಣ), ರನು ನಗುತ ವಧರಿಸಿ (ಜ.ಟ), ರನು ಮನ್ನಿಸಿ ಬಳಿಕ (ಝ).

# ಎರಡನೆಯ ಸಂಧಿ

---

ಸೂಚನೆ : ತಾಳತರುವನು ಮುರಿದು ಸಮರಾ
ಭೀಳದುಂದುಭಿಯಟ್ಟೆಯನು ತುದಿ
ಗಾಲಲೊದದರಸಾದನಿನತನುಜಂಗೆ ರಘುನಾಥ

ಕುಶನೆ ಕೇಳು ಕಪೀಶನಾ ರಾ
ಕ್ಷಸ ವಿಪಕ್ಷಿಯ ಬಂಧುಕೃತ್ಯದ
ಲೊಸಗೆವಡಿಸಿದನುಚಿತಸೇವಾಭಾವಭಕ್ತಿಯಲಿ
ನುಸುಳಿದವು ದಿನವೆರಡು ಬಳಿಕಾ
ವಸುಮತೀ[1]ಶಂಗಿ[1]ನಜ ಕರಯುಗ
ವಿಸರುಹವ ಮುಗಿದಿಲ್ಲಿಗೈದಿದ ಹದನದೇನೆಂದ ೧

ತರಣಿಸುತ ಕೇಳಾದಡಗ್ಗದ
ತರಣಿವಂಶದ ವೀರದಶರಥ
ನರಪತಿಯು ನೀ ಕೇಳಿ ಬಲ್ಲೈ ತನ್ನ ಪೌತ್ರಮನ
ಹಿರಿಯಮಗ ತಾನೀಗ ತನ್ನಂ
ತ್ರರ್ದದ[2]ಲಾ ಭರತಂ[2]ಗೆ ಸೇರಿತು
ಧರಣಿ ತತ್ಪಿತನಾಜ್ಞೆಯಲಿ ವನವಾಯ್ತು ನಮಗೆಂದ ೨

ಗುರುವಚನವದು ಸುಜನಜನಕಾ
ಭರಣವ[3]ಲ್ಲವೆ ಹೇಳು[3] ವನವನು
ಚರಿಸಿದೆವು ಹನ್ನೆರಡುವರೆವರುಷವನು ಗೌತಮಿಯ
ವರನ[4]ದಿಯ[4]ತೀರದ ಸಮೀಪದ
ಪರಮಪಂಚವಟಿಪ್ರದೇಶದ
ಲಿರಲು ಸುಳಿದುದು ಮುಂದೆ ಮಾಯಾಹರಿಣನೊಂದುದಿನ ೩

---

[1] ಶನನಿ (ಗ.ಜ.ಝ.ಡ). [2] ಸಾಪತ್ನ್ಯ (ಕ.ಗ.ಣ). [3] ಲ್ಲಾಳು ಹೇ (ಕ.ಜ.
ಡ.ಣ), ಲ್ಲಾ ಕೇಳು (ಗ), ಲ್ಲವೆ ಕೇಳು (ಝ). [4] ದೀ (ಕ.ಝ.ಡ.ಣ)

ಆಡಲೇನದನಾ ಕುರಂಗವ
ಬೇಡಿದಳು ನಮ್ಮರಸಿ ನಾವದ
ರಾಡಿಕೆಯಲೊಳಬೀಳಲತ್ತಲು ಸತಿಯು [1]ಶಾಬರದ[1]
ಜೋಡಣೆಯು ಯತಿರೂಪದಲಿ ಮಱೆ
ಮಾಡಿ ರಾವಣ ಕೊಂಡುಹೋದನು
ಖೋಡಿ ಬಳಿಕೆಮಗಾಗೆ ಬಂದೆವು [2]ನಿಮ್ಮ ಬಳಿಗೆಂದ[2] ೪

ಅಱಿದನನಿತಱಿಮೇಲೆ ನಭದಲಿ
ಮೊಱೆಯಿಡುತ [3]ಹೋದರಸಿ ರಘು[3]ನೃಪ
ನೆಱೆಯಳೆಂಬುದನೊಯ್ದವನು ದಶಕಂಠನೆಂಬುದನು
ಮಱುಗಿದನು ಮನದೊಳಗೆ ವಿಧಿಯನು
ಜಱೆದು ಧ್ಯಾನಿಸಿಯಕಟ ಕಟ್ಟಾ
ಸಱು ಮಹಾರಾಯರಿಗೆ ಬಂದುದೆ ಶಿವಶಿವಾಯೆಂದ ೫

ತರಿಸಿದನು ಬಳಿಕಬಲೆ ಬಿಸುಟಾ
ಭರಣವನು ರಾಜೇಂದ್ರ ಕಂಠಾ
ಭರಣ ಚಿತ್ತೈಸೆನುತ ಮುಂದಿರಿಸಿದನು [4]ರಘುಪತಿಯ[4]
ಸ್ಫುರಿಸಿದವು ಸೀತಾಕೃತಿಯಲಾ
ಭರಣವ[5]ವ[5] ಕಂಡರಸ ತಂದನು
ತರಹ[6]ರದಲು[6]ದಕವನು ಹೊಳಹೊಳವಂಬಕಂಗಳಲಿ ೬

ದೇವ ಚಿತ್ತೈಸಸುರನಂದಾ
ದೇವಿಯರನೊ[7]ಯ್ವಂ[7]ದು ಬಿಸುಟಳು
ದೇವರಾಘವ ಬಂದಡೀವುದೆನುತ್ತ ನಮ್ಮೆಡೆಗೆ
ಈ ವಿಚಾರವ ಬಲ್ಲಡವ ತಾ
ಜೀವದಲಿ ಜಾಱುವನೆ ಕಲಿಸು
ಗ್ರೀವನೇ ತಾ [8]ಬಳಿಕ[8] ತಪ್ಪಿದ [9]ಕಾರ್ಯ[9]ಕೇನೆಂದ ೭

---

[1] ಶಾಬರವ (ಕ), ಶಾಂಬವವ (ಜ.ಝ.ಡ), ಶಾಬಕವ (ಟ). [2] ನಿನ್ನ ಬಳಿಗೆಂದ (ಕ.ಜ.ಝ.ಡ.ಣ), ಬಳಿಕ ನಿಮ್ಮೆಡೆಗೆ (ಟ). [3] ಹಾಯ್ದರಸಿಯಾ (ಚ). ಹೋದಬಲೆ ರಘು (ಝ). [4] ರಘುಕುಲನ (ಜ.ಡ). ಮನುಕುಲನ (ಝ), ರವಿಕುಲನ (ಟ). [5] ದ (ಕ.ಚ.ಝ.ಣ). [6] ರಿಸದು (ಕ.ಗ.ಝ.ಟ). [7] ಯ್ದಂ (ಕ.ಗ.ಣ). [8] ನಿನ್ನ (ಗ.ಜ.ಝ.ಟ.ಡ). [9] ಕೆಲಸ (ಗ.ಚ).

ಅಹುದು ಮತ್ತೇನನುಜ ನೋಡಿವು
ಮಹಿ[1]ಜೆಯಮಳಾಭರಣಗಳು ತಾ[1]
[2]ನಹವೆ ನೋಡೆನಲೊ[2]ಗುವ ದೃಗುವಾರಿಗಳ ಧಾರೆಯಲಿ
ಅಹುದಿದಲ್ಲೆಂಬೆಣಿಕೆ ಮನದಲಿ
ವಹಿಸಲಱಿಯದೆ ನೂಪುರಂಗಳಿ
ವಹುದೆನುತ ಕೆಲತೆಗೆದು ತಲೆಗುತ್ತಿದನು ಸೌಮಿತ್ರಿ ೮

ಶ್ರುತಿ ಲಲಾಟ ಗ್ರೀವ ಕಟಿ ವಿ
ಶ್ರುತಕರಾಭರಣಂಗಳಿವು ಭೂ
ಸುತೆಯು ತೊಡವಹುದೆನ್ನದೀ ನೂಪುರಗಳಹುದೆಂಬ
ಮತಿಯುದೇನೈ ತಮ್ಮ ದಿಟ ವಿ
ಸ್ಮೃತಿಯಿದೇನೆನೆ ದೇವ ನಿತ್ಯ
[3]ಸ್ಥಿ[3]ತಿಯ ವಂದನೆಯಿಂದ ಬಲ್ಲೆನು ಕುಱುಹನಿವನೆಂದ ೯

ಎನೆ ದಿವಾಕರಸುತ ಶಿರಃಕಂ
ಪನದಲಿದ್ದನು ಹಾರವಿಸಿದನು
ಹನುಮ ಹೊಗಳಿದರುಳಿದ ನೀಲಾದಿಗಳು ಮನದಣಿಯೆ
ಮನುಜರೇ ನೀವಾದಿಪುರುಷನ
ತನುಗಳಲ್ಲಾಯೆಂದು ಭಾಸ್ಕರ
ತನುಜ ತನುಪುಳಕದಲಿ ಕೊಂಡಾಡಿದನು ಲಕ್ಷ್ಮಣನ ೧೦

ಬಳಿಕ ನಿಜವಲ್ಲಭೆಯ ಮುಕ್ತಾ
ಫಲಸುರತ್ನಾಭರಣನಿಚಯದ
ನೆಲೆಗುಱುಹನಱಿದರಿವಿರೋಧಾಸ್ಪದದ ಬಿಗುಹಿನಲಿ
ಕೊಳುಗುಳದೊಳರಿಭಟನ ಜೀವವ
ಸೆಳೆದು ಸೀತೆಯ ತಂದ[4]ಬಳಿಕಾ[4]
ಲಲನೆ[5]ಗೀವುದೆನುತ್ತ[5] ಕೊಟ್ಟನು [6]ಮತ್ತೆ[6] ರವಿಜಂಗೆ ೧೧

---

[1] ಳೆಯಾಭರಣಾದಿಮುದ್ರಿಕೆ (ಕ), ಜೆಯಮಳಾಭರಣವಿವು ತಾ (ಗ. ಣ), ಳೆಯಾ ಭರಣಂಗಳಿವು ತಾ (ಝ). [2] ಯಹವೆ ನೋಡೆನಲು (ಕ), ವಹವೆ ಹೇಳೆನಲೊ (ಗ), ನಹುದೆ ನೋಡೆನಲು (ಣ). [3] ಸ್ತು (ಕ. ಝ. ಟ. ಣ). [4] ಮೇಲಾ (ಚ). [5] ಗಿವಸೀಯೆನುತ (ಗ), ಗಿವಸೀಯೆಂದು (ಝ. ಣ), ಗೀವೆನೆನುತ್ತ (ಡ. [6] ಮಗುಳೆ (ಕ. ಣ), ತಿರುಗಿ (ಝ).

ತರಣಿತನುಜ ಹಸಾದವೆನುತಾ
ಧರಣಿಜೆಯ ಮೈದೊಡವುಗಳ ಬೈ
ತಿರಿಸಿದನು ಬೆಳವಿಗೆಗಳಾದವು ಬಂಧುಕೃತ್ಯ[1]ದಲಿ[1]
ಹೊರೆಹೊಗದೆ ಬಳಿಕರಸ ವಾನರ
ರರಸಗೆಂದನು ರವಿಜನೆಂಬೀ
ದೊರೆವೆಸರು ಬಂದಂದವಾವುದು ಹೇಳಬೇಕೆಂದ ೧೨

ರಾಯ ಚಿತ್ತೈಸಾದಡಂಭೋ
ಜಾಯತಾಕ್ಷನ ನಾಭಿಯಲಿ ಪಾ
ನೀಯಜಾಸನನುದಿಸಿದನು ಲಯಸಲಿಲದಂತ್ಯದಲಿ
ಆಯಿತಾತಂಗರಸುತನ ನಾ
ರಾಯಣನ ನೇಮದಲಿ ಸೃಷ್ಟಿಯ
ಕಾಯಕದ ಕುಶಲತ್ವ ಕಶ್ಯಪಮುನಿಯ ವಶವಾಯ್ತು ೧೩

ಕ್ಷಿತಿಪ ಕೇಳಾ ಮುನಿಪತಿಗೆ ನಿಜ
ಸತಿಯರಾದರು ದಕ್ಷಸುತೆಯರು
ದಿತಿಯದಿತಿ ಮೊದಲಾದ ಬಹು[2]ಭಾಮಿ[2]ನಿಯರ[3]ವ[3]ರೊಳಗೆ
ಸತಿ ಕುಶಸ್ಥಳೆಯೆಂಬ ಪಾತಿ
ವ್ರತೆಗೆ ಸಂಭವಿಸಿದನು ವಾನರ
ಪತಿ ಪರಾಕ್ರಮಿ ಕಿಷ್ಕಿಯಾತಂಗಾದು[4]ದೀ[4] ವಿಪಿನ ೧೪

ಅರಸ ಕೇಳ್ ಕಿಷ್ಕಿಂಧೆಯೆಂದೇ
ಕರಸಿಕೊಂಡುದು ದುರ್ಗವಿದು ಕಪಿ
ವರಶಿರೋಮಣಿ ಕಿಷ್ಕಿಯಿಂ ಬಳಿಕಿತ್ತ ಕಪಿಕುಲದ
ದೊರೆಗಳಾಳಿದರಿದಕೆ ಸೇರಿದ
ಧರೆಯನಲ್ಲಿಂಮೇಲೆ ಶಕ್ರನ
ಸರಿಪರಾಕ್ರಮಿ ಋಕ್ಷರಾಜಂಗಾದುದೀ [5]ನಗರ[5] ೧೫

ಆಳಿದನು ಬಳಿಕಾತನೀ ಕರು
ಶೈಲ [6]ಸಮ್ಮರ್ದನದ[6] ಗೋಲಾಂ
ಗೂಲರಾಷ್ಟ್ರವನಾಯ್ತು ವಾರ್ಧಿಕವಾ ಕಪೀಂದ್ರಂಗೆ

---

[1] ಗಳ (ಕ.ಡ.ಣ), ಗಳು(ಗ.ಜ). [2] ಮಾನಿ (ಚ.ಝ), ಕಾಮಿ (ಣ). [3] ದ (ಚ.ಟ.ಡ.ಣ). [4] ದಾ (ಗ.ಜ.ಝ). [5] ದುರ್ಗ (ಕ), ವಿಪಿನ (ಜ). [6] ವನು ಸಮ್ಮರ್ದ (ಕ), ವನು ಧರ್ಮದಲಿ (ಗ).

ಬಾಲಕರು ತನಗಿಲ್ಲದಿರೆ ಶಶಿ
ಮೌಳಿಯಲಿ ಮನಸಂದು ಸಾರ್ದನು
ಶೈಲರಾಜನ ತಪ[1]ದಲಿದ್ದ[1]ನು ಹಲವು [2]ದಿವಸದಲಿ[2] ೧೬

ಅರಸ ಕೇಳಾಶ್ಚರಿಯವನು ಪು
ಷ್ಕರಣಿ[3]ಯೆರಡುಂ[3]ಟಲ್ಲಿ ಮಿಂದನು
ಸರಸಿಯೊಂದರೊಳಧಿಕ ಸೌಂದರಿಯಾದನಾಕ್ಷಣಕೆ
ಸುರಪ ಕಂಡನು ಕಂಡನಾ ಸರ
ಸಿರುಹಬಾಂಧವ ಭೋಗಿಸಿದರಿ
ಬ್ಬರು ಬಳಿಕ್ಕುದುಭವಿಸಿದರು ಸುತರಿಬ್ಬರಾ ಸತಿಗೆ ೧೭

ಸುರಪಸುತ ನಮ್ಮ[4]ಗ್ರಜನ್ಮ[4]ನು
ತರಣಿಸುತ ತಾನೀಗ ಬಳಿಕಿ[5]ರ
ಲಿ[5]ರಲು ಮಿಂದಳು ಸರಸಿ ಮತ್ತೊಂದಱಲಿ ಸುರವನಿತೆ
ತರುಣಿತನವಳಿಯಿತ್ತು ಮುನ್ನಿನ
ಪುರುಷತನವಾಯ್ತೀಶ ನಮ್ಮಿ
ಬ್ಬರನು ಕೊಟ್ಟನು ಋಕ್ಷರಾಜಂಗರಸ ಕೇಳೆಂದ ೧೮

ಇವರು ನಂದನರೆಂದು ತಂದೆಗೆ
ವಿವರಿಸಿದ ನಮ್ಮಿಬ್ಬರಭಿಧಾ
ನವನು ಕೊಟ್ಟನು ಕಾಮಿಸಿದ ರೂಪಹ ಮಹಾವರವ
ಯುವತಿಯ[6]ಲಿ[6] ಪಡೆ ಹೋಗು ಗಿರಿಸಂ
ಭವೆಗೆ ಸ[7]ಮವೆ[7]ನಿಪಂಜನೆಯ ವೈ
ಷ್ಣವದ ಮಹಿಮೆಯ ಮಗನು ಜನಿಸುವನಾ [8]ವಧುವಿಗೆಂದ[8] ೧೯

ಬೀಳುಕೊಂಡನು ಭವನ ಗೋಲಾಂ
ಗೂಲಪತಿ ಬಳಿಕಂಜನೆಯು ನಿಜ
ಬಾಲೆಯಲಿ ಪಡೆದಿತ್ತನಾ ಕನ್ನಿಕೆಯ ಕೇಸರಿಗೆ
ಮೇ[9]ಲು[9]ಜವ್ವನದದಟಿನಲಿ ರತಿ
ಕೇಳಿಯಲಿ ಗಾಂಧರ್ವರೂಪನು
ತಾಳಿರಲು ಮನವಿಕ್ಕಿದನು ಪವಮಾನನಂಜನೆಗೆ ೨೦

---

[1] ವನಿದ್ದ (ಕ), ವನಿರ್ದ (ಗ.ಝ). [2] ದಿನವಲ್ಲಿ (ಕ), ಕಾಲದಲಿ (ಝ), ದಿನಗಳಲಿ (ಣ). [3] ಹಲವುಂ (ಕ.ಟ). [4] ಣ್ಣದೇವ (ಗ.ಜ.ಟ.ಡ). [5] ನಲಿ (ಗ), ರುತಿ (ಚ). [6] ನು (ಕ.ಟ), ರ (ಗ). [7] ರಿಯೆ (ಗ.ಜ), ಮನೆ (ಚ). [8] ಮಹಾಸತಿಗೆ (ಕ.ಝ). [9] ಲೆ (ಕ.ಜ.ಝ.ಡ.ಣ).

ರೂಪುದೋಱದೆ ರಮಿಸಿದನು ಬಳಿ
ಕಾ ಪತಿವ್ರತೆಯನು ಚತುರ್ಮುಖ
ರೂಪನುದಿಸಿದನೀ ಸಮೀರಜನಂಜನಾಸತಿಗೆ
ಭೂಪ ಚಿತ್ತೈಸೀತ ವಜ್ರಿಯ
ಕೋಪದಲಿ ಕುಱುಹ[1]ಳಿ[1]ಯಲಾಯ್ತು
ತ್ರೈಪುರುಷರಿಂ ವಜ್ರಕಾಯದ ವರವು ಬಳಿಕೆಂದ ೨೧

ಓದಿದನು ಬಳಿಕೀತ ಸಾಸಿರ
ವೇದವನು ಸೂರ್ಯನಲಿ ಸುರಪನ
ಲೋದಿದನು ಸೂತ್ರವ ಸುರೇಂದ್ರವ್ಯಾಕರಣಕೃತಿಯ
ಐದಿದನು ಬಳಿಕೆನ್ನನಲ್ಲಿಂ
ದಾ ದಿವಾಕರವಚನದಲಿ ತನ
ಗಾದುದಲ್ಲಿಂ ಮೇಲೆ ಹಗೆತನವಣ್ಣನೊಳಗೆಂದ ೨೨

ಹಗೆತನವು ನಿ[2]ನ[2]ಗೇನುಕಾರಣ
ಚಿಗುರಿದುದು ನಿಮ್ಮಣ್ಣ[3]ನಿಂದೆ[3]ನೆ
ತೆಗೆದನನಿತಱ ಮೇಲೆ ಕಥೆಯನು ಪೂರ್ವಪದ್ಧತಿಯ
ಸಗರಕುಲ ಚಿತ್ತೈಸು ಯಕ್ಷನ
ಮಗಳನಾ ಮಾಯಾವಿಯೆಂಬವ
ನುಗಿದು ಕಳವಿನಲೊಯ್ಯುತಿರೆ ಮೊಱೆಯಿಟ್ಟಳಭ್ರದಲಿ ೨೩

ಕಂಡನವನನು [4]ವಾ[4]ಲಿ ಹಾಯಿಸಿ
ಕೊಂಡನಾ ಕಾಮಿನಿಯ [5]ಬಿಡೆ ಬೆಂ[5]
ಕೊಂಡು ತೆವರಿದನವನ ಬಳಿಕವನಾ ನಿತಂಬಿನಿಯ
ಕಂಡು ಬಿಡಲಾರದೆ ವಿರೋಧವ
ಕೊಂಡು ಕರೆದನು ಕಾಳಗಕೆ ಕೈ
ಕೊಂ[6]ಡು ಮನದಾದಿ[6]ಯಲಿ ಕಪಿಕುಲಸಾರ್ವಭೌಮಕನ ೨೪

---

[1] ರಿ (ಚ.ಟ.ಡ). [2] ಮ (ಚ.ಝ.ಟ). [3] ಗಂದೆ (ಕ.ಝ.ಟ), ನೊಳಗೆ (ಣ). [4] ಬಾ (ಕ.ಗ.ಜ.ಝ.ಡ) ಇದೇ ರೀತಿ ಗ್ರಂಥದ ಎಲ್ಲೆಡೆಯಲ್ಲಿಯೂ ಪ್ರಯೋಗವಾಗಿದೆ. [5] ಮಿಗೆ ಬೆಂ (ಕ ಜ), ನುರೆ ಬೆಂ (ಝ), ಬಿಡೆ ಮುಂ (ಣ). [6] ಡವನನಾಜಿ (ಕ), ಡ ಮನದಾದಿ (ಗ), ಡು ಮನವಾಸಿ (ಚ).

ತರುಣಿಯರ ಮೋಹ[1]ಕ[1]ದಲುಱಿ ಮ
ತ್ಸರಿಸದವರಾರರಸ ಹೇಮದ
ಹುರಿ ಬಲಿದುದೀತಂಗೆ [2]ಹರಿಬದ[2] ಸೂಳೆ ಬಂಟಿಕೆಯು
ಧುರಕೆ ನಿಂದನು ವಜ್ರಿತ[3]ನಯು[3]ನ
ಕರಹತಿಗೆ ಕಾಲೂಱಲಱಿಯದೆ
ತಿರುಗಿ ಮಾಯೆಯು ತಳೆದು ತಳಕಿಳಿದನು ಬಿಲಾಂತರದ ೧೫

ಹಳಚಿದರು [4]ಹರಿ[4] ಕೈಟಭರ ಬಲು
ಗಲಹಕೈವಡಿಯೆನಲು [5]ನಮುಚಿಯ[5]
ಬಲವಿರೋಧಿಯ ಬಾಹುಬಲಕೈವತ್ತುಮಡಿಯೆನಲು
ಕಲಹಮತಿಬಿಱಿಸಾಗೆ ತಾ ಬೆಂ
ಬಲಕೆ ಬರೆ ಬರಬೇಡ ನೀನೀ
ಬಿಲನ ಬಾಗಿಲ ಕಾದಿರೆನುತೊಳಹೊಕ್ಕನಾ [6]ವಾಲಿ[6] ೧೬

ಬಾರದಿರು ಬೆಂಬಳಿಯ ಬಿಲನ
ದ್ವಾರವನು ಕಾದಿರು ಮುಗುಳ್ದವ
ಬಾರದಂತಿರೆ ಬೇಹು ನಿನಗೆಂದೆನ್ನನಲ್ಲಿರಿಸಿ
ಹೋರಿದರು ಹದಿನೈದು ವರುಷವು
ತೀರುವನ್ನಬರಲ್ಲ ವಿಲಯು
ದ್ವಾರಮುಖನಾದನು ಬಳಿಕ್ಕವನರಸ ಕೇಳೆಂದ ೧೭

ಸಾವು[7]ತಾ ರಕ್ಕಸನು[7] ಹಾ ಸು
ಗ್ರೀವ ಹಾ[8]ಯೆನುತೊದಱು[8] ರಣದಲಿ
ಜೀವವನು ಜಾ[9]ಱು[9]ಸಿದನಾ ಧ್ವನಿಗೇಳಿಸಿತು ಕಿವಿಯು
ತೀವಿದತಿಭಯದಲಿ ಮ[10]ಹೋಗ್ರ[10]
ಗ್ರಾವಕೆಣೆಯೆನಿಪದ್ರಿಯನು ಕಿ
ತ್ತಾ ವಿ[11]ವರ[11]ಕುಹರದಲಿ ಕೀಲನು ಕೊಟ್ಟೆ ನಾನೆಂದ ೧೮

---

1 ನ (ಗ.ಜ.ಝ.ಡ). 2 ತನ್ನೊಳು (ಗ), ವತ್ಸರ (ಜ), ಮತ್ಸರ (ಡ). 3 ನುಜ (ಗ.ಚ.ಡ). 4 ಮಧು (ಟ.ಣ). 5 ಜಂಭನ (ಗ.ಜ.ಡ). 6 ಬಿಲನ (ಕ.ಣ), ಬಿಲವ (ಗ), ಬಾಲಿ (ಜ.ಝ.ಡ). 7 ತವ ಹಾ ತಮ್ಮ (ಕ.ಝ.ಣ) 8 ಯೆಂದೊಱಲಿ (ಜ), ಯೆಂದೊದಱು (ಝ.ಡ.ಣ). 9 ಳಿ (ಕ.ಗ). 10 ಹೇಂದ್ರ (ಕ.ಗ.ಝ.ಟ). 11 ತಳ (ಗ.ಝ).

ಸಾರಿದೆನು ನಗರವನು ಕಪಿಸಂ
ಸ್ಕಾರವನು ಮಾಡಿದೆನು ರಾಜ್ಯ
ಶ್ರೀರಮಣಿಗರಸಾದೆನಱಿಸಿದನಣ್ಣನಾ ಬಿಲನ
ದ್ವಾರವನು ಬಳಿಕಲ್ಲಿ ಕಾಣದೆ
ಧಾರುಣಿಯನೊಡೆತಿವಿದು ವಿಲಯದ
ಭೈರವನವೊ[1]ಲು ಬಂದು[1] ತನ್ನನು ಕೊಲಲು ಮನದಂಡ ೨೯

ಅವನಿಪತಿ ಚಿತ್ತೈಸು ಧರ್ಮ
ಶ್ರವಣಮುಖದಲಿ ಗಜ ಗವಯ ಜಾಂ
ಬವ ಸುಷೇಣಾದಿಗಳು ಸತಿ ಸಹಜಾತ ಸುತರುಗಳ
ತವಿಸುವುದು ತಾ ಧರ್ಮವಲ್ಲೆಂ
ದವರು ನುಡಿಯಲು ನೂಕಿದನು ಹರ
ಣವನು ಕೊಳ್ಳದೆ ಕೋಪದಿಂದ[2]ಪ[2]ಮಾನ ಮಾರ್ಗದಲಿ ೩೦

ಎಲೆ ಮಹೀಪತಿ ಕೇಳು ಮೇಲಣ
ಕೆಲಸವನು ಕರ್ತವ್ಯವಲ್ಲೆಂ
ದುಲಿಯಲಾಪ್ತರ ಮಾತ ಕೇಳದೆ ತನ್ನ ನಿಜಸತಿಯ
ಸೆಳದುಕೊಂಡನು ಮಾನಭಂಗ
ಸ್ಥಳಕೆ ನಾಯಕನಾದೆನಂಜಿಕೆ
ಬಲಿದುದಲ್ಲಿಂ ಮೇಲೆ [3]ಬಾಲಿಯ ಬಲುಹಿಗೆನ[3]ಗೆಂದ ೩೧

ಸಾರಿದೆನು ನಿಲಲಱಿಯದಯ್ಯನ
ಮೇರುವಿನ ಕೀಲಚ್ಚನಱಿದಾ
ಸಾರಸಪ್ರಿಯ ಸಲಹಿಕೊಂಡಿದ್ದನು ಕರಾಂಬುಜದ
ವಾರಿಜದ ಮಧ್ಯದಲಿ ಕಿರಣದ
ಧಾರೆ ದಟ್ಟಿಸದಂತೆ ವತ್ಸರ
ತೀರಿದವು ಹಲವಲ್ಲಿ ಹದನಿನಿತಾಯ್ತು ತನಗೆಂದ ೩೨

ದೇವ ಬಳಿಕೀಚೆಯಲಿ ಗತಮಾ
ಯಾವಿಯಯ್ಯನು ಮಗನ ಕೊಂದವ
ನಾವನೆಂದಱಿಯ[4]ಲು[4] ಸುರೇಂದ್ರನ ಬೇಡಿದನು ರಣವ

---

[1] ಲು ಮುಳಿದು (ಝ.ಙ). [2] ಪ (ಚ), ನು (ಙ). [3] ಬಾಲಿಯ ಬಲುಮೆಗೆನ (ಗ), ಹಗೆತನವಣ್ಣನೊಳ (ಚ), ಬಾಲಿಯ ಬಲುಹುತನ (ಝ.ಟ). [4] ನು (ಗ), ದೆ (ಚ.ಝ).

ದೇವಪತಿಯಾವಗಂಜಿ ಶೂಲಿಯು
ಮಾವನನು ತೋಱಿದನು ಬಳಿಕಾ
ಗ್ರಾವಪತಿ ಕೈಮುಗಿದು ಕಳುಹಿದನಬುಧಿಪನ ಬಳಿಗೆ ೩೩

ನಿಲಲಱಿಯದಾ ವರುಣ ತರಣಿಯ
ಬಳಿಗೆ ಕಳುಹಿದನಾತನೀತನ
ಕಲಹಕಾರ್ಯಸ್ಥಿತಿಯನಱಿದನುಮಾನಮಾರ್ಗದಲಿ
ಎಲವೊ ರಕ್ಕಸ ನಿನ್ನ [1]ತನುಜ[1]ನ
ತಲೆಯ ತಱಿದವನೆನ್ನ [2]ತನಯನ
ಕೊಲೆಗೆ ಕೊ[2]ಟ್ಟವನೊಬ್ಬನೇ ಹೋಗವನ ಬಳಿಗೆಂದ ೩೪

ಅವನಲೇ ಮಹಿಷಾಸುರನ ಸಹ
ಭವನು ದುಂದುಭಿಯೆಂಬ ಹೆಸರವ
ಗವನಿಪತಿ ಚಿತ್ತೈಸು ಹೊಗುಳುವೆನೇನನವನದಟ
ಶಿವನ ಕೂಡೆ ಗಜಾಸುರನು ವಿ
ಷ್ಣುವಿನೊಡನೆ ಕೈಟಭನು ಹೋರಿದ
ಲವಣಿಯಲಿ ಹೋರಿದನು ಹರಿ[3]ಸಂಭವ[3]ನೊಳವನೆಂದ ೩೫

ಬಿರಿದುದಬುಜಭವಾಂಡವಿಬ್ಬರ
ಧುರದ ಹೋರಟೆಗಮರಸಂತತಿ
ಸರಕುದೆಗೆದುದು ಸಿಡಿದು ಹಾಱಿದವದ್ರಿಶಿಖರಚಯ
ಜರಿದುದಂಬುಧಿಯವನಿ ಬಿಕ್ಕನೆ
ಬಿರಿದುದೊರ್ಗುಡಿಸಿದವು ನಿಡುಬ
ದ್ದರದ ಭುವನಾವಳಿ ಭಯಂಕರವಾಯ್ತು ರಣರಭಸ ೩೬

ಕೇಳು ರಘುಪತಿ ಪಶುಪತಿಯ ಸಮ
ಜೋಳಿಯಲ್ಲಾ ಬಾಲಿ ಸಂಗರ
ಶೂಲಿ ಸುಮನೋರತ್ನರಾಜಿತ ಹೇಮಮಯಮಾಲಿ
ಸೂಳುಮಿಗೆ ಸಂಗರದ ರವದು
ಬ್ಬಾಳಿ[4]ನಲಿ[4] ತಿರುಹಿಟ್ಟನರುಣಜ
ಲಾಳಿ ಝೋರಿಡೆ ಋಷ್ಯಮೂಕಮಹಾಮಹೀಧರಕೆ ೩೭

---

[1] ಕಂದ (ಗ), ತನಯ (ಝ.ಟ.ಡ) [2] ತನಯನ ತಲೆಗೆ ತೊ (ಕ), ಕಂದನ ಕೊಲೆಗ ತೊ (ಗ), ತನುಜನ ತಲೆಗೆ ತೊ (ಝ.ಟ). [3] ಸನ್ನಿಭ (ಚ). [4] ಯಲಿ (ಜ.ಝ.ಡ), ಗನು (ಣ).

ಅಂಗಜಾರಿಯು ಸದೃಶದುಗ್ರವು
ತಂಗವುನಿವರನಿರ್ದನಾ ಗಿರಿ
ಶೃಂಗದಲಿ ನೈಷ್ಠಿಕತಪೋನುಷ್ಠಾನ [1]ನಿಯಮದಲಿ[1]
ಹಿಂಗಿದಸುವಿನ ದುಂದುಭಿಯ ಮೈ
ಜಂಗಳದ ಜರಿದರುಣಜಲ ಮುನಿ
ಯಂಗಲತೆಯಲಿ [2]ಸಿಡಿಯೆ[2] ಕಿಡಿಕಿಡಿಯೋದನಾ ಮುನಿಪ ೩೮

ವಿಶ್ರಮಸ್ಥಳವೆಮಗಿದೇ ಮಹ
ದಾಶ್ರ[3]ಯ[3]ವು ನಮ್ಮಯ ತಪಕ್ಕೆ ಸ
ಹಸ್ರನಯನನಸುತನ ಘಲ್ಲಣೆ ಘನವಲಾಯೆನುತ
ವಿಶ್ರುತಾರುಣನಯನನಾ ಬಲ
ವಿಶ್ರುತಂಗಿತ್ತನು ಮದೀಯ ಮ
ಹಾಶ್ರಮಕೆ ಬರೆ ಮರಣ [4]ಮೈಗೊಡಲೆಂ[4]ದು ಶಾಪವನು ೩೯

ದಿನಪನದಱಿಂದೆನ್ನನಂದಾ
ಮುನಿಯ ಕೈಯಲಿ ಕೊಟ್ಟನಂದಿಂ
ದೆನಗೆ ನೆಲೆವನೆಯಾದುದೀ ಗಿರಿ ಸೇರಿದರು ಬಳಿಕ
ಹನುಮ ನಳ ನೀಲಾದಿಗಳು ದಿನ
ದಿನಕೆ [5]ಬೆಳೆ[5]ದುದು ವೈರವಣ್ಣಂ
ಗೆನಗೆ ಹೆಂಬಳಿಯಿಂದ ಹದನಿದು ದೇವ ಕೇಳೆಂದ ೪೦

ವಾಸಿ ಲೇಸಭಿಮಾನ[6]ಮಾರ್ಗದ[6]
[7]ರಾ[7]ಸಿವಾಳಿಕೆ ಲೇಸು ಕಂ[8]ಡೆವು[8]
ದೋಷವನು ದುರ್ಜನಗೆ ನಿನಗಿನ್ನಾವಭಯಬೇಡ
ವಾಸವನ ನಗರದಲಿ ವಾನರ
ವಾಸವನ ನಿಲಿಸುವೆನು ನಿನ್ನ ಸು
ವಾಸಿನಿಯ ಬಳುವಳಿ[9]ಗೆ ಜಯಸಿರಿ[9]ವಧುವ [10]ನಿನ[10]ಗೆಂದ ೪೧

ಕೆಲಸವಿದು ಸಂಘಟಿಸೆ ದೇವರ
ಕಲಹಕೊಪ್ಪಿಸಿಕೊಡುವೆನಾ ದಶ
ಗಳನನೆನೆ ಸಾಕೆಂದು ಸತ್ಯವಚೋವಿಲಾಸದಲಿ

---

[1] ನಿಷ್ಠೆಯಲಿ (ಕ), ಶೀಲದಲಿ (ಚ), ರಾಗದಲಿ (ಜ), ಮಾರ್ಗದಲಿ (ಝ). [2] ಬೀಳೆ (ಗ.ಝ.ಟ). [3] ಮ (ಚ). [4] ಘಟಿಸಲಿಯೆಂ (ಗ), ಘಟಿಸುವುದೆಂ (ಜ.ಡ), ಮೈಗುಡಲೆಂ (ಝ). [5] ಬಲಿ (ಕ.ಝ.ಟ.ಣ). [6] ಗರ್ವದ (ಕ.ಚ.ಣ), ವರ್ಗದ (ಡ). [7] ವಾ (ಗ.ಜ.ಡ). [8] ಡರಿ (ಗ.ಜ.ಡ). [9] ಗೆ ವೈರಿಯ (ಕ.ಣ), ಯ ತಹೆ ಸಿರಿ (ಝ), ಗೆ ಬಯಸಲಿ (ಟ). [10] ನೀ (ಕ.ಟ).

ಕಲಿಗಳಿಬ್ಬರು ಮಾಡಿದರು ನಿ
ರ್ಮಳಸುಭಾಷಾಸಮಯ[1]ವನು[1] ಕರ
ತಳದ ನಂಬುಗೆಗಳಲಿ [2]ನಿರ್ಮಿಸಿ[2]ದಗ್ನಿಸಾಕ್ಷಿಯಲಿ ೪೨

ಕಂದ ಕೇಳ್ಕೈ ಭಾಷೆ ಭಟರಿಗೆ
ಸಂದುದೀ ಪರಿ [3]ಮನವು[3] ರವಿಜಗೆ
ನಿಂದು ನಿಲಲಱಿಯದೆ ಪರೀಕ್ಷೆಗೆ ಮಾಡಿದನು ಮನವ
ಒಂದು ಬಿನ್ನಹ ಜೀಯ ಬಿದ್ದಿಹ
ದುಂದುಭಿಯ ವಿಗ್ರಹವನಿದ ಕೆಲ
ಕೊಂದಿಸಿದ ಭಟ ಗೆಲುವನಣ್ಣನನೆಂದು ಕೈಮುಗಿದ ೪೩

ಐಸೆ ಮತ್ತೇನೆನುತಲಾ ಭೂ
ಮೀಶನುಂಗುಟದಾದಿಯಲೆಲುಗಳು
ಸೂಸಲೊದೆದನು ನಗುತ ದಶಯೋಜನಮಿತಾವನಿಗೆ
ಬೀಸಿಬಿದ್ದವು ತಾಗಿದದ್ರಿಗ
ಳಾಸುರದ ರಭಸದಲಿ ಮನದೊಳ
ಗಾಸೆ [4]ಬಲಿಯದೆ ಬಳಿಕ[4] ಮರ್ಕಟರಾಯನಿಂತೆಂದ ೪೪

ಅರಸ ಚಿತ್ತೈಸೇಳು ತಾಳಿವೆ
ಸರಿಸದಲಿ ದೈವಿಕದ ಮರನಿವ
ನುರಗನಂದದ ದೈತ್ಯಮುನಿ ಧರಿಸಿಹನು ವಿತಳದಲಿ
ಸುರರಿಗಸದಳವಿವು ಬಳಿಕ್ಕಿವ
ನೆರಡುಕಡಿಮಾಡಿದರೆ ಕದನದ
ಲರಿವಧಾಸಮಯಕ್ಕೆ ಸಂಪ್ರತಿಯಹುದಲೇಯೆಂದ ೪೫

ಅಹುದು ಮತ್ತೇನೆನುತ ನೃಪ ನಿಜ
ಸಹಭವನ ಮೊಗನೋಡಲಿತ್ತನು
ವಿಹಿತಸಮಯೋಚಿತಶರಾಸನವನು ಮಹೀಪತಿಗೆ
ಅಹಿಯರೂಪಿನ ದಾನವನ ವಿ
ಗ್ರಹವನುಂಗುಟದಗ್ರದಲಿ ಜಡಿ
ದಹಿಮಕರಸುತ ನೋಡೆನುತ ಕೆಡೆಯೆಚ್ಚು ಬೊಬ್ಬಿಱಿದ ೪೬

[1] ದಲಿ (ಗ.ಜ.ಝ.ಟ.ಡ). [2] ಗಮಿಸಿದರ (ಗ), ನಮಿಸಿದರ (ಜ.ಡ). [3] ಚಿತ್ತ (ಕ.ಜ.ಝ.ಣ). [4] ಬಲಿಯದೆ ಮಗುಳೆ (ಕ.ಝ.ಣ), ಬಲಿಯಲು ಬಳಿಕ (ಗ), ಹಿಂಗದೆ ಬಳಿಕ (ಚ).

ಬೀಳುತಾ ಮರನೊದಱಿದವು ಸಿಡಿ
ಲೇಳಿಗೆಯ [1]ಸಬುದ[1]ದಲಿ ಸುಮನೋ
ಪಾಲಸುತನೆದೆ [2]ಬೆದಱಿ[2] ಬೆಳದವು ಮತ್ತೆ ಬೇಗದಲಿ
ಏಳಲೀಸದೆ ತಱಿವುತಿರ್ದುದು
ಕೋಲು ಕೋಳಾಹಳಿಸಿ ಕಪಿಕುಲ
ಮೌಳಿಮಣಿ ಬೆಱಗಾಗೆ ಹೊಗಳೆ ಸಮಸ್ತ [3]ಕಪಿ[3]ನಿಕರ ೪೭

ಸಂದಣಿಯ ಮರನೊಟ್ಟಿಲಿರೆ ರಘು
ನಂದನನು ಬಳಿಕಱಿದು ಬೆಸಸಲು
ಕೊಂದುದಾ ಪಾತಾಳದಲಿ ಫಣಿರೂಪಕದ ಖಳನ
ಬಂದು ಹೊಕ್ಕುದು ಶರ ಸುದರುಶನ
ದಂದದಲಿ ಮೂಡಿಗೆಯನಾ ರವಿ
ನಂದನಾದಿಗಳೆಱಗಿದರು ಜಯಜಯನಿನಾದದಲಿ ೪೮

ಎತ್ತಿ ಕಪಿಮಸ್ತಕವನಿನ್ನೇ
ನೊತ್ತಿನೋಡುವುದುಂಟೆ ಮನ ತಾ
ನಿತ್ತ[4]ಡಿಯ ಮೆಟ್ಟಿ[4]ರಲು ಬೇಡ ಪುನಃಪರೀಕ್ಷೆಯಲಿ
ಚಿತ್ತಶುದ್ಧಿಯಲೆನಲು ಕಪಿ ತಲೆ
ಗುತ್ತಿ ದೇವರಿಗಿನ್ನು ತಾ ಪಡಿ
ಯುತ್ತರಕೆ ಪಾಸಟಿಯೆ ಪತಿಕರಿಸೆಂದು ಕೈಮುಗಿದ ೪೯

ಕೆಣಕು ಹೋಗಾದಡೆ ವಿಚಾರವ
ನೆಣಿಸದರಿಭೈರವನ ಮೇಲಣ
ರಣದ ಭಾರವು ನಮ್ಮದಂಜಿಕೆ ಬೇಡ ನಿನಗೆನುತ
ಪ್ರಣುತಜನಸುರಧೇನು ಸುಮನೋ
ಗಣ ಮಹಾವಿಭು ವೀರತೊರವೆಯ
ಗುಣಭರಿತ ನರಸಿಂಹನಭಯವನಿತ್ತನಿನಜಂಗೆ ೫೦

---

[1] ರಭಸ (ಚ.ಣ). [2] ಬಿರಿಯೆ (ಗ). [3] ಸುರ (ಕ.ಝ). [4] ಟಕೆ ಬಿದ್ದಿ (ಚ), ಟವ ಮೆಟ್ಟಿ (ಜ.ಡ).

# ಮೂರನೆಯ ಸಂಧಿ

---

ಸೂಚನೆ : ರಾಯ ಕಪಿ ಸುಗ್ರೀವನಮರರ
ರಾಯಕುವರನ ಹಳಚಿ ನೊಂದು ಪ
ಲಾಯನದಲುಱೆ ಜಱೆದು ನುಡಿದನು ಜಾನಕೀಪತಿಯ

ಎಲೆ ಕುಶನೆ ಕೇಳಗ್ರಜನ್ಮನ
ಕೊಲೆಗೊಡಂಬ[1]ಟ್ಟಿನಸುತನ[1] ಹೆ
ಬ್ಬಲದ ಹೆಕ್ಕಳ ಜಕ್ಕುಲಿಸಿದುದು ಜಾನಕೀಪತಿಯು
ಕಲುಮರನ ಕೈದುಗಳ ಜಂಘಾ
ಕಲಿತಗಾಢದ ಗತಿಯ ಗರ್ವದ
ಕಿಲಕಿಲಾಯತ ರವದ ಭಟರುಬ್ಬಿಸಿದರಿನಸುತನ ೧

ಧರಣಿಪನ ಕೈಸನ್ನೆಯಲಿ ವೋ
ಹರಿಸಿ ನಡೆದುದು ಸೇನೆ ಮುತ್ತಿದ
ರಿರುಳ ತುದಿಯಲಿ ದುರ್ಗವನು ದಿವಿಜೇಂದ್ರನಂದನನ
ಪುರದೊಳಾಡಿದವದ್ರಿತರು ಕಾ
ಹುರದಲಾ ಕಳಕಳಿಕೆ ಕೇಳಿಸಿ
ತರಿಭಯಂಕರಭಟನ [2]ಜಯತರುಣಾಂಗನಾ ವಿ[2]ಟನ ೨

ಹಗೆಗಳೆಮಗಿನ್ನಾರು ನಿರ್ಜರ
ನಗರಪತಿ ನಮ್ಮಯ್ಯನುಳಿದರ
ಸುಗಳು ಪಾಡಲ್ಲೆ[3]ಮ[3]ಗೆ ದಿವದಲಿ [4]ಧರಣಿಯಲಿ ನೃ[4]ಪರು
ಹೆಗಲುಬಡಿಕರ ಹೇಳದಿರು ವಾ
ಸುಗಿಗೆ ಗರುಡರು ನಾವು ನಮ್ಮೊಳ
ಗಗಡುತನವೀಹೊತ್ತು ತಮ್ಮಂಗಲ್ಲದಿಲ್ಲೆಂದ ೩

---

[1] ಟ್ಟನು ಕಣಾ (ಗ.ಜ.ಟ.ಡ). [2] ವಿಜಯರಣಾಂಗನಾ ನ (ಕ.ಣ). [3] ನ (ಚ.ಟ.ಡ). [4] ಧರೆಯ ಧರಣಿ (ಕ.ಟ.ಣ).

ಕೆಣಕಿದವನೀಗಾತನಾತನ
ಕುಣಿಹವನು [1]ಕುಂದಿ[1]ಸುವೆನಿಂ[2]ದಿನ[2]
[3]ರಣದೊಳಗೆ[3] ಸಾಕೆನಿಸುವೆನು ಸಂಸಾರತರಸುಖವ
ಅಣದಣದು ಹೋಹವನ ಗಗನಾಂ
ಗಣದ ಮಾರ್ಗಿಯು ಮಾಡದಿರೆ ಬಲು
ಕಣೆಯು ಭಟನೀ ತಾನೆನುತ ಹೊಱವಂಟನಾಹವಕೆ ೪

ಊರೊಳಗೆ ಬೀಳುವ ಮಹಾದ್ರಿಮ
ಹೀರುಹಂಗಳ [4]ಕಳಕಳ[4]ವನು ನಿ
ವಾರಿಸುತ ಹೊಱವಂಟುದೊಡನೆ ಸುರೇಂದ್ರಸುತಸೇನೆ
ಆರು ನಿಲಬಹುದ[5]ವಱ[5] ಘೋರಾ
ಘೋರಿಯಲಿ [6]ಘಾಡಿಸುವ[6] ರವಿಜನ
ಕೋರಡಿಯು ಕಪಿಭಟರು ಕೆದಱಿತು ಕಂಡ ಮೈಗಳಲಿ ೫

ಬಂದು ನಿಂದಿದನಿಂದ್ರಸುತನಿನ
ನಂದನನ ಸರಿಸದಲಿ ಹೆಂಬಳಿ
ಯಿಂದ ಹೆಚ್ಚಿದ ಮನದ ಮಸಕದ ಮತ್ಸರಂಗಳಲಿ
ಕುಂದು ಹೆಚ್ಚಿನ ಪಾ[7]ಡು ಪಂಥ[7]ದ
ಕಂದುಕಸರಿನ ಕಲಿಮನದ ಕಡು
ಹಿಂದ ಕಯ್ದುಡುಕಿದರು ಕದನಕೆ ಕಲಿಗಳಾಜಿಯಲಿ ೬

ಬಲವೆರಡು ಹಿಮ್ಮೆಟ್ಟಿ ನಿಂದವು
ಕಲಿಗಳಿಬ್ಬರ ಕೈಯ ಸನ್ನೆಯ
ಲಳಿಬಲರ ಬಾಹುಪ್ರತಾಪದ ಬಹಳ ತೇಜದಲಿ
ಮಲತುದೋ ಕೈಲಾಸ ಕನಕಾ
ಚಲದೊಳೆನೆ ರಣಧೀರರಿಬ್ಬರು
ಕುಲಿಶವೆದೆ ಸಿಗುಱೇಳೆ ಸೀವರಿಸಿದರು ಬೊಬ್ಬೆಯಲಿ ೭

ಅಡಿಯನರೆದೆಗದೊದಱಿ ಭುಜವನು
ಹೊಡೆಯಲಿಬ್ಬಗಿಯಾಯ್ತು [8]ಮೇರುವಿ
ನೊಡಲು[8] ಬೆರಳಿನ ಬಾಯ ಬೊಬ್ಬೆಯ ಬಿಗುಹಿಗಬುಜಜನ

---

[1] ಕೊಂಕಿ (ಗ), ತಗ್ಗಿ (ಚ.ಟ), ಮಾಣಿ (ಝ). [2] ದೀ (ಗ.ಣ). [3] ಕಣದೊಳಗೆ (ಕ), ಕಣೆಯುದಲಿ (ಜ). [4] ಜಂಗಳ (ಕ). [5] ದಱ (ಗ.ಝ.ಣ), ದಟ (ಡ). [6] ಗಾಢಿಕೆಯ (ಕ.ಝ.ಣ), ಘಾಡಿಸಿದ (ಗ). [7] ಡಿನಂದ (ಗ.ಜ.ಡ). [8] ಭೂತಳ ಬಿಡದೆ (ಗ.ಜ.ಝ.ಡ).

ಮಿಡುಕು ಕಂಠದೊಳಾಯ್ತು ಮಂಡಿಯ
[1]ಪಡಿಯ ಪದ ಪದ್ಧ[1]ತಿಗೆ ಫಣಿಪನ
ಹೆಡೆ [2]ನಿಱಿಲುನಿಟಿಲೆಂದುದೇ[2]ನದ್ಭುತವೊ ರಣರಭಸ ೮

ಅಬ್ಬರಿಸಿ ಬಲುಮುಷ್ಟಿಗಳ ನಭ
ಕೆಬ್ಬಿಸುತ ಕಯ್ದುಡುಕಿದರು ಸುರ
ರುಬ್ಬರಿಯೆ ಸುಳಿಸಿದರು ಮುಷ್ಟಿಯ ಸೂಳುಪಾಳಿನಲಿ
ಹಬ್ಬುಗಿಡಿಗಳ ಹೊದಱು[3]ದಿವಿಗಳ[3]
[4]ಗು[4]ಬ್ಬರದ ಸಬುದದಲಿ ತಾಯ್ ಮಳ
ಲುಬ್ಬುತಿರ್ದುದು ಶರಧಿಯಲಿ ತಾ ಸೊಱಹಲೇನೆಂದ ೯

ಶಿರವು ಕಂಠ ಕಪೋಲ ಭುಜ ಕಂ
ಧರ ಮಹೋರಸ್ಥಳದಲಾಡಿದ
ವರಿಭಯಂಕರಭಟರ ಮುಷ್ಟಿಗಳಶನಿಘಾತದಲಿ
ಸುರಿವ ಕಿಡಿಗಳ ತೋಳ ನೆಗಹಿನ
ತಿರುಹುದಿವಿಗುಳ ತೀವ್ರತೆಯುಲ
ಬ್ಬರಿಸುತಿರ್ದುದಜಾಂಡಮಂಡಲ ಘುಮ್ಮುಘಳಿಲೆನುತ ೧೦

ಉಸುರ [5]ಕಾರ್ಬೊ[5]ಗೆ ಕಲ್ಪಮೇಘದ
ಬೆಸುಗೆಯಂತಿರೆ ಭಾನುಬಿಂಬವ
ಮುಸುಕುತಿರ್ದುದು ಕಂಗಳಿಂದೊಗುವಿಂಗಣಗಳಳೆಯು
ಬಸುಱ ಬೇಯಿಸುತಿ[6]ರ್ದುದದ[6] ನಂ
ದಿಸುತಲ[7]ರ್ದವು[7] ಭಟರ ಮೈಗಳ
ಲೊಸರ್ವ ಬೆಮರಡಿಗಡಿಗೆ ಪಡಿಯಿಡಲಱಿಯೆ ನಾನೆಂದ ೧೧

---

[1] ಸಡಿಯ ಪಯಪದ್ಧ (ಗ), ಪಡಿಪದದ ಪದ್ಧ (ಚ), ಪಡಿಯ ಪಯಪದ್ಧ (ಝ), ಪಡಿಯ ಪಯಪದಹ (ಟ.ಣ). [2] ನಿಳಿಲುನಿಳಿಲೆಂದವೇ (ಕ), ನಿಱಿಲು ನಿಳಿಲೆಂದುದೇ (ಗ.ಚ.ಣ). [3] ದಿವಿಗುಳ (ಕ), ತಿವಿಗುಳಿ (ಚ), ತಿವಿಗುಳ (ಟ), ದಿವಿಗುಳಿ (ಡ). [4] ನು (ಗ.ಚ.ಟ.ಡ), ಫು (ಝ). [5] ಕಬ್ಬೊ (ಕ.ಚ.ಣ). [6] ರ್ದುದವ (ಕ), ರ್ದವವ (ಝ), ರ್ದನವ (ಟ), ರ್ದವದ (ಣ). [7] ರ್ದುದು (ಕ.ಡ.ಣ).

ಜವನ ಜೂ[1]ಜಿನ ಕೂ[1]ಟ ಲಯಭೈ
ರವನ ಕಾಲ್ದುಳಿಯಾಟ ವಿಲಯದ
ಶಿವನ ಸಿಟ್ಟಿನ ನೋಟ ನರಸಿಂಹನ ಭುಜಾ[2]ಸ್ಫೋಟ[2]
ಪ್ಲವಗಪತಿಗಳಲಿರ್ದುದೈ ತ್ರೈ
ಭುವನ ಕಂಪಿಸುತಿರ್ದುದೈ ರಣ
ದವಕಿಗ[3]ರ ದಕ್ಕಡದ ದೆಖ್ಖಾಳದ ಮಹಾಹವಕೆ[3] ೧೨

ಘಾಯಗತಿಯ ಘುಡಾವಣೆಗೆ ರಘು
ರಾಯನಾಯೆನುತಿರ್ದನೈ ಮಝು
ಮಾಯೆ ಮಾಯೆನುತಿರ್ದನಂಗವನೊಲದು ಸೌಮಿತ್ರಿ
ವಾಯುಸುತ ನಳರೀಚೆಯಲಿ ತಾ
ರೇಯ ಜಾಂಬವರಾಚೆಯಲಿ ಸಮ
ರಾಯತದ ಸೌರಂಭ ಲೇಸೆನುತಿರ್ದರಿದ್ದೆಸೆಯು ೧೩

ಕೈಟಭನ ಕಮಲಾಂಬಕನ ಹೊ
ಯ್ಲಾಟವೋ ಮೇಣಂಧಕನ ಶಶಿ
ಜೂಟ[4]ರಿಬ್ಬರ ತಿವಿಗಳೋ ನರ[4]ಹರಿಹಿರಣ್ಯಕರ
ಆಟವಿಕ ರಣರೌದ್ರವೋ ಶತ
ಕೋಟಿಪಾಣಿಯ ವೀರಜಂಬನ
ಘಾಟಮುಷ್ಟಿಪ್ರಹರಣವೊ ಪರಿಕಿಸುವಡರಿದೆಂದ ೧೪

ಸೋಲವಿಲ್ಲದೆ ನಡವುತಿ[5]ರ್ದುದು[5]
ಕಾಳಗವು [6]ಕಪಿವೀರರಿಗೆ ಕಪಿ[6]
ಜಾಲವಿರ್ದುದು ರಣದ ಸೊಗಸಿನ ಸುಖದ ಸುಗ್ಗಿಯಲಿ
ಆಲಿ ದಣಿಯದೆ ಮಗುಳೆ ಮಗುಳೆ ಭ
ಡಾಳನೋಟದ ಬಿಲ್ಲ ತಿರುವಿನ
ಕೋಲ ತೋಹಿನ ರಾಮನಿರ್ದನು ನೋಡುತಾಹವವ ೧೫

---

[1] ಬಿನ ಕೂ (ಗ), ಜಿನ ಮಾ (ಚ). [2] ಟೋಪ (ಗ.ಜ.ಝ.ಟ.ಡ). [3] ಳ ದಕ್ಕಡದ ದೆಖ್ಖಳದದ್ಭುತಾಹವಕೆ (ಚ.ಝ.ಟ), ರ ದಕ್ಕಡರ ದೆಖ್ಖಾಳದ ಧುರಾಹವಕೆ (ಡ.ಣ). [4] ನುಬ್ಬರದಿವಿಗುಳೊ ನರ (ಕ), ರುರುನಿರ್ಭರದತಿವಿಗಳೊ (ಗ), ನುಬ್ಬರ ತಿವಿಗಳೋ ನರ (ಝ.ಡ). [5] ರ್ದವು (ಕ.ಗ.ಟ). [6] ಬಳಿಕಾವನೌಕಸ (ಚ), ಸರಿ ವೀರರಿಗೆ ಕಪಿ (ಜ).

ಧುರಚಮತ್ಕೃತಿ ಚಟುಳತರ ನಿ
ರ್ಭರವದೆಂತುಟೊ ವಜ್ರಿತನಯನ
ಕರಹತಿಗೆ [1]ಖರದಂಡಸಖಸುತ ರಣಕೆ[1] ಯೋಜನವ
ಚರಣತಳದಿಂದೊದೆದ ಸಿಡಿಲಿನ
ಭರಕೆ ಬಿರಿ[2]ತುರುಳುವ ಕುಲೋ[2]ರ್ವಿ
ಧರದವೊಲು ಬಿದ್ದೊದೆದುಕೊಂಡನು ಋಷ್ಯಮೂಕದಲಿ ೧೬

ಘುರಿಘುರಿನೆ ಹಲು[3]ದಿನುತ[3] ಶಾಪದ
ಗಿರಿತನಕ [4]ಬೆನ್ನಟ್ಟಿ ತಮದಲಿ[4]
ತಿರುಗಿದನು [5]ಸುರರಾಜಸುತನಸ್ತಮಯ ಸಮಯ[5]ದಲಿ
ಶಿರವ ತಡವರಿಸುತ ಮಹಾದೇ
ವರಿಯ ಬವರದ ಬೋಳಕೊಮ್ಮಿಗೆ
ಹರಣವುಳಿದುದೆಯೆನುತ ರವಿಸುತನೇಱಿದನು ಗಿರಿಯ ೧೭

ನೊಂದನೈ ಸುಗ್ರೀವ ತಪ್ಪಾ
ಯ್ತೆಂದಗೆಟ್ಟುದು ಬಲ್ಲವಿಕೆಯೇ
ನೆಂದು ಬಗೆವನೊ ಚಿತ್ತದಲಿ ಕಡುಹೀನವಾಯ್ತೆ[6]ಮಗೆ[6]
ಎಂದೆನುತ ದುಮ್ಮಾನದಲಿ ಮನ
ನೊಂದು ಲಕ್ಷ್ಮಣಸಹಿತ ಭಾಸ್ಕರ
ನಂದನನ ಬಳಿಗಾಗಿ ಭಾನುಕುಲೇಂದ್ರ [7]ನಡೆ[7]ತಂದ ೧೮

ಕಾಣುತೀ ರಘುಪತಿಯ ಚಾಪಕ್ಕೆ
ಪಾಣ ಬಾಣವನೇಱಿಳಿಯ ಕಡೆ
ಗಾಣಿಕೆಯಲೀಕ್ಷಿಸಿ ಮಹಾದೇವರಿದ ಕಂಡೆವಲ
ಪ್ರಾಣಸಖನೆಂದಿತ್ತು ಭಾಷೆಯ
ಗೋಣ [8]ಕೊಯಿವ್ವಾ[8] ಸೊಗಸು ಸುಭಟ
ಶ್ರೇಣಿಯಲಿ [9]ಹೊಗದಮಮ[9]ನಿನಗಿನ್ನಾರು ಸರಿಯೆಂದ ೧೯

[1] ಕರನೊಂದು ರವಿಸುತನೊಂದು (ಕ), ಕಡುನೊಂದು ರವಿಸುತ ರಣಕೆ (ಚ). [2] ತೊಡವ ತಳೋ (ಕ), ತುರುಳಿದ ಕುಲೋ (ಜ.ಡ). [3] ದಿಂದು (ಕ.ಗ.ಡ). [4] ಬೆನ್ನಟ್ಟಿ ಹರಿಸುತ (ಕ), ಬಿಡದಟ್ಟಿ ತಮದಲಿ (ಗ). [5] ತಪ್ಪಿದನಲಾ ಹಗೆಯೆನುತ ರೋಷ (ಕ), ದಿವಿಜೇಂದ್ರಸ ತನಸ್ತಮಯಸಮಯ (ಜ). [6] ನುತ (ಗ), ನಗೆ (ಜ.ಟ). [7] ನೈ (ಚ.ಜ.ಣ). [8] ಕೊಯ್ದನ (ಕ), ಕೊಯಿದ್ದಾ (ಗ.ಜ.ಡ.ಣ), ಕೊಯಿವ್ವಾ (ಝ), ಕಾಯಿವ್ವಾ (ಟ). [9] ಹುಗಿದಮಮ (ಕ), ಹೋಗಧಮ (ಚ), ಹೊಗದಧಮ (ಜ), ಹೊಗದಾತ (ಝ).

ತತ್ತಕಾರ್ಯಕ್ಕೊದಗಿದನು ಬಲು
ತೆತ್ತಿಗನು ಬವರದಲಿ ಕುಂದಿ
ಲ್ಲಿತ್ತಭಾಷೆಗೆ ಸಾಲದೇ ಸಾಮಾನ್ಯವೇ ಮನದ
ಉತ್ತಮಿಕೆ ಲೇಸಾಪ್ತನಹ ಹಗೆ
ಸತ್ತನೀತನ ಕಯ್ಯಮಕ್ಕಳ
ಹೆತ್ತರೀತನ ಹೆಸರಿಡಲುಬೇಕೆಂದನಾ ರವಿಜ ೨೦

ಹನುಮ ಕಂಡೈ ಮಱೆಯಬಹುದೇ
[1]ಜನುಮ[1]ಜನುಮದಲೀ ನರೇಂದ್ರನ
ತನುವಿದನು ಕೈಗಾಯ್ತು ಕೊಂಡನು ಕಡೆಯ ಮಾತೇನು
ಜನಪ ಮಾಡಿದ ಹಂಗ ಮಗುಚುವ
ಡೆನಗೆ ತೀ[2]ರುವು[2]ದಲ್ಲ ಚತುರಾ
ನನನ ಪರಮಾಯುಷ್ಯಪರಿಯಂತೆಂದನಾ ರವಿಜ ೨೧

ಮರನ ಮುಱಿಯಲು ಬಹುದು ದೈತ್ಯನ
ಶಿರವನೊದೆಯಲು ಬಹುದು ನಿರ್ಜರ
ನರಭುಜಂಗಮರೊಳಗೆ ಹಳಚಲು ಬಹುದು ಹರಿಸುತನ
ಹರಣಗೊಂಬುದು ಸೂರೆಯೇ ಶಂ
ಕರಗೆ ತೀರದು ನಿನ್ನ ಪಾಡೇ
ನರಸ ರಕ್ಷಿಸಿದಾತ[3]ನೆನ್ನ[3]ನು ಬಿಜಯಮಾಡೆಂದ ೨೨

ನಂಬುಗೆಯ ನುಡಿಯಿಂದ ರಕ್ಷಿಸಿ
ಕೊಂಬುದೆ[4]ನ[4]ಗಾಯ್ತು ಕಟ ಕಪಿಯನು
ನಂಬಿ ಕೆಟ್ಟುದು ಕಾರ್ಯ ನಿಮ್ಮದು ದ್ರೋಹ[5]ವೆನ[5]ಗಾಯ್ತು
ಹಂಬಲಿನ್ನೇಕಾವ್ ಕೃತಘ್ನರು
ಬೆಂಬಲಕ್ಕಾನೊದಗಿತಿಲ್ಲೆಂ
ದಂಬ ಮಾತಿನ್ನೇಕೆ ಬಿಜಯಂಗೆಯ್ಯಿ ನೀವೆಂದ ೨೩

ಅಱಿಯದವರನು ನಂಬಿ ಹಗೆಯಲಿ
ತೆಱನಱಿಯದೊದಗುವುದು ನಮ್ಮದು
ಕುಱಿತನವು ಕುಂದಿಲ್ಲ ನಿಮ್ಮಲಿ ನಿಮ್ಮೊಡನೆ ನಾನು

---

[1] ಮನುಜ (ಗ.ಟ). [2] ರಿದು (ಗ.ಚ.ಝ). [3] ನಮ್ಮ (ಚ.ಝ.ಟ). [4] ಮ (ಕ.ಝ). [5] ನಮ (ಕ.ಣ), ವೆಮ (ಗ.ಝ).

ಒಱಲಿ ಫಲವೇನರಸ ಬಚ್ಚೆಯು
ತೆಱಹುಗೊಡಿರೈ ಹೋಗ[1]ಲೀ ನೃಪ[1]
ರುಱುವ ಮೈತ್ರಕೆ ಮರಣಕುಪಕೃತವಾಗದಿರದೆಂದ ೨೪

ಕೊಱತೆ ನಮ್ಮದು ನಮ್ಮ ನೀ [2]ತನು[2]
ಜಱಿದು ನುಡಿಯಲು [3]ಬೇಹುದದಕಾ[3]
ಮುಱಿಸಿದೆವು ನೋವಿಲ್ಲ ಲಕ್ಷ್ಮಣನಾಣೆ ಚಿತ್ತದಲಿ
ಅಱಿಯದಾದೆನು ಸುಭಟರಿಬ್ಬರ
ಕುಱುಹನದಱಿಂದಂಬ ಹೊಡದೆ
[4]ಹೆಱದೆಗದೆನ್ನೈ[4]ಸಲ್ಲದಂಜಿದುದಿಲ್ಲ ಹಗೆಗೆಂದ ೨೫

ಧರೆಯೊಳಗೆ ತಾ ನೀತಿ ಶಿಷ್ಯರ
ಶರಣಾಗತಿಕರ ಸಖರ ಸೋಲದ
ಧುರವ ಕಂಡರೆ ಮೇಲೆ ಕೈಮಾಡುವುದು ಶಾಸ್ತ್ರವಿದು
ಗುರುಲಘುವ ನಿಮ್ಮಿಬ್ಬ[5]ರಾಜಿಯ[5]
ಹರುಹಿನಲಿ ತಾ ಕಂಡುದಿಲ್ಲ
ಚ್ಚರಿಯ ಕಂಡೆನು ಕೆಲಕೆ ಸಿಡಿದಿದ್ದುದನು ನೀನೆಂದ ೨೬

ಅಂಬ ಕಳುಹಿದಡಾರ ಹರಣವ
ಕೊಂಬುದೋ ನಾನಱಿಯೆನದಱಿಂ
ನಂಬಿನವರನು ಕೊಂದನೆಂಬಪಹಾಸ ಜಗದೊಳಗೆ
ಇಂಬುಗೊಂಬುದು ಕೇಳಿದ್ದೈ ಪ್ರತಿ
ಬಿಂಬವಿಲ್ಲಿಬ್ಬರಿಗೆ ಶೌರ್ಯಾ
ಡಂಬರದಲಾಜಿಯಲಿ ರೂಪಿನಲೆಂದನಾ ರಾಮ ೨೭

ನೋಯದಿರು ಚಿತ್ತದಲಿ ದಶರಥ
ರಾಯನಾಣೆ ಕಪೀಶ ನಿನ್ನಯ
ದಾಯಿಗನ ದಿತಿಸಂಭವನ ದಾಯಿಗನ ಸಭೆಯೊಳಗೆ
ರಾಯನನು ಮಾಡುವೆನು ಮಾತಿದು
[6]ವಾ[6]ಯವಾದಡೆ ನಿರಯನಿಳಯದ
ಯಾಯಿಗಳ ಗತಿಯಾಗಲೆಂದನು [7]ನೀಡಿ[7] ನಂಬುಗೆಯ ೨೮

---

[1] ಲಿವರಿಹ (ಕ.ಣ). [2] ತಾ (ಕ.ಟ), ಗಳು (ಝ). [3] ಬಹುದಿದಕ್ಕಾ (ಗ), ಬಹುದದಕ್ಕಾ (ಜ.ಟ.ಢ), ಬಹುದುವದಕಾ (ಝ). [4] ಹೊಱತೆಗೆದೆವ್ಯೆ (ಕ), ಹೆಱತೆಗೆದೆನ್ನೈ (ಗ.ಜ), ಹೆಱದೆಗೆದೆವ್ಯೆ (ಚ.ಟ), ಹೊಱತೆಗದವ್ಯೆ (ಣ). [5] ರಲಿಜಯ (ಜ.ಝ.ಟ.ಡ). [6] ಬೀ (ಕ.ಟ). [7] ನುಡಿದು (ಚ).

ಅಂಜಬೇಡಿನ್ನೆಂದು ನಿರ್ಭಯ
ಪಂಜರವ ಹೊಗಿಸಿದನು ದುರಿತವಿ
ಭಂಜನನು ತೊರವೆಯ ನೃಕಂಠೀರವನು ರವಿಸುತನ
ಅಂಜದೊದಗುವ ಮಗನೆ ಸಮರ[1]ದ
ರಂಜಕ[1]ವ ನೋಳ್ಪುತ್ಸವದಿನಾ
ಕಂಜಸಖನಡಗಿದನು ನಡೆದುದಯಾದ್ರಿ[2]ಪರ್ವತವ[2] ೨೯

---

[1] ಸ ಮಂಜಸ (ಗ.ಡ), ದ ಭಂಜಕ (ಟ). [2] ಶಿಖರವನು (ಗ.ಝ), ಮ
ಕವ (ಣ).

# ನಾಲ್ಕನೆಯ ಸಂಧಿ

ಸೂಚನೆ : ಪತಿಕರಣೆ ಪಲ್ಲ[1]ವಿ[1]ಸೆ ಶರಣಾ
ಗತನ ರಕ್ಷಿಸಿ ರಾಮನಮರಾ
ವತಿಗೆ ಬೀಳ್ಕೊಟ್ಟನು ಬಲಾಸುರರಿಪುಕುಮಾರಕನ

ಎಲೆ ಕುಮಾರರು ಕೇಳಿರೈ ನೃಪ
ತಿಲಕ ರಾಮನ ನೇಮದಿಂದು
ಜ್ವಲಿಸಿದ[2]ನುರಿಪು[2]ವಂಶಕಾಲಗ್ರೀವ ಸುಗ್ರೀವ
ನಳ ಸಮೀರಜ ನೀಲ ತಾರಕ
ರುಲಿದು ಕಲಿಯೇಱಿಸಿದರಾಜಿಗೆ
ನಿಲುವವೊಲು ಕಪಿಸೇನೆ ಕೋಳಾಹಳಿಸಿತಗಲದಲಿ ೧

ಕರೆದು ರಘುಪತಿ ತಮ್ಮನನು ಸಂ
ಗರದ ಕುಱುಹಿಗೆ ಕೊಱತೆ ಬಾರದ
ತೆಱನ ಮಾಡೆನೆ ನಳನಳಿಪ ಗಜಪುಷ್ಪಮಾಲಿಕೆಯ
ತಿರಿದು ತುಳಸಿಯ ದಳವನಘಶತ
ಹರವನೆಡೆಗೆಡೆಗಿಱುಕಿ ವೈರಿಯ
ಧುರವ ಜಯಿಸೆಂದಿಕ್ಕಿದನು ಕೊರಳಲಿ ಕಪೀಶ್ವರನ ೨

ನಡೆದುದಲ್ಲಿಂಮೇಲೆ ಬಲವವ
ಗಡೆಯು ನಳನೀಲಾದಿ ಕಪಿಗಳ
ಗಡಣದಲಿ ಗಿರಿತರುನಿಕಾಯದ ನೆಗಹುಗೈಗಳಲಿ
ಝಡಿವ ಬೊಬ್ಬೆಯ ಜಾನುಜಂಘೆಯ
ದೃಢಗತಿಯ ದುವ್ವಾಳಿಗರು ಬಂ
ದಡಸಿ ಮುತ್ತಿದರಿಂದ್ರಪುತ್ರನ ಪುರವನಗಲದಲಿ ೩

---

[1] ಟಿ (ಕ.ಣ). [2] ವು ಕಪಿ (ಕ), ನು ಕಪಿ (ಜ.ಡ.ಣ).

ಬಗೆಯುದಿರ್ದುದು ದುರ್ಗವಿವರು
ಬ್ಬುಗಳ ಲೆಕ್ಕಿಸದಿರ್ದನಿಂದ್ರನ
ಮಗನು ಬಳಿಕಿವರಟ್ಟಿದರು ಕಾಳಗಕೆ ಕಪಿಚರರ
ನಗುತ ಚರರುತ್ತರಕೆ ನಿಮ್ಮವ
ಗಗಡುತನವಿನಿತುಂಟೆ ರಣದಲಿ
ತೆಗೆಯನಲೆ ನಿರ್ಧರಿಸಿ[1]ಬಂದಿರೆ ಹೇಳಿ ನೀವೆಂದ[1] ೪

ಜೂಜು ಸೋತಡೆ ಸೋಲುವುದೆ ಮಱು
ಜೂಜು ಸಾಕಿನ್ನದರ ಮಾತೇ
ನಾಜಿ[2]ರಂಗದಲಿಂದು ನಿನ್ನಯ[2] ಭಟಶಿರೋಮಣಿಯು
ಪೈಜೆಗಾಱಿನ ಗೆಲಿದಡಹುದು ಬಿ
ಡೌಜಸುತನೆಂಬಗ್ಗಳಿಕೆ ನಿ
ರ್ವ್ಯಾಜವೇಕೆನುತುಲಿದರಿದಿರಲಿ ಚರರು [3]ಕಪಿಪತಿಯು[3] ೫

ಕಡುಹು ನಿಮ್ಮವಗಿನಿತಿರಲು ನಾ
ವಡಗಬಹುದೇ ಬಹೆ ನಡೆಯಿ ನಿ
ಮ್ಮೊಡೆಯನನು ನಿಂದಿರಿಸಿಕೊಂಡಿರಿ ನಿನ್ನಿನಂದದಲಿ
ನುಡಿಹಲವು ಸಾಕೆಂದವರ ಬೀ
ಳ್ಕೊಡುತ ಭದ್ರಾಸನವನಿಳಿದವ
ಗಡೆಯು ಕಪಿರಾಜೇಂದ್ರ ಕದನೋದ್ಯೋಗಮನನಾದ ೬

ತರಿಸಿದನು ತನಗಿಂದ್ರನಸುರರ
ಧುರದೊಳಿತ್ತ ಸಜೀವರತ್ನ
ಸ್ಫುರಿತಕಾಂಚನಮಾಲೆಯನು ನಿಖಿಳಾಂಶುಮಾಲೆಯನು
ಧುರದೊಳರಿಭಟನರ್ಧಬಲವನು
ಬೆರಸಿಕೊಂಬ ಬಲಾತಿಶಯಬಂ
ಧುರದ ಮಾಲೆಯ ಧರಿಸಿ ತನ್ನರಮನೆಯ ಹೊಱವಂಟ ೭

---

[1] ಬಂದ್ಯೆ ನಮ್ಮ ನೀನೆಂದ (ಕ.ಣ), ಬಂದೊಯ್ರೆಮ್ಮ ನೀವೆಂದ (ಚ), ಬಂದೊಯ್ ನಮ್ಮ ನೀವೆಂದ (ಜ), ನುಡಿದನೆ ತಮ್ಮ ಹೇಳೆಂದ (ಝ), ಬಂದ್ಯೆಯಮ್ಮ ನೀವೆಂದ (ಟ), ಕೊಂಡೊಯ್ ನಮ್ಮ ನೀವೆಂದ (ಡ). [2] ರಂಗದಲನ್ನು ಕಾಬ್ಯೆ (ಕ), ರಂಗದಲಿನ್ನು ನಿನ್ನಯ (ಗ). ಯಲಿ ಬಳಿಕಿಂದು ನಿನ್ನಯ (ಜ), ರಂಗವಿದಿಂದು ನೀನರಿ (ಣ). [3] ತಮತಮಗೆ (ಚ), ಕಪಿವರನ (ಜ.ಡ).

ಆ ಸಮಯದಲಿ [1]ತಾರೆ ಬಂದು[1] ನಿ
ಜೇಶನೊಡನಿಂತೆಂದಳಿನಜನ
ದಾಶರಥಿ ಪತಿಕರಿಸಿದನು ಗಡ ಪರಮಮೈತ್ರಿಯಲಿ
ವಾಸಿ ಬಿದ್ದುದು ಗಡ ತದೀಯ ಮ
ಹೀಶನಲಿ ತಮ್ಮನಲಿ ತೋಟಿಯ
ಜೈಸುವಾಯತಿಕೆಯ ವಿಚಾರಿಸಿ ನೆಗಳುವುದು ರಣವ ೮

ಆ ಮಹೀಪತಿಯಂಗನೆಯನು
ದ್ದಾಮಬಲ ದಶಕಂಠ ಬನದಲಿ
ಮೈಮಱಸಿ ಕೊಂಡೊಯ್ದ ಗಡ ಬರವಾ[2]ಯ್ತು ಗಡ ಬಳಿಕ[2]
ಈ ಮಹೀಮಂಡಲಕೆ ರುಮೆಯನು
ಕಾಮಿಸುವ ಕಪಿ ಕಂಡು ಭಾಷೆಯ
ನಾ ಮಹಿಪನಲಿ [3]ಕೊಂಡು ಕೊಲಲೈತಂದನಾಜಿಯಲಿ[3] ೯

ಅನುಜನಂಗನೆಗಳುಪಿ ವೈರವ
ಕೊನರಿಸಿದೆಯಾತನಲಿ ತಾನಿದು
ನಿನಗೆ ದೂಷಣವಲ್ಲವೇಯಿನ್ನಾದಡೆಯು ರುಮೆಯ
ಇನಸುತನ ಕರೆದಿತ್ತು ರಘುನಂ
ದನನ ಕಾರ್ಯಕ್ಕೊದಗು ಲೇಸಿನ
ನೆನಹಿದೀಗತಿಮಥನ ಲೇಸಲ್ಲೆಂದ[4]ಳಾ ತಾರೆ[4] ೧೦

ಮರುಳಲಾಯೆಲೆ ತಾರೆ ತನ್ನಯ
ಪರಿಯನಱಿಯಾ ನೀನು ಧುರದಲಿ
ಹರಿಹರ[5]ಬ್ರಹ್ಮಾದಿಗಳತಾ[5] ಬಗೆಯನೆಂಬುದನು
ತಿರುಗಿ ರುಮೆಯನು [6]ಕೊಟ್ಟು ತಮ್ಮನ[6]
ಕರಸಿಕೊಂಬೀ ಹೇಸಿಕೆಯ ನಿಜ
ಶಿರದೊಳಾನುವನಲ್ಲೆನುತ [7]ನಡೆತಂದ[7]ನಾಹವಕೆ ೧೧

---

[1] ಬಂದು ತಾರೆ (ಕ.ಝ.ಟ.ಣ). [2] ದುದದರಿಂದ (ಕ.ಚ), ಯ್ತು ಬಳಿಕಿನಲಿ (ಟ). [3] ಮಾಡಿದನು ಗಡಯೆಂದಳಾ ತಾರೆ (ಕ), ಕೊಂಡು ಕೊಲಲೈತಂದ ತಾನು ಗಡ (ಜ), ಕೊಂಡು ಕೊಲಲೈತಂದನಾಹವಕೆ (ಟ), ಕೊಂಡು ಕೊಲಲೈತಂದನಾ ರವಿಜ (ಣ). [4] ಳರಸಂಗೆ (ಕ.ಟ.ಣ). [5] ಹ್ಮರನು ಬಗವನು (ಕ.ಟ.ಣ). [6] ಬಿಟ್ಟು ಹಗೆಯನು (ಕ). [7] ಹೊರವಂಟ (ಝ.ಟ.ಣ).

ಪುರವ ಮುತ್ತಿದ ವೈರಿಸೇನೆಯ
ಶರಭ ಶತಬಲಿ ಗಜ ಗವಯ ಸಂ
ಗರಭಯಂಕರಸುಮುಖ ದುರ್ಮುಖ ಗಂಧಮಾದನರು
ಜರಿಯಗೆಡಹಿದರಂಗದನ ಪುರ
ಕಿಗಿಸಿ ಜಾಂಬವ[1]ರುಮ[1] ಸುಷೇಣರ
ನೆರವಿಯಲಿ ನಡೆತಂದು ನಿಂದಿದನನುಜನಾಹವಕೆ ೧೨

ನಿಲುಕಿದರು ಭಟರಿಬ್ಬರುಭಯದ
ಕಲಿಗಳಬ್ಬರಣೆಯಲಿ ಬೊಬ್ಬೆಯ
ಕುಲಿಶರವವಿಳುಹಿಸಿತು ಭವಬ್ರಹ್ಮಾಮರೇಶ್ವರರ
ಹೊಳಹೊಳವ ಹೇಮಪ್ರಭಾಪರಿ
ಲುಳಿತದಿವ್ಯವಿಮಾನವಾಹನ
ಗಳಲಿ [2]ಸಕಲಸುರೌಘ[2] ನೆರೆದುದು ನೋಡಲಾಹವವ ೧೩

ನಭದೊಳಿಕ್ಕಟ್ಟಾಯ್ತು ನಾಕದ
ವಿಭುಗಳಿಬ್ಬರ ಸ್ವೈರಣೆಯ ಸುರ
ಸಭೆಸಮಾಕದ ಸುಭಟರಿಬ್ಬರ ಸೋಲಗೆಲವುಗಳ
ಅಭಿನಯಗಳಭಿವಚನದಲಿ ದುಂ
ದುಭಿಗಳಬ್ಬರಣೆಯಲಿ ಬೊಬ್ಬೆಯ
ರಭಸದಲಿ ಲಳಿಯೇಱಿ ಕಲಿಗಳ ಕದನ ಕೇಳಿಯಲಿ ೧೪

ನೆಱೆಯದಾದುದು ಗಗನವಿಬ್ಬರ
ಬಿಱುಬಿ[3]ನ[3]ಬ್ಬರಬೊಬ್ಬೆಗಳಿಗಸು
ನೆಱೆಯದಾದುದು ಪಟುಭಟರ ಪದಹತಿಗೆ ಫಣಿಪತಿಯ
ಅಱಿಚುತಿರ್ದುದಜಾಂಡವಿಳೆ ಬಾಯ್
ದೆಱವುತಿರ್ದುದು ದಿಗುವಿಬಂಧದ
[4]ಹೊಱಗೆ[4] ಬಿಡುತಿರ್ದುದು ಭುಜಾಸ್ಫಾಲನೆಯ ರಭಸದಲಿ ೧೫

ಏನನೆಂಬೆನು ಸುರಪಸೂರ್ಯರ
ಸೂನುಗಳ ಸಂಗರದ ಸಮಯದ
ಸೂನಸಾಹಸವನು ಸುರಾಸುರನಿಕರ ಬೆಱಗಾಗೆ

---

[1] ಕಲಿ (ಕ), ವರ (ಝ.ಟ), ಗಜ (ಣ). [2] ಸುರಮುನಿನಿಕರ (ಗ.ಜ.ಡ). [3] ನು (ಕ.ಗ.ಜ.ಡ.ಣ). [4] ಸರಿಯು (ಗ.ಟ.ಡ.ಣ), ಸೆಱಗು (ಚ), ಬಿಱಿಸು (ಝ).

ಸಾನುಗಳ ಸಡಿಲಿಕೆಯ ಕರಸಂ
ಧಾನಗಳ ಶೈಲಗಳ ಸುಭಟನಿ
ಧಾನರಿಟ್ಟಾಡಿದರು ಹರಿಹರಿದಶ್ವರಬ್ಬರಿಸೆ ೧೬

ಸುರಪನುಱುಬೆಗೆ ಸೀವರಿಸೆ ಮೋ
ಹರಿಸಿ ಮುರಿ[1]ದೇಱು[1]ವ ಮಹೀಧರ
ದುರವಣಿಯ ತೆಱನಂತೆ ತೇರಯಿಸಿದವು ಗಗನದಲಿ
ತರಣಿ ಕೆಲಸಾರಿದನು ಸುರಪತಿ
ತಿರುಗಿಬಿಟ್ಟನು ಪಾಳಯುವನಂ
ಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ ೧೭

ಹಳಚಿದವು ಗಿರಿ ಗಿರಿಗಳಭ್ರದ
ವಳಯದಲಿ ಬಳಿಸಲಿಸಿ ಬೀಳುವ
ಕುಲಮಹೀಧರನಿಕರದಲಿ ನೆಲನದುರಿತಡಿಗಡಿಗೆ
ನಿಲುಕಿ ನಿಗುರಿದ ಗಿರಿಗಳಬುಧಿಯೊ
ಳಿಳಿಯಬಿದ್ದೆಬ್ಬಿಸಿದವಭ್ರಕೆ
ಘುಳುಘುಳುಧ್ವಾನವನು ಹೊಗಳುವೆನೇನನದ್ಭುತವ ೧೮

ಗಿರಿಗಿರಿಯ ಹೋರಟೆಯೊಳುಬ್ಬಿದ
ಹೊರಳಿಗಿಡಿ ಹೊದಱೆದ್ದು ದಿಕ್ಪಾ
ಲರ ಪುರಂಗಳ ಸರಕುದೆಗಸಿದವೇನನುಸುರುವೆನು
ತರುಣ ಕೇಳ್ಕೈ ಬ್ರಹ್ಮನಿರ್ಮಿತ
ಪರಮಸೃಷ್ಟಿಯಲೆಣಿಸಲಿವರಿ
ಬ್ಬರಿಗೆ [2]ಪಡಿಯಹ[2] ಸಮರಧೀರರ ಕಾಣೆ ನಾನೆಂದ ೧೯

ಅರರೆ ಪೈಕಗಳೆರಡರಗ್ಗದ
ತರುಚರರು ತಂ[3]ದೀವ[3] ಬಲುಭೂ
ಧರಗಳೈದವದೇನುಸಾಹಸರೋ ಮಹಾದೇವ
ಧುರ[4]ಧುರೀಣ[4] ಜಯಾಂಗನೆಯ ನಿಜ
ಕರದ ಕಂತುಕದಾಟವೆನೆ ಧರೆ
ಗುರುಳ್ವ ಗಗನಕೆ ನೆಗೆವ ನಗಗಳಿಗಂತ್ಯವಿಲ್ಲೆಂದ ೨೦

---

[1] ದೆಱಗು (ಚ). [2] ಸರಿಯಹ (ಕ), ಸಮವಹ (ಗ.ಟ.ಡ). [3] ದಿತ್ತ (ಗ.ಜ.ಟ.ಡ). [4] ದರಣವಿ (ಕ.ಜ.ಝ).

ತಪ್ಪಿ ಮೈಯಲಿ ಬಿದ್ದ ಗಿರಿ ನಿಡಿ
ದುಪ್ಪರಿಸಿ ಹುಡಿಗೆದಱಿದವು ಮುಗು
ಳಪ್ಪಿದುಗ್ರನ ಗಾಳಿ [1]ಹೋಳುಗಳಾದವಗಲದಲಿ[1]
ಕಪ್ಪಡೋಱಿದು ಕಲಿಗಳಬ್ಬರ
ಸುಪ್ರತಾಪಕೆ ಶೌರ್ಯ ಕಂಚುಕ
ಕುಪ್ಪಳಿಸದೇನಗ್ಗಳರೊ ಶಿವಶಿವ ಮಹಾದೇವ ೨೧

ಮರಳಿ ಗಿರಿ ಗಿರಿಶಿಖರದಲಿ ನಿ
ಬ್ಬರದ ನಿಡುಗಲ್ಗಳಲಿ ಬಲು ಹಾ
ಸರೆಗಳಲಿ ಘನಗಂಡ ಶೈಲದ ಗುಂಡುಗಲ್ಗಳಲಿ
ತಿರುಹುಮುರುಹಿನಲೌಕುವಳ್ಳೆಯ
ಭರದ ಬವರದ ಬಿನ್ನಣಿಗರ
ಚ್ಚರಿಯ ಸಮರೋಚಿತವ ಮೆಱೆದರು ಸುರರು [2]ಹಾರೈಸೆ[2] ೨೨

ತೀರೆ ಗಿರಿ [3]ಮುಟ್ಟೈಸೆ ಭುಜದಲಿ[3]
ಬೇರುಡಿಯೆ ಬೆಳಲತ್ತಿ ಮತ್ತರ
[4]ಗೇರಳೆಲೆ ಚಿಂತಾಲ ತಾಳ ತಮಾಲ ತಱಸುಗಳ
[5]ತಾರೆ ತಿಗರ್ರುಟಾಳ ಚಿಲ್ಲುರ
ನೇಱಿಲಪ್ರತಿ ಹುಣಿಸೆ[6] ನಾನಾ
ಭೂರಿಭೂಜಗಳಿಂದ ಹೊಯ್ದಾಡಿದರು [7]ಸರಸದಲಿ ೨೩

ವೀರ ಕೇಳ್ಕೈ ಬಳಿಕಲಾ ರಘು
ವೀರನಂಬಿನಲುಡಿದು ನಿಡಿದಿ
ದ್ವೋರಣದ ಕಾರಣದ ಮರಗಳ ಕೊಂಡು ಮಂಡಿಯಲಿ
ಜಾಱುವೊಯ್ಲು ಡವೊಯ್ಲು ನಿಡುವೈ
ಲೋರೆವೊಯ್ಲು ಪ್ಪರದಹೊಯ್ಲು
ದ್ದೇಱುವೊಯ್ಲುನಲೊದಗಿದರು [8]ಭಟರಸಮಾನಸಮರದಲಿ ೨೪

---

[1] ಹೋಳುಗಳಾದವಾಕ್ಷಣಕೆ (ಕ), ಹೊಳ್ಳಾದವಗಲದಲಿ (ಗ), ಹೋಳುಗಳಾದವಂಗದಲಿ (ಝ.ಡ). [2] ಬೆಱಗಾಗೆ (ಚ). [3] ಮುಟ್ಟಿಸಿ ಸಾರಿಗಳ (ಕ), ಮುಟ್ಟೈಸಿ ಬುಜದಲಿ (ಗ.ಜ.ಟ.ಡ). [4] ಬೇರಣಿ (ಕ), ಗೇರಣಿ (ಚ). [5] ತಾರಿ ತೆಂಗ (ಕ), ತಾರಿ ತೇಗ (ಗ.ಡ), ತಾರೆ ತೇಗ (ಜ). [6] ರಾಲಪ್ರಮುಖ (ಕ.ಝ). [7] ಯುದ್ಧ (ಗ.ಜ.ಡ), ಸಮರ (ಝ). [8] ಸ್ಮರಣೆಯ (ಗ.ಜ.ಟ.ಡ).

ಗೆಲಿದನಿಂದ್ರಜನೆಂದು ಸೂ[1]ಸುವ[1]
ರಲರನವುರೇಂದ್ರನ ವಧೂಜನ
ಗೆಲಿದನಿನಸುತನೆಂದು ಮುತ್ತಿನ ಸೇಸೆಯನು ಹರಸಿ
ತಳಿ[2]ವ[2]ರಿನನಂಗನೆಯರಿದ್ದೆಸೆ
ಗಳಲಿ ಮೊರೆದವು ದೇವದುಂದುಭಿ
ಗಳು ಪರಿಗ್ರಹ[3]ವಾಹದಲುಬ್ಬರಿವುದುಭಯದಲ[3] ೧೫

ಪ್ಲವಗಗತಿ ಜಂಘಾಕ್ರಮಣ ನಿಡು
ಬವರಿ ಭಂಜನೆ ಲಾಗುಲಳಿ ಲುಳಿ
ತ್ರಿವಳಿ ವಂಚನೆಯು[4]ತ್ಪತನಪತನ[4] ಪ್ರಬಂಧದಲಿ
ದಿವದರಸುಗಳ ಸೂನುಗಳು ರಾ
ಘವಮಹೀಪತಿ ಮಾಗಧೀಸುತ
ರೆವೆಹಳಚದೀಕ್ಷಿಸಲು ಕಾದಿದರಖಿಳಚಿತ್ರದಲಿ ೧೬

ಹೊಕ್ಕರಿಬ್ಬರು ಬಿಸುಟು ಮರಗಳ
ಡೊಕ್ಕರಕೆ ಫಣಿರಾಜನೆದೆ [5]ನೆಳಿ
ನಿ[5]ಕ್ಕೆನಲು ತಳವೇಲು ತಳ[6]ಬಲಸಂಧಿಬಂಧ[6]ದಲಿ
[7]ಥೊಕ್ಕುಥಡ[7]ಸಬುದಗಳಲಿಳೆ [8]ಗು
ಮ್ಮಿಕ್ಕೆ[8] ಕೂರುಮನಱಿಚೆ ದಿಗ್ಗಜ
ಧಿಕ್ಕುಧಿಗಿಲೆನೆ ಧೈರ್ಯಬಲರೊದಗಿದರು ಸ[9]ರಿಸ[9]ದಲಿ ೧೭

ಕಂದ ಕೇಳ್ಳೈ ಪಕ್ಷಯುಗಳಗ
ಳಿಂದುವಿನ ಕಳೆಯಂತೆ ಹೆಚ್ಚಿತು
ಕುಂ[10]ದಿತಿಂದ್ರಜನಿನಸುತಂ[10]ಗಾಹವದ ಸೀಮೆಯಲಿ
ಮಂದಮತಿಗಳು ನಿಲಲು ರಘುಕುಲ
ನಂದನನು ಕಂಡಱಿದು ತಿರುವಿಗೆ
ಸಂಧಿಸಿದನಾಲೀಢಪದದಲಮೋಘಮಾರ್ಗಣವ ೧೮

---

[1] ಸಿದ (ಗ.ಜ.ಡ). [2] ದ (ಗ.ಚ.ಜ.ಡ). [3] ವಾಗ್ರಹದಿನುಬ್ಬರಿದುದು ಭಯದಲಿ (ಕ), ವಿಗ್ರಹದಿನುಬ್ಬೇಱುತುಭಯದಲಿ (ಗ), ವಿಗ್ರಹದಲುಬ್ಬರದ ಲದಿರಿನಲಿ (ಜ), ವಿಗ್ರಹದಿನುಬ್ಬಿದರುಭಯದಲಿ (ಟ.ಡ). [4] ಪ್ಪರದಹರಣ (ಗ), ತ್ಪತನಹರಣ (ಜ.ಡ). [5] ಸೀಳಿ (ಕ), ನಿಳಿ ನಿ (ಗ.ಟ), ನೆಳೆ ನೆ (ಚ). [6] ಗಳ ಬಂದಿಸಂದ (ಕ), ಗಳ ಸಂಧಿಬಂದ (ಟ). [7] ಚೊಕ್ಕೆಯದ (ಗ.ಜ.ಝ.ಟ). [8] ಕುಂಭಿಕ್ಕೆ (ಕ.ಚ). [9] ಮರ (ಕ.ಝ). [10] ದುತಿದುರ್ದುಯಿನಸುತಂ (ಚ), ದಿತಿನಸುತನಿಂದ್ರಜಂ (ಡ).

ಓರೆಗಣ್ಣಲಿ ನೊಂದು ನೋಡುವ
ಸೂರಿಯನ ಸುತಗಭಯಕರಸರ
ಸೀರುಹವ ತೋಱಿಸುತ ತೆಗೆದಾಕರ್ಣಪರಿಯಂತ
ನಾರಚವನುಬ್ಬಿಱಿದು ಶರಣನ
ನಾರಿಗಳುಪಿದ ಹೀನಹೃದಯನ
ಹೇರುರವನೆಚ್ಚೊಡನೆ ಕೆಡೆಕೆಡೆಯೆನುತ [1]ನಡೆ[1]ತಂದ ೨೯

ಭೂಸುತಾಸುತ ಕೇಳು ಪರರ ಸು
ವಾಸಿನಿಯ[2]ರಲಿ[2] ಸೋತವಂಗುಱೆ
ಹೇಸಿ ಬಿಡದಿಹಳೇ [3]ಭುಜಶ್ರೀ ಕಡೆಯ[3] ಮಾತೇನು
ಈಶ ಶಂಭು ಗಿರೀಶ[4]ನಮಲ[4]ಮ
ಹೇಶ ಮೃತ್ಯುಂಜಯ ಪುರಾರಿ ಸ
ದಾಶಿವ ಶ್ರೀಕಂಠ ಶರಣೆನುತೊಱಗಿದನು [5]ನೆಲಕೆ[5] ೩೦

ಚೆಲ್ಲಿತಾಕ್ಷಣ ನೆರೆದ ಸೇನಾ
ವಲ್ಲಭರು ತಮತಮಗೆ ವಾಣೀ
ವಲ್ಲಭನ ಮಗನೊಬ್ಬ ತಪ್ಪಿಸಿ ಕಾಣಾತಿನಕುಲನ
ಗೆಲ್ಲದಲಿ ಗಡಿಯಿಲ್ಲದಪ್ರತಿ
ಮಲ್ಲ ಹಾಯೆನುತಶ್ರುಗಳನುಗು
ರಲ್ಲಿ ಮಿಡಿವುತ ಮೂರ್ಛೆಯಲಿ ಮೈಮಱೆದನಮರೇಂದ್ರ ೩೧

ರಾಹು ತುಡುಕಿದ ರವಿಯವೊಲು ಬಾ
ಣಾಹಿ ತುಡುಕಿದ ಬಾಲಿ ಬೆನ್ನಲಿ
ಮೋಹಿದಲಗಿನ ಹೇರುರದ ಕಂಪನದ ಕೆಂಗಱಿಯು
ಸಾಹಸದ [6]ಮುಱಿದಲೆಯ[6] ಮುಷ್ಟಿಯು
ಮೋಹಕವ ದಿಟ್ಟಿಸಿದ ಕಂಗಳ
ಹಾಹೆಯವೊಲೆಸೆದಿರ್ದನಾಹವರಂಗಮಧ್ಯದಲಿ ೩೨

ನೋಡಿದನು ಮುರಿದವನಿಪನನ
ಲ್ಲಾಡಿದನು ತುದಿವೆರಳನಹುದೋ
ಖೋಡಿಯಿಲ್ಲದ [7]ಖರೆಯ[7]ನಹೆ ಖದ್ಯೋತವಂಶದಲಿ

---

[1] ಹರಿ (ಗ.ಜ.ಡ). [2] ರಿಗೆ (ಕ.ಜ.ಝ). [3] ಜಯಶ್ರೀ ಹಲವು (ಕ.ಝ) ಜಯಶ್ರೀ ಕಡೆಯ (ಜ.ಟ). [4] ನೀಶ (ಗ.ಟ.ಡ), ದೇವ (ಜ). [5] ವಾಲಿ (ಕ.ಟ). [6] ಮುಂದಲೆಯ (ಗ.ಟ.ಡ), ಮುಂಗೈಯ (ಚ). [7] ಹರೆಯ (ಗ), ವೀರ (ಝ).

ಪಾದ ಕಾಣೆನು ನಿನಗೆ ಸುರನರ
[1]ಗೂಡಿ ಪರರೊಡ್ಡಿನಲಿ[1] ಹುಸಿದಡೆ
ಕೂಡಿಕೊಂಡ್ಯೆತಂದು ಕೊಲಿಸಿದ ತಮ್ಮನಾಣೆಂದ ೩೩

*ನೀನೆ ದಶರಥನೆಂಬ ನೃಪತಿಯ
ಸೂನು ಸಾಮ್ರಾಜ್ಯಕ್ಕೆ ಸಲ್ಲದೆ
ಕಾನನವ ಹೊಕ್ಕಬಲೆಯನು ಹೋಗಾಡಿದತಿಬಲನು
ಹೀನವೃತ್ತಿಯ ಬಳಕೆಯಲ್ಲದ
ಮಾನನಿಧಿ ನೀನಹುದು ಮನದನು
ಮಾನವೀಪರಿ ತೋಱುತಿದೆ ನಿನಗಾರು ಸರಿಯೆಂದ ೩೪

ಏಸುದಿನಪರಿಯಂತ ಬಿಡದ
ಭ್ಯಾಸಿಸಿದೆ[2]ಯೆಲೆಯ[2]ಣುಗನಾಣೆ [3]ವ
ನೌಕಸರೊಳೆ[3]ನ್ನಾಣೆ ಹೇಳಿನ್ನೇಕೆ ಭಯ ನಿನಗೆ
ನ್ಯಾಸವೊಳ್ಳಿತು ಗುರುವಿನಭಿವಿ
ನ್ಯಾಸವೆಂ[4]ತುಟೊ[4] ಶಿವಶಿವಾ ಕಾ
ಳಾಸ ತ[5]ಪ್ಪದ[5] ಕಳವಿನೆಸುಗೆಯ ಚಿತ್ರ ಲೇಸೆಂದ ೩೫

ಧರೆಯೊಳಗೆ ಮೃಗಮಾಂಸಭೋಜನ
ಕರಸುಗಳು ಮನಮಾಡು[6]ವರು[6] ದು
ಶ್ಚರಿತ[7]ವಲ್ಲದು[7] ಶಾಸ್ತ್ರದಲಿ ನಿಜರಾಜಮಾರ್ಗದಲಿ
ಪರಿಕಿಸಲು ಕೋಡಗದ ಮಾಂಸವು
ನರಪತಿಗಳಿಗೆ ಯೋಗ್ಯವೇ ಹೇ
ಳರಸ ಹಿರಿದಹ ಹೇಸಿಕೆಯ ಕೈಕೊಂಡೆ ನೀನೆಂದ ೩೬

---

[1] ಗಾಡಪಗರೊಗ್ಗಿನಲಿ (ಕ), ಗೂಡಪರೊಳೊಗ್ಗಿನಲಿ (ಚ), ಗೂಡಪರರೊಗ್ಗಿನಲಿ (ಝ), ಗೂಡಪರೊ ನೀನಲ್ಲಿ (ಟ). * 'ಕ' ಪ್ರತಿಯಲ್ಲಿ ೩೪ನೇ ಪದ್ಯವು ೩೫ನೇ ಪದ್ಯವಾದಮೇಲೆ ಬಂದಿದೆ. 'ಝ' ಪ್ರತಿಯಲ್ಲಿ ೩೪ನೇ ಪದ್ಯವಿಲ್ಲ. [2] ಹೇಳ (ಕ.ಝ). [3] ದಿವೌಕಸರಲೆ (ಗ.ಜ.ಡ), ವನೌಕಸರಲೆ (ಕ.ಟ.ಣ). [4] ತ್ರೋ (ಗ.ಜ.ಡ). [5] ಪ್ಪದು (ಗ.ಜ.ಝ.ಟ.ಡ). [6] ವುದು (ಗ.ಚ). [7] ರಲ್ಲಾ (ಗ), ವಲ್ಲಾ (ಜ.ಡ).

ರಣದ ಮೇಲಭಿಲಾಷೆಯುಳ್ಳಡೆ
ಕೆಣಕಿ ನೋಡಿದಡಱಿಯಬಹುದು
ಬ್ಬಣಶರಾಸನ ಸರಳ ಹೊರಿಗೆಯು ಹೊಂತಕಾರಿತನ
ಹಣುಗಿ ಮಱೆಗೊಂಡೆಸುವ ಲುಬ್ಧಕ
ರಣಿಕೆಯಲಿ ಕೈವಾಡುವುದು ಭೂ
ಷಣವೆ ಭಟರಿಗೆ ಕೇಳಿ[1]ರೇ[1] ಜಾಂಬವರೆ ನೀವೆಂದ ೩೭

ತರಣಿಕುಲದರಸುಗಳು ಧಾರ್ಮಿಕ
ರುರುಸದಾಚಾರಿಗಳು [2]ಸೂನೃತ[2]
ಚರಿತರಖಿಳಾಗಮವಿಶುದ್ಧರು ವಿವಿಧಗುಣಯುತರು
ನರಕಭೀತರು ಘನಕೃಪಾಸಾ
ಗರರು ನೀನವರನ್ವಯದಲವ
ತರಿಸತಕ್ಕವನಲ್ಲ ನಿನ್ನನ್ವಯವದೇನೆಂದ ೩೮

ಹಗೆತನವನೆಣಿಸುವರೆ ರಘುಪೀ
ಳಿಗೆಯು ರಾಯರ ಕೊಂದುದಿಲ್ಲಾವ್
ಮಗುಳವರ ಸತಿಯರಿಗೆ ತಪ್ಪಿದುದಿಲ್ಲ ಜಗವಱಿಯೆ
ಮೃಗಕುಲೇಂದ್ರ ದ್ವೀಪಿ ಹಯ ರದ
ನಿಗಳಿರಲು ಬ[3]ಳಿಕಾಡ[3]ಸಿಕ್ಕಿದ
ನಗೆಯ ನಾಣ್ಣುಡಿ ನಿನ್ನೊಳಾಯ್ತೆಂದುಗಿಸಿದನು ನಗೆಯ ೩೯

ನೆತ್ತಿಯಲಿ ಜಡೆ ಹರತ್ರಿಯಂಬಕ
ಸುತ್ತಿದುದು ವಲ್ಕಲವು ಶಿವಶಿವ
ಮೆತ್ತಿಕೊಂ[4]ಡಿದೆ[4] ಭಸಿತ ಮೃತ್ಯುಂಜಯ ಮಹಾದೇವ
ಹೊತ್ತ [5]ಜೋಹಕೆ ಚಾಳಿ[5] ಲೇಸಾ
ಯಿತ್ತು ನಿನಗುಪದೇಶಮಂತ್ರವ
ನಿತ್ತವನ ವರ್ತನವದೆಂತುಟೊ [6]ನೋಡಬೇಕೆಂದ[6] ೪೦

ಶಿಶುಮಹೀಸುರ ಭೂತಸಂತತಿ
ಪಶುಕುಲಪ್ರಮುಖಾದಿ ಹಿಂಸಾ
ವ್ಯಸನಿಗಳಿಗನ್ಯಾಯವಿನಿತಿಲ್ಲೀ ಧರಿತ್ರಿಯಲಿ

---

[1] ರೈ (ಚ.ಜ). [2] ಸುವ್ರತ (ಗ.ಜ.ಟ.ಡ). [3] ಳಿಕಾ (ಗ.ಚ.ಝ.ಟ). [4]ಡುದು (ಕ), ಡಿಹ (ಚ). [5] ಜೋಹದ ಜಾಳಿ (ಕ), ಜೋಹಕೆ ಚಾಳಿ (ಡ). [6] ಶಿವಶಿವಾ ಯೆಂದ (ಗ.ಜ.ಝ.ಟ.ಡ).

ಹೆಸರ ನೋಡಲು ನಿನ್ನ ನಾಮದ
ಹೆಸರು ರಮಣೀಯಕವು ಮನ ಕ
ರ್ಕಶತೆಯಾಗಿದೆ ಸಲ್ಲದೀ ಹೆಸರಕಟ ನಿನಗೆಂದ ೪೧

ಆಗಲದಕೇನೊಡಬ[1]ಡಂ[1]ಬಹು
ದಾಗಿ [2]ನಿನಗಪರಾಧ[2]ವೆಮ್ಮಯ
ಮೇಗೆ ಹೊತ್ತಡೆ ಹೊ[3]ಲ್ಲೆಹೇ[3]ನಳಿವೆಮಗೆ ಸಂಸ್ಕಾರ
ಬೇಗೆ ನುಡಿ ಕೃತದೋಷಕಾರಿಗ
ಳಾಗಿ ನಾವ್ ನಡೆದೆಡೆಗಳುಳ್ಳಡೆ
ಮೂಗ[4]ರಾಗಿಹೆವೆನುತ[4] ನೊಂದಾಡಿದನು ರೋಷದಲಿ ೪೨

ಇವನು ನಿನಗೆ ಸಹಾಯಿಯೇ ನೀ
[5]ನಿ[5]ವನ ಬಲದಲಿ ನಿನ್ನ ವೈರಿಯ
ತಪಿಸುವಾ ತಪ್ಪಲ್ಲ ಕೂಡಿತು ದೈವವಿಬ್ಬರನು
ಪವನನಲಿ ಪಾವಕನ ಕೂಟದ
[6]ಹವಣು ಸಂಘಟಿ[6]ಸಿದವೊಲತಿಚಿ
ತ್ರವನು ಕಂಡೆ[7]ವು[7] ಕಾಲಗತಿಯಿಂದರಸ ಕೇಳೆಂದ ೪೩

ಆ ಗರುವ ದಶಮುಖನ ಸಮುದೋ
ದ್ಯೋಗಕಿವನೇ ನಿಲುವವನು ಲಯು
ಸಾಗರವನುತ್ತರಿಸುವಡೆ ಹರುಗೋಲ ಹಂಗು ಗಡ
ಹೋಗಿ ಶರಧಿಯ ದಾಂಟಿ ಹಗೆಯನು
ತಾಗಿ ತಲೆಯನು [8]ಹೊಯ್ದು[8] ತರುಣಿಯ
ಭೋಗಿಸುವುದಿದು ಮಿಗೆ ಭಗೀರಥಯತ್ನ ನಿನಗೆಂದ ೪೪

ಖಳನಿವನು ಹಗೆಯೆಂದು ಸೂಚಿಸ
ಲೆಳದು ತರಿಸೆನೆ ತನ್ನ ಬಾಲವ
ಕಳುಹಿ ಗಾಳದ ಬಲೆಗೆ ಸಿಲುಕಿದ ಮೀನಿನಂದದಲಿ
[9]ಬಲು[9]ಭಟರ ಜೀವಾಳಗಳನ
ಸ್ಖಲಿತಮೂರ್ಖರದೇನ ಬಲ್ಲರು
ಹಲುಬಿ ಮಾಡುವುದೇನಿದೇ ಪ್ರಾರಬ್ಧವೆಮಗೆಂದ ೪೫

---

[1] ಡಲು (ಗ.ಚ.ಟ). [2] ಯಪರಾಧತ್ವ (ಕ), ನೀನಪರಾಧ (ಝ). [3] ಲ್ಲಯೋ (ಕ), ಲ್ಲವೇ (ಚ). [4] ನಾಗಿಹೆನೆಂದು (ಕ), ರಾಗಿಹೆವೆಂದು (ಝ.ಣ). [5] ನ (ಚ.ಝ) [6] ವಿವರ ಸಂಘಟಿ (ಕ), ಹವಣು ಸಂಭವಿ (ಗ). [7] ನು (ಗ.ಜ.ಝ.ಡ). [8] ಕೊಂಡು (ಗ.ಜ.ಡ), ಕೊಯ್ದು (ಝ). [9] ಒಳು (ಕ.ಝ.ಣ).

ಅಂಗವೇ ನಿನಗಿದು ಸರೋ[1]ಷದ
ವ್ಯಂಗಿ[1]ಯಲಿ ನೀ ನುಡಿವುದಾವ್ ದಿಟ
ಹಂಗಿಗರೆ ಹಗೆಗೊಲೆಗೆ ಪರರ ಸಹಾಯ ಸಂಪದದ
ಸಂಗಶುದ್ಧರನಲ್ಲದಾವ್ ದು
ಸ್ಸಂಗಿಗಳ ಕೈವಿಡಿವವರೆ ಪರ
ಠಂಗನೆಗೆ ಮೈಗೊಟ್ಟವರ ಶಿಕ್ಷಿಸದೆ ಬಿಡೆವೆಂದ ೪೬

[2]ರಾಯಮಾರ್ಗದ ಪಥವ ಕೇಳ[2]
ನ್ಯಾಯವನು ಕೈವಿಡಿಯೆವಮಳಾ
ಮ್ನಾಯಮಾರ್ಗ[3]ವೆ ನಮ್ಮವಿವು[3] ತಾ ಶಿಕ್ಷೆರಕ್ಷಣೆಗೆ
[4]ತಾಯಿವನೆ ತತ್ಪಥವಿಡಿದು[4] ನಡೆ
ವಾಯತಿಕೆಯವರಾವು ನೀನ
ನ್ಯಾಯಿಯಲ್ಲವೆ ಹೇಳು ನಮ್ಮೊಳು ಮಱೆಯದೇಕೆಂದ ೪೭

[5]ಮೆ[5]ಱೆಯಬಲ್ಲುದೆ ಸಿರಿ ಜಯಶ್ರೀ
ತುಱುಬ ಸಿಂಗರಿಸುವಳೆ ಭೂವಧು
ಹೊಱುವಳೇ ಗೀರ್ವಾಣಸತಿ ಸೈರಿಸುವಳೇ ಸುರರು
ತೆಱವರೇ ಬಾಗಿಲನು ಪರಸತಿ
ಗುಱಿಸುವತಿಪಾತಕನು ನೀನೆ
ಚ್ಚಱಿತು ನಡೆಯದೆ ನಮ್ಮ ನುಡಿವುದು ಗುಣವೆ ನಿನಗೆಂದ ೪೮

ನುತತಪೋನುಷ್ಠಾನ ನಿಯಮ
ವ್ರತ ಗುರುದ್ವಿಜದೇವತಾಭ್ಯಾ
ಗತ ಸುಪೂಜೆ ಸಮಾಧಿ ಮೋನ ಧ್ಯಾನ ಪರಸತಿಯ
ರತಿಗಿವನು ಗುಣವೇ ವಿವೇಕ
ಸ್ಥಿತಿಯ [6]ನೀನಱಿಯದುವೆ ಕೇಳ್[6] ಪರಿ
ಹೃತಿಯಲಾ ಸುಕೃತಕ್ಕೆ ಪರದಾರಾಭಿಗಮವೆಂದ ೪೯

---

[1] ಷ ವ್ಯಂಗ್ಯ (ಗ.ಟ). [2] ರಾಯರಾವ್ ನೀ ಕೇಳಿದ್ಯೆಯ (ಕ), ನ್ಯಾಯ ಮಾರ್ಗದ ಪಥವ ಕೇಳ (ಚ), ನ್ಯಾಯಮಾರ್ಗದ ಪಥವಿಡಿದು ಕೇಳ (ಟ). [3] ವು ನಮ್ಮದಿವು (ಕ), ವು ತಮ್ಮವಿವು (ಗ), ವೆ ತಮ್ಮವಿವು (ಜ.ಟ.ಡ), ವೆ ನಮ್ಮದಿದು (ಝ). [4] ತಾಯಿವನೆ ಸತ್ಯವ ಹಿಡಿದು (ಕ), ಕಾಯಿವವನೇ ತತ್ ಪಥದಿ (ಗ). [5] ಮ (ಕ.ಗ.ಜ). [6] ನೇನಱಿಯದುದೆ ಕೇಳ್ (ಚ), ನೀನಱಿಯದುದೆ ಮಿಗೆ (ಝ).

ಎಲೆ ಕಪೀಶ್ವರ ಕೇಳು ಪರಸತಿ
ಗಳುಪಿ ಹಾಯಿಕಿಕೊಂಡೆ ತಮ್ಮನ
ಕೊಲೆಗೆಳಸಿ ಹೊಱವಡಿಸಿ ಹಾಯಿಕಿಕೊಂಡೆ ನಾದಿನಿಯ
[1]ಬಳಕೆಯವು[1] ತಾ ದೋಷಕೃತ ಸ
ಮ್ಮಿಳಿತವಲ್ಲವೆ ನಾವು ನಿನ್ನನು
ಕೊಲುವುದೇನನ್ಯಾಯವೇ ನೀ ನೋಡಿಕೋಯೆಂದ ೫೦

ಗುರು ನಿಜೇಶಜ್ಯೇಷ್ಠರೀ ಮೂ
ವರು ಕಣಾ ಪಿತೃಸಮರು ಶಿಷ್ಯಾ
ವರಜ ಶರಣಾಗತರು ಪುತ್ರರು ಧರ್ಮಶಾಸ್ತ್ರದಲಿ
ಸುರಪಸುತ ಕೇಳಿವರ ಸತಿಯರಿ
ಗುಱು[2]ಸುವ[2]ವ ಬಾಹಿರನಲಾ ದು
ಶ್ಚರಿತ[3]ಎರೆ ವಧೆಗ[3]ರುಹ ನೀನೇ ನೋಡಿಕೋಯೆಂದ ೫೧

ಇರುಳುಗನ್ನದ ಕೆಲಸ ದಿವದಾ
ಚರಣೆ ಧರ್ಮದ ವಿ[4]ರ[4]ಸ ತತ್ಪರಿ
ಸರದ ನಡವಳಿ ನಿನ್ನೊಳಿರೆ ಕೇಳ್ದಱಿದು ನಾವಿದನು
ಇರಿಸಬಹುದೇ ಹೇಳು ನೀನಿಹ
ಪರವ ನೋಡದೆ ನಡೆವುದಿದು ಸುಜ
ನರ ಮನಕ್ಕೊಡಬಡುವುದೇ ನೀ ನೋಡಿಕೋಯೆಂದ ೫೨

ಎಂಬ ರಾಘವ ವಚನ ಕರ್ಣದೊ
ಳಿಂಬುಗೊಂಡುದು ಕಪಿಪತಿ[5]ಯ ನೋ
ವಂಬಿಸುಟು[5] ನೋಡಿದನು ಬಳಿಕಾ ರಾಮಲಕ್ಷ್ಮಣರ
ಅಂಬುಜಾಕ್ಷಫಣೀಂದ್ರರ ಪ್ರತಿ
ಬಿಂಬವಾಗಿರೆ ಕಂಡು ಮುಕ್ತಿಸಿ
ತಂಬಿ[6]ನಿಯ ನಿಬಿಡಸ್ತ್ರ[6]ನಾಲಿಂಗನಕೆ ಮನದಂಡ ೫೩

---

[1] ಕೆಲಸವಿವು (ಗ), ಬಳಕೆಗಿದು (ಚ), ಬಳಕೆಯಿದು (ಝ.ಣ). [2] ಸಿದ
ಕ.ಝ.ಟ). [3] ಎರೆ ಧರೆಗು (ಕ), ನೇ ವಧೆಗ (ಗ), ಎರೆ ಕೊಲೆಗ (ಝ).
ಲ (ಕ.ಚ). [5] ಯು ನೋವಂ ಬಿಸುಟು (ಕ), ಯು ನೋವ್ ತುಂಬಿದುದು (ಗ),
ಯುನೋವಂಬಿದುದು (ಜ.ಟ.ಡ.ಣ), ಯು ಮನ ನಂಬಿದುದು (ಝ). [6] ನೀ
ತ್ರೀವಧುವಿ (ಗ.ಜ.ಡ), ನಿಯ ಶ್ರೀವಧುವಿ (ಝ).

ಇದು ಮಹೀಮಂಡಲದ ಭಾರವ
ನೊದೆ[1]ಯಲಾದ[1] ವಿಲಾಸ ವಿಭವಾ
ಸ್ಪದವಲಾ ಮನುಜಾಂಗವಿದು ತಾ[2]ನ[2]ಪ್ರಸಿದ್ಧವಲ
ಸುದತಿಯೆಂಬುದು ನೆವನು ತಾನಿಂ
ತಿದಱ ಮೇಲೀ ಪರಮದೈವದ
ಪದವ ಭಜಿಸಲು ಬೇಕೆನುತ ಕೈಮುಗಿದನಾ ವಾಲಿ ೫೪

ಮಗುಳೆ ಮಗುಳಡಿಗಡಿಗೆ ನೋಟದ
ಬಿಗುಹು ಬಿಡದೆಡೆವಿಡದೆ ಪುನರಪಿ
ಮಗುಳೆ ಮಗುಳೆ ಮಹಾಮಹಿಮ ಮಾಯಾ[3]ನರೇಶ್ವರನ[3]
ನಿಗಮತತ್ತ್ವಾತ್ಮಕನ ಮಂಗಳ
ಸುಗಮಮೂರ್ತಿಯ ನೋಡಿ ಕಂಗಳ
ಮುಗಿದು ಪರಮಾನಂದಸುಖಮಯನಾದನಾ ವಾಲಿ ೫೫

ದೇವ ಲಕ್ಷ್ಮೀಕಾಂತ ವರರಾ
ಜೀವಲೋಚನ ಭವವಿಮೋಚನ
ದೇವ ಸಂಸಾರಾಬ್ಧಿ[4]ಪಾಶ[4]ವಿನಾಶ[5]ನಘನಾಶ[5]
ದೇವ ಭಕ್ತಾಧೀನ ಮುಕ್ತಿವ
ಧೂವಿಲಾಸಪ್ರದ ಪರಾಪರ
ದೇವ ದೇವೋತ್ತಮ ಕೃ[6]ಪಾನಿಧಿ[6] ಸಲಹಬೇಕೆಂದ ೫೬

ಇಹಪರಂಗಳ [7]ಗತಿಗೆ[7] ಸಲ್ಲದ
ಮಹಿಬಹಿಷ್ಕಾರನ ಮಹಾದು
ಸ್ಸಹನ ದುಶ್ಶೀಲನ ದುರಾಚಾರನ ದುರಾಗ್ರಹನ
ಕುಹಕಕರ್ಮನ ಕುಪಿತಕಾಯನ
ಬಹಳಕೃತಪಾ[8]ಪಾನು[8]ಗತವಿ
ಗ್ರಹನ ಕೈವಿಡಿದೆತ್ತಬೇಕೆಲೆ ದೇವ ನೀನೆಂದ ೫೭

---

[1] ದು ಕಳೆವ (ಚ.ಟ). [2] ಸು (ಕ.ಗ.ಜ.ಟ). [3] ಮಹೀಶ್ವರನ (ಕ.ಜ.ಡ), ಮಧುದ್ವಿಷನ (ಗ). [4] ಪೋತ (ಗ.ಟ) [5] ಘನದುರಿತ (ಗ.ಜ.ಝ.ಟ.ಡ). [6] ಪಾಂಬುಧಿ (ಕ.ಜ.ಡ), ಪಾಕರ (ಟ). [7] ಪಥಕೆ (ಗ.ಡ.ಣ), ಪದಕೆ (ಜ.ಝ), ಪರಕೆ (ಟ). [8] ವನನು (ಕ), ಪನನು (ಗ.ಜ.ಟ), ತಕನು (ಡ).

* ಉಡಿಯುವೇ ತರು ಗಾಳಿಯಲಿ ಗಿರಿ
ಕೆಡೆಯುವೇ ಸಿಡಿಲಿನಲಿಯಿಾ ಕೆಡು
ಪೊಡ[1]ಲು ಬೀಳಲಿಕಂ[1]ಗಲಾಚಿದೆ ದೇವ ನಿ[2]ನ್ನೊ[2]ಡನೆ
ಹಿಡಿಯದೆನ್ನಪರಾಧವನು ಕೈ
ವಿಡಿದು ನಿನ್ನ ಪದಾರವಿಂದದ
ಲಡಗಿಸುವ ಘನಕೃಪೆಯುನೆನ್ನಲಿ [3]ಬೀ[3]ಱಬೇಕೆಂದ ೫೮

ತಮ್ಮ ಬಾ ಶಿವನಾಣೆ [4]ನಿನ್ನಲಿ[4]
ನೆಮ್ಮದಧಿಕದ್ವೇಷವೀ ಪರ
ಬೊಮ್ಮದಿದಿರಲಿ ಬಿಟ್ಟುದೀ ರಘುರಾಮಚಂದ್ರಮನ
ಸೊಮ್ಮನೊಯ್ದವಗೊಡಲುಗೊಡು [5]ನೆಱೆ[5]
ನೆಮ್ಮುವುದು ಸತ್ಕೀರ್ತಿಲತೆ ಬಳಿ
ಕೆಮ್ಮ ವಂಶದ್ರುಮವನೆಂದಪ್ಪಿದನು ಸಹಭವನ ೫೯

ಬಾಲನಂಗದನಹಿತಸುತನೆಂ
ದೇಳಿಲವ ಮಾಡದಿರು ಮನ್ನಿಸಿ
ಪಾಲಿಸುವುದವ ನಿನ್ನ ಮಗ ಮಗನಲ್ಲವೆನಗೆಂದು
ಆಲಿಗಳ ನೀರೊಱತೆಯಲಿ ನಿಜ
ಬಾಲಕನನಪ್ಪಯಿಸಿ ರಘುಭೂ
ಪಾಲ[6]ಚರಣಾಂಭೋಜ[6]ಸೇವಾಶ್ಲಾಘ್ಯನಾಗೆಂದ ೬೦

ಗವಯ ಶತಬಲಿ ಶರಭ ಗಜ ಜಾಂ
ಬವ ಸುಷೇಣ ಗವಾಕ್ಷ ಮೈಂದ
ದ್ವಿವಿಧ ದುರ್ಮುಖ ಸುಮುಖ ದಧಿಮುಖ ಗಂಧಮಾಧನರ
ಇವರ ಪಾಲಿಸು ರಾಜಕಾರ್ಯ
ಕ್ಕಿವರು ನಿಲುವರು ಬಿಡದಿರೀ ದು
ರ್ಗವನು ಕೇಳೆನುತಿತ್ತನಮಳಸುವರ್ಣಮಾಲಿಕೆಯ ೬೧

---

* ಕ.ಚ.ಟ.ಡ. ಪ್ರತಿಗಳಲ್ಲಿ ೫೮ನೇ ಪದ್ಯವು ೫೯ನೇ ಪದ್ಯವಾದಮೇಲೆ ಬಂದಿದೆ. 'ಗ' ಪ್ರತಿಯಲ್ಲಿ ೫೮ನೆಯ ಪದ್ಯವು ೬೦ನೆಯ ಪದ್ಯವಾದ ಮೇಲೆ ಬರುತ್ತದೆ. [1] ಲಬಳಲಿಕೆಗಂ (ಚ). [2] ಮ್ಹೊ (ಚ.ಟ). [3] ತೋ (ಕ.ಜ.ಟ). [4] ಮನದಲಿ (ಗ), ಚಿತ್ತವ (ಝ.ಟ). [5] ವುದು (ಗ.ಜ.ಡ). [6] ಕನ ಚರಣಾಬ್ಜ (ಗ), ಕನ ಸಿರಿಚರಣ (ಡ).

* ಮರಳಿ ರಘುನಂದನನ ಪದಪಂ
ಕರುಹವನು ಕಂಗಳಿಗೆ ಸೇರಿಸಿ
ಕರಪುಟಾಂಜಲಿಯಿಂದ ನುಡಿದನು ದೈನ್ಯಭಾವದಲಿ
ತರಳನಂಗದನೀತನೀತನ
ತರಣಿಸುತ ಪತಿಕರಿಸದಿರ್ದಡೆ
ಪುರಕೆ ಕೊಂಡೊಯ್ದೊಲಿದು ಸಲಹೆಲೆ ದೇವ ನೀನೆಂದ ೬೨

ಹಿರಿದು ನಂಬಿದೆ ನಿನ್ನನೀ ಹದ
ಕೆರವು ಮಾಡದಿರೆಂದು ಕಂಗಳ
ಮುರಿಯೆ ಮುಳುಗಿರ್ದಂಬನುಗಿದನು ಮನದ ಮಱುಕದಲಿ
ಕರುಳು ಮಱುಗದೆ ಬಿಡು[1]ವುದೇ[1]ಯೆಲೆ
ತರುಣ ಕೇಳೈ ಕುಶನೆ ದೊಪ್ಪನೆ
ಸುರಪಸುತನಂಗದಲಿ ಬಿದ್ದಳಲಿದನು ಸುಗ್ರೀವ ೬೩

ತೊಡಚು ರಘುಪತಿ ತೋಮರವನೆ
ನ್ನೊಡಲಿಗ[2]ಧಿಕೃ[2]ತಪಾಪಕರ್ಮಂ
ಗೊಡ[3]ರಿದೀಯ[3]ಪಕೀರ್ತಿ ಕಮಲಜನುಸುರಿಹನ್ನಬರ
ಅಡಗಲಱಿಯದು ದೇವ ಪೂರ್ವಜ
ನೊಡನೆ ಕಳುಹೆಂದಂಘ್ರಿಯಲಿ ಹೊಡೆ
ಗೆಡದು ಹೊರಳಿದನಾ ಕಪೀಶ್ವರನಾ ಕಕುತ್ಸ್ಥಜನ ೬೪

ಗಳಿಸಬಹುದು ಕಳತ್ರ ಮಿತ್ರಾ
ವಳಿಯನೊಡಹುಟ್ಟಿದರನೆಂತೈ
ಗಳಿಸಬಹುದೆಂಬುಕ್ತಿಗಕಟ ವಿರಕ್ತನಾದೆನಲ
ಲಲನೆಗೋಸುಗ ತಾಯಬಸುಱಿಂ
ದಿಳಿದವನ ಕೊಲಿಸಿದ ದುರಾತ್ಮನ
ನಿಳೆಯೊಳಿರಿಸುವುದುಚಿತ[4]ವೇಯೆಲೆ ದೇವ ಕೇಳೆಂದ[4] ೬೫

ಕುಲವಿಘಾತನ ಕುಪಿತ ಚಿತ್ತಾ
ಕಲಿತಕಾಯನ ಕಷ್ಟಹೃದಯನ
ಕಲುಷ ಕರ್ಮನ ಕಾಪಿಶಾಯನ ಮದಿ[5]ತ[5]ಮಾನಸನ

* 'ಝ' ಪ್ರತಿಯಲ್ಲಿ ೬೨ನೇ ಪದ್ಯವಿಲ್ಲ.

[1] ವವೇ (ಕ.ಚ). [2] ಧಿಗ (ಕ), ತಿಗ (ಗ.ಡ). [3] ಲು ವಿಡಿದ (ಗ.ಜ.ಡ).
[4] ವೇ ಹೇಳರಸ ನಿನಗೆಂದ (ಗ), ವಲ್ಲಲೆ ದೇವ ಕೇಳೆಂದ (ಟ). [5] ರ (ಚ).

ನೆಲನು ಹೊ[1]ಱದೆಲೆ! ದೇವ ಭೂಮಿಯು
ತಲೆಯ ತಿಣ್ಣವ ತಿದ್ದುವೀಯ
ಗ್ಗಳದ ಕೃತ್ಯವು ನಿನ್ನದಾಗಿಹುದಾಗಿ ಕೇಳೆಂದ ೬೬

ಮರುಳಲಾ ಸುಗ್ರೀವ ಪೂರ್ವದ
ಚರಿತದುಷ್ಕೃತ ಸುಕೃತವಿವು ಜೀ
ವರಿಗೆ ಜಂಜಡವಾಗಿಹವು ನೀನಳಲಲೇಕಿದಕೆ
ಮರಣ ನಿನ್ನಿಂದಾಯ್ತೆ ನಾವ್ ಸಂ
ಹರಿಸಿದವರೇ ಸಾಕು ಶೋಕದ
ಸುರುಳಿಯುನು ಸುತ್ತದೆ ಸುಸಮ್ಯಜ್ಞಾನಿಯಾಗೆಂದ ೬೭

ಆವ ಜನ್ಮದ ಸಹಭವನು ತಾ
ನಾವ ಜನ್ಮದಲಣ್ಣ ನೋಡಲಿ
ಕಾವುದೈ ನಿಶ್ಚಯವು ಮುಂದಣ ಜನ್ಮಕೇನಹಿರಿ
ಈ ವಿವೇಕವ ಚಿತ್ತದಲಿ ಸಂ
ಭಾವಿಸದೆ ಸುಜ್ಞಾನದೀಪ್ತಿಗೆ
ಸೋವಬೇಡಜ್ಞಾನತಿಮಿರವನೆಂದನಾ ರಾಮ ೬೮

ಸಾಕು ಸ್ವೈರಣೆಯಿರಲಿ ಸಮತೆಯು
ಸೋಕಿಗಜ್ಞತೆ ಬೇಡ ನಡೆಸೀ
ಪಾಕಶಾಸ[2]ನಿಗೌ[2]ರ್ಧ್ವದೇಹಿಕವಿಹಿತಸಂಸ್ಕೃತಿಯ
ಸೋಕದಪರಾಧಿಯನು ನಾವವಿ
ವೇಕಮುಖದಲಿ ಕೊಂದೆವೆಮ್ಮುವ
ನೌಕಿಕೊಂಡಿಹ ಕಾರ್ಯಕೋಸುಗವೆಂದನಾ ರಾಮ ೬೯

ತಿಳುಹಿದನು ಬಳಿಕಾತನಂತ
ಸ್ಖಲಿತಚಿತ್ತಗ್ಲಾನಿಯನು ಬಳಿ
ಕಿಳುಹಿ ಕಾಯವನೊದದುದಾತ್ಮಜ್ಯೋತಿ ಕಪಿವರನ
ಮೊಳಗಿದವು ಸುರಭೇರಿ ಸುರಕುಜ
ದಲರಮಳೆ ಸೂಸಿದವು ಕಂಬನಿ
ದುಳುಕುತಮರರಚಕ್ರಿ ಸರಿದನು ತನ್ನ ಪಟ್ಟಣಕೆ ೭೦

---

[1] ರುವ್ರದೆ (ಗ ಜ.ಝ.ಟ.ಡ). [2] ಜಗೌ (ಕ), ನಿಗೂ (ಗ ಣ).

# ಐದನೆಯ ಸಂಧಿ

ಸೂಚನೆ : ದೇವ [1]ರಾಘವನೊಲಿದು ತಾರಾ
ದೇವಿಯನು ಸಂತೈಸಿ[1] ಕಿಷ್ಕಿಂ
ಧಾವನಿಯ ಸಾಮ್ರಾಜ್ಯ[2]ಪದವಿಯನಿತ್ತನಿನಜಂಗೆ[2]

ಕೇಳಿದೈ ಕುಶ ನಿಮ್ಮ ರಘು ಭೂ
ಪಾಲಕನ ಶರಘಾತದಿಂದಸು
ಜಾಳಿಸಿದ ಜಿಷ್ಣುವಿನ ತನುಜನ ಮರಣವಾರ್ತೆಯನು
ಕೇಳಿ ತಾರಾದೇವಿ ತನ್ನಯ
ಬಾಲನಂಗದ ಸಹಿತ ಸತಿಯರ
ಮೇಳದಾಕ್ರಂದನದಲೈದಿದಳಾತ್ಮವಲ್ಲಭನ ೧

ಸಾರಿದರು ಬಳಿಕಖಿಳ ವಾನರ
ನಾರಿಯರು ನಿಜ ಜೀವಿತೇಶನ
ನಾರುಭಟೆ ದಟ್ಟಿಸಿತು ರೋ[3]ಧೋನ್ನತದ[3] ರೋದನದ
ವೀರ ಹಾ ಸುರರಾಜರಾಜಕು
ಮಾರ ಹಾ ಕಡುಗಲಿಯೆ ಹಾ ರಣ
ಧೀರ ಹಾ ಹಾಯೆನುತ ದೊಪ್ಪನೆ ಕೆಡದಳಾ [4]ತಾರೆ[4] ೨

[5]ಒಱಲಿ[5]ದಳು ದೆಸೆದೆಸೆಗೆ ಬಾಯ್ಬಿ
ಟ್ಟೊಱಲಿದಳು ಪತಿಯಂಗದಲಿ ತೋ
ಳಱುಕಿನಲಿ ತಕ್ಕೈಸಿ ತರಳಾಪಾಂಗ ಲಹರಿಯಲಿ
ಎಱೆಯನಾನನವನು ನಿರೀಕ್ಷಿಸಿ
ಮಱುಕ ಮಿಗೆ ಸುರತಾನುಭವದೆ
ಚ್ಚಱಿನ ನುಡಿಗಳ ಸಡಗರಿಸಿದಳು ಸೆಱಗ ಮಱೆಮಾಡಿ ೩

---

1 ರಘುರಾಜೇಂದ್ರನಾ ಸುಗ್ರೀವದೇವಂಗೊಲಿದು (ಗ.ಜ.ಝ.ಟ.ಡ.ಣ). 2 ಪಟ್ಟವನೊಲಿದು ವಿರಚಿಸಿದ (ಗ.), ಪದವಿಯನಿತ್ತು ಮನ್ನಿಸಿದ (ಜ.ಝ.ಣ), ಪಟ್ಟವನಿತ್ತು ಮನ್ನಿಸಿದ (ಟ), ಪಟ್ಟವನೊಲಿದು ಮನ್ನಿಸಿದ (ಡ). 3 ಧಾಂತವನು (ಕ), ಧೋನ್ನತವಿ (ಗ), ಧೋನ್ಮತ್ತ (ಟ). 4 ಕಾಂತೆ (ಗ.ಝ.ಟ). 5 ಹೊಱಳಿ (ಗ.ಜ.ಟ.ಡ).

*ಏಳು [1]ಕಪಿರಾಜೇಂದ್ರ[1] ಹಿಮಕರ
ಮೌಳಿ ಬಂದಿಹನರ್ಚನೆಯು ಕೊಡ
ಲೇಳು ಮಂತ್ರಾಕ್ಷತೆಯ ಹಿಡಿದಿಹನೊಲಿದು ಕಮಲಭವ
ಓಲಗಿಸಲ್ಕೈತಂದಿಹರೆ ದಿಗು
ಪಾಲರಿಂದ್ರನು ನಿನ್ನ ಸಂಪದ
ದೇಳಿಗೆಯ ನೋಡಲಿಕೆ ಬಂದಿಹ[2]ನೆಂ[2]ದಳಾ ತಾರೆ ೪

ಏಳು ಕಪಿರಾಜೇಂದ್ರಸುರಪನ
ಮೇಲೆ ದನುಜರ ಧಾಳಿಯಾಯ್ತಂ
ದೋಲೆ ಬಂದಿದೆ ಬಾಗಿಲಲಿ ಬಳಿಯಿಂ ಬಲಾಂತಕನ
ಕಾಳಗದಲಮರೇಂದ್ರ ಸೋತರೆ
ಸೋಲವದು ನಿನಗೆಂಬೆ ನಿನ್ನಯ
ತೋಳತೋಟಿಯ ತೋಱು ನಡೆ ಬೇಗೆಂದಳಾ ತಾರೆ ೫

ಪ್ರಾತರೋಚಿತಕರ್ಮ ಕೃತಸಂ
ಧ್ಯಾತಪೋನುಷ್ಠಾನ ತರ್ಪಣ
ವೀತಿಹೋತ್ರ ಸುಹೋತ್ರವಭ್ಯಾಗತ ಮಹಾಪೂಜೆ
ಭೂತಪತಿಯರ್ಚನೆ ಧರಾಮರ
ಜಾತ ತರ್ಪಣವಿನಿತು ಕಾಲಾ
ತೀತವಾ[3]ಗ[3]ದೆ ಸುವ್ರತರಿಗೇಳೆಂದಳಾ ತಾರೆ ೬

ಬಂದಿಹರೆ ಕೈವಾರಿ[4]ಸುವ[4] ಸುರ
ವಂದಿಗ[5]ಳು[5] ಸುರಸೇವಕರು ನಡೆ
ತಂದಿಹರೆ ಸುರಮುನಿಗಳಾಶೀ[6]ರ್ವಚನ[6]ವನು ಕೊಡಲು
ಬಂದಿಹರೆ ಸುರಗಾಯಕರು ಬಳಿ
ಸಂದಿಹರೆ ಸುರನರ್ತಕಿಯರೇ
ಳೆಂದು ಗಂಡನ ಗಲ್ಲವನು ಹಿಡಿದಲುಗಿದಳು ತಾರೆ ೭

---

* 'ಕ' ಪ್ರತಿಯಲ್ಲಿ ೪ನೇ ಪದ್ಯ ೭ನೇ ಪದ್ಯವಾದಮೇಲೂ, ೭ನೇ ಪದ್ಯ ೬ನೇ ಪದ್ಯವಾದಮೇಲೂ ಬಂದಿರುತ್ತದೆ. 'ಚ' ಪ್ರತಿಯಲ್ಲಿ ೫ನೇ ಪದ್ಯ ೪ನೇ ಪದ್ಯವಾದಮೇಲೆ ಬಂದಿದೆ. 'ಝ.ಣ.' ಪ್ರತಿಗಳಲ್ಲಿ ೪ನೇ ಪದ್ಯ ೭ನೇ ಪದ್ಯವಾದಮೇಲೆ ಬಂದಿದೆ.

[1] ಕೀಶಪತೀಶ (ಚ). [2] ರೆಂ (ಕ.ಝ.ಡ.ಣ). [3] ಗಿ (ಗ.ಜ.ಟ.ಡ). [4] ಗಳು (ಗ.ಜ.ಟ.ಡ). [5] ರು (ಕ.ಟ.ಡ). [6] ವಾ೯ದ (ಕ.ಜ.ಣ).

ಎತ್ತ ಹೋದುದು ಮಂದರಾದ್ರಿಯ
ಕಿತ್ತು ಕಡಲನು ಕಡದ ಭುಜಬಲ
ವೆತ್ತ ಸರಿದುದು ವೈರಿ[1]ಖಳಕುಲ ಕಾಲಕೇಯರನು[1]
ಮೃತ್ಯುವಿನ [2]ಭೋಜನಕೆ ಬಾಣಸ
ವಿ[2]ತ್ತ ಬಲುಹಕಟಕಟ ಹಾ ಹಾ ಕಪಿ
ಮತ್ತವಾರಣ ಹಾಯೆನುತ ಮೊಱೆಯಿಟ್ಟಳಾ ತಾರೆ ೮

ಅಂಗದನ ತೊಟ್ಟಿಲಲಿ ವೀರೋ
ತ್ತುಂಗದಶಕಂಧರನ ಕಟ್ಟಿದ
[3]ತು[3]ಂಗವಿಕ್ರಮವೆತ್ತ ಸರಿದುದು ಸುರಕದಂಬಕವ
ಭಂಗಿಸಿದ ದುಂದುಭಿಯ ಜೀವವ
ಹಿಂಗಿಸಿದ ಹೀಹಾಳಿತನದ ಭ
ಟಾಂಗವೇನಾ[4]ಯ್ತೆಂದು ವೆಸೆದೆಸೆಗೊಱಲಿದಳು[4] ತಾರೆ ೯

ಋಷಿಚರಿತ್ರನ ಕೊಂದರೇ ಕ
ಲ್ಮಷವಿಹೀನನ ಕೆಡಹಿದರೆಯನು
ಮಿಷ[5]ಗವಾದ್ವಿಜ[5]ಹವ್ಯಕವ್ಯಹಿತೋಪಲಾಲಿತನ
ವಿಷಯವಿಲ್ಲದೆ[6]ಮಡು[6]ಹಿದರೆ ಕಪಿ
ವೃಷಭನನು ಕಾಂತಾರಮೃಗಕುಲ
ಝಷಪತಾಕನನೆಂದು ಮೊಱೆಯಿಟ್ಟೊಱಲಿದಳು ತಾರೆ ೧೦

ಕಡಿದರೋ ಸುರತರುವ ನೆಲವದ
ಮಿಡಿಯ ಬಯಕೆಗೆ ತೊತ್ತುವೇಟಕೆ
ಹಡೆದ ತಾಯನು ತೊಱಿಸಿದರೊ ಮೌಕ್ತಿಕದ ಮಣಿಗಣವ
ಕೊಡಹಿ ಬಿಸುಟರೊ ದಾರಕೋಸುಗ
ಸುಡಿಸಿದರೊ ಕಸ್ತುರಿಯನರಳಿಗೆ
ನುಡಿಯಿರೋ ಮಱೆಯೇಕೆನುತ ಮೊಱೆಯಿಟ್ಟಳಾ ತಾರೆ ೧೧

ಇಱಿದರೋ ಸುರಧೇನುವನು ನೆಱೆ
ಮುಱಿದರೋ ಸುರಕುಜವ ಕಡಲೊಳ
ಗುಱುಬಿದರೊ ಕಾಮಿತದ ರತ್ನವನಕಟ ಕಯ್ಯಾರೆ

---

[1] ಬಲಕುಲ ಕಾಲಕೇಯರನು (ಕ), ಖಳಕುಲ ಕಾಲಭೈರವನು (ಝ). [2] ಬಾಣಸಕೆ ಭೋಜನ ಪಿ (ಕ), ಭೋಜನಕೆ ಬೋನವ ನಿ (ಗ.ಝ.ಟ). [3] ಧಂ (ಕ.ಗ.ಜ.ಡ). [4] ಯ್ತುಕಟಕಟ ಹಾಯೆಂದಳಾ (ಕ), ಯ್ತುರಸ ಹೇಳೆಂದೊಱಲಿದಳು (ಝ.ಣ), ಯ್ತುರಸ ಹಾಯೆಂದೊಱಲಿದಳು (ಟ). [5] ದ್ವಿಜಪಿತೃ (ಕ), ಗತೋಧಿತ (ಗ), ಪಿತೃದ್ವಿಜ (ಟ), ಗತೋದ್ವಿಜ (ಡ). [6] ಕೆಡ (ಗ.ಜ.ಟ.ಡ).

ಹಱಿದು ಬಿಸುಟರೊ ತನ್ನ ಕೊರಳಲಿ
ಮೆಱೆವ ಮಣಿ ಮಾಂಗಲ್ಯಸೂತ್ರವ
ಮೊಱೆಯೊ ಮೊಱೆಯೊ ವಿಧಾತ್ರ ಹಾಯೆಂದೊಱಲಿದಳು ತಾರೆ ೧೨

ಆಯಿತೇ ಸಂತೋಷ ರಾಜ್ಯ
ಶ್ರೀಯನನುಭವಿಸಿನ್ನು ಮದನನ
ಬೀಯಗಕೆ ಬಿಡವಾಯ್ತು ನಿನಗೆಲೆ ರವಿಜ ನಿಜಪತಿಯು
ವಾಯದಲಿ ಕೊಲಿಸಿದೆ ಧರಾಚಂ
ದ್ರಾಯತದ ಕೀರ್ತಿಯನು ಗಳಿಸಿದೆ
ದಾಯಿಗರೊಳುತ್ತಮನಲಾ ನೀನೆಂದಳಾ ತಾರೆ ೧೩

ಆರು ಗತಿ ನಮಗಿನ್ನು ನಾವಿ
ನ್ನಾರ ಸಾರಿದು ಬದುಕುವೆವು ನಮ
ಗಾರೊಡೆಯರಾರಾಪ್ತರಾರಧಿಕೃತರು ನಮಗಿನ್ನು
ಆರುಯಿಲ್ಲದನನ್ಯಗತಿಕರಿ
ಗಾರು ಬಂಧುಗಳೆಂದು ಬಳಿಕಾ
ತಾರೆ ಕಡುಶೋಕದಲಿ ಕೊರಳಿಗೆ ಹಾಯ್ದಳಂಗದನ ೧೪

ಕಂದ ನಿನ್ನನದಾರ ಕೈಯಲಿ
ತಂದೆ ಕೊಟ್ಟನು ಬಳಿಕ ನಿನಗೇ
ನೆಂದು ಹೇಳಿದನಕಟ ದೇಸಿಗರಾದೆ[1]ವೇ[1] ನಾವು
ಮುಂದೆ ನಮಗಿನ್ನೇನು ಗತಿ ನಾವ್
ನೊಂದೆವೈ ನುಗ್ಗಾದೆವೈಯರೆ
ಬೆಂದ [2]ಕೊರಡಾ[2]ವಾದೆವೈ ಹಾಯೆಂದಳಾ ತಾರೆ ೧೫

ಎಂದು ಮೂರ್ಛಾಗತ ಪರಿಗ್ರಹ
ದಿಂದ ಮಾನಿನಿ ಮುಳುಗಿದಳು ರಘು
ನಂದನನ ಶರದರುಣಜಲಧಾರಾಸುತೀರ್ಥದಲಿ
ಮುಂದುವರಿವ ವಿಲಾ[3]ಸ[3] ಮಂತ್ರದ
ಸಂದ ಪೂಜಾಸ್ತವದಲೊಯ್ಯನೆ
ಸಂದರುಶನವ ಮಾಡಿದಳು ಮಾಯಾ[4]ಮಹೀಶ್ವರನ[4] ೧೬

---

[1] ವೈ (ಕ.ಝ.ಟ). [2] ತನುವಾ (ಕ.ಝ.ಟ.ಣ). [3] ಪ (ಚ.ಜ). [4] ಮಧು ದ್ವಿಷನ (ಕ.ಗ.ಣ), ಮಹೀಶಂಗೆ (ಜ), ನರೇಶ್ವರನ (ಟ).

ಅಕಟ ರಘುಕುಲದರಸುಗಳು ಧಾ
ರ್ಮಿಕರು [1]ಕೃ[1]ತಭಾಷಿತರು ಭಾಗ್ಯಾ
ಧಿಕರು ಪುಣ್ಯಶ್ಲೋಕರುತ್ತಮರಧಿಕ[2]ಗುಣಯು[2]ತರು
ಅಕುಟಿಲರು ಸನ್ಮಾರ್ಗ ಶೀಲ
ಪ್ರಕಟಿತರು ಸ[3]ದ್ವರ್ತನರು[3] ಸೇ
ವಕರಿಗೋಸುಗ ಕೊಲುವುದುಚಿತವೆಯೆಂದಳವನಿಪನ ೧೭

ದಶಮುಖನ ಮೇಲಣ ವಿರೋಧ
ವ್ಯಸನದಧಿಕ ಕ್ರೋಧಶಿಖಿಯನು
ಬಿಸುಡುವರೆ ಕೊಂಡೆಯರ ನುಡಿಗಪರಾಧಹೀನನ[4]ನು[4]
ಬಸಿ[5]ದ[5] ಶೂಲಕೆ ಸವಣನನು ಸೇ
ರಿ[6]ಸಿದ[6] ಗಾದೆಯ ಮೆಱೆವರೇಯುಪ
[7]ಯಶವ[7] ಹೊತ್ತೆ ನಿರರ್ಥ ಲೋಕದೊಳೆಂದಳಾ ತಾರೆ ೧೮

ಬಿಲ್ಲ ಬಲುಮೆಯುದೆನ್ನ ಗಂಡನೊ
ಳಲ್ಲದಾರಿಗೆ ಹೇಳು ಚೌಪಟ
ಮಲ್ಲತನ ಮರ್ಕಟರೊಳಲ್ಲದೆ ಮೆಱೆಯದೇ ನಿನಗೆ
ಖುಲ್ಲರೊಡನೆಯ ಕೂಟ ಸಜ್ಜನ
ರಲ್ಲಿ ಸೊಗಸೇ ಖೂಳರಂಗವ
ನಿಲ್ಲಿ ಮೆಱೆವರೆ ರಾಮ ಹೇಳೆಂ[8]ದಳಲಿದಳು ತಾರೆ[8] ೧೯

ಮಧುವಿನಲಿ ನಿನಗೊಪ್ಪುವುದು ರಣ
ನಿಧನ [9]ನಿಗಮಾಂಗನೆಯನವನೀ[9]
ವಧುವ ಕದ್ದೊಯ್ದವರೊಳೆಸೆವುದು ಕಲಿಹಿರಣ್ಯಕನ
ವಧಿಸುವಂದು ವಿರಾಜಿಪುದು ನಿ
ನ್ನಧಿಕ ಭುಜಬಲವಕಟ ವಾನರ
ವಧೆ [10]ನಿದಾನಿಸೆ[10] ರಂಜಕವೆ ನಿನಗೆಂದಳಾ ತಾರೆ ೨೦

ಅಱಿಕೆಗೆಣುವಿನ ಕೊಱತೆ ಪತಿಯಲಿ
ಹೊಱದು ಪಿಸುಣರ ಮಾತು ಮನಸಿಂ
ಗುಱಿಸಿತಲ್ಲದೆ ದೇವ ದಯ ನಿನಗಿಲ್ಲದಾದುದಲ

---

[1] ಮಿ (ಕ.ಟ.ಣ), ನ್ಯ (ಝ). [2] ಸೂನ್ಯ (ಕ.ಣ), ಸೂವ್ರ (ಜ.ಡ). [3] ದ್ಭೃತ್ಯನನು (ಕ.ಝ.ಣ). [4] ಲಿ (ಗ.ಝ.ಟ.ಡ). [5] ವ (ಗ.ಝ.ಟ). [6] ಸುವ (ಗ.ಝ.ಟ). [7] ದೆಸೆಯು (ಗ.ಜ.ಝ.ಡ). [8] ದಳು ಸುಷೇಣಸುತೆ (ಕ.ಟ.ಣ), ದೊಱಲಿದಳು ತಾರೆ (ಗ). [9] ವಿಮಳಾಮ್ನಾಯವನು ಭೂ (ಕ), ನಿಗಮಾಂಗನೆಯ ರಣವನೀ (ಗ). [10] ವಿಚಾರಿಸೆ (ಗ.ಝ).

ಅಱಿಚಿ ಮಾಡುವುದೇನು ತಾನಿ
ನ್ನೆಱೆಯ ಮಂಚದ ಮುನ್ನ ವಹ್ನಿಯ
ಲೊಱಗಿಸೆನ್ನುವನೆನ್ನ ಪತಿಯೊಡನೆಂದಳಾ ತಾರೆ ೨೧

ತರಳನಿವನಂಗದನು ಸೇರುವು
ದರಿದು ಸುಗ್ರೀವಂಗೆ ಹಸುಳೆಯ
ಹರಣ ನಿನ್ನದು ಕಂದನಿವ ತಾ ನಿನ್ನ ಕೈಯ್ಯೆಡೆಯು
ಕರುಣವಿರಲಿವನಲ್ಲಿ ಬಾರೈ
ತರುಣ ಬಾ[1]ರೆಂದಿ[1]ನಕುಲೇಂದ್ರನ
ಚರಣದಲಿ ಚಾಚಿದಳು [2]ತನುಜ[2]ನನಶ್ರುಜಲ ಝುಡಿಯೆ ೨೨

ಜಲವಿ[3]ಡಿ[3]ದವಕ್ಷಿಯುಲಿ ಕರುಣಾ
ಜಲನಿಧಿಗೆ ಲವ ಕೇಳು ಕಡುಕೋ
ಮಲವಲಾ ರಘುಪತಿಯ [4]ಚಿತ್ತ ಬಳಿಕ್ಕ ಬಾಲಕನ[4]
ತಲೆದಡವಿ ತನ್ನಂಘ್ರಿಕಮಲವ
ನಿಳುಹಿದನು ಮೂರ್ಧ್ನಿಯಲಿ ತಾರಾ
ಲಲನೆಯನು ಸಂತೈಸಿದನು ವಿವಿಧೋಪಚಾರದಲಿ ೨೩

ತರುಣಿ ಕೇಳಾಯುಷ್ಯವೊದಲಾ
ದುರುತರ ಪ್ರಾರಬ್ಧಕರ್ಮದ
ಬರಹವಿ[5]ದು[5] ತಾ ಪ್ರಾಣಿಗಳಿಗಂಭೋಜ ಸಂಭವನ
ಮರಣ[6]ವಧಿಕೃ[6]ತಜನನ[7]ವಿ[7]ದನಾ
ದರಿಸಲಱಿಯದೆ ಬಯಲ ಹಮ್ಮಿನ
ಹರುಹಿನಲಿ ಹೊದಕುಳಿಸುವುದು ಜಗವೆಂದನಾ ರಾಮ ೨೪

ಅದಱಿನಜ್ಞಾನ ಪ್ರಪಂಚವ
ನೊದವುದೇ ಸುಪ್ರೌಢಿ ನಾವ್ ನಿಜ
ಸುದತಿಯನು ಹೋಗಾಡಲೇಕೀ ಕಪಿಯ ಕೊಲಲೇಕೆ
ಇದುವೆ ತಾ ಪ್ರಾರಬ್ಧಫಲವಿದ
ನುದಗಲಿಸಲಾರಳವು ಸಹಗಮ
ನದ ವಿಚಾರವದೇಕೆ ಸಾಕಿನ್ನೆಂದನಾ ರಾಮ ೨೫

---

[1] ರೆನುತಿ (ಕ), ಯೆಂದಿ (ಝ.ಟ.ಣ). [2] ತರುಣ (ಕ.ಚ). [3] ಳಿ (ಕ.ಗ.ಝ.ಣ). [4] ವ-ನವಾ ಬಾಲಕನ ಬಳಿಕ (ಕ). [5] ವು (ಚ.ಝ). [6] ವದು ಕೃ (ಕ), ವಿಧಿ ತಾ (ಜ), ಕಧಿಕೃತ (ಝ.ಣ). [7] ಕೆ (ಕ.ಗ.ಡ.ಣ).

ತನುಜ ಕೇಳ್ಕೈ ಬಳಿಕ ಹರಿನಂ
ದನನ ಲಲನೆಯ ಲೋಚನದ ಬಿಡು
ವನಿಯುನಂಶುಕದಗ್ರದಿಂದೊರಸಿದನು ಕರುಣದಲಿ
ಅನುಜ ಲಕ್ಷ್ಮಣನಂತೆ ನಿನ್ನಯ
ತನುಜನನು ಪಾಲಿಸುವೆನೆಂದಾ
ವನಿತೆಯನು ಸಂತೈಸಿ ಬಳಿಕಿಂತೆಂದ[1]ನನುಜಂಗೆ[1] ೨೬

ತರಣಿ[2]ತನಯಗೆ ರಾಜ್ಯ[2]ಪದವಿಯ
ವಿರಚಿಸುವುದಂಗದ[3]ನ[3] ನೊಸಲಲಿ
ಧರಿಸುವುದು ಯುವರಾಜಪಟ್ಟವನೆಂದು ಬೆಸವೇಳ್ದು
ತೆರಳಿಸಿದನನುಜನನು ರವಿಜನ
ಕರೆದು ನಡೆ ನೀ ನಿನ್ನ ಪುರಕೀ
ವರುಷಕಾಲವ ಕಳಿದು ಕಪಿಬಲಸಹಿತ ಬಾಯೆಂದ ೨೭

ತಿರುಗಿದನು ಪ್ರಸ್ರವಣಪರ್ವತ
ಕರಸನಲ್ಲಿಂ ಮೇಲೆ ನಡೆದುದು
ಸುರಪಸೂನುವಿ[4]ನೌ[4]ರ್ಧ್ವದೇಹಿಕವಾಗಘೋಕ್ತದಲಿ
ಹರಿಧರಾಧಿಪ ಪಟ್ಟ ಬಳಿಕಾ
ಯ್ತರಿಯಮನ ನಂದನಗೆ ನಡೆದುದು
ಹರಿಹಯನ ಮೊಮ್ಮಂಗೆ ಘನಯುವರಾಜದಭಿಷೇಕ ೨೮

ಇನಜನನು ಬೀಳ್ಕೊಂಡು ಮಾರುತ
ತನುಜ ನಳ ನೀಲಾದಿಗಳ ವಂ
ದನೆಯ ಕೈಕೊಳುತೂರ್ಮಿಳಾಪತಿ ಪರಮಹರುಷದಲಿ
ಮನುಜವೇಷದ ಗೌರವದ ಗೋ
ಮಿನಿಯ ಗಂಡನ ಗರುವದೇವನ
ವಿನುತ ತೊರವೆಯರಾಯ ನರಹರಿಯೆಡೆಗೆ ನಡೆತಂದ ೨೯

---

[1] ನಾರಾಮ (ಗ.ಜ.ಡ). [2] ಜಂಗಧಿರಾಜ (ಕ.ಝ.ಟ.ಣ). [3] ಗೆ (ಚ.ಜ).
[4] ಗೌ (ಕ.ಚ).

# ಆರನೆಯ ಸಂಧಿ

ಸೂಚನೆ : ಕಳಿದು ಮಳೆಗಾಲವನು ಬಲಿಮುಖ
ಬಲಸಹಿತ ಬಂದಿನಜನಾ ದಶ
ಗಳವಿರೋಧಿಯ ಕಂಡು ಕದನೋದ್ಯೋಗಮನನಾದ

ಕೇಳಿದೈ ನೃಪಸೂನು ನಿಮ್ಮ ನೃ
ಪಾಲರಾ ಪ್ರಸ್ರವಣ ಶೈಲದ
ಮೇಲಿರಲು ಮೈದೋಱಿದುದು ಮುಂಗಾರು [1]ಧಾರುಣಿಗೆ[1]
ಬೀಳೆ ಬುಡಮೇಲಾಗಿ ಗಿರಿ ತರು
ಕೀಳೆ ಕಡಲುಪ್ಪರಿಸಿ ಗಗನಕೆ
ತೂಳೆ ತವಕದಿ ಬೀಸಿದುದು ಬಿಱುಗಾಳಿ ಪಶ್ಚಿಮದ ೧

ಮುರಿದು ನಭಕೇಱಿದವು ಮುಗಿಲಿನ
ನೆರವಿ ನೀರ್ಗಳ ಹೇಱಿ ಹಾಱಿದ
ವರಸುಕುಲದ ಮರಾಳತತಿ ಮಾನಸ ಸರೋವರಕೆ
ಹರುಷಿಸಿದವು ಬಲಾಕ ಚಾತಕಿ
ಸುರಶರಾಸನ [2]ಮೇಘ[2]ಲಕ್ಷ್ಮಿಯು
ಶಿರದ [3]ಶಿಬಿರ[3]ದ ಮೇಲುದಿನವೊಲು ಮೆಱೆದುದಭ್ರದಲಿ ೨

ತೊಟ್ಟುದೋ [4]ನಭ ಕವಚವನು ನೆಲ[4]
ಕಟ್ಟಿ ಬಿಗಿದರೊ ಸುರರು ನಿಱಿವಿಡಿ
ದುಟ್ಟಳೋ ಜಲದಾಗಮಶ್ರೀ ನೀಲಮಯ ಪಟವ
[5]ಮಟ್ಟ[5] ಮರಕತಶಿಲೆಯ ನೀಲಿಯ
[6]ಬೆಟ್ಟದಿರ[6]ವೆಂಬಂತೆ ಜಂಪಳ
ವಿಟ್ಟು ಝಡಿದುದು ಕಾರ್ಮುಗಿಲು ಕತ್ತಲಿಸೆ ಕುಂಭಿನಿಯ ೩

---

[1] ಮೇದಿನಿಗೆ (ಕ). [2] ವಭ್ರ (ಕ.ಚ). [3] ಶಬಲ (ಕ), ಸಬಳ (ಝ), ಸಿಂಧ (ಟ). [4] ಕವಚವನು ನಭವೆಡೆ (ಕ), ಕವಚವನು ನಭವೊಲೆ (ಚ). [5] ಮುಟ್ಟಿ (ಗ.ಜ.ಡ), ಹುಟ್ಟು (ಣ). [6] ಪಟ್ಟಳಿಯ (ಕ), ಪಟ್ಟವಳಿ (ಟ).

ಝಡಪುಗಳ ಝಾಡಣೆಯ ಮಿಂಚಿನ
ಖಡುಗಗಳ [1]ಕಡು[1]ಮುಗಿಲ ಹರಿಗೆಯ
ಗಡಬಡೆಯ ಘರ್ಜನೆಯ ಘಾಡಿಯ ಘನಘಟಾವಳಿಯ
ಸಿಡಿಲ ಬೊಬ್ಬೆಯ ಧಾಳಿಯಲಿ ನಡ
[2]ನಡಿಸಿ[2] ತಾಗಿ ನಿದಾಘ ಭೂಪನ
ಹಿಡಿದು ಹೆಕ್ಕಳಿಸಿದನು ಮೇಘಾಗಮಮಹೀಪಾಲ ೪

ದೊರೆಮುಗಿಲು ತೆರೆಮುಗಿಲು ನಿಡುಮೋ
ಹರದ ಮುಗಿಲುಪ್ಪರದ ಮುಗಿಲು
ಬ್ಬರದ ಝಾಡಿಯ ಜೋಡಿಗಳ ಜಂಗಳದ ಮುಗಿಲಿನಲಿ
ತರಣಿ ಶಶಿ ತಾರಾಗ್ರಹಂಗಳ
ಹರವು ನಿಂದುದು ಗಗನ ಜಲನಿಧಿ
ಜರಿದುದಿಳೆಗೆಂಬಂತೆ [3]ಜಲ ಝೊಂಪಿಸಿತು ಮೇದಿನಿಯ[3] ೫

ಬೆಸುವ ಮೇಘದ ಕಾಳಿಕೆಯ ಖಂ
ಡಿಸುವ ಮಿಂಚಿನ ಸಂಚರದ ಸಂ
ಧಿಸುವ ಸಿಡಿಲಿನ ಸಡಿಲಿ ನೆಲಕೊಗುವಾಲಿಕಲ್ಲುಗಳ
ಬೆಸುಗೆ[4]ಗಳ[4] ಬಿಱುವಳೆ ಬೆದರ್ವಳೆ
ಬಿಸಿಲುವಳೆ ಸರಿಸೋನೆ [5]ಸಿಡಿಲಿನ[5]
ಘಸಣಿವಳೆಯಲಿ ಘಾಸಿಯಾದುದು ಜಗದ ಜನನಿಕರ ೬

ತೊಱೆಗಳುಬ್ಬರದಬ್ಬರದ ಬೊ
ಬ್ಬಿಱಿ[6]ತದ[6]ಬುಧಿಯು [7]ಸರಸಿಗಳ[7] ನೀ
ರೊಱತೆ[8]ಗಳ ನೆಲ ನವಘ[8]ನೋದಕದುಬ್ಬು ನಿರ್ಜರದ
ನಿಱಿಸು ನಿಡುಜಂಝಾಸಮೀರನ
ಬಿಱಿಸು ಬೇಸಱಿನಿತ್ತ[9]ವೆನೆ[9] ನೇ
ಸಱುಗುಲಾಧಿಪಸೂನು[10]ಕೇಳ್[6] ನವ[10]ಮೇಘಕಾಲದಲಿ ೭

---

[1] ನಡೆ (ಕ.ಜ). [2] ನಡನಡದು (ಕ.ಟ), ನಡದಡಸಿ (ಗ.ಣ), ದಡದಡಿಸಿ (ಜ.ಝ). [3] ಜಲಮಯವಾದುದವನಿತಳ (ಕ), ಮಿಗೆ ಝೊಂಪಿಸಿತು ಮೇದಿನಿಯು (ಚ). [4] ವಳೆ (ಕ.ಚ). [5] ಸೇಡನ (ಗ.ಜ.ಡ.ಣ). [6] ವವ (ಕ.ಜ), ತವ (ಚ.ಟ), ತಕ (ಣ). [7] ರಸೆಯುಬಿಸಿ (ಕ.ಟ.ಣ), ಸಬುದಗಳ (ಚ). [8] ನೆಲದವಗಾಹ (ಕ.ಜ.ಟ.ಣ). [9] ವೈ (ಕ.ಟ.ಣ), ವೆಲೆ (ಗ). [10] ಕೇಳೈ (ಗ.ಜ.ಝ.ಡ).

ಲವನೆ ಕೇಳ್ ಚಂಡಾಂಶುವಂಶೋ
ದ್ಭವರು ಬಳಿಕಾ ಪರ್ವತದ ಬಲು
ಗವಿಯುಗೇಹಂಗಳಲಿ ಜಂ[1]ಘಾ[1]ನಿಲನಿವಾರಣದ
ವಿವಿಧಪುಣ್ಯಮೃಗಾಜಿನಂಗಳ
ನಿವಸನದ ನೀರೇಜಕಂದದ
ನವಫಲಾಹಾರದಲಿ ನೂಕಿದರಂಬುದಾಗಮವ ೮

ಬಂದುದಾ ಕೈಯೊಡನೆ ಕಾಳಿಕೆ
ಗುಂದಿದಭ್ರದ ಬೆ[2]ಳ್ಪಿನುಬ್ಬರ[2]
ಮಂದವಾದ ಸಮೀರಣನ ಸಂಭ್ರಮದ ಸಡಿಲಿಕೆಯ
ಸಂಧಿಸಿದ ಸಿಡಿಲಾಟಗಳ ತರ
ಣೀಂದುಗಳ ತೋಱಿಕೆಯ ಬೆಳಗುಗ
ಳಿಂದ ಸೊಗಸನು ಸೂಸುತವನಿಗೆ ವರಶರತ್ಸಮಯ ೯

ಮುಱಿದ ವೀರನ ರಣದವೊಲು ಬೊ
ಬ್ಬಿಱಿತ ನಿಂದವು ಸಾಗರಂಗಳ
ಹೆಱೆತೆಗೆದ ರಣಖೇಡನವೊಲೊಳಸರಿದವಲ್ಲಲ್ಲಿ
ತೊಱೆಗಳಾತ್ಮಜ್ಞಾ[3]ನಿ ತತ್ಪುರ
ದಱಿವ[3] ಕಾಣ[4]ಸುವಂತೆ ನಭ[4] ಕಂ
ದೆಱೆವೆಯಾದುದು [5]ಕಾಣಿಸಿತು ಜನಮನದ[5] ಸುಮ್ಮಾನ ೧೦

ಸಡಗರಿಸಿದುದು ಶಾಲಿ ಶಾಡ್ವಲ
ದುಡಿಗೆಯಲಿ ನೆಲನಖಿಳಮೃಗಮದ
ವಡೆದವಂಚೆಗಂಳಿಚರವ ಬೀಱಿದವು ಕೊಳಗಳಲಿ
ನುಡುಗಳಕ್ಕುಡಿಸಿದವು ಹಾವಸೆ
ಹಿಡಿದ ಪ[6]ಥಪಾಂಥಕ[6]ರ ಪದಹತಿ
ಗೊಡಲನಿತ್ತವು ಹೊಂಗಿದವು ಹೊಲದಲಿ ವಿಹಂಗಚಯ ೧೧

---

[1] ಝಾ (ಗ.ಚ.ಜ.ಟ). [2] ಳ್ಗರಿಯ ಬಲು (ಕ.ಝ), ಳ್ಮುಗಿಲು ಬಲು (ಣ). [3] ನಿಗೀಶ್ವರನಱಿಕೆ (ಕ.ಣ), ನಿ ತತ್ಪದದಱಿವ (ಗ.ಜ), ನ ತತ್ವರದಱಿವ (ಚ). [4] ಸಿದಂಡದಲಿ (ಕ), ಸಿದಂತೆ ನಭ (ಗ), ಸದಂತೆ ನಭ (ಡ.ಣ). [5] ನಭವ ಕಾಣಿಸಿ ತಿಳೆಯ (ಕ). [6] ಥವದ್ವಗ (ಕ), ಟುಪಾಂಥಕ (ಗ.ಝ.ಡ).

ಸರಿದುದಾ ಶರದವನಿಪಾಲನ
ಸಿರಿ ಕುಶಾನುಜ ಕೇಳ್ ಹಿಮಂತನ
ಬರವಿನಲಿ ಬಳಿಕಾದುದವನಿಪಗರಿವಧಾಸಮಯ
ಬರವನಲ್ಲಿಂ ಮೇಲೆ [1]ವಾನರ
ರ[1]ರಸನಲಿ ಕಾಣದೆ ಕಪೀಂದ್ರನ
[2]ಪರಿಯ[2] ಕಂಡೈಯೆಂದು ಮೆಲ್ಲನೆ ನುಡಿದನನುಜಂಗೆ ೧೨

ಹಿರಿದು ಹವಣರಿಯದ ಕೃತಘ್ನರು
ಧರೆಯೊಳಿಲ್ಲೆನಬೇಡ [3]ಧರೆಯಲಿ
ನಿರತಿಶಯ[3]ಪುರುಷಾರ್ಥ[4]ಜೀವಿಗಳಿ[4]ಲ್ಲವೆನಬೇಡ
ಸಿರಿಯ ಮದದಲಿ ನಮ್ಮನಾ ಕಪಿ
ಸರಕುಮಾಡದೆ [5]ಕಾದ ನೀನೆ[5]
ಚ್ಚರಿಸಿ ಬಾ ಹೋಗೆಂದು ನೇಮವನಿತ್ತನನುಜಂಗೆ ೧೩

ಏನವನು ದೊಡ್ಡಿದನು ಶರಸಂ
ಧಾನ ಸಮಯಿಗಳಾವು ನಮಗಾ
ವಾನರ[6]ರ[6] ಮಿತ್ರತ್ವವೆಂಬುದು ಲೋಕಹಾಸ್ಯವಲೆ
ಈ ನಿಭೃತಕೋದಂಡ ಚಂಡಕೃ
ಶಾನುವಿನ ಹೊಯ್ಲಿನಲಿ ಹಗೆಗೊಂ
ಡಾನುವವರಾರೆಂದು ಲಕ್ಷ್ಮಣದೇವ ಘರ್ಜಿಸಿದ ೧೪

ಕರೆದು ನೋಡೊಮ್ಮವನ ಬಂದರೆ
ಬರಲಿ ಬಾರದಡವನ ರಾಜ್ಯವ
ತಿರುಗಿ ನಾವ್ಕೊಂದವನ ನಂದನಗಿತ್ತು ಬಾ ಬಳಿಕ
ಅರಿವಥೆಗೆ ನೀನೆಂದ ನುಡಿ ತಾ
ತ್ಪರಿಯ ತುದಿಗೆಂದರಸನಾಜ್ಞಾ
ಧರನ ಧೈರ್ಯೋತ್ಕರನ ಕಳುಹಿದನಾ ಮಹಾದ್ರಿಯಲಿ ೧೫

ಧರಿಸಿಕೊಂಡಿದ್ದಗ್ರಜನ್ಮನ
ವರಶರಾಸನ ಶರ ಕೃಪಾಣವ
ನಿರಿಸಿ ತನ್ನಯ ಧನುತನುತ್ರವ ತಳೆದು ರಘುಪತಿಯ

---

[1] ಕಪಿಕುಲದ (ಕ.ಝ.ಟ.ಡ.ಣ). [2] ಬರವ (ಗ.ಜ.ಡ). [3] ಧರಣಿಯಲರರೆ (ಗ), ಧರಣಿಯೊಳಿರರೆ (ಜ.ಡ). [4] ಪಂಡಿತರಿ (ಕ.ಣ), ಪ್ರಪಂಡಿತರಿ (ಗ.ಜ.ಡ). [5] ಕಾದನವಗೆ (ಕ.ಝ.ಟ.ಣ), ಹೋದ ನೀನೆ (ಜ). [6] ನ (ಗ.ಝ.ಟ.ಣ).

ಚರಣಕಾನತನಾಗಿ ಮನದು
ಬ್ಬರದ ಹೊಗರಿನ ಹೊಗೆವ ಕೋಪದ
ಭರದ ಭಾರ[1]ಣೆಯಿಂದ[1] ಬೀಳ್ಕೊಂಡನು [2]ಮಹೀಪತಿಯ[2] ೧೬

ಆರು ನಿಲುವರು ಲಕ್ಷ್ಮಣನ ಘನ
ಘೋರ[3]ಗರ್ವಾನಲ[3]ನ ಮುಂದೆ ಮ
ಹೀರುಹಾವಳಿ ಸೀದವಂಗದ ಝಳದ ಝಾಡಿಯಲಿ
ಭೂರಿಭೂಧರ ಬಿಱಿದವಮಮ ಕ
ಠೋರಸಿಂಹಧ್ವನಿಗೆ ಸಿಂಹ ಚ
ಮೂರು ಕರಿ ಶರಭಾದಿ ಮೃಗ ಜಾಱಿದವು ದೆಸೆದೆಸೆಗೆ ೧೭

ಏಱಿಸಿದ ಬಿಲುದಿರುವಿ[4]ನಂಬಿನ
ತೋ[4]ಱಿಕೆಯ ತುದಿವೆರ[5]ಳುಗಳ[5] ಕೆಂ
ಪೇಱಿದಕ್ಷಿಯ ಕುಣಿವ ಮೀಸೆಯ ಕಾಹುರದ ಮನದ
ಮೂಱುಲೋಕದ ಕೊಲೆಗೆಲಸಕು
ಬ್ಬೇಱಿದಸಮಾಂಬಕನವೊಲು ಮೈ
ದೋಱಿದನು ಮಿಹಿರಜನ ದುರ್ಗದ ಭಟರ ಕಂಗಳಿಗೆ ೧೮

ಕಾಣುತೀತನನಾ ಪ್ಲವಂಗ
ಶ್ರೇಣಿ ದುರ್ಗವನೇ[6]ಱಗೊಡದೆಡ[6]
ದಾಣದಲಿ ತಱುಬಿದರು ತರುಶೈಲಾಯುಧಂಗಳಲಿ
ಕ್ಷೋಣಿಜಾಸುತ ಕೇಳು ಬಳಿಕ
ಕ್ಷೀಣ ಬಲನಾ ಬಲಿಮುಖಾಳಿಯ
ಗೋಣುಗಳ[7]ನೆಬ್ಬಿ[7]ಸುತ ನಡೆದಡಱಿದನು ಪರ್ವತವ ೧೯

ಎಡಬಲದಲ್ಔಕುವ ಭಟಾಳಿಯ
ತೊಡಕ ತೂಱುತ ಮಿಾಱಿ ಮಿಸುಕುವ
ಕಡುಹುಕಾಱರ ಕಾಲನೂರಿಗೆ ಕಳು[8]ಹುತಸದಳಿಸಿ[8]
ಘುಡುಘುಡಿಪ ಕೋಪದಲಿ ದುರ್ಗದ
ಹೆಡಕುಪರಿಯಂತೇಱೆ ಪುರ ಗಡ
ಬಡಿಸಿ ಬೆಚ್ಚಿತು ಬಾರಿಸಿತು ಭಯವಿನತನೂಜಂಗೆ ೨೦

---

[1] ವಣೆಯಲಿ (ಗ.ಜ.ಷ.ಣ). [2] ನಿಜಾಗ್ರಜನ (ಕ.ಝ.ಟ.ಣ). [3] ದೌರ್ವಾ
ನಳ (ಕ,ಗ). [4] ನಬ್ಬರದೋ (ಗ.ಖ). [5] ಳಿನಲಿ (ಗ.ಜ.ಡ), ಳು ನಸು (ಚ).
[6] ಱ ಬಂದಡೆ (ಗ.ಜ), ಱಗಿ ಬಂದೆಡೆ (ಡ). [7] ಖಂಡಿ (ಗ), ನಗಲಿ (ಟ.ಣ).
[8] ಹಿ ಸಂದಣಿಸಿ (ಗ.ಡ.ಜ.ಚ), ಹುತಸವಳಿಸಿ (ಟ.ಣ).

ಗಜಬಜವಿದೇನೆನುತ ಪವನಾ
ತ್ಮಜನು ನಡೆತಂದಿನಕುಲೇಂದ್ರಾ
ನುಜನ ಕಂಡೆಡಬಲದ ಕಳಕಳವನು ನಿವಾರಿಸುತ
ನಿಜದ ನಿಱುಗೆಯ ಭಕ್ತಿಯಲಿ ಭೂ
ಮಿಜೆಯ [1]ಮೈದುನನಮಲ[1]ಪದಪಂ
ಕಜಕೆ ವಿನಮಿತನಾಗಿ ತಂದನು ರವಿಜನರಮನೆಗೆ ೨೧

ಧರಣಿಜಾಸುತ ಕೇಳು ತತ್ಪುರ
ವರ ವಿರಾಜಿಸಿತಮರ[2]ಪುರವರ
ಕೆ[2]ರಡು ಮಡಿಯೆನೆ ಭದ್ರಭವನಾವಳಿಯ ವೀಥಿಯಲಿ
ಸುರಮಹೀಜೋದ್ಯಾನದಲಿ ಸುರು
ಚಿರ ವಿಭೂಷಣದಬಲೆಯರ [3]ಸೌಂ
ದರದ ಸೊಗಸಿನ ರಾಜಭವನವು ಮೆಱೆದುದಿದಿರಿನಲಿ[3] ೨೨

ಜಱೆದು ತಾರಾದೇವಿ ಬಳಿಕೆ
ಚ್ಚಱಿಸಲಾಕ್ಷಣ ಬೆದಱಿ [4]ಭ[4]ಯಮುಖ
ದಱಿಕೆಯಲಿ ಬಹುವಿಧದ ಸೌರಂಭಾತಿಶಯದಿಂದ
ಉಱುವ ತನ್ನಯ ಯುವತಿಯರ ಮೈ
ಮಱೆಯಲೈತಂದವರು ಸಹಿತಡಿ
ಗೆಱಗಿ ವೈಭವದಿಂದಿದಿರ್ಗೊಂಡೊಯ್ದನರಮನೆಗೆ ೨೩

ಪರಮಪೂಜಾವಿಧಿ[5]ಗಳಿಂದಾ
ದ[5]ರಿಸಿ ಲಕ್ಷ್ಮಣದೇವನನು ಸ
ತ್ಕರಿಸಿ ಕಂಪಿತಕಾಯನೆಱಗಿದನಿತ್ತು ಕಾಣಿಕೆಯ
ಕರುಣಲತೆ ಕುಡಿ[6]ದೋಱೆ[6] ಮೆಲ್ಲನೆ
ಕರಸರೋಜದಿನಾ ಕಪೀಂದ್ರನ
ಶಿರವ ನೆಗ[7]ಹಿ ಬಳಿಕ್ಕ[7] ಕುಳ್ಳಿರಿಸಿದನು ವಿನಯದಲಿ ೨೪

ಹರದ[8]ಮ[8]ರುಷಣದಾನನದ ಮೈ
ಸಿರಿಯಱಿದು ಕೈಮುಗಿದು ಮೆಲ್ಲನೆ
ದರಹಸಿತಮುಖನಾಗಿ ಕೇಳಿದನವನಿಜೇಶ್ವರನ

---

[1] ನಿಜಮೈದುನನ (ಗ.ಜ.ಡ). [2] ನಗರದಿನೆ (ಗ.ಜ.ಡ). [3] ಸಂಚರದ ಸೌರಂಭದಲಿ ಸೊಗಸಿನ ರಾಜಭವನದಲಿ (ಕ.ಝ.ಟ). [4] ನ (ಗ.ಜ.ಡ). [5] ದಿ ಬಳಿಕಾದ (ಕ.ಟ.ಣ), ಗಳಿಂದುಪಚ (ಜ). [6] ವೆಱಿಯೆ (ಚ), ಗೊಂಡು (ಝ). [7] ಹಿದು ಬಳಿಕ (ಗ.ಜ.ಡ). [8] ಹ (ಜ.ಝ.ಟ.ಣ).

ಸಿರಿಚರಣಸರಸಿರುಹಯುಗ ಸು
ಸ್ಥಿರವೆ ಜೀಯ ಕೃಪಾತಿಶಯದಿಂ
ತರದ ಪರಿಯೇನೆನ್ನಮೇಲೆನುತಿನಜ ಬೆಸಗೊಂಡ ೨೫

ನುಡಿದ ದಿನಕವ ಬಾರನೆಂದವ
ಗಡಿಸರಲೆ ಚಿತ್ತದಲಿ ನನ್ನಲಿ
[1]ತ[1]ಡದುದಪರಾಧಾಂಶವದ ಬಿನ್ನೈಸಲೇಕಿನ್ನು
ಹಿಡಿದೆವತಿದೃಢವಾಗಿ ನಿಮ್ಮಡಿ
ಯಡಿಗಳನು ನಾವಂಜಲೇಕಿ
ನ್ನೊಡೆಯತನವನು ಮೆಱೆದು ತನ್ನನು ಸಲಹಬೇಕೆಂದ ೨೬

ಅರಸ ಚಿತ್ತೈಸರಿಯಮಾನ್ವಯ
ದರಸನಂಘ್ರಿಸರೋಜಸೇವೆಗೆ
ನೆರಹಿದೆನು [2]ಶರನಿಧಿಪರೀತ[2] ಸಮಸ್ತಕಪಿಬಲವ
ಹರಿವರುಷ ಕಿಂಪುರುಷ ಭಾರತ
ವರುಷ ಕುರುವರುಷಾದಿ ನಾನಾ
ಧರೆಯ ಗಿರಿವನವಾಸಿಗಳನಾಹವವಿಲಾಸಿಗಳ ೨೭

ಶರನಿಧಿಯ ಹೊಱಗೊಳಗಣಗ್ಗದ
ತರುಚರೇಂದ್ರರನಿಂದುಜೂಟಂ
ಗರಿಯ[3]ಮಗೆ ವರುಣಂಗೆ [3]ಕಾಲಂಗಗ್ನಿದೇವರಿಗೆ
ಸುರಪತಿಗೆ ಕಿನ್ನರಪತಿಗೆ ಸರಿ
ದೊರೆಯ ಸುಭಟರ ನೆರಹಿದೆನು ನಿ
ಮ್ಮರಸನಂಘ್ರಿಸರೋಜಸೇವೆಗೆ ಜೀಯ ತಾನೆಂದ ೨೮

ನುಡಿದ ದಿವಸಕೆ ಬಾರದಿ [4]ಹುದವ[4]
ಗಡಿಗತನ[5]ವಿದು[5] ಜೀಯ ನಮ್ಮಾ
ಪಡೆಯ ನೆರಹಲು ಸರಿದವವಧಿಗೆ ದಿವಸ ಹನ್ನೆರಡು
ನುಡಿಯೆ ನಾಲಗೆಯಿಲ್ಲ ನಿಮ್ಮಡಿ
[6]ಯೊಡನೆ[6] ಭೃತ್ಯನ ತಪ್ಪನೊಪ್ಪಂ
ಬಡೆಯಬೇ[7]ಕೆಂದ[7]ಱಗಿದನು ಮಗುಳಂಘ್ರಿಗಾ ರವಿಜ ೨೯

---

[1] ನ (ಕ.ಜ.ಝ.ಣ). [2] ನೀರಧಿಪರೀತ (ಕ.ಣ), ಸುರಗಿರಿಪರೀತ(ಗ.ಚ.ಜ), ನೀರಧಿಪರಿಮಿತ (ಟ), ಸುರನದಿಪರೀತ (ಡ). [3] ಮಂಗನಿಲಂಗೆ (ಕ), ಮನನನಿಲಂಗೆ (ಝ), ಮಗೆ ನೀಲಂಗೆ (ಟ). [4] ದ್ದಾ (ಗ.ಡ), ದಿದ್ದವ (ಜ). [5] ವನು (ಕ.ಜ), ವೆಲೆ (ಚ), ವದು (ಡ.ಣ). [6] ಯೆಡೆಗೆ (ಗ.ಜ.ಡ). [7] ಕೆನುತೆ (ಕ.ಗ.ಜ.ಡ).

ನೆಗಹಿದನು ಕಪಿವರನ ಶಿರವನು
ಮುಗುಳುನಗೆ ಮಂದವಿಸೆ ತಾರೆಯ
ಮಗನ ತಾರೆಯ ರುಮೆಯುನಮಿತಾನನಗಳನು ಬಳಿಕ
ಮಿಗುವ ಕರುಣದೊಳೆತ್ತಿ ಸೌಖ್ಯದ
ಸೊಗಸಿನಲಿ ಸೌಮಿತ್ರಿ ತೊರವೆಯ
ನಗರದಧಿಪತಿಯೆಡೆಗೆ ಬಂದನು ಬಹಳ ಬಲಸಹಿತ ೩೦

---

# ಏಳನೆಯ ಸಂಧಿ

ಸೂಚನೆ : ರಾಯರಘುಕುಲಸಾರ್ವಭೌಮಂ
ಗಾಯತಾಹವಮಲ್ಲನನುಪಮ
ರಾಯದಳವನು ತೋಱಿ ಮನ್ನಿಸಿಕೊಂಡನಾ ರವಿಜ

ಕೇಳಿದೈಯೆಲೆ ರಾಜಸೂನು ದ
ಯಾಳುವಲ್ಲಾ ರಾಯರಲಿ ಸೀ
ತಾಲತಾಂಗಿಯ ರಮಣ ಕಾಣುತ ಕಪಿಕುಲೋತ್ತಮನ
ಮೇಲಣಮರುಷಮನವನಾಕ್ಷಣ
ಬೀಳುಕೊಟ್ಟನು ದೂರದಲಿ ದು
ವ್ವಾಳಿಸಿದ ಭೀತಿಯಲಿ ಕಪಿ ಮೈಯಿಕ್ಕುತೈತಂದ ೧

ತ್ರಾಹಿ ನರನಾಟಕವಿನೋದ
ತ್ರಾಹಿ ಭೂಭಾರಾಪಹರಣ
ತ್ರಾಹಿ ಸರ್ವೇಶ್ವರ ಸನಾತನ ಸಕಲಗುಣನಿಳಯ
ತ್ರಾಹಿ ಸತ್ವರಜಸ್ತಮೋಗುಣ
ದೇಹ ವಿವಿಧವಿಚಿತ್ರಲೀಲಾ
ಗೇಹ ನಿರುಪಮಮಹಿಮ ಮಾಯಾನರ ನಮೋಯೆಂದ ೨

ದೇವ ದೇವಾಧೀಶ ರಿಪುವನ
ದಾವ ದೈತ್ಯಕದಂಬ ವಿಪುಳ
ಗ್ರಾವಗರ್ವಿತ ವಜ್ರ ಶರಣಜನೈಕ ಸುರಧೇನು
ದೇವ ಭಕ್ತಾಧೀನ ಭಕ್ತಜ
ನಾವಲಂಬನ ವಿಮಲವೈದೇ
ಹೀವಿಲೋಚನ ವಿಕಸಿತೋತ್ಪಲಚಂದ್ರ ನಮೊಯೆಂದ ೩

ಕರುಣ ರಸ ತುಳುಕಾಡೆ ಕಪಿ ಕುಂ
ಜರನ ಕಂಜದಳಾಯತಾಕ್ಷನು
ಬರಸೆಳೆದು [1]ಬಿಗಿಯಪ್ಪಿದನು ಮನದ[1]ಧಿಕ ಹರುಷದಲಿ
ಕರವ ಹಿಡಿದು ಮೃಗೇಂದ್ರಪೀಠದ
ಹೊರೆಯಲಾತನ ನಿಲಿಸಿ ನಯದಿಂ
ದರಸ ಬಳಿಕೀ ಮಾತನೆಂದನು ರಾಜಕಾರಿಯವ ೪

---

[1] ಬಿಗಿಯಪ್ಪಿದನು ಬಳಿಕ (ಕ.ಟ.ಣ), ತಕ್ಕೈಸಿ ಮನದೊಳಗೆ (ಚ).

ಕೇಳಿದ್ದೈ ಸುಗ್ರೀವ ಹಗೆವನ
ಮೇಲಣಧಿಕಕ್ರೋಧ ದಿನದಿನ
ಕೇಳಿದಿಟವಹುದೆಂಬ ನಾಣ್ನುಡಿ ನಮ್ಮೊಳಾದುದಲ
ಮೇಲೆ ತಿಂಗಳು ನಾಲ್ಕರೆಣಿಕೆಯ
ಕಾಲ ಸವೆದುದು ರಿಪು[1]ವಧಾವಿಕ
ರಾ[1]ಳವಿಗ್ರಹಕೇನು ಮತಿಯನು ಕಂಡೆ ನೀನೆಂದ ೫

ಮತಿಯದೇನೆಲೆ ಜೀಯ ರಿಪುಸಂ
ತತಿಯ ಸಂಹಾರಿಸುವ ಶರಣಾ
ಗತರ ಸಲಹುವ ಸತ್ವಗುಣ ನಿ[2]ನ[2]ಗಲ್ಲದಿನ್ನುಳಿದ
ಇತರ ದೈವದಲುಂಟೆ ಮುಂದಾವ್
ಸ್ತುತಿಸ[3]ಲೇಕೆಲೆ[3] ಜೀಯ ಸೇವಾ
ಕೃತಿಯ ಸಮಯೋಚಿತವ [4]ತ[4]ನ್ನಲಿ ಬೆಸ[5]ಸಬೇ[5]ಕೆಂದ ೬

ಧಾರುಣೀಪತಿ ಕೇಳು ತವತೂ
ಣೀರದಂಬಿನಲೊಬ್ಬ ತಾ [6]ಸಹ[6]
ಕಾರಿ [7]ನಿಮಗಾನೆಂಬುದಿದು ರಾಜೋಪಚಾರ[7]ವಲೆ
ಕಾರಿಯವದೇನರಸ ಭರದ ಸ
ಭಾರಿಯಾಹವಕಿಕ್ಕು ಮಿಕ್ಕ ವಿ
ಚಾರವಿನ್ನೇ[8]ಕೆಂ[8]ದು ಕೈಗಳ ಮುಗಿದನರಸಂಗೆ ೭

ಬಾ ಸುರೇಂದ್ರಜಸೂನು ಶೋಚಿ
ಷ್ಕೇಶಸುತ ಬಾ ನಮ್ಮ ಬಲವಾ
ರಾಶಿಯನು ರಾಜೇಂದ್ರಚಂದ್ರಮ ನೋಡಲಿಂದಿನಲಿ
ಈ ಸಮೀಪಕೆ ಬರಲೆನಲು ಪರಿ
ಶಾಸನನ ಸಂಜ್ಞೆಯಲಿ ಬಳಿಕಾ
ಕೀಶಬಲ ಬರುತಿರ್ದುದಗಣಿತ ಭೂಮಿಯಗಲದಲಿ ೮

ಅರರೆ ಜಂಗಮ ಗಿರಿಯೊ ಜವನು
ಬ್ಬರದ ಜಾತ್ರೆಯೊ ವಿಲಯ ವಹ್ನಿಯ
ನೆರವಿಯೋ ನೆಗಳಿಕೆಯ ಬಲವೋ ಕಾಲಭೈರವನ

---

[1] ವಿರೋಧವಿತಾ (ಗ.ಡ). [2] ಮ (ಚ.ಜ). [3] ಬೇಕೇ (ಕ.ಟ.ಣ). [4] ನೆ (ಗ.ಜ.ಡ.ಣ). [5] ಸಿ ಸಾ (ಕ.ಟ.ಣ). [6] ನುಪ (ಗ.ಜ.ಡ). [7] ನೆನಗಾನೆಂಬುದಿದು ತಾನೌಪಚಾರ (ಕ), ನಿಮಗೆಂಬುದದು ರಾಜೋಪಕಾರ (ಗ), ಗಡ ನಿಮಗೆಂಬುದಿದು ರಾಜೋಪಚಾರ (ಡ), ನಿನಗಾನೆಂಬುದಿದು ತಾನೌಪಚಾರ (ಝ.ಣ). [8] ನೆಂ (ಚ.ಜ.ಝ.ಡ).

ನಿರುಪಮವಲೇ ಹೊಗಳುವಡೆ ಹೊಸ
ಪರಿಯು ಬಲ ಬರುತಿರ್ದುದದ್ರಿಯು
ಹರಹುಗಳ ಹೊದಱುಗಳ ಬಲುಹೆಮ್ಮರನ ನೆಗಹಿನಲಿ ೯

ಝಡಪುಗಳ ಗಿರಿಶಿರದ [1]ನೆಗ[1]ಹಿನ
ಕಿಡಿಯುಲಂಬರ ತುಂಬಿದುದು ಬೇ
ರುಡಿಯ ಮರದಾಗುಗಳಲುದಿಸಿದ ಧೂತಧೂಮಶಿಖಿ
ಸಡಿಪಡೆಂಬಬ್ಬರದ ನಿರ್ಝರ
ಕೊಡೆದುದಬುಜಭವಾಂಡವಾ ಕಪಿ
ಪಡೆಯು ಪದಹತಧೂಳಿಗದ್ದುದು ಸಕಲಭುವನಚಯ ೧೦

ಮೊದಲು ಶತಬಲಿಯೆಂಬ ಕಪಿ ತೋ
ಱಿದನು ಕಪಿವಾಹಿನಿಯನೆರಡ
ರ್ಬುದವನದ್ಭುತ ರೌದ್ರಭದ್ರಸಮುದ್ರಮುದ್ರಿತರ
ಮದವದರಿಭೈರವರ ಕರ್ಕಶ
ಕದನಕೋಳಾಹಳರ [2]ರಣ[2]ಸಂ
ಪದಸಮಗ್ರರ [3]ಜಯ[3]ಮುಖೋಗ್ರರ ವಿಕೃತವಿಗ್ರಹರ ೧೧

ಅವನ ಬಳಿಯಲಿ ಬಂದುದಗ್ಗದ
ಗವಯ ವೀರಗವಾಕ್ಷ ಸೇನಾ
ನಿವಹವೆರಡರ್ಬುದದ ಯುಗಾಂ[4]ತ್ಯದ ಮೇಘ[4]ದಾಕೃತಿಯು
ತಿವಿದಡಿಳೆ ಬಿಚ್ಚುವ ಸುರಾಚಲ
ವವಚಲಡಗುವ ಬೊಬ್ಬೆ[5]ಗಗ್ರ[5]ದ
ಧ್ರುವನ ಶಿರ ಸಿಗುರೇಳೆ ಸಂಗರಸುಬಲ ಸಂದೋಹ ೧೨

ವಿಮಲಮತಿ ಕುಶ ಕೇಳು ದುರ್ಮುಖ
ಸುಮುಖರೆಂಬುವರೊಮ್ಮೆಗೀಶನ
ಸಮುಕೆ ತಾರದ ಸುಭಟಸಮರಶ್ರೀವಧೂವಿಟರ
ಯಮನ ಲೆಕ್ಕಿಸದಧಟರನು ನಿ
ರ್ಗಮಿಸಿಯುದ್ಧ ಮದೋತ್ಕಟರ ಸಂ
ಕ್ರಮಿತಸಾಹಸಭಟರ ತೋಱಿದರೆರಡು ನಿರ್ಬುದವ ೧೩

---

[1] ಕೊಡ (ಗ.ಟ), ತೊಡ (ಜ.ಡ.ಣ). [2] ಜಯ (ಕ.ಗ.ಟ.ಣ). [3] ರಣ (ಕ.ಝ.ಟ.ಣ). [4] ತದುಶರ್ಬುದ (ಕ), ಕದ ಮೇಘ (ಚ), ತನಿಗರ್ಬುದ (ಣ). [5] ಯುಗ್ಗ (ಗ.ಟ), ಗುಗ್ರ (ಚ), ಗಗ್ಗ (ಜ.ಡ).

ದನುಜಮನುಜಾಮರ [1]ಕದಂಬವ[1]
ಮನಕೆ ತಾರದಜಾಂಡಮಂಡಲ
ವನು ವಿಭಾಗಿಪ ವೀರವಾನರವರವರೂಥಿನಿಯು
ವಿನುತದಧಿಮುಖ ಗಂಧಮಾಧನ
ಪನಸ ಶರಭ ಜ್ಯೋತಿಮುಖರೆನಿ
ಪ[2]ನುವ[2]ರೋತ್ಸವಭಟರು ತೋಱಿದರಾಱುನಿರ್ಬುದವ ೧೪

ತೋಱಿದನು ಕೈಯೊಡನೆ ಕೇಸರಿ
ಮೂಱುನಿರ್ಬುದವನು ನೃಕೇಸರಿ
ಗಾಱುಮಡಿ ಭುಜಬಲರ ಭುವನಕ್ಷೋಭಕೃತಬಲರ
ತೋಱಿದನು ತರುವಾಯಲುಪಮೆಗೆ
ತೋಱಿದತಿಬಲ ಬಲಿಮುಖರ ಹೊಗ
ರೇಱಿಕೆಯ ಹೊಸಪರಿಯ ಮಸಕದ ವೃಷಭನರ್ಬುದವ ೧೫

ಕುಮುದನರ್ಬುದಬಲವನಗ್ಗದ
ರುಮನು ತಾನರ್ಬುದವನುರುವಿ
ಕ್ರಮ ರುಮಣ್ವಕನರ್ಬುದವ[3]ನ[3]ರ್ಬುದವ ನಾ ಪನಸ
ಸಮರವಿಜಯರ ಸುಪ್ರತಾಪರ
ಯಮಶರೀರರ ಶೌರ್ಯಗುಣಸಂ
ಭ್ರಮರ ತೋಱಿದ[4]ನ[4]ಮಮ ವಾನರ ನರಕುಲೇಂ[5]ದ್ರಂ[5]ಗೆ ೧೬

ಕನಲಿದಡೆ ಕಲ್ಪಾಂತರುದ್ರನ
ಮೊನೆಗೆ ಮೋಹುವ ಮೋಹಿದಂತಕ
ನನು ನಿತಾಂತಭುಜಪ್ರತಾಪದಲಸುವನಸಬಡಿವ
ಘನಪರಾಕ್ರಮ ಚಕ್ರಿಗಳ ಮೈಂ
ದನು ಮದಾಂಧದ್ವಿವಿಧಭಟರು
ಬ್ಬಿನಲಿ ತೋಱಿದರೆರಡು ನಿರ್ಬುದ ಕಪಿವರೂಥಿನಿಯು ೧೭

ನಿಟಿಲನಯನನ ನೊಸಲವಹ್ನಿಯ
ಪಟುತ[6]ರ[6]ವ ನಂದಿಸುವ ಬೊಮ್ಮನ
ತುಟಿಗೆ ಹದನಿಕ್ಕಿಸುವ ತೋಟಿಯಲಾದಿಭೈರವನ
ನಟಣೆಗೆಡಿಸುವ ನಗದ ರಾಯರ
ಭಟರನನುಪಮಸಮರಜಯಸಂ
ಘಟರನೈದರ್ಬುದವನಗ್ನಿಕುಮಾರ ತೋಱಿಸಿದ ೧೮

---

[1] ಭುಜಂಗರ (ಚ.ಝ.ಟ). [2] ಸಮ (ಕ), ನುಪ (ಜ.ಡ). [3] ನಿ (ಚ). [4] ರ (ಗ.ಜ.ಝ.ಡ). [5] ದ್ರರಿ (ಗ.ಚ). [6] ನ (ಗ.ಜ.ಝ.ಡ).

*ಜಲನಿಧಿಯನುಜಿ಼ ಕುಡಿವ [1]ವಡಬಾ[1]
ನಲನ ನುಂಗುವ ನೆಲವನಿಬ್ಬಗಿ
ಗಳೆವ ನಿಖಿಳಕುಲಾದ್ರಿಗಳ ಕಿತ್ತಿಭ್ರತಳಕಿಡುವ
ಜಲಜಬಂಧು ಹಿಮಾಂಶುಗಳ ಕುಂ
ಡಲವನಿಕ್ಕುವ [2]ಕೋಟಿದಾವಾ[2]
ನಳ ಬಲಾನ್ವಿತ ಭಟರ ನಳನರ್ಬುದವ ತೋಱಿಸಿದ ೧೯

ಮೇರುವನು ಕಿತ್ತಬುಜಜಾಂಡದ
[3]ಭೂರಿಭಾರವನೊಡೆವ[3] ವಿಲಯನ
ಮಾರಣನನುಗಿದಳುಕಿಸುವ ವಾಸುಗಿಯ ಬಳುಕಿಸುವ
ತಾರೆಗಳ ತಱಿದಗಿವ ಗರ್ವಿತ
ಗೌರವರನರ್ಬುದವನಂಗದ
ವೀರ ತೋಱಿಸಿ ಮೆಚ್ಚಿಸಿದನಿನವಂಶವಲ್ಲಭನ ೨೦

ಸಿಡಿಲುಗಳ ಗರ್ಜನೆಯ ವಿಲಯದ
ಮೃಡನ ಮುಳಿಸಿನ ಧ್ವನಿಯ ಕಲ್ಪದ
ಕಡಲ ರಭಸದ ಕಾಲಮೇಘದ [4]ಕಡುಹಿನ[4]ಬ್ಬರದ
ಝಡಿವ ಜೂಬಿನ ಸಿಂಗಳೀಕದ
ಪಡೆಯನೈದರ್ಬುದವನಾ ಕೈ
ಯೊಡನೆ ಕಪಿಕುಲವೀರವೈದ್ಯಸುಷೇಣ ತೋಱಿಸಿದ ೨೧

ಕಾಹುರದ ಕಲ್ಪಾಂತ ಮೇಘ
ವ್ಯೂಹದಂದದ ಪೂರ್ವಯಜ್ಞ ವ
ರಾಹ[5]ನಂದ[5]ದ ಯಮನ ಸೈರಿಭದಂ[6]ದ[6]ದನುಪಮದ
ಸಾಹಸದ ಸಡಗರದ ಸಿಡಿಲಿನ
ಕಾಹುರದ ಕಡುಹುಗಳ ಕರಡಿಯ
ಮೋಹರವ ಜಾಂಬವ[7]ರು ತೋಱಿದರೈ[7]ದುನಿರ್ಬುದವ ೨೨

---

[1] ಕಲ್ಪಾ (ಕ.ಝು.ಣ). [2] ತೋಟಿವಡಬಾ (ಕ.ಗ.ಝು.ಣ). *'ಚ' ಪ್ರತಿಯಲ್ಲಿ ೧೯ನೇ ಪದ್ಯ ೨೦ನೇ ಪದ್ಯವಾದಮೇಲೆ ಬಂದಿದೆ. [3] ಭಾರಿಭಾಂಡವನುದವ (ಕ), ಭಾರಿಭಾಂಡವನೊಡೆವ (ಝು.ಣ). [4] ಮೊಳಗಿನು (ಕ.ಟ.ಣ), ಕಡುಹಿನು (ಚ). [5] ದಂಗ (ಕ ಝು.ಣ), ದಂದ (ಜ.ಡ). [6] ಗೆ (ಕ.ಝು.ಟ.ಣ). [7] ನು ತೋಱಿದನೈ (ಕ.ಝು.ಡ.ಣ).

ಅಣದಡಬುಜಭವಾಂಡಘಟವಾ
ರಣಿಪ ಕುಕ್ಕಿದಡುಗುರಲಿಳೆ ಬಿ
ಜ್ಜಣಿಪ ಲಂಘನೆಗುದಯಗಿರಿ[1]ಗಸ್ತಾದ್ರಿ[1] ದಡದಡಿಪ
ಹಣಿಯ ಜೂಬಿನ ಜೂಲುಗೂದಲ
ಕಣುಗಿಡಿಯ ಕಡುಕಾಹುರದ ಸಿಂ
ಗಣಿಕಗಳನರ್ಬುದವನತಿಬಲ ತಾರ ತೋಱಿಸಿದ ೨೩

ಇವರ ಸಾಹಸವಿವರ ಸಡಗರ
ವಿವರ ವಿಕ್ರಮವಿವರರೂಪಿಂ
ತಿವರ ರೌದ್ರಾಟೋಪವಿವರ ಸಮಾನವೆಂದೆಂಬ
ಹವಣನಱಿವ ಸರೋಜಜಗೆ ಸಂ
ಭವಿಸಿದಗ್ಗದ ತನ್ನ ತೂಕದ
[2]ಬವರಿ[2]ಗರ ತೋಱಿಸಿದನನಿಲಜನೇಳುನಿರ್ಬುದವ ೨೪

ಕೋಟಿಸಂಖ್ಯೆಯ ಬಲವ ಮಿಕ್ಕಿನ
ಕೋಟಿಸಂಖ್ಯೆಯ ಯೂಥಪರು ಧರೆ
ದೂಟಲಂಬುಧಿ ಮೀಟಲಹಿಪತಿ ಕೂರ್ಮರಗ್ಗಳಿಕೆ
ಪಾಟಿಗೆಡೆ ತೋಱಿಸಿದರೀ ಪರಿ
ಪಾಟಿಯಲಿ ಫಣಿಪತಿ[3]ಗೆ[3] ನಾಲಗೆ
ನಾಟದೆಣಿಸಲು ಗಣನೆಯಿಲ್ಲದ ರಾಮಸೈನಿಕವ ೨೫

ಎಂತು ಹೊತ್ತುದೊ ಧರಣಿ ದಿಗ್ಗಜ
ವೆಂತು ತಾಳ್ದವೊ ಭಾರ[4]ಕರಲಿ ಮ
ಹಾಂ[4]ತನ್ನೈ ಭುಜಗೇಂದ್ರ ಕೂರ್ಮನು ಹೊರಿಗೆವಾಳನಲೆ
ಹೊಂತಕಾರಿ[5]ಗಳಾ[5] ಕುಲಾದ್ರಿಗ
ಳಾಂತುದಕೆ ಬೆಱಗೆಂದು ಹರುಷ
ಸ್ವಾಂತದಲಿ ಹೊಯ್ಸಿದನು ಕಮಲಜನಮಲಭೇರಿಗಳ ೨೬

---

[1] ಮಸ್ತಕದಿ (ಗ.ಜ.ಝ.ಡ). [2] ತವಕಿ (ಕ.ಟ.ಣ). [3] ಯ (ಗ.ಚ.ಣ).
[4] ಏದ ತಾನಾಂ (ಕ.ಚ). [5] ಯಲಾ (ಗ.ಜ.ಡ.ಣ).

ಹರೆದುದೋಲಗವಾ ಸಮಯದಲಿ
ಸುರವಧೂನಿಕುರುಂಬ ಸುಳಿದುದು
ಕರದ ಹೊಂದಳಿಗೆಗಳ ರತುನಾರತಿಯು ಸೊಗಸಿನಲಿ
ತೊರವೆಯಧಿಪತಿರಾಯ ನರಕೇ
ಸರಿಯ ಸರಿಸದಲಸ್ತ ಶೈಲಕೆ
ಸರಿದನಿನನಮರಾಳಿ ಹರೆದುದು ಹರುಷಭಾರದಲಿ　　೨೭

———

# ಎಂಟನೆಯ ಸಂಧಿ

ಸೂಚನೆ: ರಾಯ[1]ರವಿನಂದನನು ವಾನರ[1]
[2]ನಾಯಕರ[2] ಕಳುಹಿದನು ಕಮಲದ
ಳಾಯತಾಕ್ಷನ ನೇಮದಲಿ ನೋಡಲು ವಿದೇಹಜೆಯ ‖

ಕೇಳಿದ್ಯೆ ಕೋಸಲ ಧರಿತ್ರೀ
ಪಾಲಸುತ ಮಱುದಿವಸದುದಯದ
ಮೇಲೆ ಬಂದೋಲಗವನಿತ್ತನು ರಾಯ ರಘುನಾಥ
ವಾಲಿಸುತ ಹನುಮಂತ ಜಾಂಬವ
ನೀಲ ನಳ ತಾರಾದಿಗಳ ಸ
ಮ್ಮೇಳದಲಿ ಮಾರ್ತಾಂಡಸುತ[3]ನೈ[3]ತಂದನೋಲಗಕೆ ೧

ಹೆಗಲ ಗಿರಿಶಿಖರಾಳಿಗಳ ಕೊಂ
ಬುಗಿದ ಮರ ಕಂಕುಳಿನ ನಖಮುಖ
ದಗಡುವೋ[4]ಡಿ[4]ಯ ಹೊಗಱ ಹೊಸಜವ್ವನದ ಭಟನಿಕರ
ಜಗದರಸ ರಾಮಂಗೆ ಕೈಗಳ
[5]ಮುಗಿಮುಗಿದು ಕೆಲಸಾರುತಿ[5]ರ್ದುದು
ಬಗೆ[6]ವೆರಸಿ ಬಲ[6]ಪತಿಗಳೆಪ್ಪತ್ತೇಳುಕೋಟಿ[7]ಯೆನೆ[7] ೨

ಈತನಗ್ಗಳನೀತನತಿಬಲ
ನೀತನನ್ವಯನೀತ ಸಾಹಸ
ನೀತ ನಿರ್ಭಯನೀತ ಶೂರನುದಾರಬಲನೀತ
ಖ್ಯಾತರಿವರಿವರೆಂದು ರವಿಸಂ
ಜಾತ ತೋಱುಸುತಿರ್ದನಾ ಮಾ
ಯಾತಿರೋಧಾನಂಗೆ ಮಹಿಮಾಸ್ಪದದ ಕಪಿಭಟರ ೩

ಅರಸ ಚಿತ್ತೈಸಜತನುಜ ಕೇ
ಸರಿ ಸುಷೇಣಕರಿವರು ಮೂವರು
ಗುರುಗ[8]ಳಿವರ[8]ಭಿವಂದ್ಯ[9]ರುಗಳ[9]ಗ್ಗಳದ ಮಂತ್ರಿಗಳು

---

[1] ಕಪಿಸುಗ್ರೀವಸೇನಾ (ಕ). [2] ರಾಯರನು (ಗ.ಜ.ಡ). [3] ನಡೆ (ಕ.ಗ.ಟ.ಣ). [4] ರೆ (ಕ.ಗ.ಜ). [5] ಮುಗಿದು ಕೆಲಸಾರುತ್ತಲಿ (ಚ), ಮುಗದು ಕೆಲಕೆಲ ಸಾರುತಿ (ಡ). [6] ಬಗೆಯ ಕಪಿ (ಚ). [7] ಯಲಿ (ಕ.ಚ.ಟ). [8] ಳೆನಗ (ಕ.ಝ.ಟ). [9] ರಿವರ (ಕ.ಝ.ಟ).

ಧುರವಿಜಯ ಹನುಮಂತ ನಳ ನೀ
ಲರು ಮದೀಯಪ್ರಾಣಸಖರುಳಿ
ದರಿಭಯಂಕರ ಭಟರಿವರು ಬಂಧುಗಳು ತನಗೆಂದ ೪

ಇದೆ ಸಮಸ್ತ ದ್ವೀಪವನ ದು
ರ್ಗದ ಕಪೀಂದ್ರರು ಜೀಯ ಚಿತ್ತೈ
ಸಿದಱ ಮಹಿಮೆಯನು ಸುರಲೆನ್ನಳವಲ್ಲ ನಿಮ್ಮಡಿಯ
ಪದದ ಸೇವೆಗೆ ಸಲುವ ಬಲುಗೈ
ಯದಟರಿದೆ ಬವರಕ್ಕೆ ನಿಲುವ
ಗ್ಗದ ಬಲಾನ್ವಿತ ಭೂರಿಬಲವಿದೆಯೆಂದನಾ ರವಿಜ ೫

ಮನದ [1]ಮು[1]ದದುಬ್ಬಿನಲಿ ಬಳಿಕಾ
ಜನಪ ಬಲದಲಿ ಕುಳ್ಳಿರಿಸಿಕೊಂ
ಡನು ಚತುರ್ಮುಖಸೂನು ಕೇಸರಿ ಕಲಿ ಸುಷೇಣಕರ
ಹನುಮ ನಳ ನೀ[2]ಲಾಂಗದರ[2] ತ
ನ್ನನುಜ[3]ನೆಡದಲಿ ನಿಲಿಸಿ[3] ಮಿಕ್ಕಿನ
ವನಚರಾಧೀಶ್ವರರ ಕೈಸನ್ನೆಯಲಿ ಮನ್ನಿಸಿದ ೬

ಕರೆದು ತನ್ನೊತ್ತಿನಲಿ ಕಾರ್ಯಾ
ತುರನ ಕದನದುರಂಧರನ ಕಪಿ
ವರನ ಕಲಿಸುಗ್ರೀವದೇವನ ನಿಲಿಸಿ ಹರುಷದಲಿ
ಹಿರಿದು ಮನ್ನಿಸಿ ಜಾಂಬವಾದ್ಯರ
ನುರುತರಪ್ರಿಯಭಾಷಣೆಯಲುಪ
ಚರಿಸಿ ಘನಸಂತೋಷಶರಧಿಯೊಳದ್ದಿದನು ಭಟರ ೭

ಅರಸನಿದ್ದನು ಬಳಿಕ ವಿಮಲಾಂ
ಬರದ ತಾರಾಗಣದ ಮಧ್ಯದ
ಹರಿಣಲಾಂಛನ[4]ನಂ[4]ತೆ ಹರಿನಾಯಕರ ಮಧ್ಯದಲಿ
ಹರುಷವಿರ್ದುದು ತತ್ಸಮಯದಲಿ
ತರುಣ ಕೇಳುತ್ತರದ ಭಾಗಾಂ
ತರದಲಿರ್ದುದು ರಿಪುವಧಾಚಿಂತಾಮನೋವ್ಯಸನ ೮

---

[1] ಮು (ಕ.ಚ). [2] ಲಾದಿಗಳ (ಗ.ಜ.ಡ). [3] ನೆಡೆಯಲಿ ನಿಲಿಸಿ (ಕ), ನೆಡವಂಕದಲಿ (ಗ.ಜ.ಡ). [4] ದಂ (ಕ.ಝ.ಟ.ಣ).

ಎಲೆ ಕಪೀಶ್ವರ ಕೇಳು ಸೀತಾ
ಲಲನೆಯನು ನಾವಗಲಿ ತಿಂಗಳು
ತಿಳಿಯಲೈದಡಗಿದವು ಸ್ವೈರಣಿ ಮಾನಭಂಗದಲಿ
ನಿಲುವುದನುಚಿತ[1]ವೆಂಬ[1] ಚಿತ್ತದ
ನೆಲೆಯ ನೀನೇ ನೋಡಿಕೋ ನಿ
ನ್ನೊಳಗೆ ಹೇಳುವ ಮಾತು ಮಗುಳೇನಿದ್ದುದೆಮಗೆಂದ ೯

ದೇವ ಚಿತ್ತೈಸೈಸಲೇ ನಿಜ
ಸೇವಕರು ನಾವಿರಲು ದೊಡ್ಡಿತ
ದಾವುದಬುಜಭವಾಂಡವೆ[2]ನ್ನ[2]ಯ ಕರತಳಾಮಳಕ
ದೇವಿಯುರನೊಯ್ದಸುರ[3]ನೀ[3] ಭುವ
ನಾವಳಿಯ ಹೊಱಗಿರಲಿ ಮೇಣೊಳ
ಗಾವಲೋಕದೊಳಿರಲಿ ತೋಱಿಸಿಕೊಡುವೆ ತಾನೆಂದ ೧೦

ಬೆಸಸು ಸಾಕೆಲೆ ಜೀಯ ರಿಪುರಾ
ಕ್ಷಸನು ರಂಜಿತರಾಜವೌಳಿಯ
ವಸತಿಯೊಳಗಡಗಿರಲಿ ಮೇಣ್ ವಾರಿರುಹವಿಷ್ಟರನ
ಬಸುಱಿನಲಿ ಹೊಕ್ಕಿರಲಿ ಮಿಕ್ಕಿನ
ನುಸಿಗಳನು ಹೇಳದಿರು ಹೇಳಿತ
ಹಸನೆನಲು ಮಾಡುವೆನು ಮಱೆಮಾತೇನು ತನಗೆಂದ ೧೧

ಕರೆದು ಪಡುವಲು ಕಲಿಸುಷೇಣನ
ಸರುಟವಿಸಿದನು ಶತಬಲಿಯನು
ತ್ತರಕೆ ಮೂಡಲು ವಿನತನನು ದಕ್ಷಿಣ[4]ದಿಶಾತಳಕೆ[4]
ವರವಿರಿಂಚಿಕುಮಾರ ಮಾರುತಿ
ಸುರಪಸುತಸುತಮುಖ್ಯ ಭಟರನು
ನಿರವಿಸಿದನಱಿದಱಿಸಿಬರಲು ವಿದೇಹನಂದನೆಯ ೧೨

ದೇವ ಚಿತ್ತೈಸಿದ್ದಡಿಹನಾ
ರಾವಣನು ಲಂಕೆಯಲಿ ಶಂಕೆಯ
ನೋವದತಿಬಲರಿವರು ಮಂತ್ರಜ್ಞರು ಮಹಾಭಟರು

---

1 ವೆಂದು (ಕ.ಟ), ವೆಮ್ಮ (ಚ). 2 ಮ್ಮ (ಕ.ಜ.ಝ.ಣ). 3 ನನು (ಗ.ಜ.ಝ.ಡ). 4 ದಿಶಾವರಕೆ (ಗ.ಜ.ಡ), ದಿಳಾತಳಕೆ (ಚ).

ಮೂವರಿವರಿವರೊಳಗೆ ಜಾಂಬವ
ದೇವನತಿಶಯನಾತನಿಂದೀ
ಪಾವಮಾನಿ ಸಮರ್ಥನೆಂದುಸುರಿದನು ಕರ್ಣದಲಿ ೧೩

ಬಳಿಕ ಕೊಂಡಾಡಿದನು ಹನುಮನ
ಬಲುಹ ಬಾಲ್ಯದಲಿನನಬಿಂಬಕೆ
ನಿಲುಕಿ ರಾಹುವನಟ್ಟಿ ವಜ್ರಿಯ ವಜ್ರಹತಿಯಿಂದ
ಕಳ[1]ಲಿ[1] ವಾಯುವಿನಿಂದ ಕಾಯುವ
ತಳೆದು ತ್ರೈಮೂರುತಿಗಳಿಂದು
ಜ್ವಲತೆವಡೆದ ವರಂಗಳನು ಪಡೆದಮಳಸಂಗತಿಯ ೧೪

ಈತನನು ಕೊಡಹೇಳಿ ಕೊಟ್ಟನು
ಸೀತೆಯರಸನು ಬರಲು ನೀನೆಂ
ದಾ ತಿಮಿರಹರ[2]ನಱುಹಿದನು ಬಳಿಕಿಂತು[2] ಬಹುಕಲೆಯ
ಆತ ಕೆಲಸದ ರಾಜಕಾರ್ಯ
ಕ್ಕೀತನಲ್ಲದೆ ಕಾಣೆನೆಂದಭಿ
ಜಾತಹರುಷಂಗಿತ್ತನಾ ಪವಮಾನನಂದನನ ೧೫

ಕೊಟ್ಟ ಹನುಮನನಸುರವಂಶಘ
ರಟ್ಟನುಱೆ ಪತಿಕರಿಸೆ ಪವನಜ
ನಿಟ್ಟೆಡೆಯ ಭಕ್ತಿಯಲಿ ಭಾಳವ ಚಾಚಿದನು ಪದಕೆ
ಅಟ್ಟುವಾಪತ್ತಿನ ಸಮುದ್ರಕೆ
ಕಟ್ಟೆ ನೀನೆಂದೊಲುಮೆಯಲಿ ಮನ
ಮುಟ್ಟಿ ನುಡಿದಿತ್ತನು ಮಹಾಮಾಂಗಲ್ಯಮುದ್ರಿಕೆಯ ೧೬

ಎಸೆದುದಾ ಮಣಿಖಚಿತಕಿರಣ
ಪ್ರಸರಮುದ್ರಿಕೆ ಪೂತ್ಕರಿಸಿ ಲಳಿ
ಮಸಗಿದಹಿಪನ ಪೆಡೆವಣಿಯವೊಲು ಕರದಲನಿಲಜನ
ಕುಸಿದ ಮೌಳಿಯ ಕರತಳ[3]ದ[3] ಸಂ
ಧಿಸಿದ ವದನದ ಭಕ್ತಿಭಯಮುಖ
ರಸದ ಹನುಮನ ಕರ್ಣದಲಿ ಕಾಕುತ್ಸ್ಥನಿಂತೆಂದ ೧೭

---

[1] ಚಿ (ಕ.ಗ.ಜ.ಝ.ಡ). [2] ನಱುದು ತಾನೀತನನು (ಕ), ನಱುದನಾತ ನಿಗಿತ್ತ (ಟ). [3] ದಿ (ಕ.ಡ), ವ (ಗ), ಕೆ (ಣ).

ಅಱುವೃದರಿನಗರದಲಿ ಸೀತೆಯು
ಕುಱುಹನುದಿತಪತಿವ್ರತಾಗುಣ
ಮೆಱೆದಿರಲು ಮ[1]ಗುಳೀ[1]ವುದೀ [2]ನಿಜರಾಜ[2] ಮುದ್ರಿಕೆಯು
ಕುಱುಹಗಳನಿವ ಹೇಳುವುದುಯೆಂ
ದಱುಹಿ ಕೆಲವನು ಬೀಳುಕೊಟ್ಟನು
ಮಱೆಯ ಮಾಯಾನರನು ನರರವೊಲಂಜನಾಸುತನ ೧೮

ಚರಣಕಾನತನಾಗಿ ರಘುಕುಲ
ದರಸನನು ಬೀಳ್ಕೊಡಲು ಹನುಮನ
ಕರೆದು ಕೈವರ್ತಿಸಿದನಂಗದ ಜಾಂಬವಾದಿಗಳ
ಬರವು ತಿಂಗಳಿಗಾಗದಿರೆ ನೀವ್
ಮರಣಕಧಿಕೃತರೆಂದು ನೇಮಿಸಿ
ಹರಿಪತಿಗಳನು ಕಳುಹಿದನು ಕಟ್ಟಾಜ್ಞೆಯಲಿ ರವಿಜ ೧೯

ತೆರಳಿದುದು ಕಪಿಸೇನೆ ಸಾಗರ
ಹೊರಳಿದೆಗೆ[3]ವಂ[3]ದದಲಿ ನಾಲ್ದೆಸೆ
ಗರಸ ತೊರವೆಯರಾಯ ನರಕೇಸರಿಗೆ ಸುಗ್ರೀವ
ಒರೆದನಿನ ತನಗಱುಹಿದಂದಿನ
ಧರೆಯ ವಿಸ್ತಾರವನು ಮೇರುವ
ತಿರುಗಿಬಂದಂದಕ್ಷಿಗತವಾದಖಿಳ ಭುವನಗಳ ೨೦

---

[1] ತ್ರೀ (ಗ.ಜ.ಟ.ಡ.ಣ). [2] ಮಣಿಖಚಿತ (ಕ.ಝ.ಟ.ಣ). [3] ದಂ (ಕ.ಜ.ಝ.ಣ).

# ಒಂಬತ್ತನೆಯ ಸಂಧಿ

ಸೂಚನೆ: ಮೂಱುದಿಕ್ಕಿನಲಮರವೈಭವ
ಸೂಱೆಕಾಱನನಱಿಸಿ ಕಾಣದೆ
ಬೇಱೆ ಬೇಱೈತಂದು ಬಿನ್ನೈಸಿದರು ರಘುಪತಿಗೆ ॥

ಕುಶನೆ ಕೇಳು ಸುಷೇಣಚರಿತವ
ನುಸುರುವೆನು ಮೊದಲಿಳೆಯ ಭಾರಕ
ರುಸುರು ತೆಗೆಬಗೆಯಾಗೆ ತೆರಳಿತು ಸೇನೆ ಪಶ್ಚಿಮಕೆ
ಕೆಸಱುದೋಱಿತು ಕಡಲು ಪಾಂಸು
ಪ್ರಸರದಲಿ ಪದಹತಿಗೆ ಗಿರಿ ಹುಡಿ
ಮಸಗಿದವು ಹರಹಿನಲಿ ಹೊಡೆಹುಲ್ಲಾಯ್ತು ವನಭೂಮಿ ೧

ಹರಿದು ಹರಿಬಲಧಾಳಿ ನಾನಾ
ಧರಣಿಪರ ದೇಶದಲಿ ಹೊಕ್ಕುದು
ಧರಣಿಜೆಯನೊಯ್ದವನ ಬೆಸಗೊಳುತರಸುತಲ್ಲಲ್ಲಿ
ಉರವಣಿಸಿದುದು ಮುಂದೆ ಬರ್ಬರ
ಮರು ಯವನ ಕಾಂಬೋಜ ಗುರ್ಜರ
ದುರುಳದುರ್ಜ[1]ನ ನೃಪರ[1] ಹಿಡಿದಾಕರಿಸಿ ಬೆಸಗೊಳುತ ೨

ಕ್ಷಿತಿಪರನು ಕರೆಕರೆದು ಗರ್ವೋ
ದ್ಧತಸುಷೇಣಕಪೀಂದ್ರ ಸೀತಾ
ಪತಿಯ ಹೆಸರಲಿ ಕೊಂಡನನಿಬರಲಾಣೆ [2]ಭಾರ[2]ಗಳ
ಕ್ಷಿತಿಸು[3]ತಾ[3]ತಸ್ಕರನ ದುರ್ಗತಿ
ಕೃತನ ದುರ್ನಯದುಸ್ಸಹನ ದು
ಸ್ಥಿತನನೊಳಕೊಂಡಿರದವೊಲು ಲಿಖಿತಾರ್ಥಸಾಧನವ ೩

[4]ವಾರಿಧಿ[4]ಯ ತಡಿವಿಡಿದು ನಡೆದುದು
ಭೂರಿಬಲ ಕೊಂಕಣದ ಕೋಹುಗ
ಳೋರಣದ ಕರವಿಳಿಯಲಾ ಹಿಮದವನಿಮಂಡಲವ
ಚೇರ[5]ಮಾನಿಯ[5] ಬರ್ಬರದ್ದ ದೂ
ಷಾರಿ ಜೋನಗ [6]ವಿಂಧ್ಯ ಬೋ[6]ಟಕ
ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬಳಿವಿಡಿದು ೪

---

[1] ಯ ನೃಪರ (ಗ.ಜ), ನರುಗಳ (ಝ.ಣ), ರ ನೃಪರ (ಡ). [2] ಬರಹ (ಕ), ಭಾಷೆ (ಜ). [3] ತೆಯ (ಚ.ಟ). [4] ಧಾರುಣಿ (ಕ.ಝ). [5] ಬೋಟಕ (ಚ). [6] ಮಿಶ್ರಬೋ (ಕ.ಝ.ಟ.ಣ), ವಿಂಧ್ಯಘೋ (ಚ).

ಅರಸುಗಳ ಹಿಡಿಹಿಡಿದು ಕೇಳುತ
ಹರಿಬಲದ ಹರಿಧಾಳಿ ಸುರಭೂ
ಧರವ ಬಲದಲಿ ಬಿಟ್ಟು ಹಾಯ್ದುದು ಪಶ್ಚಿಮೋತ್ತರದ
ಎರಡು ಮೈಗಳ ಮಹಿಯ ಚಕ್ರೇ
ಶ್ವರರ ಪುರಗಳ ಹೊಕ್ಕು ಹೊಱಪಡು
ತುರವಣಿಸಿದುದು ಮುಂದೆ ವಾಯವ್ಯದಲಿ ವಹಿಲದಲಿ ೫

[1]ಎನಿತೆನಿತು ದೇಶಾಧಿಪ[1]ರ ತೆ
ಜ್ಜನಪದಂಗಳಲಱಸಿದರು ಪುರ
[2]ವ[2]ನಶಿಲೋಚ್ಚಯ ಶಿಖರ ಕಟಕ ಗ್ರಾಮಸಂಕುಳವ
ಒನೆದೊನೆದು ನೋಡಿದರು ಮುಂದಣ
ವನಧಿ[3]ವಳಯದ ವೀಥಿ[3]ವೀಥಿಯ
ಜನಪರನು ಕೇಳಿದರು ಕೋಳಾಹಳದ ಕಡುಹಿನಲಿ ೬

ಕಾಣದಲ್ಲಿಂದಿಳಿದು ಪಡುವಣ
ಕೋಣೆವಿಡಿದುತ್ತರಿಸಿತಲ್ಲಿ ಸು
ಷೇಣಬಲ ಲವಣಾಂಬುಧಿಯನಂಭೋದಮಾರ್ಗದಲಿ
ಕಾಣಿಸಿದ ತದ್ದ್ವೀಪ ಸಿಂಧು
ಶ್ರೇಣಿಗಳ ಕೇಕಳಿದು ಕನಕ
ಕ್ಷೋಣಿಪರಿಯಂತಱಸಿ ಮುರಿದುದು ವರುಣಪುರಿಗಾಗಿ ೭

ವರುಣನನು ಬೆಸಗೊಂಡು ತತ್ಪುರ
ವರದೊಳಗಲಕೆ ಬೀದಿವರಿದು
ಪ್ಪರಿಸಿ ಲೋಕಾಲೋಕಪರ್ವತದಗ್ರಪರಿಯಂತ
ಸುರವಿರೋಧಿಯ ಕಾಣದಲ್ಲಿಂ
ದುರುತರದ ಪಸರದಲಿ ಪಾಳೆಯ
ತಿರುಗಿ[4]ಬಿಟ್ಟುದು[4] ಕಲಿಸುಷೇಣ ಕಪೀಂದ್ರನಾಜ್ಞೆಯಲಿ ೮

ತೆರಳಿತೀಚೆಯಲಪ್ರತಿಮ ವಾ
ನರವರೂಥಿನಿ ವಹಿಲದಿಂದು
ತ್ತರದಿಶಾಮಂಡಲಕೆ ಕಲಿಶತಬಲಿಯ ಸನ್ನೆಯಲಿ

---

[1] ವಿನುತದೇಶಾಧೀಶ್ವರ (ಗ.ಜ.ಝ.ಡ). [2] ಜ (ಗ.ಜ.ಡ). [3] ವೇಲೆಯ ವಿಷಯ (ಕ.ಟ.ಣ), ವಳಯದ ವಿವಿಧ (ಗ.ಜ). [4] ಬಂದನು (ಗ.ಜ), ಬಂದುದು (ಝ.ಟ).

ಹರಿಕಟಕದುರವಣೆಗೆ ಗಿರಿ ನೆಲ
ಸರಿಸವಾದುದು ನದಿನದಂಗಳ
ಹರಹು ನಿಂದವು ನೆಗ್ಗಿ ನೆಲಗತವಾಯ್ತು ವನನಿಚಯ ೯

ಆಕರಿಸಿ ಬೆಸಗೊಂಡು ಬಿಟ್ಟರ
ನೇಕ ನೃಪರನು ಬೇಹು ಹರಿದುದು
ನಾಕುಮ್ಮೆಯಲಿ ತುಬ್ಬುಕಾಱರಿಗಿತ್ತು ಬಹುಧನವ
[1]ನೂಕಿ ನಡೆದುದು[1] ಸಕಲವಿಷಯಾ
ನೀಕ[2]ಗಳ[2] ನೋಡುತ್ತ [3]ನಿಮ್ಮಿ[3]
ಕ್ಷ್ವಾಕುವಂಶದ ಭರತಭೂಮಿಯ ಹೊಕ್ಕರುರವಣಿಸಿ ೧೦

ಹರಿಕಟಕದುಬ್ಬರಕಯೋಧ್ಯಾ
ಪುರವು ತಲೆಕೆಳಗಾಯ್ತು ಹೊಕ್ಕುದು
ಪುರವನಾ ಬಲವೀ ನಗರದಧಿಪತಿಯದಾರೆನುತ
ಭರತನನು ಸಂಧಿಸಿತು ಶತಬಲಿ
ಕರೆಸಿಕೊಂಡು ಕಕುತ್ಸ್ಥಸಂಭವ
ನರಸಿಯನು ಕದ್ದೊಯ್ದ ಖಳನನು ಕಾಣಿರಲೆಯೆಂದ ೧೧

ಭರತನುಱೆ ಬೆಱಗಾಗಿ ಚಿಂತಾ
ಭರದಲಾ ಶತಬಲಿಯ ಗಮನದ
ಪರಿಯನಱಿದಾ ಕಪಿಪತಿಯ ಕಳುಹಿದನು ದುಗುಡದಲಿ
ಅರರೆ ರಾಜ್ಯ[4]ಭ್ರಷ್ಟ[4]ವಿಪಿನಾಂ
ತರ ಪರಿಭ್ರಮಣ ಪ್ರಯಾಸದ
ಹರಹಿಗಿದು ಹೊಱೆಯಾದುದೇ ಹಾಯೆಂದು ಚಿಂತಿಸಿದ ೧೨

ತಮ್ಮ ಬಾ ಶತ್ರುಘ್ನ ನಮ್ಮನು
ನೆಮ್ಮಿತಧಿಕ ವಿಪತ್ತು ಕೇಳಿದು
ಸುಮ್ಮನಿಹುದನುಚಿತವಲಾ ಮಾನಾಪಹಸ್ಥಿತಿಯ
ಒಮ್ಮುಖಪೊಳಾವ್ ಹಗೆಯ ಗೆಲುವುದೆ
[5]ಹ[5]ಮ್ಮ ನೆರಹು ಚತುರ್ಬಲವನಿ
ನ್ನುಮ್ಮಳಿಕೆಯೇ[6]ಕೆಂದು ರೋಷಾವೇಶಮನನಾದ[6] ೧೩

---

[1] ಔಕಿ ಸಬಲರ (ಕ.ಟ), ಔಕಿತೀಬಲ (ಣ). [2] ದಲಿ (ಕ.ಟ.ಣ), ವನು (ಗ.ಜ.ಝ.ಡ). [3] ಬಂದಿ (ಗ.ಜ.ಝ.ಡ). [4] ಭ್ರಂಶ (ಕ.ಗ.ಟ). [5] ನೆ (ಗ.ಜ.ಡ). [6] ಕೆನುತ ಬರಿಸಿದನಖಿಳಭೂಭುಜರ (ಕ), ಕೆನುತ ರೋಷಾವೇಶಮನನಾದ (ಜ.ಝ.ಟ.ಡ).

ಜನಕಕೈಕಯ ಮಗಧ[1]ಸುಮತಿಯು[1]
ಜನ[2]ಪ[2]ಮುಖ್ಯಸಮಸ್ತದೇಶದ
ಜನಪತಿಗಳೊಗ್ಗಾಯ್ತು ಕೂಡಿತು [3]ಮತ್ತೆ[3] ಚತುರಂಗ
ಅನುವರಪ್ರಸ್ಥಾನ ಭೇರಿಯ
ನಿನದ ನಿರ್ಜರ ಜಗವ ಬೆದಱಿಸ
ಲನಿತನಱಿದಲ್ಲಿಂದ ನಾರದನಿಳಿದನಭ್ರದಲಿ ೧೪

ಮರುಳಲಾಯೆಲೆ ಕಂದ ದಶಕಂ
ಧರನದಾರೆಂದಱಿಯಲಾ ಬಿಡು
ತರಳತನವನು ಬಾಯೆನುತ ಕೆಲಕಡೆಗೆ ಕೊಂಡೊಯ್ದು
ವರರಹಸ್ಯದಲಸುರಹರನವ
ತರಣವನು ವಸುಮತಿಯ ಭಾರೋ
ತ್ತರಣದಭಿಗತ[4]ಕಾ[4]ರಣವನಱುಹಿದನು ಕರ್ಣದಲಿ ೧೫

ಪಯಣ ನಿಂದುದು ಮೇಲೆ ಮುನಿ ಹಂ
ಸೆಯಲಿ ಹಾಯ್ದನು ನಭಕೆ ಶತಬಲಿ
ಭಯವ ಬೀಱುತ ಬೀದಿವರಿದನು ಬಹಳಬಲಸಹಿತ
ನಿಯತಮತಿ ಕುಶ ಕೇಳು ನರಭೂ
ಮಿಯನು ಕಳಿದು ಹಿಮಂತನನು ನಿ
ರ್ಜಯದೊಳೇಱಿಳಿ[5]ದೊತ್ತಿ[5] ಹಾಯ್ದುದು ಸೇನೆ ಶತಬಲಿಯ ೧೬

*ಭರತಖಂಡದ ಬಹಳ ಭಾರತ
ವರುಷ ಸೀಮೆಯ ದಾಂಟಿ ಮುಂದಣ
ಹರಿವರುಷ ಕಿಂಪುರುಷ ರಮ್ಯಕವರುಷ ವರ್ತನಿಯ
ಭರದಿ ನಡೆದುತ್ತರದಿಳಾವೃತ
ವರುಷ ಮಧ್ಯದ ಮೇರುಶೈಲದ
ಶಿರವನೇಱಿಳಿದೊತ್ತಬರಿಸಿತು ಸೇನೆ ಶತಬಲಿಯ ೧೭

ವರ ಹಿರ[6]ಣ್ಮಯ[6] ವರುಷವನು ಹೊ
ಕ್ಕರಸುಗಳ ಹಿಡಿಹಿಡಿದು ದಶಕಂ
ಧರನ ಕೇಳುತ ಕೇತುಮಾಲಾವರುಷ [7]ಸೀಮೆಯಲಿ[7]

---

[1] ಸುಮತೀ (ಕ), ಜಗತೀ (ಝ), ಸುದತಿಯ (ಟ). [2] ಕ (ಕ.ಚ.ಝ). [3] ಕೂಡೆ (ಕ.ಝ.ಟ.ಣ). [4] ವಿವ (ಗ.ಜ.ಡ). [5] ದಡಸಿ (ಕ.ಚ.ಝ.ಟ). * "ಝ, ಡ, ಣ" ಪ್ರತಿಗಳಲ್ಲಿ ೧೭ನೆಯ ಪದ್ಯವಿಲ್ಲ. [6] ಣ್ಯಕ (ಗ.ಜ.ಡ). [7] ಪರಿಯಂತ (ಕ.ಣ), ವಿಷಯದಲಿ (ಝ.ಟ).

ಹರಿದು ಭದ್ರಾಶ್ವದಲಿ ಕಾಣದೆ
ಕುರು ಮಹೀಮಂಡಲಕೆ ನಡದು
ತ್ತರಿಸಿ ಬಿಟ್ಟುದು ಬೀಡು ಲವಣಾಂಬುಧಿಯ ತೀರದಲಿ ೧೮

ಧುರಕೆ ಮೋಹಿದ ಭೂಮಿಪರ ಸಂ
ಹರಿಸುತಾ ಸಾಗರದ ತೀರದ
ಕರವಳಿಯ ಪಟ್ಟಣವ ಶೋಧಿಸುತಾ ಮಹೋದಧಿಯ
ಭರದಿ ನಡೆದುತ್ತರಿಸಿ ಮಿಕ್ಕಿನ
ಶರಧಿ ಶರಧಿಯ ದಾಂಟಿ ಮುರಿದು
ಪ್ಪರಿಸಿ ನಿಂದುದು ಸೇನೆ ಧನಪನ ರಾಜಧಾನಿಯಲಿ ೧೯

ಇದಿರುವಂದು ಕುಬೇರನಧಿಕಾ
ಸ್ಪದದ ಸೌರಂಭದಲಿ ಕೊಂಡೊ
ಯ್ದುದಿತ ಸಂತೋಷದಲಿ ಸತ್ಕರಿಸಿದನು ಶತಬಲಿಯ
ಮುದ[1]ದಿನವನೀ[1] ರಾಘವೇಂದ್ರನ
ಪದಕೆನುತ ನಾನಾ ಸುರತ್ನದ
ಹೊದಋುವಳಗಿನ ಹೊಂದೊಡವುಗಳ ಹೊಱಿಸಿ ಬೀಳ್ಕೊಟ್ಟ ೨೦

ತಿರುಗಿತಾ ಶತಬಲಿಯ ಬಲ ದಶ
ಶಿರನ ಕಾಣದೆ ಕಂಡಮೈಯಲಿ
ಧರಣಿಜಾಸುತ ಕೇಳು ಮೂಡಲು ವಿನತನಾಜ್ಞೆಯಲಿ
ಹರಿದುದಗ್ಗದ ಧಾಳಿ ಧಾ[2]ತ್ರೀ[2]
ಧರ[3]ಣಿಪರ ಬೆಸಗೊಂಡು[3] ಮುಂದಣಿ
ಗುರವಣಿಸಿದುದು ನಡುಗಲಿಂದ್ರಾದ್ಯಖಿಳ ದೇವಗಣ ೨೧

ಕಡುಮನದ ಕಪಿಬಲದ ಧಾಳಿಗೆ
ನಡುಗಿ ಕಂಡುದು ಪೂರ್ವದಿಕ್ಕಿನ
ಪೊಡವಿಪರು ಸಾವಂತ ಮನ್ನೆಯ ಮಂಡಲೇಶ್ವರರು
ಪೊಡವಿ ತಮ್ಮನಿತಱಲಿ ರಾವಣ
ನಡಗಿರದವೋಲಾಣೆ ಭಾರದ
ಕಡಿಯ ಕೊಟ್ಟರು ಬಳಿಕ ತಮ್ಮಯ ಧರ್ಮಸಾಕ್ಷಿಯಲಿ ೨೨

---

[1] ದಿನಿವನೀ (ಕ.ಝ), ದಿನವನಾ (ಚ), ದಲಿವನೀ (ಜ), ದಲವನಾ (ಣ).
[2] ಪ್ರಿಯ (ಗ.ಜ.ಝ.ಡ). [3] ರು ಧೈರಿಯಗುಂದೆ (ಕ.ಣ), ಣಿಪರ ಬೆಸೆಗೊಳುತ (ಗ), ರು ಧೈರ್ಯೋತ್ಕರರು (ಟ).

ಬಿಟ್ಟು ಹಾಯ್ದುದು ಸೇನೆ ಮುಂದಣ
ಗೊಟ್ಟು[1]ವಿಸೆ ಶರನಿಧಿಯ[1] ತೀರದ
ಪಟ್ಟಣವ ಪಡಿತಳಿಸಿ ಪಾರಾವಾರದೋರಣದ
ಬಟ್ಟೆವಿಡಿದೆಡಕಿಕ್ಕಿ ಮೇರುವಿ
ನಿಟ್ಟಣಿಯ ಜನಪದದ ರಾಯರ
ಕಟ್ಟಿ ಕೇಳುತ ಕಂಡ ಮೈಯಲಿ ಹರಿದುದಗಲದಲಿ ೨೩

ಬಳಿಕ ಕಿನ್ನರ ಯಕ್ಷ ಗುಹ್ಯಕ
ರಿಳೆಯ ರಾಕ್ಷಸ ಸಿದ್ಧರೂರ್ವೀ
ತಳದ ವಿದ್ಯಾಧರರ ಗಂಧರ್ವರ ಮಹೀತಳವ
ಬಳಸಿ ಮುಂದಣ ಕಿಂಪುರುಷ[2]ರ
ಗ್ಗಳದ[2] ಭೂಮಿಯ ಹೊಕ್ಕು ಸಾರ್ದರು
ವಿಲಸದಭಿನವದುತ್ತರದ ಕೈಲಾಸಪರ್ವತವ ೨೪

ಅದು ಬಳಿಕ[3]ಲ್ಯೆ[3]ವತ್ತುಸಾವಿರ
ದುದಯದುಪ್ಪರಶೈಲವದಱ
ಭ್ಯುದಯ ರಚನಾಡಂಬರವನೇನೆಂಬೆನಿದಿರಿನಲಿ
ಪುದಿದ ಪೂರ್ಣಶಶಿಪ್ರಭೆಯ ಕೆಲ
ಕೊದೆವ ಕೊಲ್ಲಣಿಗೆಗಳ ಹೊಳಹಿನ
ಹೊದಱಿನಲಿ ರಂಜಿಸಿತು ಕಪಿವಾಹಿನಿಯ ಕಣ್ಮನಕೆ ೨೫

ಗಿರಿಯನೋಲೈಸುತ್ತಲಿರ್ದುದು
ಹರನ ಕಾಣದೆ ಸಿದ್ಧ ವಿದ್ಯಾ
ಧರ ಮಹೋರಗ ಯಕ್ಷ ರಾಕ್ಷಸ ಗರುಡ ಗಂಧರ್ವ
ಸುರಮುನೀಶ್ವರರಮರಜನ ಕಿಂ
ಪುರುಷ ಕಿನ್ನರ ಮಾನವಾಪ್ಸರ
ರೆರಡು ಮೈಯಲಿ ಕೇಳಿದ್ಯೆ ಶತಕೋಟಿ ಸಂಖ್ಯೆಯಲಿ ೨೬

ಬಂದು ಬಂದೋಲೈಸಿ ಹೋಹ ಪು
ರಂದರಾದ್ಯರ ದಿವ್ಯಪುಷ್ಪಕ
ವೃಂದದನುಪಮಕಿರಣ[4]ಕದುಬಿತು ಕಪಿಭಟಾವಳಿಯ[4]

---

[1] ವಿಸೆ ಸುರನದಿಯ (ಕ.ಝ), ಯಿಸಿಶರನಿಧಿಯ (ಗ.ಜ.ಡ). [2] ರಿಹ ವಳೆಯ (ಗ.ಜ.ಡ). [3] ಲಱು (ಕ.ಝ.ಟ.ಣ). [4] ವುಬ್ಬಿತು ಕಪಿಭಟಾವಳಿಯ (ಕ), ಕಂಗೊಳಿಸಿತ್ತು ಕಪಿಭಟರ (ಗ.ಜ.ಝ.ಟ.ಡ).

ಮುಂದುವರಿವಕ್ಷಿಗಳನಿದಿರಲಿ
ಬಂದಿರನಲೆ ದಶಾಸ್ಯನೆಂದು ರಿ
ಪುಂದವರು ಹತ್ತಿದರು ಹರಪರ್ವತವ [1]ಸರಕಟಿಸಿ[1] ೨೭

ಗಿರಿಯಿದೀಶನದಿಲ್ಲಗಸುರೇ
ಶ್ವರನು ಬಹನೋಲಗಕೆ ಮಾತಿದು
ಹರದಿಹುದು ನಾವಿಲ್ಲಿ ನೋಡಲು [2]ಬಹುದಲೇಯೆ[2]ನುತ
ಹರಿವರೂಥಿನಿ ಹತ್ತಿದುದು ತ
ದ್ಗಿರಿಯನುಗ್ರ[3]ನಿದಾಘ[3]ದಲಿ ಸೀ
ವರಿಸಿ ಶಿಖಿ ಶಿಖರಿಯನು ಭೋರ್ಗರದಡಱುವಂದದಲಿ ೨೮

ಕಳಕಳಿಕೆ ಕೈಲಾಸಶಿಖರದ
ಹೊಳಲೊಳಗೆ ಹೊದಱಿದ್ದುದಲ್ಲಿಯು
ಗಲಭೆಕಾಱರು [4]ಕವಿಯೆ ಗೋಪುರವಂಕ[4]ವೀಥಿಯಲಿ
ಹೊಳಕುವೀ ಕಪಿನಾಯಕರ ಗಾ
ವಳಿಯ ಗುಮ್ಮಿದರಸ್ತ್ರಶಸ್ತ್ರಾ
ವಳಿಯುಲೊದಱುವ ಪಣ[5]ಹ ಪಟಹಾನಕದ[5] ರಭಸದಲಿ ೨೯

ಹತ್ತಿದುದು ಹೊಯ್ದಿಡುವ ಕೈದುಗ
ಳೊತ್ತಬರಕಳುಕದೆ ಫಣೀಂದ್ರನ
ನೆತ್ತಿ [6]ನೆಗ್ಗ[6]ಲು ನೆಗಹಿದದ್ರಿಮಹೀರುಹಂಗಳಲಿ
ಹತ್ತಲೀಸದೆ ಹರನ ಗಣ ತಲೆ
ಯೊತ್ತಿ ತವಕಿಸೆ ತರುಚರರು ನಭ
ಕೆತ್ತಿ ಹಾಯ್ಕುತ ಕೋಟೆಯಿಂದೊಳಬಿ[7]ದ್ದುದ[7]ಗಲದಲಿ ೩೦

---

[1] ಹುರಿಕೊಳಿಸಿ (ಗ.ಡ), ಹುರಿಗೊಳಿಸಿ (ಜ), ಹುರಿಕಟಿಸಿ (ಝ.ಟ.ಣ). [2] ಬೇಹಃದೆಂದೆ (ಕ.ಝ.ಟ.ಣ). [3] ವಿಹಾರ (ಗ.ಜ), ನಿಹಾರ (ಡ). [4] ನಡಃಗಿ ಗೋಪುರದಂಗ (ಗ), ನಡುಗಿದರು ಗೋಪುರದಂಕ (ಜ), ನಡುಗಿ ಗೋಪುರವಂಕ (ಝ.ಡ) [5] ವ ಪಟ್ಟುಮಾನಕದ (ಕ), ವ ಪಟಹಾನಕದ (ಗ.ಡ), ಹ ಪಟಹದ ವಾದ್ಯ (ಜ). [6] ಬಿರಿಯ (ಕ), ನೆಗಹ (ಚ). [7] ದ್ಬರ (ಕ.ಜ.ಝ.ಣ).

ತಱುಬಿ ಪಡಿ[1]ಬಲಿ[1]ಸುವ ಭಟಾಳಿಯು
ನುಱುಬಿ ಬೀದಿಯಲಾನುವಧಟರ
ಹಱುಬ ಹಸರಿಸಿ ಹೊಕ್ಕರೀಶನ ರಾಜಮಂದಿರವ
ಸೆಱಗ ಹಿಡಿದರು ತೋಱು ಸೀತೆಯ
ಸೆಱೆಯ ಹಿಡಿದವ ನಿನ್ನ [2]ಭಕ್ತ[2]ರೊ
ಳುಱುವವನು ಗಡ ತೋ[3]ಱಬೇಕೆನುತಾ[3] ಮಹೇಶ್ವರನ ೩೧

ತೋಱಿ ಕೊಡುವೆವು ಸ್ವೈರಣಿಗೆ ಕಾ
ಲೂಱಲಾಗ್ರಹವೆನುತ ಶ್ರುತಿಗಳು
ತೋಱಲಱಿಯದ ಪರಪರಾ[4]ತ್ಪ[4]ರವಸ್ತು ನಸುನಗುತ
ತೋಱಿದನು ಬಳಿಕುಮೆಗೆ ರಾಮನ
ದೂಱುಗ[5]ರು[5] ನೋಡಿವರನೆನೆ ಹೊರೆ
ಯೇಱಿ ಹೊಂಪುಳಿಯೋದಳುಮೆ ಮಹಿಮೆಗೆ ಮಧುದ್ವಿಷನ ೩೨

ಕೇಳಿದೈಯೆಲೆ ವಿನುತ ನಮ್ಮನು
ಕೇಳಲಿಕೆ ಕರ್ತವ್ಯವುಂಟದ
ಹೇಳಿದರೆ ನೀ ನಂಬಬಲ್ಲೈ ನಮ್ಮ ಮಾತುಗಳ
ಬಾಲರೀ ಗುಹಗಣಪರಾಣಿ ವಿ
ಶಾಲಬಲ ಹನುಮಂತ ಕಾಬನು
ಲೋಲನಯನೆಯನಿಂದಿನಿರುಳೆಂದವರ ಬೀಳ್ಕೊಟ್ಟ ೩೩

ತಪ್ಪದೇ ಸುರಲೋಕಕಾವಿ
ನ್ನಪ್ಪರಿಸಬೇಡವೆ ಕಕುತ್ಸ್ಥಜ
ನೊಪ್ಪದಿರ್ದಡೆ ತೊಡಕು ನಿಮಗಹುದೆಂದು ನಂಬುಗೆಯ
ಒಪ್ಪದಲಿ ಕೊಂಡಾ ಪುರಕೆ ಕೈ
ತಪ್ಪಮಾಡದೆ ತಿರುಗಿದನು ನಿ
ಮ್ಮಪ್ಪ ತೊರವೆಯರಾಯ ನರಹರಿಯೆಡೆಗೆ [6]ಕಲಿವಿನುತ[6] ೩೪

---

[1] ತಳಿ (ಕ.ಜ.ಟ.ಣ). [2] ಭೃತ್ಯ (ಗ.ಝ.ಣ). [3] ಱು ಬೇಗೆನುತಾ (ಗ), ಱಬೇಕೆಂದಾ (ಣ). [4] ಪ (ಕ.ಗ.ಝ.ಟ.ಣ). [5] ರ (ಗ.ಜ.ಝ.ಟ.ಡ). [6] ಕಪಿರಾಯ (ಕ.ಝ.ಟ), ಶತಬಲಿಯ (ಣ).

# ಹತ್ತನೆಯ ಸಂಧಿ

ಸೂಚನೆ: ವೀರಮಾರುತಿಮುಖ್ಯವಾನರ
ವೀರರಾಹವಧೀರರಬಲಾ
ಚೋರನನು ಜನಪದದಲಱಿಸಿದರಾ ಸ್ವಯಂಪ್ರಭೆಯ

ಕೇಳಿದೈ ಸುಕುಮಾರ ರಾಮನೃ
ಪಾಲನನು ಬೀಳ್ಕೊಂಡು ಬಲಿಮುಖ
ಪಾಳಯವು ಪಡಿತಳಿಸಿ ನಡೆದುದು [1]ತೆಂಕಮುಖವಾಗಿ[1]
ಧಾಳಿಕಾಱ[2]ರು[2] ದಳದು[3]ಳದ[3] ಭೂ
ಪಾಲಭೂಮಿಯ ಹೊಕ್ಕು ಗಂಗಾ
ಕೂಲ[4]ದಲಿ ಸಂಗಮದ ಸಾಗರ[4]ಕಾಗಿ ವಹಿಲದಲಿ ೧

ವಿಮಲಗಂಗಾಸಾಗರದ ಸಂ
ಗಮದ ಸೈವಳಿವಿಡಿದು ವಸುಧಾ
ರಮಣಿಯನು ಪಡಿತಳಿಸಿ ಪಂಚಮಹಾಸರಿತ್ತುಗಳ
ಸಮನಿಕೆಯ ಸೌರಾಷ್ಟ್ರ ಗುರ್ಜರ
ವಿಮಲಕಾಶ್ಮೀರಾಂಧ್ರ[5]ಗೌಳ[5]
ಪ್ರಮುಖದೇಶಂಗಳಲಿ ನೋಡುತ ತಿರುಗಿದುದು ಸೇನೆ ೨

ಉಱುಕುಗೊಂಡರಸುಗಳ ಗರ್ವವ
ಮುಱಿದು ಮಾರಾಂತವರ ಪುರಗಳ
[6]ವೊಱಪೆ[6]ಗಳ ಹಾಯ್ದೊತ್ತಬರಸಿತು ತಿರುಗಿ ಗೌಳವಕೆ
ಉಱುಬಿ ಘಟ್ಟಾವಳಿಯ ಪುರಗಳ
ಲಱಿಸಿ ಪಡುವಣ ಕಡಲ ನಡುವಣ
ಕುಱುವಗಳ ಕೈದೊಳಸಿ ತಿರುಗಿತು ಸೇನೆ [7]ಕೊಂಕಣಕೆ[7] ೩

---

[1] ಪಶ್ಚಿಮೋತ್ತರದ (ಕ.ಝ.ಟ.ಣ). [2] ರ (ಕ.ಝ.ಟ.ಣ). [3] ಳಿಸಿ (ಗ.ಚ). [4] ಪತಿಯ ಸಮುದ್ರಸಂಗಮ (ಕ), ದಲಿ ಸಾಗರದ ಸಂಗಮ (ಗ.ಣ). [5] ಸಿಂಧು (ಕ.ಝ.ಟ.ಣ). [6] ತರಪೆ (ಗ.ಟ), ವೊರಟೆ (ಚ). [7] ಕುಂತಳಕೆ (ಕ.ಝ.ಟ.ಣ).

ಮಣಿಯುದವನೀಪಾಲಕರ ಪ
ಟ್ಟಣವ ಸೂಱೆಯ ಕೊಳುತ ಕಲಿಸೇ
ವಣ ಸುಶರ್ವಾದಿಗಳ ಹಿಡಿದಾಕರಿಸಿ ಬೆಸಗೊಳುತ
ಪ್ರಣುತರನು ತಲೆಗಾಯ್ದು ಬಿಡುತಿ
ಟ್ಟಣಿಸಿ ಕಾವೇರಿಯ ತಟಾಕದ
ಕಣಿಯವಿಡಿದೈತಂದು ಹೊಕ್ಕರು ಪಾಂಡ್ಯಮಂಡಲವ ೪

ಹಿಡಿದು ಪಾಂಡ್ಯ[1]ನ ಚೋಳ[1] ಕೇರಳ
ಪೊಡವಿಪರ ಬೆಸಗೊಂಡು ಮೂಡಣ
ಕಡಲ ಕರವಳಿಗಳನು ಶೋಧಿಸಿ[2] ಘಟ್ಟಬೆಟ್ಟಗಳ
ಗಡಿಯ ಮನ್ನೆಯರುಗಳ [3]ಘಾತಿಸಿ[3]
ತಡಿಯ ಸಿಂಗಣ ತಾಮ್ರಪರ್ಣಿಯ
ಹುಡುಕಿ ಹೊಳೆಸಾಲಿನಲಿ ತಿರುಗಿತು ಬಲವು ಬಲಿಮುಖರ ೫

ಹೊಕ್ಕು ಸಿಂಹಾದ್ರಿಯನು ನಾಲುಕು
ದಿಕ್ಕಿನೆಡೆ ಮನ್ನೆಯರ ವಸುಧೆಗ
ಳಿಕ್ಕೆಗಳ ಶೋಧಿಸುತ ನಡದುದು ಮುಂದೆ ಮರುವನಕೆ
[4]ಹಕ್ಕಲಿನ ತರು[4]ಗುಲ್ಮಲತೆಗಳ
ಸಿಕ್ಕುಗಳ ಮಧ್ಯದಲಿ ಧರಣಿಯ
ಹೊಕ್ಕುಳಿನವೊಲು ಹೊಳಕಿದುದು ಮಾಯಾಮಹಾಸರಸಿ ೬

ವಸುಮತಿಯ ವಿವರಣದ ಮಧ್ಯದ
ವಿಷಯ[5]ದಧ್ವವಿ[5]ದೀಗ ಮಯನಿ
ರ್ಮಿಸಿದ ಮಾಯಾಸರಸಿಯನು ಕುಶ ಕೇಳು ಕೌತುಕವ
ಬಿಸಜಗಂಧೋದ್ಧೂತಸೀಕರ
ವಿಸರವಿಹರಣ ಲಘುಸಮೀರಣ
ನೆಸಗಿದುದು ತಡೆತಡೆದು ತತ್ಸರಸೀತಟಾಗ್ರದಲಿ ೭

ಆಯೆನುತ ಕಪಿಕಟಕವಾ ಲಘು
ವಾಯುವಿನ ವೈಹಾಳಿಯಲಿ ಪಾ
ನೀಯವೆಂದೇ ಬಗೆದು ಹೊಕ್ಕುದು ಕಾತರಿಸಿ ಕೊಳನ

---

[1] ರ ಚೇರ (ಟ), ರ ಕೇರ (ಡ). [2] ಗೊಂಡು ನೋಡುತ (ಗ.ಜ.ಡ), [3] ಖಾತಿಗೆ (ಕ), ಝಾಡಿಸಿ (ಗ.ಜ), ಭಾರಿಯ (ಟ.ಣ), ಘಾಡಿಸಿ (ಡ). [4] ಹೊಕ್ಕರಿವರಾ (ಗ), ಇಕ್ಕಲದ ತರು (ಟ), ಹೊಕ್ಕರಿಗತರು (ಡ). [5] ದರ್ಘವಿ (ಕ.ಜ), ದಧ್ವವ (ಗ.ಝ.ಣ), ವೀಥಿಯ (ಟ).

ಮಾಯೆಯಲಿ ಜಲ ತೋಱುತಡಗುತ
ವಾಯುಜಾದ್ಯರನಿಳುಹಿದುದು ಕುಹ
ರಾಯುಮಾನಿತಮಯವಿನಿರ್ಮಿತ ಮಹಿಗೆ ವಹಿಲದಲಿ ೮

ಬೆದಱಿ[1]ದವುಯೆ[1]ಣೆವಕ್ಕಿ ಕೊಂಚೆಗ
ಳೊದಱಿ ಹಾಯ್ದವು ಹಂಸೆ ತುಂಡದ
ತುದಿಯ ತಾವರೆಗಚ್ಚಿನಲಿ ಬೆಚ್ಚಿದವು ದೆಸೆದೆಸೆಗೆ
ಗದಬದಿಸಿ ಕಾರಂಡ ಬಕ ಚೀ
ಱಿದವು [2]ನಲಿವ[2] ಸರೋವರದ ಸಲಿ
ಲದ ಸಮೀಪದಲಬ್ಬ[3]ಱಿಪ[3] ಕಪಿಬಲದ ಕಳಕಳಕೆ ೯

ಡಗೆ ವಿತಾಳಿಸಿ ಖರಮರೀಚಿಯ
ತಗಡುವಿಸಿಲಿನ ತೊಱೆಗೆ ಹರಿಣಾ
ಳಿಗಳು ಹರಿವಂದದಲಿ ಹರಿಬಲ ಹೊಕ್ಕುದಿನಸುತನ
ಮಗಳ ಮಂಜುಳಪುಂಜರಂಜಿತ
ಜಗತಿಯನು ಬಳಿಕಲ್ಲಿ ಕಂಡುದು
ನಗರ ಖರ್ವಡ ಖೇಡ [4]ದ್ರೋಣ[4] ಗ್ರಾಮಸಂಕುಳವ ೧೦

ಅದು ಕಣಾ ಮಯನಿರ್ಮಿತದ ಜನ
ಪದವು ತಜ್ಜನಪದ ಪತಿತ್ವವು
ಸುದತಿಗಾಗಿಹುದಾ ಸ್ವಯಂಪ್ರಭೆಯೆಂಬ ನಾಮಕದ
ಆದು ಸುರೇಶ್ವರ ಜನಪದದ ಸಂ
ಪದವನಾಂತಿಹುದಾ ಮಹಾಜನ
ಪದದೊಳಗೆ ನೋಡಿದರು ಜನ[5]ಕಾತ್ಮಜೆಯ ತಾವಂದು[5] ೧೧

ಅಯನವಿಲ್ಲಾ ರಾಷ್ಟ್ರಕಬುಜ
ಪ್ರಿಯನ ದಿವರಾತ್ರಿಗಳ ಪರಿಸಂ
ಚಯದ ಸಂಚರವಿಲ್ಲ ಪ್ರಭೆಯಹುದಾ ಸ್ವಯಂಪ್ರಭೆಯ
ನಿಯತರುಚಿಯಲಿ ತೀರಿದವು ದಿನ
ಪಯಣ ಪರಿಯಟಣದಲಿ ಪರಮೇ
ಷ್ಠಿಯ ಪುರಂದರಸುತನ ಪಾವಕಸಖನ ನಂದನನ ೧೨

---

[1] ತಾಗೆ (ಗ.ಜ.ಝ.ಡ.ಣ). [2] ಸಂದೆ (ಗ.ಜ), ಸರಿವ (ಡ). [3] ಱಿದ (ಕ.ಣ), ಱಿಸಿ (ಗ.ಝ). [4] ಬಾಡ (ಕ), ಪಿಪಿನ (ಝ), ಲಾಡ (ಟ.ಣ). [5] ಕಸುತಾಪಹಾರಕನ (ಕ.ಝ), ಕಾತ್ಮಜೆಯನಂದಿವರು (ಗ), ಕಾತ್ಮಜೆಯ ವಹಿಲದಲಿ (ಣ).

ನೋಡನೋಡಲು ದೇಶವದು ಕಪಿ
ಬೀಡು ಬಿಡೆ ಹೊಸತಾಗಿಹುದು ನೆಱೆ
ನೋಡನೋಡಲು ನದಿನದಾದ್ರಿನಿಕುಂಜವಲ್ಲಲ್ಲಿ
ಕೂಡೆ ಪಲ್ಲಟವಾಗಿಹುದು ಮಱೆ
ಮಾಡಿ ತಿರುಗಿಸಿತಿವರನಿವರೆಡೆ
ಯಾಡಿ[1]ಕೆಯುಲೇ ಸರಿದವಿ[1]ಪ್ಪತ್ತೇಳುದಿನವೆಂದ ೧೩

ನಗರವಿರ್ದವನಂತ ಶಾಖಾ
ನಗರವಿರ್ದವನಂತ ಸೊಗಯಿಸು
ವಗರು ಚಂದನ ಚೂತನಂದನವಿರ್ದವಪರಿಮಿತ
ಮಘುಮಘಿಪ ಫಲಶಾಲಿ ಧವಳೇ
ಕ್ಷುಗ[2]ಳ ತ[2]ಳಿತ ಸರೋಜ ಕಲ್ಹಾ
ರಗಳ ಸರಸಿಗಳಿರ್ದವಗಣಿತವಾ ಧರಿತ್ರಿಯಲಿ ೧೪

ಸುತ್ತಿ ನೋಡಿದರನಿತಱಲಿ ಸುರ
ಮತ್ತಗಜಪಂಚಾನನನ ಗಿರಿ
ಯೊತ್ತುಗಳ [3]ಪಕ್ಕಣಗಳಲಿ[3] ತುಱುಗಾಱಪಳ್ಳಿಯಲಿ
ಕುತ್ತುರಲಿ ಕುಹರದಲಿ ಕೊ[4]ಳ್ಳಗ
ಳ[4]ತ್ತಡಿಗಳಲಿ ಹೇರಡವಿಗಳ
ಮೊತ್ತದಲಿ ಮೈಮಱೆಯುದಱಸಿದರಾ [5]ನಿಶಾಚರನ[5] ೧೫

ಬಳಿಕ ಕಂಡರದೊಂದು ಶೋಭಾ
ಕಲಿತ ಕಮನೀಯಪ್ರಭಾವರಿ
ಲುಳಿತ ವಿಶ್ರುತದಾ ಸ್ವಯಂಜ್ಯೋತಿಯ ಮಹಾಪುರವ
ಹೊಳಲದಮರಾವತಿಗೆ [6]ತೊಲೆ[6]ವೆ
ಗ್ಗಳವೆನಲು ರಂಜಿಸಿತು ಕೋಟಾ
ವಳಯ ಕೊತ್ತಳದಾಳುವೇರಿಯ ವಿವಿಧರಚನೆಯಲಿ ೧೬

ಹೊಕ್ಕರೊಳಬಿದ್ದೊಂದು ನಿಮಿಷದೊ
ಳೆಕ್ಕತುಳದಲಿ ದುರ್ಗ[7]ವನು[7] ಕೈ
ಸಿಕ್ಕಿದವರನು ಹಿಡಿಹಿಡಿದು ಕೇಳಿದರು ರಾವಣನ

---

[1] ಕಾಣದೆ ತೀರಿತಿ (ಕ.ಣ), ಕೆಯುಲೇ ಸವದವಿ (ಗ). [2] ಳು ತ (ಕ), ಳು ದ (ಚ. ಟ). [3] ಪಟ್ಟಣಗಳಲಿ (ಕ), ಪುಷ್ಕರಣಿಯಲಿ (ಝ). [4] ಳಗಳಲಿ (ಗ.ಜ.ಝ.ಟ.ಡ). [5] ದಶಾನನನ (ಕ), ಮಹೀಸುತೆಯ (ಟ). [6] ಮಿಗೆ (ಕ), ಸಲೆ (ಝ), ಪುರ (ಣ). [7] ದಲ (ಗ.ಜ.ಡ).

ಮರ್ಕಟರ ದಳದುಳದ ದೂಱಿನ
ದಕ್ಕಡೆಯುತನ ಬಿದ್ದುದೈ ಕ
ರ್ಣಕ್ಕೆ ಕಮಲಪ್ರಿಯನಸುತ ಸಾವರ್ಣಿನಂದನೆಯ ೧೭

ಕರೆಸಿಕೊಂಡಳು ಬಳಿಕ ಕಲಿಕಪಿ
ವರ[1]ರ[1]ನದಱೊಳು ಜಾಂಬವಂತನ
ಹಿರಿಯನೆಂದಱುದುಪಚರಿಸಿ ಬೆಸಗೊಂಡಳುಚಿತದಲಿ
ಬರವು ನಿಮಗಾರಿಂದಲೀ ಪುರ
ವರಕೆ ಘಟಿಸಿತು ನೀವದಾರೆಂ
ದುರುತಪಸ್ವಿನಿ ಕೇಳಿದಳು ಕೈಮುಗಿದು ವಿನಯದಲಿ ೧೮

ಹೇಳಬೇಕೇ ನಿ[2]ಮ[2]ಗೆ ರಘುನೃಪ
ನಾಳುಗಳು ನಾವ್ ಕೇಳಿದೆವು ನ
ಮ್ಮಾಳುದನ ವಲ್ಲಭೆಯ ರಾವಣನೆಂಬ ರಕ್ಕಸನು
ಕೌಳಿಕದ ಯತಿಯಾಗಿ ರಘುಭೂ
ಪಾಲನಿಲ್ಲದ ಹಿಂದೆ ಸಂಧ್ಯಾ
ಕಾಲದಲಿ [3]ಕದ್ದೊಯ್ದನಾರಣ್ಯಪ್ರದೇಶದಲಿ[3] ೧೯

ಅವನನಱಸಲು ಬೀಳುಕೊಟ್ಟನು
ರವಿತನೂಭವನಾ ಧರಿತ್ರೀ
ಧವನನುಜ್ಞೆಯಲೆಮ್ಮನಿತ್ತಲು ಬರವು ನಮಗಾಯ್ತು
ಅವನಿಪರ ಪಟ್ಟಣಗಳಲಿ ನಾ
ವವನನಱಸಿದು ಕಾಣದಿಲ್ಲಿಗೆ
ಪವನಜಾದ್ಯರ ಗಡಣದಲಿ ಗಮಿಸಿದೆವು ನಾವೆಂದ ೨೦

ಈತನೀಗನಿಲಜನು ವಹ್ನಿಜ
ನೀತನೀತನು ಸುರಪಸುತಸುತ
ನೀತ [4]ನಳನೀತನು ಸುಷೇಣಕ ಗಜಗವಾಕ್ಷಕರು[4]
ಈತಗಳ ಬಲವದೆ ಸಮುದ್ರದ
ರೀತಿಯಲಿ ನಗರೋಪಕಂಠದ
ಲಾತ ಕೆಲಸವಿದೀಗ ಬಲ್ಲರೆ ಹೇಳಿ ನೀವೆಂದ ೨೧

---

[1] ನ (ಕ.ಝ.ಟ.ಣ). [2] ನ (ಗ.ಝ.ಡ.ಣ). [3] ಕೊಂಡೊಯ್ದನಾರಣ್ಯಪ್ರದೇಶದಲಿ (ಕ.ಝ.ಣ), ಕದ್ದೊಯ್ದನಟವಿಯಲೊಂದುದಿನವೆಂದ (ಗ), ಕದ್ದೊಯ್ದನಟವಿಯಲಾ ದಶಗ್ರೀವ (ಜ.ಡ). [4] ನಳನೀತನು ಸುಷೇಣರು ಗಂಧಮಾದನರು (ಕ), ನೀತನು ನಳರುಮಣ್ಬಕ ಗಜ ಗವಾಕ್ಷಕರು (ಗ).

ಮನದೊಳಮಲಜ್ಞಾನಮುಖದಿಂ
ದಿನಕು[1]ಲೋದ್ಭವ[1] ವಿಷ್ಣುವೆಂಬುದ
ನನು[2]ವರಿ[2]ಸಿ ಬೆಱಗಾದಳಾ ಮಾಯಾಮಧುದ್ವಿಷನ
ವಿನುತಚರಿತ[3]ಕೆ ಬಳಿಕ[3] ಚತುರಾ
ಸ್ಯನ ಕುಮಾರಂಗೆಂದಳೆಮ್ಮಾ
ಜನಪದದೊಳವನಿಲ್ಲ ನಾವ್ ಕಂಡಱಿಯೆವಾ ಖಳನ ೨೨

ಇದ್ದಡಿಹನವ ಲಂಕೆಯೊಳಗವ
ನಿದ್ದ ಠಾವಿಗೆ ಹೋಹುದಲ್ಲಿಯೆ
ತಿದ್ದಿಕೊಂಬನು ನಿಮ್ಮ ಕಾರ್ಯದ [4]ಕೊಂಕು ಕೊಱತೆ[4]ಗಳ
ಇದ್ದ ಹವನಿದು ನಮ್ಮ ಪುರದೊಳ
ಗಿದ್ದನಾದಡೆ ಕಮಲನಾಭ ಕ
ಪರ್ದಿಗಳ ಮೇಲಾಣೆಯೆಂದಳು ಜಾಂಬವಂತಂಗೆ ೨೩

ಐಸೆ ಮತ್ತೇನೆಂದು ತಿರುಗಿದ
ರಾ ಸಕಲಬಲಸಹಿತಲಾ ಮಾ
ಯಾಸುರದ ಮಯರಚಿತರಾಷ್ಟ್ರದ ರಾಜಮಾರ್ಗದಲಿ
ಘಾಸಿಯಾದರು ಬಂದ ಬಟ್ಟೆಯ
ವೈಸಿರಿಯ ಪಥವಱಿಯದಗ್ಗದ
ಬೇಸರಿಕೆಯಲಿ ಮತ್ತೆ ಬಂದರು ಕಂಡರಾ ಸತಿಯ ೨೪

ದಾರಿದಪ್ಪಿದೆವಱಿಸಿ ರಾಜ
ದ್ವಾರವನು [5]ಹೇಳೌ[5] ಸ್ವಯಂಪ್ರಭೆ
ಧಾರುಣೀಶನ ಹಗೆಯ ನಗರಕೆ ಹೋಗಬೇಕೆಂದು
ವಾರಿಜಪ್ರಿಯಸುತನ ನೇಮ ಕ
ಠೋರತರವದಱಿಂದ ನಮಗುಪ
ಕಾರವಿದು ಹೊಲಬಿಗರ ಕೊಡಬೇಕೆಂದನಜಸೂನು ೨೫

ಹೆಂಗುಸುಗಳಾವ್ ಬಲ್ಲೆವೇ ಪುರು
ಷಾಂಗ ನಿಮ್ಮದು ಪೌರುಷಾಂಗದ
ತುಂಗಬಲರಿದೆ ನಿಮ್ಮ ಬಳಿಯಲಿ ಲಕ್ಕಸಂಖ್ಯೆಯಲಿ

---

[1] ಲೇಂದ್ರನು (ಚ). [2] ವದಿ (ಕ.ಟ), ಕರಿ (ಚ.ಣ). [3] ಕೆ ವೇಚ್ಚಿ (ಕ.ಜ), ವ ಕೇಳಿ (ಗ). [4] ಕುಂದುಕೊಱತೆ (ಕ), ಕೊಂಕುಕೊಸರು (ಚ.ಡ). [5] ಕೇಳೌ (ಕ.ಝ.ಣ), ಹೇಳಾ (ಚ), ಹೊಕ್ಕಾ (ಜ).

ಅಂಗವಿಸುವುದು ಬಂದ ಬಟ್ಟೆಯ
ಸಂಗದಲಿ ನೀವೆನಲು ಕೇಳ್ದು ಪ
ತಂಗಬಿಂಬಭಯಂಕರನು ಭಾಮಿನಿಯೊಳಿಂತೆಂದ ೨೬

ಪುರುಷರಹುದಾವ್ ಪೌರುಷಾಂಗದ
ನಿರತಿಶಯವನು ನೋಡು ನೀ[1]ನೆನು
ತು[1]ರುಪರಾಕ್ರಮಿ ಹೆಚ್ಚಿದನು ಹೇರಾಳರೋಷದಲಿ
ಉರಿಯೊಳಬುಜಭವಾಂಡಭವನವ
[2]ನಿರಿಸಲುಬ್ಬಿಱಿದೆದ್ದು[2] ರುದ್ರನ
ಪರಿಗೆ ನೂರ್ಮಡಿಯೆನಲು ನಿಗುರಿದನಂಜನಾಸೂನು ೨೭

ಝಡಿದು ಮುಷ್ಟಿಯಲವನಿಕುಹರವ
ನೊಡೆಯಲುದ್ಯೋಗಿಸಲು ಮನದಲಿ
ನಡುಗಿ ನಿಂದಿರ್ದಾ ಸ್ವಯಂಪ್ರಭೆ ಮಾರುತಿಯ ಕರವ
ಹಿಡಿದು ನಯದಲಿ ಬೇಡಿಕೊಂಡಳು
ಕೆಡಿಸಬೇಡೆಲೆ ತಂದೆ ನಮ್ಮಾ
ಯೆಡೆಯನೆಂದುದರದಲಿ ತಲೆಯಿಕ್ಕಿದಳು ತರಳಾಕ್ಷಿ ೨೮

ಪಥವ ತೋಱಾದಡೆ ಮನುಷ್ಯರ
ಪೃಥುವಿಗೆನೆ ನಡನಡುಗಿ ಗಗನದ
[3]ರಥಿಗೆ ಲಂಘಿಸಿದ[3]ಧಟಗೆಂದಳು ಮಧುರವಚನದಲಿ
ಪೃಥುಳವಿಕ್ರಮ ಕೇಳು ರಣನಿ
ಶ್ಶಿಥಿಲನಿರುಪಮವೀರ ಕೇಳ್ ಸು
ಪ್ರಥಿತಸಾಹಸಮಲ್ಲ ಕೇಳಿನ್ನೊಂದು ವಿಸ್ಮಯವ ೨೯

ಮುಚ್ಚಿಕೊಳಲಕ್ಷಿಗಳ ನಿನ್ನ ಸ
ಮುಚ್ಚಯದ ಸುಭಟಾಳಿ ನೀ ಸಹಿ
ತಚ್ಚರಿಯ ತೋಱುವೆನು ನಿಮಗೆನಲಾ ಕ್ಷಣಾರ್ಧದಲಿ
ಮುಚ್ಚಿದರು ಕಂಗಳನು ಕೈಗಳ
ಮುಚ್ಚುಳಲಿ ನೆಗಹಿದಳು ರಾಮನ
[4]ನ[4]ಚ್ಚಿನಾಳ್ಗಳ್[5]ನಿಳೆಗದೇನು[5] ಸಮರ್ಥೆಯೋ ಜಗಕೆ ೩೦

---

[1] ನೆಂದು (ಗ.ಜ.ಡ). [2] ನುರಿಸಲುದ್ಯೋಗಿಸಿದ (ಗ), ನಿರಿಸಲುಬ್ಬಿಱಿದೇಳ್ವ (ಚ). [3] ಪಥಕೆ ಲಂಘಿಸುವ (ಚ), ಗತಿಗೆ ಲಂಘಿಸಿದ (ಝ.ಣ), ರಥಕೆ ಲಂಘಿಸಿದ (ಡ). [4] ಮ (ಕ.ಟ.ಣ). [5] ನೀಗಳೇನು (ಗ), ನಿಳೆಯೊಳೇನು (ಚ).

ಕಂದೆಱೆದು ನೋಡಿದರು ಬಳಿಕವ
ರಂದು ವಿಸ್ಮಿತರಾಗಿ ಸೂರ್ಯನ
ನಂದನನ ನಂದನೆಯ ಮಹಿಮೆಗೆ ಜಾಂಬವಾದಿಗಳು
ಇಂದಿರೇಶನ ಕಾರ್ಯಕೊದಗುವು
ದೆಂದಿವರನುಱೆ ಹರಸಿ ಕಂಭದ
ನಂದನನ ನೆನವುತ್ತ ಕಾಣಿಸ[1]ದಾದ[1]ಳಾ ಕಾಂತೆ ೩೧

---

[1] ದಿರ್ದ (ಕ.ಝು.ಟ.ಣ).

# ಹನ್ನೊಂದನೆಯ ಸಂಧಿ

ಸೂಚನೆ: ಕಂಡು ಸಂಪಾತಿಯನು ಮುನಿಪಮೃ
ಕಂಡುವನು ದರುಶನವ ಮಾಡಿಯು
ಖಂಡಬಲರೈದಿದರು ಘನಗಂಭೀರವಾರಿಧಿಯ

ಎಲೆ ಕುಮಾರಕ ಕೇಳು ವಾನರ
ಬಲಮಹಾಂಬುಧಿ ಕಾ[1]ದ[1] ಕಡಲಿನ
ಕಳಕಳದ ಕಾಹುರದವೊಲು ದಕ್ಷಿಣದ ದೆಸೆಗಾಗಿ
ನಿಲುಕಿ[2]ದುದು ನಿರ್ಮಳನಿತಾಂ[2]ತ
ಸ್ಥಳದ ನಿರುಪಮ ಮುನಿಮೃಕಂಡುವಿ
ನೆಲೆವನೆಗೆ ನಡೆತಂದು ಕಂಡರು ತನ್ಮುನೀಶ್ವರನ ೧

ಅಱಿದನಿವರುತ್ತಾಳಗಮನದ
[3]ತೆಱನ[3]ನಾ ಮುನಿ ವಿಷ್ಣುವಿನ ವೈ
ಮಱೆಯ ಮಾ[4]ಯಾ[4]ನಾಟಕದ ಭೂಭಾರ ಭಂಜನೆಯ
ನಿಱುಗೆಯನು ಸತ್ಕರಿಸಿದನು ತನ
ಗೆಱಗಿದಜಸುತ ಹನುಮ ಮೊದಲಾ
ದುಱುವ ಕಪಿನಾಯಕರನತಿಕಾರುಣ್ಯಭಾವದಲಿ ೨

ಹೇಳಿದರು ಬಳಿಕಿವರು ರಾಮನೃ
ಪಾಲಸಖ ಸುಗ್ರೀವ ನೇಮಿಸಿ
ದೂಳಿಗದ ಸಂಗತಿಯನಾ ಮುನಿಸಾರ್ವಭೌಮಂಗೆ
ಕೇಳಿ ಮಾರ್ಕಂಡೇಯಚರಿತವ
ಹೇಳಿದನು ಬಳಿಕಿವರಿಗಿವರನು
ಬೀಳುಕೊಟ್ಟನು ಹೊರಿಸಿ ರಸಪೂರಿತ ಫಲಾವಳಿಯ ೩

---

[1] ರ (ಗ.ಡ.ಣ), ರು (ಚ). [2] ದರು ನಿರ್ಮಾನಿಸಾಂ (ಚ). [3] ನಿಱಿಸ (ಗ.ಝ.ಡ). [4] ನವ (ಕ.ಝ.ಟ.ಣ).

ಬಳಿಕಲಿವರಾ ಮುನಿಯ ವಿಪಿನ
ಸ್ಥಳವ ಕಳಿದೈದಿದರು ಘನಮಂ
ಜುಳಮಹೀಜಾವಳಿಯ ಕುಸುಮೋತ್ಕರಲತಾವಳಿಯ
ವಿಲಸದಭಿರಂಜನೆಯ ರಾಜಿತ
ನಿಳಯವನು ಬಳಿಕಲ್ಲಿ ಕಂಡರು
ನಳಿನನಯನಾ[1]ರ್ಚಿತ[1]ನ ಕಣ್ವಮಹಾಮುನೀಶ್ವರನ ೪

ಈತಗಳು ನಡೆತಂದ ಕಾರ್ಯದ
ದಾತ ಶಮೆದಮೆಯುಳ್ಳ ಮುನಿ ಸು
ಜ್ಞಾತಮುಖದಿಂದಱಿದು ಮನ್ನಿಸಿದನು ನಯೋಕ್ತಿಯಲಿ
ಭೂತಳೇಂದ್ರನ ರಾಮಚಂದ್ರನ
ರಾತಿಕಳವಿನಲೊಯ್ದ ಧರಣೀ
ಜಾತೆಯನು ನೀವ್ ಕಾಬಿರೆಂದವರುಗಳ ಬೀಳ್ಕೊಟ್ಟ ೫

ಬಂದರಿವರು ಸಮಗ್ರ ಸೌರಭ
ದಿಂದ ಮೆಲ್ಲನೆ ಸುಳಿವ ಮಾರುತ
ನಿಂದ ಶೈತ್ಯದ ಸಾರತರಶಿಲೆಯಿಂದ ಸಂಚರಿಪ
ಸಂದಣಿ[2]ಯ[2] ಖಗಪುಣ್ಯಮೃಗಕುಲ
ದಿಂದ ತರುಲತೆಗುಲ್ಮನಿರ್ಜರ
ದಿಂದ ಮೆಱೆವ ಮಹಾತಿಶಯಮಲಯಾದ್ರಿಮಂಡಲಕೆ ೬

ಲವನೆ ಕೇಳಾ ಮಲಯಪರ್ವತ
ದವನಿಯಲಿ ಬಿಟ್ಟುದು ಬಲಿಮುಖ
ನಿವಹವೆಣಿಸಿದರಲ್ಲಿ ತಿಂಗಳದಿವಸಕುಳಿದಿನವ
ಅವನಿಜೆಯ ಸುದ್ದಿಯನು ಮಿಕ್ಕಿನ
ದಿವಸದಲಿ ನಾವಱಿವುದಱಿದೀ
ಹವಣಿಗುತ್ತರವೇನೆನುತ ಬೆಸಗೊಂಡನಜಸೂನು ೭

ಕಳುಹಿದನು ಕಟ್ಟಾಜ್ಞೆಯಲಿ ತಿಂ
ಗಳಿಗೆ ಬಹುದೆಂದೆನ್ನನೇ ಕುರಿ
ತಿಳೆಯ ತನುಜೆಯ ಸುದ್ದಿ ತೋಱಲಸಾಧ್ಯವಿದಱೊಳಗೆ

---

[1] ರ್ಚಕ (ಚ.ಡ). [2] ಪ (ಚ.ಡ).

ಎಲೆ ಸರೋಜಜಸೂನು ಕೇಳ್ ಕೊಲೆ
ನಿಲುವುದೆನ್ನಲಿ ಹಗೆಯು ಮಗನೆಂ
ದುಲುಕದಿರದಯ್ಯಂಗೆ [1]ಮನದೊಳಗೆಂದನಂಗದನು[1] ೮

ನಿರುತವಿದು ಕೇಳಜ್ಜ ಸುಗತಿಗೆ
ನಿರತಿಶಯುವನಶನವು ದುರ್ಗತಿ
ಗರಸುತನ ದುರ್ಮರಣ[2]ವಿದು ತಾ ಶಾಸ್ತ್ರ[2]ಸಿದ್ಧವಲೆ
ತೆರಳುವುದು ನೀವಱಸುವುದು ನಿ
ಮ್ಮರಸ ನೇಮಿಸಿದಂದದಲಿ [3]ತಾ[3]
ನಿರಶನವ ಕೈಕೊಂಡವ[4]ನು[4] ನೀವ್ ಬಿಜಯಮಾಡೆಂದ ೯

ನೆಲನ ಶೋಧಿಸಿ ವರಕುಶಸ್ಥಂ
ಡಿಲದಲಂತರ್ಭಾವಶುದ್ಧಿಯು
ಲಳವಡಿಸಿದನು ನಿಯಮಮೌನದಲನಶನವ್ರತವ
ಕೆಲಸವಿದು ಲೇಸಾಗಿ ತೋಱಿತು
ಸಿಲುಕು ರಾಮನ ರಾಜಕಾರ್ಯಕೆ
ನಿಲುಕಡೆಯದೇನೆಂದು ಚಿಂತಿಸಿದನು ವಿರಿಂಚಿಸುತ ೧೦

ಮರುಳಲಾ ತಾರೇಯ ತಾನಿರು
ತಿರಲು ನಿನಗುಪಹತಿ ನಿಧಾನಿಸೆ
ನೆರೆಯುಬಲ್ಲುದೆ ಕಂದ ರಘುರಾಜೇಂದ್ರ ಚಂದ್ರಮನ
ಕರುಣ[5]ಕಲಿತ[5]ಪ್ರಾಣಪೂರಿತ
ಪರಮಮಾರುತನಿರಲು ನಿನ್ನನು
ತರಣಿಸುತ ಕೊಲಬಲ್ಲನೇ ಕಾ[6]ಳ್ತನ ವಿದೇಕೆಂದ[6] ೧೧

ಕಾಕುತನದೆಣಿಕೆಯುನು ಬಿಡು ಲೋ
ಕೈಕಬಲರಿದೆ ನಮ್ಮ ಕಟಕದ
ಲಾಕೆವಾಳನು ನೀನು ನಮಗಿಂದಜ್ಞತನ ನಿನಗೆ
ಸೋ[7]ಕಿತೇ ಸುಪ್ರೌಢನೆಂದ[7]
ವ್ಯಾಕುಲತೆ ನಮಗಿಹುದು ಮೂರ್ಖ[8]ತೆ
ಸಾಕು ರಾಜಕುಮಾರಗಿದು ತಾ[8] ಯೋಗ್ಯವಲ್ಲೆಂದ ೧೨

---

[1] ಹರಣವ ಕಳೆವ ನಾನೆಂದ (ಗ), ಹರಣವನಳಿವೆ ನಾನೆಂದ (ಡ). [2] ತಾನಿದು ಸುಪ್ರ (ಕ), ವಿದುತಾ ಸುಪ್ರ (ಟ), ವದುತಾ ಶಾಸ್ತ್ರ (ಡ). [3] ನಾವ್ (ಕ.ಝ.ಟ.ಣ). [4]ರು (ಕ.ಝ.ಟ.ಣ). [5]ದಲಿತಾ (ಕ), ದಲಿತತ' (ಝ.ಣ). [6]ಳ್ತನವಿದೇನೆಂದ (ಗ), ರಣವಿದೇನೆಂದ (ಚ.ಟ), ಳ್ತನವಿದೀಗೆಂದ (ಡ.ಣ). [7] ಕಿತತಿಸುಪ್ರೌಢಿಯೆಂದ (ಗ), ಕುರೆದೆಸುಪ್ರೌಢನೆಂದಾ (ಚ), ಕಿತೇ ಸುಪ್ರೌಢಗೆಂದಾ (ಟ.ಡ). [8] ತ್ರೆ ಸಾಕು ರಾಜಕುಮಾರಕರಿಗಿದು (ಕ.ಝ), ರ ಕೈಕರಣೆಗೊಳಗಾಗಿ ನಿಲುವುದು (ಟ.ಣ).

ಹೊಗುವುದರಿನಗರವನು ಹಗೆ ಕೈ
ಮಿಗುವ ಹ[1]ದನ[1]ನು ಕಂಡಡಾಜಿಯು
ಲಗಧರನ ಮೆಚ್ಚಿಸುವುದಳಿವುದು ಸಮರಭೂಮಿಯಲಿ
ಖಗಕುಲೇಂದ್ರ ಜಟಾಯುವಿನ ಸಂ
ಯುಗಸಮರ್ಥನ ಸಾವು ಸುರರಿಗೆ
ಸೊಗಸದೇ ಸಂಕಲ್ಪವಿದು ತಾ ಯೋಗ್ಯವಲ್ಲೆಂದ ೧೩

ಮಾತನಿದ ಕೇಳಿದನು ಕಲಿಸಂ
ಪಾತಿ ಕಿವಿಗೊಟ್ಟಳಿದನೇ ಸಹ
ಜಾತನಕಟೆನುತಂತರಂಗವ್ಯಥೆಯ ಮಱುಕದಲಿ
ಈತಗಳು ತಾವಾರೊಯೆನುತಿನ
ಸೂತಸುತ ಮುರಿದೇಳಲುರುಳಿತು
ಭೀತಿಯಲಿ ಭಟನಿಕರ ಬೀಳುವ ಗುಂಡಿನಂದದಲಿ ೧೪

ಎದ್ದುದೋ ಗಿರಿಯೆನುತ ನೆಲದಲಿ
ಬಿದ್ದ ಭಟರಬ್ಬರಿಸೆ ಮೆಲ್ಲನೆ
ಹೊದ್ದಿದನು ಜಾಂಬವ[2]ನ ಕೇಳುತ ಹೆಸರನರುಣಸುತ[2]
ಹೊದ್ದಿದನೆ ಸುರಪುರದ ಸುರಪನ
ಗದ್ದುಗೆಯನು ಜಟಾಯುವಾರಿಂ
ದಿದ್ದುದೋ ಸಹಜಾತಶೋಕದ ನೋವು ತನಗೆಂದ ೧೫

ಅನುಜನೆನಗೆ ಜಟಾಯು ಸಾವೆಂ
ತನುಕೊಳಿಸಿತಾರಿಂದಲೆನಲಜ
ತನುಜ ತದ್ವೃತ್ತಾಂತವನು ಸೂರಿಯನ ಸಾರಥಿಯ
ತನಯಗೆಲ್ಲವನೊರೆದು ತಾವ್ ಬಂ
ದನಿತನುಸುರಲು ಶೋಕರಸದಲಿ
ನೆನೆದು ಮಱುಗಿದನನುಜನಳಿವಿಗೆ ವೀರಸಂಪಾತಿ ೧೬

ಸಂತವಿಸಿದನು ಜಾಂಬವನು ವಿ
ಕ್ರಾಂತವಿಹಗೇಶ್ವರನ ಚಿತ್ತದ
ಚಿಂತೆಯನು ಬಿಡಿಸಿದನು ನುಡಿಸಿದನಾ ಖಗೇಶ್ವರನ

---

[1] ವಣ (ಚ.ಝ). [2] ನ ಹೆಸರನು ಹೇಳು ತರುಣಸುತ (ಗ), ನು ಹೇಳ್ವೆ ಹೆಸರನರುಣಸುತ (ಚ), ನು ಹೇಳುತ ಹೆಸರನರುಣಸುತ (ಝ), ರ ಹೇಳಿರೆ ಸುದ್ದಿಗಳನೆನುತರುಣಸುತ (ಟ.ಣ), ನ ಹೇಳುತ ಹೆಸರನರುಣಸುತ (ಡ).

ಎಂತು ನಿನಗೀ ಪಕ್ಷಪತನ
ಶ್ರಾಂತಿ ಸಮನಿಸಿತಾವನಿಂದೆನೆ
ಕಂತುಹರಚರಣಾರ್ಚಿತನು ಜಾಂಬವರಿಗಿಂತೆಂದ ೧೭

ಸುರರ ಸಭೆಯಲಿ ತನ್ನ ತಮ್ಮನು
ಗರುಡನಲಿ ಗರ್ವಿಸಿ ಮನೋಮ
ತ್ಸರದ ಹಮ್ಮಿನ ಸೋಲಗೆಲವಿನ ಸುಪ್ರತಿಜ್ಞೆಯಲಿ
ತರಣಿಬಿಂಬವ ತುಡುಕಲಭ್ರಕೆ
ಚರಿಸಿದನು ಸಮಗ್ರೈಯಲನುಜನ
ಪರಿಯನಱಿಯಲು ಬಾರದೆನುತೈದಿದೆನು ಬೆಂಬಳಿಯ ೧೮

ಸರಸಿಜಾಸನಸೂನು ಕೇಳ್ ತರ
ಹರಿಕೆಗೊಂಬುದೆ ತರಣಿಕಿರಣ
ಸ್ಫುರಣೆಯಲಿ ಮಱೆಮಾಡಿದೆನು ತಮ್ಮಂಗೆ ಪಕ್ಷಗಳ
ಮುರುಟಿದವು ತನ್ನುಭಯಪಾರ್ಶ್ವದ
ನಿರತಿಶಯಪಕ್ಷಗಳು ಪತನವು
ದೊರಕಿದುದು ಬಳಿಕಂದು ಪಾರಾವಾರತೀರದಲಿ ೧೯

ಅರುಣನೀಗೆಮ್ಮಯ್ಯನಾತನ
ಕರುಣದಲಿ ಪಶುಪತಿಯ ಚರಣ
ಸ್ಮರಣೆಯಲಿ ಸಾವಿಲ್ಲದುಳಿದೆನು ಸಲಹಿ ಸಹಭವನ
ಮರಣ ತಮ್ಮಂಗಾಗಲಂತಃ
ಕರಣ [1]ಮಱು[1]ಗದೆ ಬಿಡುವುದೇ ಹರಿ
ಶರಣಜನಚೂಡಾಮಣಿಯೆ ಕೇಳೆಂದನರುಣಸುತ ೨೦

ಮೂಡಿದವು ಗರಿ ಬಳಿಕ ಪೂರ್ವದ
ಗಾಡಿಕೆಗೆ ಗುರುವೆನಿಸಿ ದೈತ್ಯವಿ
ಭಾಡಪದಸೇವಕರ ಸಂದರುಶನದ [2]ಸೊಗಸಿನ[2]ಲಿ
ಈಡಿಱಿದ ಪಕ್ಕದಲಿ ಸೇನೆಯು
ಸೂಡಿ ತಂದಿಳುಹಿದನು ನಾಯಕ
ವಾಡಿಗಳು ಸಹಿತುಬ್ಬರಿವ ಸಾಗರದ ತೀರದಲಿ ೨೧

---

[1] ಕರ (ಕ.ಣ). [2] ಸುಕೃತ (ಗ), ಸೊಂಪಿನ (ಚ.ಝ).

ಬಳಿಕಲಾ ಸಂಪಾತಿ ಸಲಿಲಾಂ
ಜಲಿಮೃತಸ್ನಾನಾದಿ ಕರ್ಮವ
ಜಲನಿಧಿಯಲೇ ಮಾಡಿ ಮೇಲಣ ತಾಗುಬಾಗುಗಳ
ತಿಳುಹಿ ಲಂಕಾಪುರದ ಸರಣಿಯು
ಹೊಲಬ ತೋಱಿಸಿ ಬೀಳುಕೊಂಡನು
ಕಲಿಸುಪಾರ್ಶ್ವಸಮೇತ ವರಮಾನಸಸರೋವರಕೆ ೨೨

---

# ಹನ್ನೆರಡನೆಯ ಸಂಧಿ

ಸೂಚನೆ : ರಾಯರಾಘವಸತಿಯ ಸರಸಿರು
ಹಾಯತಾಕ್ಷಿಯ ದರುಶನಕೆ ಕಪಿ
ರಾಯಕಟಕಪಿತಾಮಹನು ಕಳುಹಿದನು ಪವನಜನ

ಕೇಳಿದೈ ಕಾಕುತ್ಸ್ಥಧರಣೀ
ಪಾಲಸುತ ರವಿಸೂತತನುಜನ
ಬೀಳುಕೊಂಡಬಳಿಕ್ಕ ಸಾರಿದರಿವರು ಸಾಗರವ
ಮೇಲುವುದದು[1]ಬ್ಬಿನಲಿ[1] ಘನಕ
ಲ್ಲೋಲಗಳ ಬಲುಸುಳಿಯ ಸಡಗರ
ದೇಳಿಗೆಯ ಸೀಕರಕದಂಬದಿನೆಸೆದುದಂಬುನಿಧಿ ೧

ಓಟಭರತದ ಭರವಸದ ಹೊ
ಯ್ಲಾಟದುರುಲಹರಿಗಳ ಲಳಿಗಳ
ತೋಟಿಗಳ ಪಾಟೀನ ಮಕರಜಲೇಭದುಬ್ಬಿದಲಿ
ದೂಟಿ ಗಗನಕೆ ಚಿಗಿವ ಮುಕ್ತಾ
ಸ್ಫೋಟಕದ ಗಂಭೀರಸಬುದದ
ಘಾಟಮುದ್ರಿತ ರೌದ್ರದಿಂದ ಸಮುದ್ರ ರಂಜಿಸಿತು ೨

ನೋಡಿದನು ಜಾಂಬವನು ಜಲಧಿಯ
ಝಾಡಣೆಯು ಜಂಗಾಯ್ಲ ರಭಸದ
ಜೋಡಣೆಯು ಗಗನಾವಲಂಬಿತ ಗತಿಯು ಗರುವಿಕೆಯು
ಘಾಡಣೆಯು ವಾ ವಾಯೆನುತ್ತ
ಲ್ಲಾಡಿ ಮೂರ್ಧ್ನಿಯ ಮುರಿದು ಸುಭಟರ
ನೋಡಿ ಬಳಿಕೀಮಾತನೆಂದನು ಮಧುರವಚನದಲಿ ೩

ಆವನಿದ ದಾಂಟುವನು ದಾಂಟಲು
ಮಾವಧೂವಲ್ಲಭೆಗೆ ತೀರದು
ರಾವಣಾಸುರನಗರ ತಾನೀ ಕಡಲ ಮಧ್ಯ[2]ದಲಿ[2]
ದೇವನಿಕರಕಸಾಧ್ಯ ಗಡ ನ
ವ್ಯಾ ವನೌಕಸಭಟರೊಳಗೆ ಹೊ
ಕ್ಕಾವನೈ ಮರಳುವ ಮಹಾತ್ಮನೆನುತ್ತ ಚಿಂತಿಸಿದ ೪

---

[1] ಬ್ಬರದ (ಕ.ಝ.ಟ.ಣ). [2] ಗಡ (ಕ.ಗ.ಣ).

ಜೀಯ ಚಿಂತೆಯಿದೇಕೆ ಕೇಳ್ ಚಿಂ
ತಾಯಕನು [1]ನೀನಿ[1]ರಲು ನಿನ್ನ ಸ
ಹಾಯದಲಿ ಸಾಗರವ ಕುಡಿನ ಸಮರ್ಥರಿದೆ ನೋಡು
ಈಯಜಾಂಡವ ನುಂಗಿ ನೊಣೆವಸ
ಹಾಯಶೌರ್ಯ ಸಮಗ್ರಬಲಸಮು
ದಾಯವಿದೆ ಬೆಸಸೆಂದು ವಾಲಿಕುಮಾರ ಕೈಮುಗಿದ ೫

ಕೆದಱಿಕೊಂಡರು ಭಟರು ಕಲ್ಪಾಂ
ತದ ಸಿಡಿಲ್ಗಳ ಸಡಗರದವೊಲು
ಮದದ ವೀರಾವೇಶ ರೋಷೋಚ್ಚಲಿತ ಚಾಪಳವ
ಉದಧಿಯನು ಹೇಳದಿರು ಹಗೆವನ
ಕದನ[2]ವನು ಹೇಳದಿರ[2]ಜಾಂಡದ
ತುದಿಯಲುಂಟೇ ಕೆಲಸ ಹೇಳದನೆಂದರುಬ್ಬಿನಲಿ ೬

ಹೋಹೊ ಸ್ವೈರಿಸಿ ನಿಮ್ಮವೊಲು ಬಲು
ಸಾಹಸಿಗರಾರುಂಟು ಸುಭಟ
ವ್ಯೂಹದಲಿ ಭುವನತ್ರಯದ ಸುರನರಭುಜಂಗರಲಿ
ಬೇಹ ಭಟರಹುದಾದಡೆಯು ನಿ
ರ್ವಾಹ ಶಕ್ತಿಯ ಸೊಬಗು ಬೇಱಿಹು
ದಾ ಹದನ ಕೇಳಿದಡೆ ಹೇಳುವೆನೆಂದನಜಸೂನು ೭

ಅಱಿಸಬೇಕಣುವಾಗಿ ರಕ್ಕಸ
ರಱಿಯದಂತಿರೆ ರಾತ್ರಿಯಲಿ ಮೋ
ಣಱಿತರಾದಡೆ ವಿಲಯರುದ್ರನ ರೌದ್ರರಂಜನೆಯ
ಮೆಱೆಯಬಲ್ಲವನಾಗಬೇಕೊಳ
ಗಱಿದು ಕಾ[3]ರ್ಯವ ಕಾಬ ಕು[3]ಶಲದ
ತೆಱನ ಬಲ್ಲತಿಶಯದ [4]ಕೃತಮುಖ[4]ನಾಗಬೇಕೆಂದ ೮

ನುಡಿಯಬಲ್ಲವನಾಗಬೇ[5]ಕೊಳ
ಗುಡಿದು[5] ವಿಶ್ವಾಸದಲಿ ಸೀತೆಗೆ
ಪೊಡವಿಪನ ಮನದನುಭವೋಚಿತ ಲಲಿತಭಾಷಿತವ

---

[1] ತಾನಿ (ಕ), ಬೇಱಿ (ಝ). [2] ತಾನೇಸರದ (ಕ.ಝ). [3] ರ್ಯಾಕಾರ್ಯ ಕು (ಕ.ಝ), ರ್ಯವ ಕೊಂಬ ಕೌ (ಗ.ಣ). [4] ಕುಶಲಿಗ (ಡ). [5] ಕೊಳ್ಳುಡಿಯ (ಕ.ಟ), ಕೊಳನುಡಿಯ (ಝ), ಕೊಳಗಡಗಿ (ಣ).

ತೊಡ[1]ಕಲ[1]ರಿಭಟ ಪುರವನೊಮ್ಮಿಗೆ
ಸುಡಲುಬಲ್ಲವನಾಗಬೇಕಿನಿ
ತೆಡೆಯನಱಿವ ಸಮರ್ಥರುಂಟೇ ಹೇಳಿ ನೀವೆಂದ ೯

ಜೀಯ ಜವನಿಕೆಯೇಕೆ ನೀವೆಂ
ದೀಯಶೇಷಗುಣಂಗಳಾ ಕಾ
ತ್ಯಾಯಿನೀಪತಿಗುಂಟು ಮಗುಳೆರಡನೆಯಲೆಣಿಸುವರೆ
ವಾಯುತನುಜಂಗುಂಟು ಮಿಕ್ಕಿನ
ನಾಯಕರದಂತಿರಲಿ ನಮ್ಮಾ
ರಾಯಕಟಕದೊಳೆಂದು ವಾಲಿಕುಮಾರ ಕೈಮುಗಿದ ೧೦

ಮನಕೆ ಬಂದುದು ತನ್ನ ಚಿತ್ತದ
ನೆನಹಿನನು[2]ಬಂಧ ತೆಗೆ ಮಾತದು[3]
ಕೊನೆವೆರಳನುಪ್ಪರಿಸಿ ಕೊಂಡಾಡಿದನು ವಾಲಿಜನ
ಎನಿತು ಚಿಕ್ಕವನಾದಡೆಯು ಕಪಿ
ಜನಪ ಸೂನುವಲಾ ವಿವೇಕದ
ನೆನಹು ಲೇಸೆಂದುಳಿದ ವೀರರ ಮೊಗವ[3]ನೀಕ್ಷಿಸಿದ[3] ೧೧

ತಪ್ಪದೀ ಯುವರಾಜನಾಡಿದ
ಕಪ್ಪುದೋಱಿದ ಮಾತು ಹನುಮಂ
ಗುಪ್ಪರದ ಭಟರುಂಟೆ ನಮ್ಮಾ ರಾಯಕಟಕದಲಿ
ಒಪ್ಪಿದೆವು ಲೇಸಾಗಿ ವಾಸಿಯ
[4]ದರ್ಪದಿಂದೇನಹುದು[4] ನಿಮ್ಮಡಿ
ಯೊಪ್ಪಿ[5]ದೀ ಮತವೆ[5]ಮ್ಮಮತವೆಂದುದು ಭಟಸ್ತೋಮ ೧೨

ಲೇಸನಾಡಿದಿರೆಂದು ಹೊಗಳಿದ
ನಾ ಸುಭಟರನು ವೀರಹನುಮನ
ಶೈಶವದ ಸಾಹಸದ ಶೌರ್ಯವನೊರೆದನನಿಬರಿಗೆ
ಈ ಸಮೀರಜನೀಗ ಹೃದಯ ನಿ
ವಾಸ ಮಾರುತನಜಹರೀಶ್ವರ
ರೋಸರದ ಬರಿಮಾತದಲ್ಲಿದು ವೇದಮತವೆಂದ ೧೩

---

[1] ಚಲ (ಕ), ಕಿದ (ಗ.ಟ.ಡ.ಣ). [2] ಬಂದಂತೆ ನಗುತಾ (ಗ), ಬಂದಂತೆ ನಗೆವೊಗ (ಝ.ಡ). [3] ನೋಡಿದನು (ಕ.ಝ.ಟ). [4]ದೊಪ್ಪದಿನ್ನೇನೆಮಗೆ (ಕ), ದೊಪ್ಪವಿನ್ನೇನೆಮಗೆ (ಝ), ವೊಪ್ಪವಿನ್ನೇನೆಮಗೆ (ಟ). [5] ದೀಮತತ (ಗ), ದುದೆಮತತ (ಚ.ಡ).

ಕಂದ ಬಾ ಕಡುಗಲಿಯೆ ಬಾ ನಾ
ವೆಂದ ಮಾತನು ಕೇಳಿದ್ಕೆ ನಿ
ನ್ನಿಂದ ಮೆಱೆವುದು ಕೀರ್ತಿ ರಾಮನ ರಾಜಕಾರಿಯದ
ಸಂ[1]ದ ಭಟರಿದೆ ಯೇತಱವ[1] ನಾ
ನೆಂದು ನುಡಿಯದೆ ಗುರುವಿನಾಜ್ಞೆಯಿ
ದೆಂದು ಕೈಕೋ ಪಯಣವಾಗೆಳೆಂದನಜಸೂನು ೧೪

ಬಳಿ[2]ಗೆ[2] ಕರದೇಕಾಂತದಲಿ ಭುಜ
ಬಲಗೆ ನುಡಿದನು ವೊದಲಲೇ ಮೈ
ಥಿಳೆಯನಱಿ ಕೊಡು ರಾಘವೇಂದ್ರನ ರಾಜಮುದ್ರಿಕೆಯ
ಬಳಿಕ ಲಂಕಾಧಿಪನ ಮನದಳ
ಬಳವ ತಿಳಿ ಕಾಪೇಯತನದ
ಗ್ಗಳಿಕೆಯನು ನೆಱೆಬಳಸದಿಲ್ಲಿಗೆ ಬೇಗ ಬಾಯೆಂದ ೧೫

ದಿವಸ ಮೂ[3]ಱವೆ ಮೂಱುದಿನದೊಳ್[3]
ಗವನಿಜೇಶನ ಚರಣಸರಸಿರು
ಹವನು ಕಾಣಲು ಬೇಕು ಸುಗ್ರೀವಾಜ್ಞೆಯಿದು ನಮಗೆ
ಹವಣ ನೀನೇ ಬಲ್ಲೆ ನಾವಿದ
ವಿವರಿಸಲು ನೀನಜ್ಞನೇಯೆಂ
ದವಿರಳದ ಹರುಷದಲಿ ಹರಸಿದು ಕಳುಹಿದನು ಕಪಿಯ ೧೬

ಮಣಿದನಂಘ್ರಿಗೆ ಹ[4]ನುಮ[4]ನಾ ದ್ರಾ
ಹಿಣಿಯ ಮಿಕ್ಕಿನ ಯೌಥ ನಾಥಾ
ಗ್ರಣಿಗಳಿಗೆ ಕೈಮುಗಿದು ಬೀಳ್ಕೊಂಡನು ಸರಾಗದಲಿ
ಗುಣನಿಧಿಯ ರಘುವಂಶ ಚೂಡಾ
ಮಣಿಯ ರಾಕ್ಷಸಕುಲ ತಮೋದಿನ
ಮಣಿಯ ನೆನೆದಡಿಯಿಟ್ಟನುರುವಿಕ್ರಾಂತ ಹನುಮಂತ ೧೭

ಬರುತ ಕಂಡನಖಂಡಬಲನಂ
ಬರವಿಲಂಬಿತ ಮೇಘ ಮಾರ್ಗಾಂ
ತರದ ಶಿರದ ಮಹೇಂದ್ರವೆಸರ ಮಹಾಮಹೀಧರವ

---

[1] ದು ಸುಭಟರೊಳೇಸರವ (ಕ), ದ ಭಟರಿದೆ ಪೇಳ್ವವರು (ಗ), ದ ಭಟರಿದೆ ವೊಱೆವವವನು (ಡ). [2] ಕ (ಕ.ಝ.ಟ.ಣ). [3] ರಿದೆ ಮಾಸಕಿದರೊಳ (ಕ), ರನೆಯೊಳಗೆ ಬಾಹೋ (ಝ). [4] ಣೆಯ (ಕ.ಝ).

ಗಿರಿಯಿದಹು[1]ದೆಂದಂ[1]ಘ್ರಿ ತಳದ
ಪ್ಪುರಕೆ ತಪ್ಪೆಲ್ಲೆನುತ ವಿಕ್ರಮ
ಭರಿತನೈದಿದನಾ ತ್ರಿವಿಕ್ರಮನಂತೆ ಝಡಿತೆಯಲಿ ೧೮

ಅಡಿಗೆ ಯೋಜನ ಯೋಜನವ ಮೆ
ಲ್ಲಡಿಗೆ ಬೆಳವುತ ಬಂದನಿಳೆ ಕೆಳ
ಕಡೆಗೆ ಯೋಜನ ಯೋಜನವ ತಗ್ಗಿದುದು ನಿರ್ಗಮಕೆ
ಕಡಲು ಕಂಪಿಸುತಿರ್ದುದಹಿಪನ
ಹೆಡಕು ಬಾರಿಸುತಿರ್ದುದದ್ರಿಗ
ಳೊಡವುತಿರ್ದವು ದೆಸೆಗಳೆಂಟಱ [2]ಧರಣಿಧಾರಣದ[2] ೧೯

ಬಂದು ನಿಂದಿದನಾ ಮಹಾದ್ರಿಯ
ಮುಂದೆ ಲಯಭೈರವನ ಭಾರಣೆ
ಯಂದದಲಿ ಬಹಳಿತ ಭಯಂಕರ ರೌದ್ರತೇಜದಲಿ
ಮಂದರಾದ್ರಿಗೆ ಮಿಗಿಲೆನಿಸುವ ಮ
ಹೇಂದ್ರಪರ್ವತಕಾಗಿ ಕಂಡುದು
ವೃಂದ ವೃಂದಾರಕ ವಧೂಜನ[3]ವನಿಲ[3]ನಂದನನ ೨೦

ವೀರ [4]ಧೀರೋದಾತ್ತ[4] ರಾಜಕು
ಮಾರ ಕೇಳಾ ಪರ್ವ[5]ತಾಗ್ರದ[5]
ಚಾರಣರು ಚದುರೆಯರು ಸಿದ್ಧರು ಮುಗ್ಧೆಯರು ಕಪಿಯ
ಭೈರವಾಡಂಬರಕೆ ಬೆದಱಿ[6]ದು
ದಾರಿದೆಗೆದುದು ಸುರಪುರಕೆ[6] ಕೇ
ಳೀರಮಣರೊಡಗೂಡಿ ಗಗನದ ಗತಿಯ ಘಾಡದಲಿ ೨೧

ಸರಿದರಾ ಬೆಂಬಳಿಯ ಗಂಧ
ರ್ವರ ವಧೂನಿಕುರುಂಬ ಕೇಳೀ
ಸರಸಿಗಳನುಳಿದೋಡಿತಲ್ಲಿಯ ಕಿನ್ನರೀನಿವಹ
ವರಲತಾಂತ ಚಯಾಪಚಯದ
ಪ್ಪರಿಯುಡಗಿದರಖಿಳ ವಿದ್ಯಾ
ಧರಿಯರಗಲಕೆ ಹಾಯ್ದುರೀಕ್ಷಿಸಿ ಪವನನಂದನನ ೨೨

---

[1] ದೆನ್ನಂ (ಕ.ಝ), ದೆಮ್ಮಂ (ಟ.ಡ.ಣ). [2] ವಸುಮತೀಧರದ (ಕ), ಧರಣಿ ಭಾರದಲಿ (ಚ). [3] ವಾಯು (ಕ.ಚ). [4] ರಾಘವರಾಯ (ಕ.ಚ). [5] ತದಲಿಹ (ಕ), ತಾಗ್ರದಿ (ಚ). [6] ಸಮೀರ ಪಥದಲಿ ಸರಿದುದಾ (ಕ), ದು ದಾರಿದೆಗದರು ಸುರಪುರಕೆ (ಗ.ಝ.ಣ).

ಗಿರಿಗೆ ಕಾಲಿಕ್ಕಿದೆಡೆ ಕಂಪಿಸಿ
ತೆರಡುಮೈಯಲಿ ಶೈಲವದ ಕಂ
ಡಿರದೆ ಹಾಯ್ದವು ಮುಱಿ[1]ಪ[1]ಡೆದು ಮದಕರಿಗಳಗಲದಲಿ
ಕರಭ ಕಡವಮ್ಮಾವು ಕೇಸರಿ
ಶರಭ ಸೈರಿಭ [2]ಹುಲಿ[2] ಕರಡಿ ಹೆ
ಮ್ಮರೆಯ ಹಿಂಡೊಡದೋಡಿದವು ದೆಸೆದೆಸೆಗೆ ಭೀತಿಯಲಿ ೨೩

ಒತ್ತಿ ಕಾಲಿಡಲೊಡನೆ ಗಿರಿ ತಲೆ
ಗುತ್ತುತಿರ್ದುದು ತೋರಮರಗಳು
ಕಿತ್ತು ಹಾರುತಲಿರ್ದವಂಬರಮಣಿಯನಣೆದಣೆದು
ನೆತ್ತಿಯಗ್ರದ ತೋರಗುಂಡುರು
ಳುತ್ತಲಿರ್ದವು ಜಲಧಿಯಡಿಮಳ
ಲೆತ್ತುತಿರ್ದುದು[3] ಗುಮ್ಮಿಱುದು ಗುಡಿಯಿಱಿದು ಗುಳ್ಳೆಗಳು[3] ೨೪

ಏಱಿದನು ಪರ್ವತವನರೆ ನೆಲೆ
ಗೂಱಿತವನಿಯೊಳದ್ರಿ ವಾಮನ
ನೇಱಲುದಯಮಹಾದ್ರಿ ತಗ್ಗಿದುದಿಲ್ಲ ಪೂರ್ವದಲಿ
ಮೂಱುಲೋಕದೊಳೆಣಿಸೆ ಸರಿಯನು
ತೋಱಲಪ್ರತಿಹನುಮ [4]ಹನುಮನ[4]
ಮೀಱುವಗ್ಗದ ಭಟರು ಹುಸಿ ಕುಶ ಕೇಳಿದೈಯೆಂದ ೨೫

ಅಂದಿಳೆಯನಳೆದಾ ತ್ರಿವಿಕ್ರಮ
ನಂದಕಿ[5]ಮ್ಮಿಗಿಲೆ[5]ನಲು ಬೆಳೆದನು
ಕಂದ ಕೇಳ್ ಶಿರದರುಣಮಣಿಯಾಂತಿರ್ದುದಿನಬಿಂಬ
ಮಂದವಿಸಿ ತುರುಗಿರ್ದ ತಾರಾ
ವೃಂದಪೂಜೆಯ ಪುಷ್ಪಗಳ ಪರಿ
ಯಿಂದಲಿರ್ದವು ಹೇಳಲೇನದ ಪವನನಂದನನ ೨೬

ಬಾಲವಿರ್ದುದು ವಿಮಲಸುಮನೋ
ಶೈಲವಳಯದಲವನಿಗಿಳಿದ ಸು
ರಾಲಯದ ಬಾಂದೊಱೆಯ ತೆಱನವೊಲಂಜನಾಸುತನ

---

[1] ಗೆ (ಗ.ಝ.ಟ.ಡ.ಣ). [2] ಹರಿ (ಕ.ಗ). [3] ಗುಡಿಯಿಱಿದು ಗುಮ್ಮಿಱುದು ಗುಳ್ಳೆಗಳು (ಚ), ಥೆರೆನೊರೆಯ ಘುಳುಘುಳುನಿನಾದದಲಿ (ಟ), ಥೆರೆಥೆರೆಯ ಘುಳುಘುಳುನಿನಾದದಲಿ (ಣ). [4] ನನುತಾ (ಗ.ಝ.ಡ). [5] ಮಡಿಯೆ (ಗ.ಟ.ಡ).

ಲೋಲಕುಂಡಲ ಚಂದ್ರಸೂರ್ಯರ
ಸೋಲಿಸುತಲಿರ್ದವು ಬಳಿಕ್ಕೇ
ವೇಳುವೆನು ಬಲಿದಂಘ್ರಿಯನು ಭುಜವೊಯ್ದು ಬೊಬ್ಬಿಱಿದ ೨೭

ವೊದಲ ಬೊಬ್ಬೆಗೆ ಬಿಸಜಸಂಭವ
ಬೆದಱಿಬಿದ್ದನು ಹನುಮನೆರಡನೆ
[1]ಯದಟ[1]ಸಿಂಹಧ್ವನಿಗೆ ಶಿವ ಬಿಸುಟನು ಗಜಾಜಿನವ
ಮುದದ ಮೂಱನೆಯಬ್ಬರಕೆ ಕೆದ
ಱಿದವು ಮೇಲಣ ಜಗದ ಜೋಡಿಗ
ಳದುಭುತವಿದೇನೆನುತ ನೆರೆದುದು ಸಕಲಸುರಕಟಕ ೨೮

ಕಂಡನೀ ಪವಮಾನಸುತ ದೋ
ರ್ದಂಡ[2]ಬಲ[2] ಬಲವೈರಿ [3]ರಿಪು[3]ವೇ
ತಂಡಕಂಠೀರವನ [4]ರಕ್ಕಸರಾಯ[4]ಪುರವರವ
ಕಂಡಿ[5]ದ್ದೈ[5]ಸಲೆ ಮನದೊಳಾವ್ ಕೈ
ಕೊಂಡ [6]ಗಮನ[6]ಕಿದಲ್ಪವೆನುತರಿ
ಗಂಡಭೈರವ ಚುಬುಕಿಱಿದು ಚಪ್ಪರಿಸಿದನು ಭುಜವ ೨೯

ದಾಟುವೆ[7]ನು[7] ಕಡಲೇಳನವನಿಯ
ಮೀಟಿ ಸಪ್ತರಸಾತಳದ ತುದಿ
ಗೋಟೆಗಿಳಿವೆ[8]ನು[8] ಮೇಣು ಕಮಲಭವಾಂಡಮಂಡಲದ
ಕೋಟರವ ಬಗಿದಡಱುವೆನು ಕಾ
ಲಾಟಕಿದುವೆ[9]ಯಲಕ್ಷ್ಯವೆನುತಾ[9]
ಸ್ಫೋಟನೆಯಲೌಡಗಿದು ಹಲುಮೊಱೆದೊಲೆದನವಯವವ ೩೦

ಅಡಿಯಿಡಲು ಮದವಾರಣದ ಕಾ
ಲಡಿಯ ಕುಂಬಳದಂತೆ ರಕ್ಕಸ
ಗಡಣವಜಿಗಿಜಿಯಾಗದಿರದವನಿಜೆಯ ಕಾಬೆಣಿಕೆ
ಕಡೆಗೆ ನಿಲಲಱಿಯದು ನಿರರ್ಥಕೆ
ತೊಡಕಬಹುದೆನಗಜತನುಜ ನುಡಿ
ದಡಕವೇ ನಿಜರಾಜಕಾರ್ಯಕೆ ರಾಜಪಥವೆಂದ ೩೧

---

[1] ಯುಧಿತ (ಚ.ಝ). [2] ಭುಜ (ಕ), ಖಳ (ಝ). [3] ಬಲ (ಕ.ಝ.ಟ.ಣ).
ರಾಕ್ಷಸಪತಿಯು (ಕ.ಝ.ಟ). [5] ರೈ (ಕ.ಝ.ಟ.ಣ). [6] ಕೆಲಸ (ಗ.ಡ.ಣ).
[4] ನೊ (ಟ.ಡ). [8] ನೊ (ಕ.ಗ.ಡ.ಣ). [9] ಗ್ಗಳವೆನೆಂದಾ (ಕ).

ಎನುತ ಮುನ್ನಿನ ತನ್ನ ನಿಜಸಂ
ಹನನವನೆ ಕೈಕೊಂಡು ಕಮಲಾ
ಸನಸುರೇಂದ್ರಾದ್ಯಖಿಳಸುರಸಂದಣಿಗೆ ಕೈಮುಗಿದು
ಮನದೊಳಧಿರಾಜೇಂದ್ರ ಚಂದ್ರನ
ವನರುಹಾಂಘ್ರಿಯ ನೆನೆದು ತಂದೆಗೆ
ವಿನಮಿತಾನನನಾಗಿ ಗಮನೋದ್ಯೋಗಮನನಾದ ೩೨

ಕೈಗಳನು ತತ್ಪರ್ವತಾಗ್ರದ
ಮೇಗೆ ಬಲಿದಡಿಯೂರಿ ತನುವನು
ತೂಗಲಿಳೆ ಸೆಳೆಮಂಚದವೊಲೊಲೆದುದು ನಿಹಾರದಲಿ
ಸೂಗುರಿಸೆ ತುದಿವಾಲವಮರರ
[1]ತೂ[1]ಗುಗಳ ಕಹಳೆಗಳ ಹರೆಗಳ
ತಾಗುಗಳ ತನಿ[2]ಹರುಷ[2]ದಲಿ ಹಾರಿದನು ಹನುಮಂತ ೩೩

ಅದ್ದುದತಳಕೆ ಗಿರಿ ಸಮೀರಜ
ನೊದ್ದು ಹಾಗಿದ ಪದಹತಿಗೆ ಸಿಡಿ
ದೆದ್ದ ಜಲಧಿಯ ಜಲದೊಳುಱೆ ಮುಳುಗಿದುದು ಸುರಕಟಕ
ಒದ್ದುಕೊಂಡವು ಧರಣಿಯನು ಹೊ
ತ್ತಿರ್ದ ದಂತಿಗಳಹಿಪ ಕೂರುಮ
ರುದ್ದುರುಟುತನ[3]ವೆಲ್ಲಿಯೇನಾಯ್ತುಱಿಯೆ ನಾನೆಂದ[3] ೩೪

ಸುಗಿದು [4]ತತ್ಪರ್ವತದ ತರುಗಳು[4]
ಚಿಗಿದು ಹಾಯ್ದವು ಬಳಿಯಲಬುಧಿಯ
ನೆಗಳುಗಳು [5]ಮೀನುಗಳು ನೀರಾನೆಗಳು ಮೊಸಳೆಗಳು[5]
ಬೆಗಡುಗೊಂಡೋಡಿದವು ಸುರಬಲ
ವಗಿದು ಪೂಮಳೆಗಱೆದರನಿಲನ
ಮಗನ ಮಹಿಮೆಗೆ ಮದನಹರನಲ್ಲಾಡಿದನು ಶಿರವ ೩೫

---

[1] ಕೂ (ಗ.ಝ.ಡ). [2] ರಭಸ (ಗ.ಝ.ಟ.ಡ). [3] ವಱಿಯೆವೇನಾಯ್ತೇನ ಹೇಳುವೆನು (ಚ). [4] ಗಿದು ತತ್ಪರ್ವತದ ತರು (ಗ.ಟ.), ಗಿದ ತತ್ಪರ್ವತದ ತರು (ಡ). [5] ನೀರಾನೆಗಳು ಮೀನುಗಳು ಮೊಸಳೆಗಳು (ಕ), ಮತ್ಸ್ಯಗಳು ಕೆದಱಿದವಖಿಳ ದೆಸೆದೆಸೆಗೆ (ಗ), ಮೊಸಳೆಗಳು ಕೆದಱಿದವಖಿಳದೆಸೆದೆಸೆಗೆ (ಝ.ಡ.), ಮೀನುಗಳು ಮೊಸಳೆಗಳಖಿಳ ದೆಸೆದೆಸೆಗೆ (ಟ.ಣ).

ಹರಸಿದರು ಚತುರಾಸ್ಯನಮರರ
ತರುಣಿಯರು ಸೂಸಿದರು ಸೇಸೆಯ
ಸುರಮುನಿಗಳಾಘೋಷಿಸಿದರುಬ್ಬಿದರು ದಿಗಧಿಪರು
ತೊರವೆಯಧಿಪತಿರಾಯ ನರಕೇ
ಸರಿಯ ಲೀಲಾಚರಿತವಿದೆಲಾ
ಹರಯೆನುತ ನಾರದನು [1]ನಲಿದಾಡಿದನು ಗಗನ[1]ದಲಿ ೩೭

---

[1] ತಿರ್ಗಿಸಿದನು ನಭೋಗ್ರ (ಕ.ಟ).

# ಮೊದಲನೆಯ ಸಂಧಿ

ಸೂಚನೆ: ಸಾಗರವನುತ್ತರಿಸಿದನು ಭವ
ಸಾಗರೋತ್ತಾರಕನ ಕರುಣಾ
ಸಾಗರನ ಸಗರಾನ್ವಯನ ಕರುಣದಲಿ ಕಲಿಹನುಮ

ಸುರಪನಾ ಪವನಜನ ಪರಿಯನು
ಪರಿಕಿಸಲು ನಿರ್ಮಿಸಿದನಾಕ್ಷಣ
ಸುರಸೆಯನು [1]ವಿರಸೆಯನು ಮಲೆವ ಮಹಾತಿಬಲಭಟರ[1]
ಮರುತಜನ ಸರಣಿಯನು ತಡೆ ಹೋ
ಗಿರದೆ ನೀನೆಂದವಳ ಕಳುಹಲು
ಬೆರಸಿದಳು ಭೈರವನತಾಯವೊಲಂಜನಾಸುತನ ೧

ಎಲ್ಲಿಗೆಲವೋ ಹೋಗದಿರು ಕಪಿ
ನಿಲ್ಲು ಬಂದವಳಾವಳೆಂಬುದ
ಬಲ್ಲವಿಕೆಯಲಿ ನೋಡು ಭಕ್ಷಣೆಗಾದೆ ನೀನೆನಗೆ
ನಿಲ್ಲೆನುತ ಹದರಿಕ್ಕಿ ಹೆಡಕನು
ಘಲ್ಲಿಸಲು ಹೊಱಕಯ್ಯಲಾ[2]ಬೆ[2]ಯ
ಹಲ್ಲುದುರೆ ಹೊಯ್ದೊಡದಮುಷ್ಟಿಯಲೆಱಗಿದನು ಬದಿಯ ೨

ಕೋಟಿಸಿಡಿಲಬ್ಬರಣೆಯಲಿ ಶತ
ಕೋಟಿಕಾಯನ ನುಂಗಲಾಸ್ಯದ
ಕೋಟರವನಗಲಿಸಿದಳದ ಕಂಡಂಜನಾಸೂನು
ದಾಟಿ ಮಱುಮುಷ್ಟಿಯಲಿ ಗಗನಕೆ
ದೂಟಲೆಱಗಿದನವಳನೋಕುಳಿ
ಯಾಟ[3]ವೆನೆ[3]ಲರುಣಾಂಬುವಿನಲುಱೆ ನೆನೆದುದಮರಗಣ ೩

---

[1] ರಿಪುನಿವಹ ವಿರಸೆಯನತಿಮಹಾಬಲೆಯು (ಕ). ವಿರಸೆಯನು ಮಲೆವ ಮಹಾತಿಬಲಯುತೆಯು (ಚ). [2] ಕೆ (ಕ). [3] ದವೊ (ಕ.ಝ.ಟ.ಣ).

ಕಾಳರಕ್ಕಸಿ ತಿರುಗಿ ಹನುಮನ
ಮೇಲೆ ಹೂಣಿಸೆ ಹನುಮನಾಬೆಯು
ಕಾಲೆರಡ ಹಿಡಿದಭ್ರಮಂಡಲಕಿಟ್ಟನಬ್ಬುಬಿಸಿ
ಕೇಳಿದೈ ನೃಪಸೂನು ಸುಮನೋ
ಪಾಲನಗರದ ಸೊಗಸಿನಗ್ಗದ
ಸೂಳೆಗೇರಿಯ ನಡುವೆ ಬಿ[1]ದ್ದಳು[1] ಬೆದಱೆ ಪೌರಜನ ೪

ಹಾರವಿಸಿದರು ಹನುಮನುಬ್ಬಟೆ
ಗಾರು ಸರಿಯಿಲ್ಲೆಂದು ನಭದ ಸ
ರೋರುಹಾಸನ ಮುಖ್ಯದಿವಿಜರು ದೇವಮುನಿನಿಕರ
ಸೇರುವುದು ನಮಗಿನ್ನು ಸುಖಸಂ
ಪೂರಣದ ಫಲವೆನುತ ಸುಮನೋ
ಭೇರಿಗಳ ಹೊಯ್ಸಿದರು ಸು[2]ರಪುರಗಳಲಿ ಸುರನಿಕ[2]ರ ೫

ಇನ್ನಸಾಧ್ಯವದಾವುದೀ ಸಂ
ಪನ್ನಶೌರ್ಯಂಗೆನುತ ಸರಿದನು
ತನ್ನ [3]ನಗರಕೆ ಶಕ್ರ[3] ಹರೆದುದು ಸಕಲದೇವಗಣ
ಜನ್ನನೂಱಿನ ನುಡಿಯ ಹೊಗಳಿಕೆ
ಕರ್ಣದಲಿ ಕೇಲಿಸೆ ಕಪರ್ದಿಯ
ಮನ್ನಣೆಯ ಮೈದುನನು ಮೈದೋಱಿದನು ಜಲಧಿಯಲಿ ೬

ಈತನೀಗನಿಲಜನಲಾ ಪುರು
ಹೂತ ಹೊಗಳಿದ ಸುಭಟನೀತನ
ತಾತನುಱೆ ಸಲಹಿದ ಶರೀರವಿದೀಗಲಾ ಯೆನುತ
ವಾತಸರಣಿಯ ಸರಣಿಯಲಿ ಬಹ
ವಾತಜನನಿದಿರ್ಗೊಂಬ ಸೌರಂ
ಭಾತಿಶಯದಲಿ ಬೆಳೆದನಂಬರಕಾಗಿ ಮೈನಾಕ ೭

ಮತ್ತಿದೇನಂಬುಧಿಯೊಳಗೆ ತಲೆ
ಯೆತ್ತುತಿದೆ ಬಲುಬೆಟ್ಟವಿದು ತಾ
ಕೃತ್ರಿಮವೊ ಸಹಜವೊಯೆನುತ್ತವೆ ಹಿಡಿಯೆ ಸಂಶಯವ

---

[1] ದ್ದುದು (ಕ.ಝ.ಣ). [2] ವ್ಯಾತ್ರನದಲಿ ಸುರನಾಥ (ಕ), ರ ಪುರದೊಳಗೆ ಸುರನಾಥ (ಗ), ರ ಪುರದಲಿ ಸುರನಿಕರ (ಚ). [3] ಪುರಿಗೆ ಬಲಾರಿ (ಕ), ನಗರಿಗೆ ಶಕ್ರ (ಗ).

ಉತ್ತ[1]ರಸ್ಥಿತಿಯಱಿದು ಗಿರಿರಾ[1]
ಜೋತ್ತ[2]ಮನ ನಂದನ[2]ನು ತದ್ಗಿರಿ
ಯುತ್ತಮಾಂಗದಮೇಲೆ [3]ನಿಜರೂಪಿಂದ ರಂಜಿಸಿದ[3] ೮

ಹನುಮ ಕೇಳೊಡಹುಟ್ಟಿದ[4]ನು ನೀ
ನೆ[4]ನಗೆ ನಿನ್ನಯ ತಂದೆಯಿಂದೀ
ತನು ಪುನರ್ಭವವಾಯ್ತು ಸುರಪನ ಪೂರ್ವವೈರದಲಿ
ಘನ ಮನೋವೇಗದಲಿ ತಂದೀ
ವನಧಿಯಲಿ ನೂಕಿದನು ನಿನ್ನಯ
ಜನಕನದಱಿಂದೆನಗೆ ಪಿತನಾದನು ಕಣಾಯೆಂದ ೯

ವಾತಸುತ ಕೇಳ್ ಲೋಕದಲಿ ವಿ
ಖ್ಯಾತರೈವರು ತಂದೆಗಳು ಪಡೆ
ದಾತನೊಬ್ಬನು ಸ್ವಾಮಿಯೊಬ್ಬನು ಹೋಹ ಜೀವವನು
ಆತುಕೊಂಡವನೊಬ್ಬ ರಕ್ಷಿಸಿ
ದಾತನೊಬ್ಬನು ಗುರುವದೊಬ್ಬನು
ಮಾತದೇನುಳಿದದಱಿನೆನಗಗ್ರಜನು ನೀನೆಂದ ೧೦

ಜನನಿ ಮೇನಕಿಯೊಬ್ಬಳೆನಗೆರ
ಡನೆಯಲಂಜನೆಯೊಬ್ಬಳಿಬ್ಬರು
ಜನಕರದ್ರಿಕುಲೇಂದ್ರ ಮಾರುತರಿದು ನಿದಾನ ಕಣ
ಹನುಮ ಕೇಳಾತಿಥ್ಯಪೂಜೆಯ
ನನುಕರಿಸಿ ರಾತ್ರಿಯನು ಕಳಿದಿನ
ಭವೆಯ ಸಂದರುಶನಕೆ [5]ತೆರಳುವುದೆಂದು ಕೈಮುಗಿದ[5] ೧೨

ಇವೆ ಸುಧಾರಸಪೂರಿತದ ಫಲ
ನಿವಹವಮೃತೋಪಮ ಹಿಮೋದಕ
ವಿವೆ ಸುಸೌರಭಕಲಿತ ಕುಸುಮೋತ್ಕರ ತರುಚ್ಛಾಯೆ
ಇವೆ ಮದೀಯಪ್ರಿಯತರೋಕ್ತಿಯ
ನವಧರಿಸಿ ನಾಳಿನಲಿ ನಿಮಿಸಂ
ಜನನದಲಿ ಜಾನಕಿಯ ಕಾಣಲು ಬಿಜಯಮಾಡೆಂದ ೧೧

---

[1] ಮಾಂಗಸ್ಥಿತಿಯಱಿದು ಗಿರಿ (ಗ.ಡ). [2] ಮೆಯ ಸಹಭವ (ಗ.ಡ). [3] ಮೈ ದೋಱಿದನು ಮಾರುತಿಗೆ (ಕ), ಮೈದೋಱಿದನು ಮೈನಾಕ (ಝ). [4] ವನಾ ನಿ (ಕ), ನುನಾ ನಿ (ಝ), ನುತಾ ನಿ (ಟ). [5] ಗಮನೋದ್ಯೋಗನಾಗೆಂದ (ಕ).

ಈತನನಿತಱಿಮೇಲೆ ಗುಣಸಂ
ಪ್ರೀತಿವಚನದಲಂಬಿಕಾಸಹ
ಜಾತನನು ಸಹಜಾತಸಾಂದ್ರಸ್ನೇಹಭಾವದಲಿ
ಮಾತರಿಶ್ವಂಗದ್ರಿರಾಜಂ
ಗೇತಱಿಲಿ ಪಲ್ಲಟವು [1]ಕೇ[1]ಳೆಂ
ದಾತನನು ಮನ್ನಿಸಿದನು ಚಿತದಲಂಜನಾಸೂನು ೧೩

ಬರುತ ನಿನ್ನುಪಚರಿತಪೂರಿತ
ಪರಮಪೂಜೆಯ ಕೊಂಡು ಬಳಿಕ
ಮ್ಮರಸನಂಘ್ರಿಯ ಕಾಬೆನಿನಿತಕೆ ಚಿಂತೆ ಬೇ[2]ಡೆನುತ[2]
ಗಿರಿಜೆಯನುಜನ ಬೀಳುಕೊಂಡು
ಪ್ಪರಿಸಿದನು ಗಗನಕ್ಕೆ ಗರುಡನ
ಗರುವಿಕೆಯ ಗಾಢಣೆಯ ಗತಿಯಲಿ ವೀರಹನುಮಂತ ೧೪

ತರುಣ ಕೇಳಲ್ಲಿಂದ ಬಹ ಬಲು
ಭರವಸಿಗನನು ಕಂಡಳಾ ಸಾ
ಗರದ ತೀರದ ತರಣಿವೈರಿಯ ತಾಯಿ ತವಕದಲಿ
ಸುರನರೋರಗ ಯಕ್ಷ ರಾಕ್ಷಸ
ಗರುಡ ಗಂಧರ್ವಾದಿಗಳು ಸಂ
ಚರಿಸಬಾರದಿದಾವನೋಯೆನುತಡಱಿದಳು ನಭವ ೧೫

ಅಹಿವಿರೋಧಿಯ ಗಾಢಗತಿಯಲಿ
ಬಹ ಬಲಾಗ್ರೇಶ್ವರನ ಛಾಯಾ
ಗ್ರಹಿಣಿ ಘನ ಛಾಯಾಪತಿಯನೌಕುವ ತಮೋನಿಧಿಯ
ಬಹಳತೆಯ ಭಣಿತೆಯಲಿ ಮಾಱಾಂ
ತ ಹಿಮಕರಕುಲಚರನ ಘನ ವಿ
ಗ್ರಹಕೆ ಗಬಲಿಕ್ಕಿದಳು ಗಗನದ ತರಣಿ ಕಳವಳಿಸೆ ೧೬

ಅವಳ ಬಗೆಯದೆ ಹನುಮ ಮೇಲಣ
ಪವನ ಪಥಕುಪ್ಪರಿಸೆ ನಸುನಗು
ತವಳು ಹಿಡಿದಳು [3]ನೆಳಲನಗ್ಗದ[3] ವೀರಮಾರುತಿಯ

---

[1] ಹೇ (ಗ.ಡ.ಣ). [2] ಡೆಂದು (ಗ.ಝ.ಟ.ಡ.ಣ). [3] ನೆಳಲನಗಲದ (ಗ), ವಿಗಡವಿಗ್ರಹ (ಟ.ಣ).

ಅವಳ ಬಲುಹಿನ್ನೆಂತುಟೋ ಶಿವ
ಶಿವ ಮಹಾದೇವೀತನಿದ್ದನು
ಸವಡಿಗೈಯಲಿ ಸರಿವ ನೇಣಿನ ನಭದ ಪಟದಂತೆ ೧೭

ಉಗಿದಳೀತನ ನೆಳಲನವಳೊಡ
ನಗಲಿಸಿದಳಾನನವನನಿಲನ
ಮಗನ ನುಂಗಲು ಮೃತ್ಯುವಿನವೋಲು ನೂಱುಯೋಜನವ
ಬಗೆಯು[1]ದವಳ[1]ನು ಬೆಳೆದನಾತ
ದ್ವಿಗುಣದಲಿ ತತ್ಪರಿಸರದ ಸಂ
ಖೆಗಳ ಶತಸಾವಿರದಲಂಬರವಳಯದಳತೆಯಲಿ ೧೮

ಸಿಕ್ಕುವುದು ನೃಪಕಾರ್ಯ ನಾವೀ
ರಕ್ಕಸಿಯು ಕೊಂಡಾಡಿದಡೆ ಕೈ
[2]ಸಿ[2]ಕ್ಕಲಱಿಯದು ಕೀರ್ತಿ [3]ನಮ[3]ಗೆನುತವಳ ಬಾಯೊಳಗೆ
ಹೊಕ್ಕನವಳನಿತಱಲಿ ಬಲ್ಲಿದ
ಸಿಕ್ಕಿದನು ತನಗೆಂದು ಹರುಷದ
ಹೆಕ್ಕಳದಲನಿಲಜನ ನುಂಗಿದಳಣುಗ ಕೇಳೆಂದ ೧೯

ನುಂಗ[4]ಲೊಡನಾಕ್ಷಣದಿ[4] ಬೆಳದನ
ಭಂಗಬಲ ಹನುಮಂತನಾ[5]ಬೆ[5]ಯ
ಕಂಗಳುಱೆ ತಿರುಗಿದವು ಕಳವಳಿಸಿದವು ಕರಣಚಯ
ಉಂಗುರದ ಮಹಿಮೆಯಲಿ ಹರಣವು
ಹಿಂಗದನಿಲಜನುಳಿದನಲ್ಲದೆ
ನುಂಗಲುಳಿದವ[6]ರುಂಟೆ[6] ದನುಜಾಮರ ಕದಂಬದಲಿ ೨೦

ಬಲಿದ ಮಾಱ ಪಕ್ಷದಲಿ ತತ್ತಿಯ
ನಳಿದು ಪೋಱಮಡುವಂತೆ ವಜ್ರೋ
ಪಲದ ಕಂಬವ[7]ನೊಡೆದು ನಿಂದಿದ[7] ಮನುಜಹರಿಯಂತೆ
ನಿಳಿನಿಳಿಲು ನಿಟಿಲೆಂದು ಬದಿಯೆಲು
ಕಳಚೆ ಸಮಸೀಳಾಗಿ ಸೀಳಿದು
ಕಲಿಲಲಾಟ ಲಲಾಮ ಮೈದೋಱದನು ಝಡಿತೆಯಲಿ ೨೧

---

[1] ದೀತ (ಗ.ಝ.ಟ.ಡ.ಣ). [2] ಯಿ (ಗ.ಝ.ಡ). [3] ತನ (ಗ.ಝ.ಟ.ಡ.ಣ). [4] ಲಾ ಕ್ಷಣದೊಳಗೆ (ಕ.ಝ.ಟ). [5] ಕೆ (ಕ.ಟ). [6] ರಿಲ್ಲ (ಗ.ಡ.ಣ). [7] ನೊಡೆದು ಮೂಡಿದ (ಕ), ಬಗಿದು ನಿಂದಿದ (ಗ.ಝ.ಡ).

ಅರಿ ಬೊಬ್ಬಿಱಿ[1]ದೊಡನೆ ಕಡುಹಿನ[1]
ವೀರನಾ ಸಿಂಹಿಕೆಯ ಸೀಳ್ದಶ
ರೀರದೊಳಗೊಂ[2]ದೆಡದಭಾಗದ ಹೋೞ ದಶಶಿರನ[2]
ಊರಿಗಿಟ್ಟನು ಮಿಕ್ಕ ಹೋೞನು
ದಾರಬಲ ಬಲಿಮುಖಕುಲೇಂದ್ರ ಕು
ಮಾರ ಜಾಂಬವ ದೇವನಿದ್ದೆಡೆಗಿಟ್ಟು ಬೊಬ್ಬಿಱಿದ ೨೨

ಬೆಗಡುಗೊಂಡುದು ಲಂಕೆ ಭೀತಿಯ
ಲಗಿದು ನಲಿದಾಡಿದುದು ಶಾಖಾ
ಮೃಗಕಟಕ [3]ಕಪಿವರನ ಕದನಾರಂಭ[3]ವಿದುಯೆನುತ
ನಗರದಲಿ ಕಟಕದಲಿ ಕೆಂಪಿನ
ಮುಗಿಲ ಕಡಿ ಬಿದ್ದಂತೆ ರಕುತದ
ಚಿಗಿಯ ಜೋರಿನಲೆಸೆ[4]ದವಾ[4] ಹೋೞೆರಡು ರಕ್ಕಸಿಯ ೨೩

ರಕ್ಕಸಿಯ ಕೊಂದತುಳ ಹರುಷದ
ಹೆಕ್ಕಳದ [5]ಹರವರಿಯಿಲುಱು[5] ಬೊ
ಬ್ಬಿಕ್ಕಿ ಬಾಹಪ್ಪಳಿಸಿ ಪುಟನೆಗದಂಬರಸ್ಥಳಕೆ
ಉಕ್ಕುವತಿಶಯ ವೀರರಸದೊಳ
ಸೊಕ್ಕಿನಲಿ ಲಂಕಾಪುರವನೆಡ
ಕಿಕ್ಕಿ ಹಾಱಿದನತ್ತ ಮೇಲೇೞ್ನೂಱುಯೋಜನವ ೨೪

ಕಂಡನಲ್ಲಿ ಮಹಾಸಮುದ್ರವ
ಕಂಡುದಿಲ್ಲರಿಪುರವನಾಕ್ಷಣ
ಕೊಂಡನಲ್ಲಿ ವಿಚಾರವನು ವಿಜ್ಞಾವಿಶೇಷಣವ
ದಂಡಿ ಲೇಸಾಯ್ತೆನುತ ಧರಣೀ
ಮಂಡಲಕ್ಕವತರಿಸುತಿದಿರಲಿ
ಕಂಡನಾ ತೃಣಬಿಂದುವನು ಸಿಂಧುವಿನ ತೀರದಲಿ ೨೫

ಸಾರಿದನು ಸ್ವೈವಳಿಯನಱಿದಾ
ಪಾರಿಕಾಂಕ್ಷಿಪ್ರವರನನು ನಯ
ಸಾರದಲಿ ಬೆಸಗೊಂಡನೆಲೆ ಮುನಿನಾಥ ರಾವಣನ

---

[1] ದದಟ ಕಪಿಕುಲ (ಗ.ಟ.ಡ.ಣ), ದದಟರಿಪುಕುಲ (ಝ). [2] ದನು ನಿಶಾಚರ ಸಾರ್ವಭೌಮಕನ (ಕ), ದೆಡದಹೋೞನು ತಿರುಹಿ ದಶಶಿರನ (ಝ). [3] ಹನುಮಂತದೇವನ ಕೆಲಸ (ಗ.ಟ.ಡ.ಣ). [4] ದುದಾ (ಕ.ಗ.ಟ.ಡ). [5] ಲಂಜನೆಯ ಸುತ (ಗ.ಝ.ಟ.ಡ.ಣ).

ಊರ ಬಲ್ಲೈ ಬಲ್ಲಡೆಮಗುಪ
ಕಾರವಹುದು ನಿರೂಪಿಸಿದಡೆನ
ಲಾ ರುಷೀಶ್ವರನಾನನವ ನಸುದಿರುಹುತೀಕ್ಷಿಸಿದ ೨೬

ಏಱಿಳಿಯ ನೋಡಿದನು ಹೊಸಹೊಗ
ರೇಱಿಕೆಯ ಹೊದಱೆದ್ದ ದರ್ಪದ
ತೋಱಿಕೆಯ ತನಿರಸದ ಮೊಗವನು ಮೂಱುಬಾರಿಯಲಿ
ಆರು ನೀ ನಿನಗೇಕೆ ರಕ್ಕಸ
[1]ರೂರ[1] ಚಿಂತೆ ತದೀಯಪುರದೊಳ
ಗಾರು ನೆಂಟರು ನಿನಗೆ ಹೇಳದ ಕೇಳ್ವೆವಾವೆಂದ ೨೭

ಮುನಿಪ ಕೇಳಾದಡೆ [2]ಕಕುತ್ಸ್ಥಜ
ವನಿತೆಯಾಗೆ[2]ಮ್ಮಾಳ್ದನಂಗನೆ
ವನದೊಳಿರೆ ಕದ್ದೊಯ್ದನಾ ಸತಿಯನು ದಶಗ್ರೀವ
ಮನುಕುಲೇಶ್ವರನೆನ್ನನಾ ಭಾ
ಮಿನಿಯ ನೋಡಲು ಕಳುಹಲರಿಪುರ
ವೆನಗೆ ಕಣುದಪ್ಪಾಯ್ತು ಬಲ್ಲರೆ ಹೇಳಿ [3]ನೀವೆಂ[3]ದ ೨೮

ನೀನು ಕೋಡಗ ಹೇಡಿ ಮೇಲೆ ದ
ಶಾನನನು ತ್ರೈಲೋಕ್ಯವೀರ ನಿ
ದಾನವಾತನ ನಗರವನು ಹೊಗಲರಿದು ಪುರಹರಗೆ
ಏನು ಚಿತ್ತಕೆ ಬಾರದಿದೆ ಕಪಿ
ನೀನು ನುಡಿಪೀ ಮಾತು ನರಿ ಸು
ಮ್ಮಾನದಲಿ ಕಟಕವನು ಹೊಕ್ಕಂತಹುದಲೇಯೆಂದ ೨೯

ಚಿಂತೆ ನಿಮಗೇಕದಱ ಕೃತವಿ
ಕ್ರಾಂತರಱಿವರು ನಮ್ಮ ಸಾಹಸ
ದಂತರವನದು ಹೋಗಲಮರವಿರೋಧಿಪುರವಿನ್ನು
ಎಂತು ದೂರವದಾವದೆಸೆಯೆಂ
ಬಂತುಟನು ಹೇಳಿದರೆ ಮನಬಂ
ದಂತೆ ಮಾಡುವೆ[4]ನೆಂದನಾ ಮುನಿಪತಿಗೆ ಕಲಿ[4]ಹನುಮ ೩೦

---

[1] ನೂಗ (ಕ.ಝ), ನೂರು (ಗ). [2] ನಿಮಿಾಶ್ವರ ತನುಜೆ ತಾನೆ (ಕ.ಚ), ತನಗೆಂ (ಚ.ಣ). [4] ವೆಮ್ಮ ಕಾರ್ಯನನೆಂದನಾ (ಕ.ಝ.ಣ).

ಮಗನೆ ಕೇಳಾದಡೆ ವಯೋವೃ
ದ್ಧಿ[1]ಗಳ[1] ದಿನ ತಪ್ಪಿದವು ತನುವಿನ
ಬಿಗುಹು [2]ಬಿಟ್ಟುದು[2] ಬೀತುದಗ್ಗದ ಸತ್ವ ನರೆಥೆರೆಯು
ಹಗರಣವು ನಮಗಾಯ್ತು ನಮ್ಮನು
ನೆಗಹಿ ತೋಱಿದಡಮರ ವೈರಿಯ
ನಗರವನು ತೋಱುವೆನೆನುತ ತೃಣಬಿಂದುಮುನಿ ನುಡಿದ ೩೧

ಅಹುದು ಮತ್ತೇನೆನುತಲಾ ನಿಜ
ವಹ ನಿತಾಂತಬಲಾಢ್ಯನಾ ನಿ
ಸ್ಪೃಹ ಯತೀಂದ್ರನನೆತ್ತಲಿಕ್ಕಿದನುಭಯಕರತಳವ
ಮಹಿಸುತಾಸುತ ಕೇಳು ಮುನಿವಿ
ಗ್ರಹದ ಭಾರವದೆಂತುಟೋ ನೆಲ
ನಹಿವರನನಿಬ್ಬೆರಳನಗಲಲು ನೆಗಹಿದನು ಹನುಮ ೩೨

ಮುನಿಪನಿಕ್ಕಿದ ತಪದ ಪದ್ಮಾ
ಸನದ ಪೃಥ್ವಿಯ ಸಂಘಟನ ಸಂ
ಜನಿಸದಿರೆ ಸಂವರಿಸಿಕೊಂಡು ಸಮೀರಸುತ ಮುನಿಯ
ತನುವ ತೆಕ್ಕೆಯೊಳೌಕಿ ಮೊಳಕಾ
ಲಿನಲಿ ಧರಣಿಯನೊತ್ತುತೆತ್ತಲು
ವನಜಸಂಭೂತಾಂಡ ಬಿಡದೊಲದಾಡಿತೆಡಬಲಕೆ ೩೩

ಹೊಱಿಗೆವಾಳರೊಳಹಿಪ ಕೂರುಮ
ರುಱುವರೀ ಲೋಕದಲಿ ಲೋಕದೊ
ಳುಱುವ[3]ನವರಿ[3]ಮ್ಮಡಿಗೆ ಪವನಕುಮಾರನಿದು ಸಿದ್ಧ
ಮಱೆಯಮಾತೇನನಿಲ[4]ಬದ್ಧ[4]ದ
ನಿಱಿಸಿನಲಿ ನೀರೇಜಜಾಂಡವು
ತುಱುಗಿಹವು ತತ್ಸೂನುವಿಂಗೆಯಸಾಧ್ಯವೇನೆಂದ ೩೪

ಎತ್ತಿದನು ನಭಕಾಗಿ ಮುನಿವಂ
ಶೋತ್ತಮನ ಸಾಕೆನಲು ಮುನಿಪತಿ
ಚಿತ್ತದಲಿ ಹಾರೈಸಿ ಹರಸಿದನಂಜನಾಸುತನ

---

[1] ಳು (ಚ.ಝ.ಡ). [2] ಸಡಿಲಿತು (ಗ.ಟ). [3] ನಿವನಿ (ಕ), ರಿವರಿ (ಗ), ರವರಿ (ಚ). [4] ಬಂಧ (ಗ.ಝ.ಡ).

ಎತ್ತಲಱಿಯದೆ ಕುಂಡಲವನಸು
ರೋತ್ತಮನು [1]ತೇಕಿ[1]ದನು ಪೂರ್ವದ
ಲೆತ್ತಿದನು ಕಪಿ ಕುಂಡಲವು ಸಹಿತೆ[2]ನ್ನ[2]ನೀಗೆಂದ ೨೫

ಹನುಮ ಮೆಚ್ಚಿದೆನಿಳುಹು ನಿನ್ನಯ
ಮನದ ಬಗೆ ಹಸನಾಗಲಱಿದೆನು
ವನಜನಾಭನ ಲೀಲೆಯನು ಸುಖಿಯಾಗು ನೀನೆನುತ
ಮುನಿವರನು ಕೊಂಡಾಡಿ ದರ್ಭೆಯು
ಕೊನೆಯಲಾತನ ನೆಗಹಿ ಕಂಡಾ
ಧನಪ ದಿಗ್ಭಾಗದಲಿ ಧನದಾನುಜನ [3]ಪುರವರವ[3] ೨೬

ಕಂಡೆನೆನುತಲ್ಲಿಂದ ರೋದೋ
ಮಂಡಲಕೆ ಪುಟನೆಗದನಾ ಖರ
ದಂಡ ಬಾಂಧವ ಬಿಂಬ ತಳವೆಳಗಾಗೆ ತಾರಕಿಯ
ತಂಡಗಳು ತನಿಗೆದಱೆ ಬಂದನ
ಖಂಡಬಲನಿನಶಶಿಯ ರುಚಿಯ ಕ
ರಂಡವೆನಿಪ ನಿಶಾಚರೇಂದ್ರನ ರಾಜಪುರವರಕೆ ೨೭

ಪುರವ ಕಾಣುತ ಕಾಯವನು ಸಂ
ವರಿಸಿಕೊಂಡು ಸಮೀರಸುತನಾ
ಸುರಭಟಾವಳಿಯಱಿಯದಂತಿರೆ ತತ್ಪುರಾಂತಿಕದ
ಸುರಪನುದ್ಯಾನದ ಸಘಾಡಕೆ
ಸರಿಯೆನಿಪ ನಂದನದ ಮಧ್ಯದ
ಸುರತರುವಿನಲಿ ನಿಂದಿದನು ಲಾಘವದ ಗಮನದಲಿ ೨೮

ಬೀಱುತಿರ್ದವು ನಯುಸರವ ಮದ
ವೇಱಿದೆಳೆಗೋಗಿಲೆಗಳೊಳು ನುಡಿ
ದೋಱುತಿರ್ದವು ರಾಜಕೀರ ಮಯೂರ ನರ್ತನವ
ತೋಱುತಿರ್ದವು ತುಂಬಿಗಳು ಮೊರ
ದೇಱುತಿರ್ದುವು ಕೊಳಗಳಲಿ ಮ್ಮೈ
ದೋಱುತಿರ್ದವು ಮದಮರಾಳಕ್ರೌಂಚಬಕನಿಕರ ೨೯

---

[1] ತೆಕ್ಕಿ (ಕ.ಡ.ಙ), ತೇಗಿ (ಝ). [2] ಮ್ಮ (ಚ.ಝ). [3] ಪುರಿಯೊಂದ (ಕ), ಪಟ್ಟಣವ (ಚ).

ಸುಳಿವುತಿ[1]ರ್ದನು[1] ಮಂದಮಾರುತ
ನೆಳೆಲತಾವಳಿಗಳಲಿ ಕೃತಕಾ
ಚಲದ ಚಮ[2]ರಿಯ[2] ಮೃಗ ವಿತಾನವಿಹಾರಮಾರ್ಗದಲಿ
ನಲಿವುತಿರ್ದವು ಗೀತರಸ ಸ
ಮ್ಮಿಳಿತ ಸೌರಂಭದಲಿ ಕಿನ್ನರ
ಲಲನೆಯರು ಲಳಿಯೇಱುತಿರ್ದರು ಪಾಂಥ[3]ಗೃಹಗಳಲಿ[3] ೪೦

ಪರಿಮಳಿತ ಪೂಗೊಂಚಲಿನ ಕೆಂ
ಪೊರೆದ ಕಿಸಲಯ ವಲ್ಲರಿಯ ಬಂ
ಧುರದ ಬಹಳಿತ [4]ಬಂಧಮಾಮರ[4] ಮುಖ್ಯ ಭೂಜಗಳ
ಭರಿತ ಫಲಭರದುಬ್ಬುಗೊಬ್ಬಿನ
ಪುಗವರೋದ್ಯಾನವನು ತೊರವೆಯ
ನರಹರಿಯ ನಿಜದಾಸ ಕೊಂಡಾಡಿದನು ಮನದಣಿಯೆ ೪೧

---

[1] ರ್ದುದು (ಕ), ರ್ದವು (ಡ). [2] ರೀ (ಗ.ಝ.ಟ.ಣ). [3] ರಿದಿನರಿ (ಕ.ಚ). [4] ಮಂದಮಾರುತ (ಕ), ಗಂಧಮಾರುತ (ಚ).

# ಎರಡನೆಯ ಸಂಧಿ

ಸೂಚನೆ : ರಾಯ ವೈರಿಘರಟ್ಟನಾಹವ
ರಾಯ ಭೈರವನಹಿತ ರಕ್ಕಸ
ರಾಯ ನಗರದೊಳಡಸಿದನು ನಿಮಿರಾಜನಂದನೆಯ

ವಾರಿಜಪ್ರಿಯಕುಲದ ರಾಜಕು
ಮಾರ ಕೇಳ್ ತತ್ಸಮಯದಲಿ ರವಿ
ಸಾರಿದನು ಸಾಗರವನಪರಾಹ್ಣದಲಿ ಪಶ್ಚಿಮದ
ತೀರಿತುತ್ಸವ ಕಮಲಿನಿಗೆ ಕೈ
ಸಾರಿತುಮ್ಮಹ ಕುಮುದಿನಿಗೆ ದಿಗು
[1]ವಾ[1]ರುಣಿಯೊಳನುರಾಗರಸ ಪರ್ಬಿದುದು [2]ನಿಮಿಷದಲಿ[2] ೧

ಅಂಡಲೆಯೆ ಬಲುನಿದ್ರೆ ನಳಿನಭ
ವಾಂಡ ಭವನದ ತಿಮಿರರಕ್ಕಸಿ
ಚಂಡಕರ ದೀಪವನು ಮಲಗಿಸಿ ಮಹಿಯ ಮಂಚದಲಿ
ಮಂಡಿಸಿದಳೆ[3]ನೆ ತ[3]ಗಡುಗತ್ತಲೆ
[4]ಚಂ[4]ಡಿಸಿತು ತತ್ಸಮಯದಲಿ ಕೋ
ದಂಡದೀಕ್ಷಾಚಾರ್ಯಚರನಿದು ಸಮಯ ತನಗೆಂದ ೨

ಮುದದಿನಾತ್ಮೋದಯದ ಶಕುನವ
ತುದಿವೆರಳಲಾರೈದು ಧುಮ್ಮಿ
ಕ್ಕಿದನಿಳಾತಳವದುರೆ ಮರದುದಿಯಿಂ ಮಹೀತಳಕೆ
ಮದವದರಿಭೈರವ[5]ನ ಕರ್ಕಶ[5]
ಕದನ ಕೋಳಾಹಳ[6]ನ[6] ರಾಮನ
ಪದವ ನೆನೆದಡಯಿದನು ದುರ್ಗವನಾ ಮಹಾಪುರದ ೩

ಕೋಟೆಯಿದ್ದುದು ಮುಂದೆ ಶಿವನ ಕ
ರೋಟಿಮಾಲಾವಳಯದವೊಲುಱೆ
ಪಾಟಿಸಿದ ಕೊತ್ತಳದ ಮುಗಿಲಟ್ಟಳೆಯ ಮುರುಹಿನಲಿ
ಘೋಟಕದ ಮದಕರಿಯ ಕಂಡಿಯ
ದಾಟುಗಳ ಹುಲಿಮುಖದ ವಂಕದ
ಕೂಟದುರುಶಾಲಾವಿಲಾಸದ ವಿವಿಧರಚನೆಯಲಿ ೪

---

[1] ಧಾ (ಕ.ಝ.ಟ.ಣ). [2] ಪಶ್ಚಿಮವ (ಕ). [3] ನಲ (ಚ). [4] ದಂ (ಗ.ಝ.ಡ). [5] ನ ರಾಕ್ಷಸ (ಕ), ನು ಕರ್ಕಶ (ಗ), ನು ರಾಕ್ಷಸ (ಝ.ಟ). [6] ನು (ಗ.ಝ.ಟ).

ಅಣವುತಿರ್ದವು ಗೋಪುರಾಗ್ರದ
ಮಣಿಮಯದ ಕಳಶಾಳಿ ತಾರಾ
ಗಣವ[1]ನಂಜಿ[1]ಸುತಿರ್ದವಾ ಮುಖಶಾಲೆಗಳ ಬಳಿಯ
ಕಣುಗಿಡಿಯ ಬೇತಾಳ ಜಟ್ಟಿಗ
ರಣುಕುದೋರುವ ಬೊಮ್ಮರಕ್ಕಸ
ರಣಪಿಶಾಚಿಗಳಱಿದು ಹೊಗ[2]ಗುಡವಂ[2]ಜನಾಸುತನ ೫

ವೀರನವರನು ಕೆಣಕದೊಯ್ಯನೆ
ಚೋರಗಂಡಿಯಲಿಳಿದು ಹೊಕ್ಕನು
ಭೂರಿವೆಳಗಿನ ಮೊದಲವಳಯದ ಕೋಟೆಯನು ಬಳಿಕ
ವೀರ ಕೇಳ್ಕೆ ಕೋಟಿಸಂಖ್ಯೆಯ
ವೀರರಿರ್ದುದು ಭವನ ಬೊಮ್ಮನ
ವೈರವನು ಬಗೆಯದ ಮಹೋನ್ನತಕಾಯರಿದಿರಿನಲಿ ೬

ಅವರ ವಂಚಿಸಿ ಮೆಲ್ಲನೀತನು
ಕವಿವ ಕತ್ತಲೆಯೊಳಗೆ ಹೆಜ್ಜೆಯ
ಸವೆಸಲಱಿದಾ ಸಮಯದಲಿ ಹರಿತಂದಳಾ ಪುರವ
ದಿವದಲುಗುಳುವ ರಾತ್ರಿಯಲಿ ನುಂ
ಗುವ ಮಹಾದ್ಭುತ ಘೋರರಕ್ಕಸ
ಯುವತಿ ಲಂಕಿಣಿಯೆಂಬವಳು ರಕ್ಕಸಿಯರೊಡಗೂಡಿ ೭

ಸುರನರೋರಗ ದೇವಯೋಗಿಗ
ಳಿರುಳು ಸುಳಿದಡೆ ನುಂಗಿ ನೊಣೆವ
ಚ್ಚರಿಯ ರಕ್ಕಸಿಯವಳಲೇ ಕುಶ ಕೇಳು ಕೌತುಕವ
ಹರನೊಡನೆ ಕಲ್ಪದಲಿ ಹಳಚುವ
ದುರುಳಮೃತ್ಯುವಿಗಿಮ್ಮಡಿಯ ನಿ
ಷ್ಠುರದ ರಕ್ಕಸಿ ತಡೆದಳೀತನ ಜಡಿವ ಖಡುಗದಲಿ ೮

ಎಲ್ಲಿಗೆಲವೋ ಹೋಗದಿರು ಕಪಿ
[3]ನಿಲ್ಲದೇ[3]ತರ ಕೆಲಸ ಬೇಹಿನ
ಭುಲ್ಲವಣೆ ಬಾರಿಸುತಲಿದೆ ನೆಱೆ ನಿನ್ನ ಮೋರೆಯಲಿ

[1] ನಣಕಿ (ಕ.ಣ), ನಂದಿ (ಗ). [2] ಗೊಡದಂ (ಕ.ಟ). [3] ಗಿಲ್ಲಗೇ (ಕ.ಝ.ಣ), ಗಿಲ್ಲಿಯೋ (ಗ.ಡ).

ನಿಲ್ಲು [1]ನಿಲ್ಲೆಂದೆ[1]ನಲು ಚೌಪಟ
ಮಲ್ಲನದ ಲೆಕ್ಕಿಸದೆ ಮುಂದಕೆ
ನಿಲ್ಲದಡಿಯಿಡೆ ಹಿಡಿದಳೀತನ ಹೆಡಕ ಹದಿರಿನಲಿ ೯

ಹೆಡಕ ಹಿಡಿದಳೊ ಹಿಡಿಯಳೋ ಕೆಲ
ಸಿಡಿದು ತಿವಿದನು ತೀವ್ರಮುಷ್ಟಿಯು
ಲಡಿಮುಗುಚಿ ಬಿದ್ದಳು ಪುರದ್ವಾರದ ಮಹಾಸೌಧ
ಹುಡಿಗೆದಱೆ ಸುಳಿವಸುರರಸುಗಳು
ಸಡಿಲೆ ರಕುತವ ಕಾಱುತೆಡಬಲ
ದಡಬಳರ ಸದೆ[2]ದೀತ ತಪ್ಪಿಸಿ[2] ಹಾಯ್ದನೂರೊಳಗೆ ೧೦

ಅಱಿದಳವಳು ಬಳಿಕ್ಕ ಪೂರ್ವದ
ಕುಱುಹನಜ ನಿರ್ಮಿಸಿದ ಕಾಲವು
ನೆಱೆದುದಲ್ಲಾ ರಾಮಭೃತ್ಯನಲಾ ಕಪೀಶ್ವರನು
ಹಱಿವುದಿನ್ನಸುರೇಂದ್ರವನಿತೆಯ
ಮೆಱೆವ ಮಂಗಲಸೂತ್ರ ನಾವಿ
ನ್ನ[3]ಱಿಸಿಕೊಳಬೇಕಜನನೆನುತ್ಯೈ[3]ದಿದಳು ಕಮಲಜನ ೧೧

ಈತನೊಯ್ಯನೆ ಬಳಿಕ ಗುರುಬಿನ
ಲಾತು ನಿಲುತಲ್ಲಲ್ಲಿ ರಕ್ಕಸ
ವಾತುಗಳನಾರೈವುತೆಡವೀಥಿಗಳ ರ'ಚ್ಚೆ[4]ಗಳ
ಗೀತವಾದ್ಯಸುನೃತ್ಯಕಥನ
ವ್ರಾತದೆಡೆಗಳಲೆಡಬಲ[5]ದ ಸು[5]ನಿ
ಕೇತನದಲಱಿಸಿದನು ನಿಮಿಕುಲರಾಜನಂದನೆಯ ೧೨

ಅಂಗಡಿಗಳೊತ್ತಿನಲಿ ರಕ್ಕಸ
ರಂಗಣಗಳಲಿ ದೇವತಾಭವ
ನಂಗಳಲಿ [6]ಕೋಠಾರಮಂಟಪಯ[6]ಸಂದಿಗೊಂದಿಯಲಿ
ಹಿಂಗದೋಸರಗೇಳುತವೆ ಸೀ
ತಾಂಗನೆಯ ನುಡಿ ಹುಟ್ಟದೇಯೞನು
ತಂಗಲಾಚುತ ಬೀ[7]ದಿಯಗಲಕೆ ನೋಡುತ್ತೈತಂದ[7] ೧೩

---

[1] ಹೋಗದಿರೆ (ಕ.ಝ.ಟ), ಯಿದಿರಿನೆಲೆ (ಣ). [2] ದೀತ ಮಿಣ್ಣನೆ (ಕ), ದಿಕ್ಕಿತಪ್ಪಿಸಿ (ಚ). [3] ಱಿಚಿ ಕೊಳಲೇ, ಕೆನುತಲವಳ್ಯೈ (ಕ). [4] ಚನೆ (ಚ). [5] ಗಳ (ಗ.ಡ), ದಲಿ (ಝ.ಣ). [6] ಮಠಮಂಟಪಯಂಗಳ (ಕ.ಣ), ಮಂಟಪಯದೇಡೆಗಳ (ಚ). [7] ಡಿನಗಲಕೆ ನೋಡುತ್ತೈತಂದ (ಕ.ಡ), ಡಿನಗಲಕೆ ನೋಡಿದನು ಹನುಮ (ಗ.ಣ).

ಕಳಿದು ಜಾವದಮೇಲೆ ರಕ್ಕಸ
ರುಲುಹು ನಿಲಲಣುರೂಪದಲಿ ಹೊ
ಕ್ಕಳಬಳವನಱಿದಱಿಸಿದನು ವಿವಿಧಾಲಯಂಗಳಲಿ
ಕಳಚಿ ಕದಗಳ ವಾಯುಸರಣಿಯ
ಲಿಳಿದು ಮುದ್ರಿಕೆಯುಂಗುರದ ಮಣಿ
ವೆಳಗಿನಲಿ [1]ನೋಡಿದನು ನಿಮಿಕುಲರಾಜನಂದನೆಯ[1] ೧೪

ನುಡಿಯನಾಲಿಸಿ ಕುಱುಹುಕೊನುಗ
ಳೆಡೆಯನಬಲೆಯರಲಿ ಪರೀಕ್ಷಿಸಿ
ಸಿಡಿದು ನೋಡಿದ ನಿಳಯನಿಳಯಂಗಳಲಿ ನಿಮಿಷದಲಿ
ತೊಡಕುವೀಥಿಯ ಕೇರಿಕೇರಿಗ
ಳೆಡೆಯೆಡೆಯ ಮನೆಮನೆಯ ಮೂಡಣ
[2]ಕಡೆವಿಡಿದು[2] ಮುರಿಮುರಿದು ಕೋಟೆಯ ಸುತ್ತುವಳಯದಲಿ ೧೫

ಮೊದಲ ಕೋಟೆಯ ಸುತ್ತುವಳಯದ
ಸದನಸಂಕುಳ[3]ವನು ಪರೀಕ್ಷಿಸಿ
ಕದಡುಮನದುಬ್ಬರದ ಮಱುಕದಲಿಳಿದನೆರಡನೆಯ
ಪುದಿದ ಮಣಿಕಾಂಚನದ ಲಹರಿಯ
ಹೊದಱುವೆಳಗಿನ ಹೊನ್ನಕೋಟೆಯ
ಸದಮುದದ ಸಂಪದದ ರಕ್ಕಸನಿಳಯಗಳ ಕಂಡ ೧೬

ತಡೆದ ರಕ್ಕಸತಳವಱರ ಜವ
ನೆಡೆಗೆ ಜಾಳಿಸುತಾಳುವೇರಿಯ
ತಡಿವಿಡಿದು ಶೋಧಿಸಿದನಲ್ಲಿ ಸದನಸಂಕುಲವ
ಎಡೆವಿಡದೆ ಮನೆಮನೆಯ ರಕ್ಕಸ
ಮಡದಿಯರ ಮಱದೊಱಗಿದರ ಪಂ
ಗಡವ ಶೋಧಿಸಿ ದಾಟಿದನು ಕೋಟೆಯನು ಮೂಱನೆಯ ೧೭

ವಿಟ ವಿದೂಷಕ ನಾಗರೀಕರ
ನಟಣೆಗೆಡಿಪಂಗನೆಯರಲಿ ಚಾ
ವಟೆಯರಲಿ ಚದುರೆಯರಲುಪಭೋಗಪ್ರಪಂಚಕದ

---

[1] ನೋಡಿದನು ರಘುರಾಜೇಂದ್ರವಲ್ಲಭೆಯ (ಕ), ಜಗದಂಬಿಕೆಯನಱಸಿದನು ಕಲಿಹನುಮ (ಗ), ನೋಡಿದನು ಮಱೆಯದೆ ಮಂದಗಾಮಿನಿಯ (ಟ). [2] ತಡಿವಿಡಿದು (ಗ), ಕಡೆಯಡಸಿ (ಚ). [3] ವನು ನಿ (ಕ.ಡ.ಣ), ಗಳನಿ (ಝ.ಟ).

ಕುಟಿಲಕುಂತ[1]ಳಭರೆಯುರಲಿ[1] ಕಾ
ಲಟೆಯುರಲಿ ಕಾಮುಕಿಯುರಲಿ ಘನ
ಘಟಕುಚೆಯುರಲಿ ಕೂಡೆ ನೋಡಿದನವನಿನಂದನೆಯ ೧೮

ಗಿಳಿಯನೋದಿಸುವಬಲೆಯುರಲು
ಯ್ಯಲೆಯನಾಡುವ ಸತಿಯುರಲಿ ಜೋ
ಗುಳವ ಹಾಡುವ ಗಾಡಿಯುರಲುಪಪತಿಜನಾಲಯಕೆ
ಸುಳಿವ ಸೌಂದರಿಯುರಲಿ ಸಾಧ್ವೀ
ಲಲನೆಯುರಲಿ ಸುಗೀತನರ್ತನ
ಗಳ ವಿಲಾಸಿ[2]ನಿಯುರಲಿ ಕಪಿ[2] ನೋಡಿದನು ಜಾನಕಿಯ ೧೯

ಚೇಟಿಯುರಲೆಡೆಗೆಲಸದವರಲಿ
ಬೇಟೆಕಾತಿಯುರಲ್ಲಿ ಕಡುಕಂ
ಬೇಟದಂಗನೆಯುರಲಿ ಸಂಕೇತನನಿಕೇತನದ
ಕೂಟಣಿಗಳಲಿ ಕುಱುಹುಗೊ[3]ಡದೆ[3]ಡೆ
ಯಾಟದವರಲಿ [4]ವೇಷವಿಧದ ವ[4]
ಧೂಟಿಯುರಲಱಿಸಿದನು ಮಱೆಯದೆ ಮಂದಗಾಮಿನಿಯ ೨೦

ಎಳೆಯುಜವ್ವನೆಯುರಲಿ ಮುಗ್ಧಾ
ಲಲನೆಯುರಲಿ ವಿದಗ್ಧೆಯುರಲಾ
ಕಲಿತಲಲಿತಪ್ರೌಢೆಯುರಲನುಮಾನಮಾರ್ಗದಲಿ
ಸುಳಿಸುಳಿದು ಸೀತೆಯನು ಕಾಣದೆ
ಬಳಲಿದುಮ್ಮಹದಿಂದ [5]ಮಿಕ್ಕಿನ[5]
ನಿಳಯ ನಿಳಯವ ಶೋಧಿಸುತ ಸುಳಿದಾಡಿದನು ಹನುಮ ೨೧

ಸುರವಿರೋಧಿಧರಾಮರರ ತ
ದ್ಧರಣಿಪರ ತದ್ವೈಶ್ಯ ಶೂದ್ರಾ
ದ್ಯರ ನಿಕೇತನನಿಚಯದಲಿ ನಿರ್ಣೈಸಿ ನಾಲ್ಕನೆಯ
ಸುರುಚಿರಪ್ರಾಕಾರದಭ್ಯಂ
ತರದ [6]ಧನಿಕರ[6] ರಾಜಪುತ್ರರ
ಪರಿಪರಿಯ ಮಣಿಭವನವೀಧಿಯಲಱಿಸಿದನು ಹನುಮ ೨೨

---

[1] ಳೆಯುರಲಿ ಘನ (ಗ), ಳದಬಲೆಯುರ (ಝ.ಟ.ಡ). [2] ನಿಜನಗಳಲಿ (ಕ). [3] ಟ್ಟೆ (ಕ.ಟ.ಣ). [4] ವಿವಿಧವೇಷವಿ (ಕ.ಟ), ವೇಷ ವಿವಿಧವ (ಚ). [5] ಖಳಜನ (ಗ.ಝ.ಟ.ಡ.ಣ). [6] ನಿರುಪಮ (ಗ.ಝ.ಡ).

ದಾಂಟಿ ಬಳಿಕಾ ಪರಿಧಿಯನು ನೈ
ಶಾಟಭೈರವನಱಿಸಿದನು ಮಣಿ
ಕೂಟದುಪ್ಪರಿಗೆಗಳ ಕೇಳೀಗೃಹದ ಸತಿಯರಲಿ
ನಾಟದಾದುದು ಸುದ್ದಿ ಬುದ್ಧಿಯು
ಕೋಟಲೆಯ ಕೊಲ್ಲಣಿಗೆಯಲಿ ಮೇ
ಗೋಟೆಯನು ಹತ್ತಿದನು ಹದಿನಾಱನೆಯ ಘಳಿಗೆಯಲಿ ೨೩

ಹೊಳಕಿದುದು ಕಿರಣಾಳಿ ಹೇಮದ
ಹಳಿಗಳಲಿ ಸಂಧಿಸಿದ [1]ಕುಟ್ಟಿಮ[1]
ತಳದ ಮಣಿಹರ್ಮ್ಯಾ[2]ದಿ[2]ಗಳ ಹಂತಿಗಳ ಸೊಗಸಿನಲಿ
ನಿಳಯ ನಿಳಯದ ಸೋಮಸೂರ್ಯರ
ಲಲಿತವೀಥಿಯ ಭದ್ರಭವನಾ
ವಳಿಯ ಕನಕದ ತೋ[3]ರಣಗಳೋಜೆಯಲಿ ರಂಜಿಸಿತು[3] ೨೪

ಈಡಿಱಿದ ಮಣಿಮಯದ ಕಲಶದ
ಝಾಡಿವೆಳಗಿನ ಹೇಮರಸದಲಿ
ತೀಡಿ ತೊಳಗುವ ಸುಧೆಯ ಸೊಂಪಿನ ಸೂಸಕಂಗಳಲಿ
ಜೋಡಿಸಿದ ಜಾಂಬೂನದದ ಪರಿ
ಪಾಡುಗಳ ಪಲ್ಲವದ [4]ಫಳಿ[4]ಯ ಪ
ವಾಡಗಳ ಕೇತನ ನಿಕೇತನವೆಸೆದವಲ್ಲಲ್ಲಿ ೨೫

ನಗರ ತಾನದು ನೂಱುಯೋಜನ
ದಗಲವನಿತಱ ನಾಲ್ಕು ಭಾಗೆಯ
ಜಗತಿ ತಾನೊಳಕೋಟೆಯುದಱುನ್ನತಿಯ ವೈಭವವ
ಹೊಗಳಲೆನ್ನಳವಲ್ಲ ಹನುಮನ
ಬಗೆಯದೆಂತುಟೊ ಸರ್ವಗತನೆಂ
ಬೊಗುಮ ಹನುಮಂಗಲ್ಲದೆಲ್ಲಿಯದಸುರಹರಗೆಂದ ೨೬

ಮನೆಮನೆಗಳಲಿ ಪುರಜನಂಗಳ
ಕನಸಿನಲಿ ತಿಳಿದೆದ್ದ ನಿದ್ರೆಯ
ಜನದ ಲೋಚನವೀಥಿಯಲಿ ವಿವಿಧಾಲಯಂಗಳಲಿ

---

[1] ಹೊದಕೆಯ (ಗ), ಕಟ್ಟಿಯ (ಝ), ತಟ್ಟಿಯ (ಡ), ಕೂಟ್ಮಳ (ಣ). [2] ಳಿ (ಕ.ಡ.ಣ). [3] ರಣಗಳೋಜೆಯಲಿ (ಗ.ಟ.ಡ), ರಣದ ಜೋಕೆಯಲಿ (ಝ). [4] ಫಣಿ (ಗ.ಡ), ಮಣಿ (ಝ), ಬಳಿ (ಣ).

ಹನುಮಮಯವಾಗಿರ್ದುದೈ ನೃಪ
ತನುಜ ಕೇಳಟಿಸಿದನು ಸೀತಾ
ವನಿತೆಯನು ವೈಚಿತ್ರ್ಯಗತಿಯ ಜವಾಯ್ಲ ಜೋಕೆಯಲಿ ೨೭

ಶುಕನ ಭವನವನಾ ಮಹಾಪಾ
ರ್ಶ್ವಕನ ಮನೆಯ ಮಹೋದರನ ಸ
ದ್ಮಕವ ಸಾರಣನಾಲಯವ ಸದನವ ನರಾಂತಕನ
ವಿಕಟಯುದ್ಧೋನ್ಮತ್ತ ದೇವಾಂ
ತಕ ವಿರೂಪಾಕ್ಷಪ್ರಮುಖ ನಾ
ಯಕರ ನಿಳಯಂಗಳಲಿ ನೋಡಿದನವನಿನಂದನೆಯ ೨೮

ವೀರಕುಂಭ ನಿಕುಂಭ ಕಲಿಜಂ
ಭಾರಿಜಿತು ಧೂಮ್ರಾಕ್ಷ ದುರ್ಮದ
ಘೋರ[1]ಬಲ[1]ಮಿತ್ರಜ್ಞ ವಿದ್ಯುಜ್ಜಿಹ್ವ ಶಾರ್ದೂಲ
ಶೂರರಿಪು ಮಕರಾಕ್ಷ ರಣಜ
ಜ್ವಾರಬಲನತಿಕಾಯಮುಖ್ಯ ಕು
ಮಾರವರ್ಗದ ಮನೆಗಳಲಿ ನೋಡಿದನು [2]ಜಾನಕಿಯ[2] ೨೯

ತ್ರಿಶಿರ ವಿದ್ಯುನ್ಮಾಲಿ ಸೇನಾ
ವಿಸರಪತಿ ಸುಮತಿ ಪ್ರಹಸ್ತರ
ವಸತಿಗಳಲಿ ವಿರೂಪಲೋಚನ ಲೋಹಿತಾಂಬಕರ
ಪಿಶಿತಭಕ್ಷಣ ಜಂಬುಮಾಲಿಗ
ಳಸುರನಾಯಕರಮಲಗೇಹ
ಪ್ರಸರದಲಿ ನೋಡಿದನು ಪರಮಪತಿವ್ರತಾಸತಿಯ ೩೦

ಕೇಳಿ ಬಲ್ಲೈ ಹಿಂದೆ ಬನದಲಿ
ಬೋಳೆಯಂಬಿನಲೂರ್ಮಿಳಾಪತಿ
ಬೋಳಿಸಿದ ಕಿವಿಮೂಗಿನಸುರೆಯ ಕಥೆಯನಾ ಸತಿಯ
ಆಲಯಕೆ ಬರಲವಳು ಕಡುಕಿವಿ
ಮೂ[3]ಳುಗಳ[3] ಮೂಕೊಟಿತಿಯರ ಸ
ಮ್ಮೇಳದಿಂದಿರ್ದಳು ಕರಾಳಪ್ರಮುಖಿ ಶೂರ್ಪಣಖಿ ೩೧

---

[1] ತರ (ಕ.ಚ). [2] ಮಾನಿನಿಯ (ಗ.ಝ.ಡ.ಣ). [3] ಳೆಯರ (ಕ.ಡ).

ಹೊಕ್ಕನವಳಾಲಯವನಾ ಲಯ
ರಕ್ಕಸಿಯು ಕಂಡಾಚರಿಸಿ ಹಿಂ
ದಕ್ಕೆ ಹೆಜ್ಜೆಯನಿಕ್ಕಿ ಹೆದಱಿದು ರಾಮ ರಾಮೆನುತ
ಬೆಕ್ಕಸಂಬೆಱಗಾಗಿ ಭೈರವ
ನಕ್ಕ ತಾನಿವಳಾಗಬೇಕೆನು
ತಿಕ್ಕೆಲನನಾರೈವುತಂಜುತ ನೋಡಿದನು ಹನುಮ ೩೨

ಉಳುಹಿಕೊಂಡನು ರಾಮನೀಬೆಯು
ಚೆಲುವಿಕೆಯು ಹೋಗಾಡಿ ದಿಟವಿವ
ಳೆಳುಕದಿರ್ದಡೆ ತಿನ್ನದಿಹಳೇ ತೋಱುವೀ ಜಗವ
ಜಲಜಭವನಾರೊಡಲಲೀಬೆಯು
ನಿಳುಹಿದನೊ ಹಡೆದವಳ ಹೊಟ್ಟೆಯ
ವಳಯುವೆಂತುಟೊ ಮಾ ಎನುತ ಬೆಱಗಾದನಾ ಹನುಮ ೩೩

ಇದ್ದರಲ್ಲಿ ಸಹಸ್ರಸಂಖ್ಯೆಯ
ಮದ್ದುಕುಟಿಲದ ಮಾಯಕಾತಿಯ
ರಿದ್ದೆಸೆಯು ಕಿವಿಗೊಯ್ಕಿಯರು ಮೂಳಿಯರು ಮುಕ್ಕಿಯರು
ಕದ್ದವರು ಕೈಗಡಿಕೆಯರು ಮೊಲೆ
ಬಿದ್ದವರು ಮುದು[1]ಗೂ[1]ಟಣಿಗಳವ
ಳಿದ್ದೆಸೆಯು ಕಟ್ಟೋಲಗದ ಸೊಕ್ಕುಗಳ ಸೊಗಸಿನಲಿ ೩೪

ಮೆಱೆದವಿದಿರಲಿ ಕೋಣ ಕುಱಿದಲೆ
ದುಱುಗಲೊಟ್ಟಿಲದೊಂದುಕಡೆಯಲಿ
ಜುಱುತ ರಕುತದ ರಸದ ರಂಜಣಿಗೆಗಳದೊಂದೆಸೆಯು
[2]ನಿಱುಗರುಳ[2] ಪೂದೊಂಡೆಗಳಲು
ಕ್ಕಿಱುವ ಕಳುಗೊಡನೆಡೆಗಳಲಿ [3]ಕುಕಿ
ಲ[3]ಱಿದು ಕುಣಿವಸುರೆಯರ ಕಂಡುಗುಳಿದನು ಕಲಿಹನುಮ ೩೫

ಕಡಿವ ಕೊಚ್ಚುವ ಕೊಱೆವ ಕುಱುಕುವ
ಸುಡುವ ತಾಳಿಸಿ ತಿಂಬ ತೇಗುವ
ಕುಡಿವ ಹಾಡುವ ಹಾರವಿಸುವಸುರೆಯರ ಮೈಮದದ

[1] ಕುಂ (ಕ), ಗುಂ (ಗ). [2] ತುಱುಗಲಿನ (ಕ.ಚ.ಣ). [3] ಕುಲಿಕಿ (ಕ.ಟ), ಕಡುಕಿ (ಗ), ಕುಕ್ಕಿ (ಝ), ಕುರಿದ (ಡ).

ಇಡಿದ ಹೊಲಸಿನ ನಾತದುಬ್ಬರ
[1]ದೆಡಬಲದ[1] ತಿನಿಸುಗಳ ಮಧ್ಯದ
ಹಡಿಕೆಗೈನೆಯು ಕಂಡು ಹೇಸುತ ಹನುಮ ಹೊಱವಂಟ ೩೬

ತಿರುಗಿದನು ಬಲಕಾಗಿ ಹರಭೂ
ಧರವನೇಳಿಪ ಹಬ್ಬುಗೆಯು ಹರ
ವರಿಯು ಯೋಜನವೈದಱಳತೆಯು ಕನಕಮಣಿಮಯದ
ಪರಿಪರಿಯು ಪುತ್ತಳಿಯು ಚಿತ್ರದ
ತರತರದ ನೆಲೆನೆಲೆಯು ಮಣಿಮಂ
ದಿರವ ಕಂಡನು ಕುಂಭಕರ್ಣನಿಶಾಚರೇಶ್ವರನ ೩೭

ಎರಡುಯೋಜನದಾಯತದ ಪರಿ
ಸರದ ಮಣಿಪರಿಯಂಕದಲಿ ತ
ನ್ನೆರಡುದೆಸೆಯಲಿ ತನ್ನ ತೂಕದ ಘೋರಯುವತಿಯರ
ಕರದ ತಲೆಗಿಂಬಿನಲಿ ನಿದ್ರೆಯ
ಭರದಲಿರ್ದನು ನೀಲಗಿರಿಯನು
ಸರಸಿಜೋದ್ಭವ ಕಡೆದು ಕೆಡಹಿದ ತೆಱದಲಸುರೇಂದ್ರ ೩೮

ಜಗದ ಕೊಲೆಗೆಲಸದಲಿ ಬಳಲಿಕೆ
ಬಿಗಿದ ನಿದ್ರೆಯ ಭೈರವನೊ ರತಿ
ಯೊಗಡಿಕೆಯು ವಿಶ್ರಮಸುಷುಪ್ತಿಯು ಲಯಕೃತಾಂತಕನೊ
ಉಗಿಸಿ ನೀರನು ಬಾರಿಸಿದು ಮೈ
ದೆಗದ ಮುಗಿಲಿನ ಮೂಲಮೂರ್ತಿಯೊ
ವಿಗಡರಕ್ಕಸನೋ ಮಹಾದೇವೆನುತ ಬೆಱಗಾದ ೩೯

ಲೋಕಕಿವ ಮುನಿದೆದ್ದನಾದಡೆ
ಬೇಕು ಬೇಡೆಂಬವರದಾರು ಪಿ
ನಾಕಿಪದ್ಮಜರುಗಳು ಪಡಿಯಲ್ಲೆಂಬ ಬಗೆ ಮನವ
ಸೋಕಿಕೊಂಡಿದೆ ಗೆಲವು ನಮ್ಮಿ
ಕ್ಷ್ವಾಕುಕುಲಜಂಗಹುದು ಚಿತ್ರವಿ
ಲೋಕನಕೆ ನೆಲೆಗೊಳ್ಳದಿದೆ ನೇತ್ರಂಗಳೆನಗೆಂದ ೪೦

---

1 ದಡಬಳದ (ಗ), ದಡಗುಗಳ (ಝ), ಲೆಡಬಿಡದೆ (ಟ).

ಇವನು ಹಿಂದುದಿಸಿದಡೆ ಸಾವರೆ
ದಿವಿಜರಿಪು ಮಧುಕೈಟಭಾದಿಗ
ಳವತರಿಸುವನೆ ದೈತ್ಯಹರ [1]ನಾನಾ[1]ಯುಗಂಗಳಲಿ
ಇವದಿರಾಳ್ತನಕಮರತತಿ ಕಂ
ಪವನು ತಾಳುವುದೇನರಿದು ಶಿವ
ಶಿವ ಮಹಾದೇ[2]ವೆನುತ ಬೆಱಗಿನಲಿರ್ದನಾ ಹನುಮ[2] ೪೧

ಧರೆಯ ಮುಳುಗಿ[3]ಸುತೇಳ್ವ ಲಯ[3]ಸಾ
ಗರದ ರಭಸವೊ ಹೊತ್ತ ವಿಶ್ವಂ
ಭರೆಯ ಬಿಸುಟಹಿಪತಿಯ ನಿಡುಸುಯ್ಲುಗಳ ಸೂಳುಗಳೊ
ಬಿರಿಪ ಕಮಲಭವಾಂಡರಂಧ್ರದ
ಲುರವಣಿಪ ಬಹಿರಾನಿಲನ ಬಲು
ವೊರಹವೋ ಕೊರಹವೊ ಮಹಾದೇವೆಂದನಾ ಹನುಮ ೪೨

ಎನುತ ಮೆಲ್ಲನೆ ಮಣಿಖಚಿತಕಾಂ
ಚನದ ಭಿತ್ತಿಯ ಬಳಿವಿಡಿದು ಸಾ
ರ್ದನು ಸುರಾರಿಯ ಸುಳಿವ ಮೂಗಿನ ಸುಯ್ಲ ಸರಿಸದಲಿ
ವನಿತೆ ಸಿಂಹಿಕೆ ಸೆಳೆದ ನೆಳಲಿನ
ಘನತೆಗಿಮ್ಮಿಗಿಲಾಗಿ [4]ಸೆಳೆದುದು[4]
ಹನುಮನನು ಹೊಯ್ದೊಡೆಮುರಿದು ನಿಟ್ಟುಸುರು ರಕ್ಕಸನ ೪೩

ಉಸುರಬಿಡೆ ಹೊಱಬೀಳ್ವನೊಳದೆಗ
ದುಸುರಿನಲಿ ಮುಳುಗುವನು ಮೂಗಿನ
ಕಸುಮಳದ ಕಾವಳದ ಕಲಿತಶ್ಲೇಷ್ಮಶರಧಿಯಲಿ
ಉಸುರಗಮನಾಗಮದ ಸರಣಿಯ
ಗಸಣಿಯಲಿ ಬೆಂಡಾಗಿ ಕಿಡಿಕಿಡಿ
ಮಸಗಿ ಕೋಪಾನಲನನೋಕರಿಸಿದನು ಕಲಿಹನುಮ ೪೪

ಬೆಳದನಾ ನಾಸಿಕದ ನಾಳದ
ಕಳಿಯ ಕುಹರದ ಕೋಹಿನಲಿ ಕೊಂ
ಡೆಳ[5]ದು ಸೂಸುವ ಸುಯ್ಲ[5] ಬಟ್ಟೆಗೆ ಕೀಲ ಕೊಟ್ಟಂತೆ

---

[1] ತಾ ಯುಗ (ಗ.ಟ.ಡ). [2] ವೆನುತ ಬೆಱಗಾದನಾ ಹನುಮ (ಕ.ಗ.ಣ), ವಾಳುತನವಿವಗೆಂತುಟೋಯೆಂದ (ಝ.ಟ), ವೆನುತ ಮನದಲಿ ಹೆದಱಿದನು ಹನುಮ (ಡ). [3] ಸುತ್ತೈದಿ ಬಹ (ಗ), ಸಲೇಳ್ವ ಘನ (ಝ.ಟ), ಸಲೇಳ್ತಲಿಹ (ಡ). [4] ಸೇದಿತು (ಕ.ಗ.ಡ.ಣ). [5] ವ ನಾಶಿಕದಸುರ (ಕ.ಝ.ಟ.ಣ).

ಬಲಿದುದುಬ್ಬಸವಖಿಳಕರಣದ
ಬೆಳಸು ಬೀತುದು ಬೆದಱಿ ಸೀತನು
ಪ್ರಳಯದಲಿ ಸಿಡಿಲೆಱಗಿದವೊಲಳವಳಿಯೆ ಪೌರಜನ ೪೫

ಶೀತ[1]ಭರಕೀ[1] ಹನುಮನುಲ್ಕಾ
ಪಾತದಂತಿರೆ ಸಿಡಿದುಬಿದ್ದನು
ಕಾತರಿಸಿ ಮಯರಚಿತ ವಜ್ರ[2]ಸ್ತಂಭ[2]ವನು ತಾಗಿ
ತಾತನನು ಕರ್ಣಾಟಕದ ಜನ
ಜಾತನೋವಿಗೆ ನೆನೆವವೊಲು ನಿ
ರ್ವ್ಯಾತ ನೆನೆದನು ನೊಂದು ನೇವರಿಸುತ್ತ [3]ನೊಸಲೆಡೆಯ[3] ೪೬

ಕೋಪ ಕೊನರಿತು ಮತ್ತೆ ಲಯಶಿಖಿ
ರೂಪನಾದನು ಸಂಕ್ರಮಿಸಿತಾ
ಟೋಪವಸುರನ ಕೊಲೆಗೆ ತಂದನು ಮನವನನಿಲಸುತ
ಕೈಪರೆಯ ಮರುಳುಗಳ ನರಮಾಂ
ಸೋಪಹಾರದ ಸುರರ ನೆತ್ತರ
ಲೇಪದುನ್ನತಶೂಲವಿರಲದ [4]ಕೊಂಡು ಬೊಬ್ಬಿಱಿದ[4] ೪೭

ಕೊಲುವೆನಿದಱಿಂದಿವನನೆನುತ
ಗ್ಗಳ ಶಿಲೋಚ್ಚಯಸಾರಬಾಹಾ
ಲುಳಿತಬಲನೆತ್ತಿದನು ಶೂಲವ ಶೂಲಿಯಂದದಲಿ
ಅಲುಗಲೊಲದುದಲ್ಲೆ ತ್ರಿಕೂಟಾ
ಚಲ ಮಹಾದೇವಾ ಮಹಾಯುಧ
ದಳವದೆಂತುಟೊ ಸೂಸಿದವು ಕಿಡಿ [5]ಕೂಡೆ[5] ದೆಸೆದೆಸೆಗೆ ೪೮

ಎತ್ತಿ ಹೂಣಿಸಿ ಘುರಿಘುರಿನೆ ಹ
ಲ್ಲೊತ್ತಿ ಹೂಡಿದನೆದೆ[6]ಗೆಯ[6]ಕಟಾ
ಸತ್ತಡಿವನೆಂದುದಿಸುವ[7]ನು[7] ಬಳಿಕೆಮ್ಮ ರಘುಪತಿಯು
ಒತ್ತಬರಡಾಹವಕೆ ತನುವನು
ತೆತ್ತು ನಿಲುವವರಾ[8]ರು ನೆಱೆದು
ರ್ವೃತ್ತತನವಿದು ನಮ್ಮದೆಂದಂತರಿಸಿದನು ಹನುಮ[8] ೪೯

---

[1] ಭಾರಕೆ (ಗ.ಝ.ಟ.ಡ), ಭರಕಾ (ಚ). [2] ದ ಕಂಭ (ಗ.ಝ.ಟ.ಡ). [3] ಸಿರಿಮುಡಿಯ (ಗ), ಲಿನಕುಲನ (ಡ). [4] ಕೊಂಡು ಕುಬುಬಿಱಿದ (ಕ), ಕಂಡು ಹಲುಮೊಱೆದ (ಗ), ಕಂಡು ಕುಬುಬಿಱಿದ (ಝ), ಕಂಡು ಬೊಬ್ಬಿಱಿದ (ಡ). [5] ಸೂಸೆ (ಗ.ಡ.ಣ). [6] ಯುಲ (ಕ.ಟ.ಡ), ಯನ (ಝ). [7] ನೊ (ಕ.ಟ.ಡ.ಣ). [8] ರೆನುತ ತನ್ನತ್ತ ತೆಗೆದನು ತವಕಿಸುವ ಕ್ರೋಧದುಬ್ಬಟೆಯ (ಕ), ರು ನೆಱೆ ದುರ್ಮತ್ತತನವಿದು ನಮ್ಮದೆಂದಂತರಿಸಿದನು ಹನುಮ (ಗ.ಟ.ಡ).

ಬದುಕು ನಿದ್ರೆಯಲಿದ್ದವನ ಕೊಲು
ವುದು ಮಹಾವೀರರಿಗೆ ಕುಂದ
ಭ್ಯುದಯವಕ್ಕುಡಿಸುವುದು ನಗುವುದು [1]ಲೋಕದಖಿಳಜನ[1]
ಬದುಕು ಬದುಕೆನುತಿಳುಹಿದನು ಬಳಿ
ಕದುಭುತ[2]ವ[2] ಶೋಧಿಸಿದಯಸ್ಕಾಂ
ತದ ಮಹಾದ್ಭುತಭಾರದುಗ್ರನಿಶಾಚರಾಯುಧವ ೫೦

ತಿರುಗಿದನು ಬಳಿಕಲ್ಲಿ ಸೀತೆಯ
ಪರಿಯ ಕಾಣದೆ ತನ್ನಿಕೇತನ
ದೆರಡುಮ್ಮೈಗಳ ಮಂದಿರವ ಶೋಧಿಸುತ ಶೀಘ್ರದಲಿ
ಪರಮಪುಣ್ಯಪತಿವ್ರತಾಜನ
ದರಸಿ ತನಗಿನ್ನೆಲ್ಲಿ ನೆಱೆಗೋ
ಚರಿಸುವಳೊ ಹಾಯೆನುತ [3]ಹಮ್ಮದವೋದನಾ ಹನುಮ[3] ೫೧

ಬರಬರಲು ಮುಂದೆಸೆದುದಗ್ಗದ
ಪರಮವೈಷ್ಣವ ಚಕ್ರವರ್ತಿಯ
ವರನಿಕೇತನ [4]ಮೇಲುಕಟ್ಟಿನ ಚಿತ್ರಪತ್ರಗಳ[4]
ಹರಹಿನಲಿ ಹೊದಱೆದ್ದ ಕಲಶೋ
ತ್ಕರಗಳಲಿ ಕಮನೀಯತರದು
ಪ್ಪರಿಗೆಗಳಲಮರೇಂದ್ರನಮಳಾಗಾರದಂದದಲಿ ೫೨

ಆವ ಕಡೆಯಲಿ ನೋಡಿದಡೆ ಲ
ಕ್ಷ್ಮೀವಿಲಾಸದ [5]ವಿಮಲ[5]ಮಂಟಪ
ವಾವ ಕಡೆಯಲಿ ತಿರುಗಿದಡೆ ಮಣಿಭದ್ರಭವನಚಯ
ಆವ ಕಡೆಯಲಿ ಹೊಕ್ಕಡನುಪಮ
ದೇವಪೂಜಾ[6]ಗೃಹಗಳ[6]ರ್ದವು
ಶ್ರೀವರನ ಪಾಲ್ಗಡಲಮಧ್ಯದ ಭವನದಂದದಲಿ ೫೩

ಹರಿಕಥಾಸಂಗತಿಯ ಚಿತ್ರೋ
ತ್ಕರದ ಮಯಭಿತ್ತಿಗಳು ನೋಡಲು
ಹರಿಯ ನಾಟಕದಂಗನಾವಿಭ್ರಮವಿಲಾಸಮಯ

---

[1] ಜಗದ ಜನನಿಕರ (ಕ.ಟ). [2] ದ (ಗ.ಝ.ಡ ಣ). [3] ಹಮ್ಮದವೋಗುತ್ತೈತಂದ (ಗ), ಹಮ್ಮೈಸುತ್ತ ಕಲಿಹನುಮ (ಚ), ಹಮ್ಮದವೋಗುತಾಹನುಮ (ಡ.ಣ). [4] ಕೇತನಧ್ವಜ ಚಿತ್ರಪತ್ರಗಳ (ಕ.ಟ.ಣ), ಮೇಲುಕಟ್ಟಿನ ಚಿತ್ರಪತ್ರಾಳಿ (ಗ). [5] ವಿವಿಧ (ಕ.ಝ). [6] ಗಾರವಿ (ಕ.ಝ.ಣ).

ಹರಿಯ ಗೀತದ ಗಾಯಕರ ವಿ
ಸ್ತರಣಮಯುವಾಗಿರ್ದುದ್ದೈ ಜಾ
ಗರದಲಿದ್ದನು ವರವಿಭೀಷಣದೇವ ಹರಿದಿನದ ೫೪

ಲಲಿತಹೇಮದ ವಿವಿಧರತ್ನಾ
ವಳಿಯು ಹರಿಯವತಾರದನುಪಮ
ವಿಲಸಿತದ ವರಸಾಲಭಂಜಿಕೆಗಳ ವಿಲಾಸದಲಿ
ವಳಯುವಳಿಯದ [1]ವಿವಿಧ[1]ಸೌಧಾ
ವಳಿಗಳಲಿ ವೃಂದಾವನವು ಕಂ
ಗೊಳಿಸಿದುದು ಮಧ್ಯದಲಿ ಮಣಿಮಯಭದ್ರಭವನಿಕೆಯು ೫೫

ಖಳರೊಳಗೆ ಸಜ್ಜನ[2]ನು[2] ಹಾಲಾ
ಹಲದೊಳಗೆ ಸುಧೆ ಕಾಮುರಂಗಳ
ಹಳುವದಲಿ ಹರಿಚಂದನವು ಶಿಖಿಯೊಳಗೆ ಶೀತಳವು
ಕಲುಗಳೊಳು ನಿಜಪರುಷ ಜನಿಸುವು
ದಿಳೆಗೆ ಚಿತ್ರವಲಾಯೆನುತ ಮೈ
ಯೊಲ[3]ಹಿನಲಿ ನೋಡಿದನು ದೂರದಲಾ[3] ವಿಭೀಷಣನ ೫೬

ಆದಡಹನಂದಿನ ಮಹಾಪ್ರ
ಹ್ಲಾದನಿವ ಸಂದೇಹವಿಲ್ಲ ತ
ಳೋದರಿಯು ತಂದವ ಹಿರಣ್ಯಕನಹುದು ತಪ್ಪದಿದು
ಆ ದಶಸ್ಯಂದನನ ನಂದನ
ನಾದಿನರಕೇಸರಿಯ[4]ವೊಲು[4] ನೆಱೆ
ವೇದಿಸುತ್ತಿದೆ ಮತಿ ವಿವೇಕವನೆಂದನಾ ಹನುಮ ೫೭

ಎನುತ ಮೆಲ್ಲನೆ ಸೂಕ್ಷ್ಮರೂಪವ
ನನು[5]ಕೊಳಿ[5]ಸಿ ಕಾಲಿಕ್ಕೆ ಮಣಿಮಯ
ಕನಕರಚಿತದ್ವಾರದಿದ್ದೆಸೆಗಳಲಿ ಶುಕನಿಕರ
ಹನುಮ ಹೊಗದಿರು ಪರವಧೂಜನ
ದನುಜನರಮನೆಯಿದುಕಣಾ ಕಾ
ಮಿನಿಯನಱಸುವ ಠಾವಿದಲ್ಲೆನೆ ಕೇಳಿದನು ಹನುಮ ೫೮

[1] ಲೆಸೆವ (ಗ.ಡ), ಸೌಧ (ಚ). [2] ರು (ಚ.ಝ). [3] ದು ನೋಡಿದನಘ ವಿದೂಷಣನಾ (ಕ), ದು ನೋಡಿದನಘವಿದೂಷಣನನು (ಚ), ಹಿನಲಿ ನೋಡಿದನು ಕೊಂಡಾಡುತ (ಣ). [4] ಲಾ (ಕ.ಝ.ಟ.ಣ). [5] ಕರಿ (ಗ.ಟ.ಡ), ವದಿ (ಣ).

ತಪ್ಪ[1]ದಿದು ಶುಕವಚನವೆನುತಾ
ವೊ[1]ಪ್ಪದಲಿ ತಿರುಗಿದನು ಜನಕಜೆ
ಯಿಪ್ಪ ಠಾವಿನ್ನಾವುದೋಯೆನುತತುಳಚಿಂತೆಯಲಿ
ಕಪ್ಪೊಗುವ ಕತ್ತಲೆಯೊ[2]ಳ್ಳೈತಂ
ದೊಪ್ಪುತಾಂ[2]ದೋಳದಲಿ ಸುರಕುಲ
ದರ್ಪದಳನ ದಶಾಸ್ಯನರಮನೆಗಾಗಿ ನಡೆತಂದ ೫೯

ಮೆಱೆದುದ್ದೈ ಮರಕತಶಿಲಾ ಬಂ
ಧುರದ ಕೋಟಾವಳಯ ಕನಕೋ
ತ್ತ್ರ ನಿಬಂಧದ ನಿಖಿಳರತ್ನಾವಳಿಯ ವಿಲಸಿತದ
ತರತರದ ತನಿವೆಳಗಿನಬುಧಿಯ
ತೆರೆಯ ತೆನೆಗಳ ತೆಕ್ಕೆಯಲಿ ದಶ
ಶಿರನ ಭವ[3]ನಾವಳಿಯ ಶಾಲಾವೀಥಿ ರಂಜಿಸಿತು[3] ೬೧

ಹೊಕ್ಕನಾ ಮುಖಶಾಲೆಯನು ಕಳಿ
ದೆಕ್ಕತುಳದಲಿ ಮೆಱೆದುದ್ದೈ ಸಭೆ
ಹೊಕ್ಕುಳಿನ ಹೂದೊಡವಿನರಸನ ಸಭೆಯ ಸಡಗರವ
ಮಿಕ್ಕು ಶತಸಾವಿರದ ಕಂಬದ
ತೆಕ್ಕೆಗಳ ತನಿವೆಳಗಿನಲಿ ಕ
ಣ್ಣಿಕ್ಕಲಸದಳವೆಂಬವೊಲು ತೇಜೋವಿಲಾಸದಲಿ ೬೧

ಪರಿಕಲಿ[4]ಸಿದುದು[4] ಮೌಕ್ತಿಕವ ಸಂ
ಚರಿಸುವಾನೆಯ [5]ಮತ್ತಮ[5]ದನಿ
ರ್ಜರವ ಸುಳಿವಬಲೆಯರ ಪದತಳಯುಗಳದಲತಗೆಯ
ಹೊರೆದ ಹಜ್ಜೆಯನಳಿಕುಳಂಗಳ
ನೆರವಿ [6]ಮ[6]ಲ್ಲಿಗೆ ಮೃಗಮದಾಳಿಯ
ಸರಸಿರುಹವೆಂದೆಱಗುವಸುರಸಭಾಂಗಣವ ಕಂಡ ೬೨

---

[1] ದೆನುತಾ ಹನುಮನಾ ನುಡಿಯೊ (ಗ.ಚ.ಜ.ಟ). [2] ಳಗೆ ನಡೆತಪ್ಪನಾಂ (ಕ.ಟ). [3] ನಾವಳಿಯ ವೀಥಿಯ ಭದ್ರಭವನದಲಿ (ಗ.ಝ),ನದ ವಳೆಯ ವೀಥಿಯ ಸೊಗಸು ರಂಜಿಸಿತು (ಚ), ನಾವಳಿಯನನುಪಮಭದ್ರಭವನದಲಿ (ಡ), ನಾವಳಿಯ ಕಂಡನು ಸಾಲವೀಥಿಯಲಿ (ಞ). [4] ಸದಿಹ (ಗ.ಡ), ಸಿದುರು (ಚ), ಸುವಾ (ಣ). [5] ಮುತ್ತುಮ (ಕ), ಮಸ್ತಕ (ಚ), ಮುಕ್ತಮ (ಟ.ಣ). [6] ಯ (ಕ.ಚ).

[1]ಕಳಿದು ಮುಂದಣ ವಿವಿಧಮಣಿ[1]ಮಂ
ಜುಳ ಮುಖದ್ವಾರಗಳ ಬಲಿದ
ಗ್ಗಳ[2]ವ[2] ಮುಱಿದೊಳಹೊಕ್ಕನೀಪರಿ ಕಣ್ಣೆಯ ಕಣ್ಣೆಯುದಲಿ
ಎಲೆ ಕುಮಾರರು ಕೇಳಿರೈ ಕಂ
ಗೊಳಿಸಿತಿದಿರಲಿ ಕಾಮಕೇಳೀ
ವಿಲಸಿತನ ರಾವಣನ ರಂಜಿತ ರಾಜಮಣಿಭವನ ೬೩

ಹೊಡಕರಿಸುವುದು ರಜನಿ ರಜನಿಯ
ಕುಡಿವುದಮಳಸುಸಾಂದ್ರ ಚಂದ್ರಿಕೆ
ಬಿಡದೆ ಚಂದ್ರಾತಪವನಪಹರಿಸುವುದು ಹೊಂಬಿಸಿಲು
ಕಡೆದ ಕರುವಾಡದ ಕವಾಟದ
ಕಡೆವಿಡಿದು ಹೊಂಬೆಸೆದಲುಱೆ ಹೊಗ
ರಿಡುವ ನೀಲದ ಮೌಕ್ತಿಕದ ಮಾಣಿಕದ ಲಹರಿಯಲಿ ೬೪

ಬಡಗಿಯರು ಮಯ ವಿಶ್ವಕರ್ಮರು
ಮೃಡ ಸರೋಜಜರಿವಗೆ ಬೇಡಿದ
ಕೊಡುವವರು ಭಂಡಾರಿ ಧನಪತಿ ಗುರು ಮುಹೂರ್ತಿಕನು
[3]ಗೆಡೆಗರಿಂ[3]ದ್ರಾದಿಗಳು ಸಿರಿಯಲಿ
ಬಡವನೇ ಬೆಱಗೇನೆನುತ ಕೆಲ
ಸಿಡಿದು ಕಾಲಿಂದೊದೆದು ಕದವನು ಹೊಕ್ಕನಾ ಹನುಮ ೬೫

ಎದ್ದಿದಾರೋಯೆಂಬವರನೊಳ
ಗುದ್ದಿನಲಿ ನಿರ್ಣೈಸಿ ಮೆಲ್ಲನೆ
ಹೊದ್ದಿದನು ಹೊಳೆಹೊಳೆವ ಮಣಿಮಯಖಚಿತ ಕಾಂಚನದ
ಭದ್ರಭವನಾವಳಿಯನಲ್ಲ
ಲ್ಲಿದ್ದವರನಾರೈದು ಸೀತೆಯ
ಕದ್ದ ಕ[4]ಳ್ಳ[4]ನ ಖಳನ ಸೆಜ್ಜೆಯ ಸದನಕೈತಂದ ೬೬

ಬೀರುತಿರ್ದುದು ದಿವ್ಯಗಂಧದ
ಸಾರತರ ಸೌರಭವನಾ[5]ಪುರ[5]
ವೈರಿಮಿತ್ರನ ಬನದ [6]ಕಂ[6]ಪಿನ ಸೊಂಪನುಱೆ ಜಱೆದು
ಭೂರಿಭುವನದ ಗಂಧಿಗವ್ಯಾಪ
ಹಾರಿಯೆನಿಸುವ ಗಂಧವಹನಗ
ಭೀರತರ ಬಂಧುರದ ಗಂಧದ ಭರಣಿಯಂದದಲಿ ೬೭

---

[1] ಸಲುವದಿವಗೀಸಿರಿಯೆನುತ (ಕ). [2] ನು (ಕ.ಚ). [3] ಪಡೆಯಲಿಂ (ಕ), ಹೆಡೆಗಳಿಂ (ಗ), ಗೆಡೆಗಳಿಂ (ಡ.ಣ) [4] ಳವಿ (ಗ.ಡ). [5] ಹರ (ಚ.ಜ.ಝ). [6] ತಂ (ಚ.ಣ).

ಹೊಕ್ಕನಾ ಭವನವನು ಭರವಸ
ದಕ್ಕಱಿನ ನೋಟದಲಿ ಮುರಿಮುರಿ
ದಿಕ್ಕೆಲನನಾರೈವುತೊಯ್ಯನೆ ಸಾರಿದನು ಖಳನ
ಲಕ್ಕಸಂಖೆಯ ಸತಿಯರಿ[1]ದ್ದುದು[1]
ಜಕ್ಕುಲಿಪ ಜವ್ವನದ ಮನ್ಮಥ
ನಿಕ್ಕೆಯಂತಿರೆ ಸಾಲಮಣಿಪರ್ಯಂಕ[2]ಪೀಠದಲಿ[2] ೧೮

ಹೊಳೆಹೊಳೆವ ಕಿಱುದಾಡೆಗಳ ಥಳ
ಥಳಿಪ [3]ಕದಪಿನ[3] ದೀರ್ಘನಯನದ
ಬಲುಮೊಲೆಯ ಬಾಸೆಗಳ ಬಂಬಲುಗರುಳ ಹೊಸಹೊಗರ
ಕಲಿತಮದದುಬ್ಬುಗಳ ತೋಳಿನ
ಮಲತಹುಬ್ಬಿನ ಪುಳಿನಜಘನ
ಸ್ಥಳದ ದಾನವಸತಿಯರಿ[4]ರ್ದರ[4]ದೊಂದುತಾಣದಲಿ ೧೯

ನಿಶಿತದಾಡೆಯ ಹುರಿಯ ಹುಬ್ಬಿನ
[5]ಕಸ[5]ರುಗಂಗಳ ಕರ್ಕಶಾಂಗದ
ವಿಸುಪದಂತಾವಳಿಯ [6]ಗುಂ[6]ಜುರುದಲೆಯ ಹೆಗ್ಗವಿಯ
ಬಸುಱಹೊದ್ದಿದ ತೋರ ಮೊಲೆಗಳ
ವಿಷ[7]ಯ[7]ರಕ್ತಾಸಕ್ತ[8]ಮಯ[8]ರಾ
ಕ್ಷಸವಧೂನಿಕುರುಂಬವಿದ್ದುದದೊಂದುತಾಣದಲಿ ೨೦

ತೋರ ಕಬರಿಯ ಕುಡಿತೆಗಂಗಳ
ಚಾರುಬಿಂಬಾಧರದ ಲಲಿತ
ಸ್ಮೇರವದನದ ನುಣ್ಗೊರಳ ಪೀವರಪಯೋಧರದ
ಚಾರುಭುಜಲತಿಕೆಗಳ ಘನಗಂ
ಭೀರನಾಭಿಯ ಗುರುನಿತಂಬದ
ಭೂರಿಭೂಷಣದಮರಿಯರು [9]ಮೆಱೆದಿರ್ದುದೊಂ[9]ದೆಸೆಯ ೨೧

ಅಂಗಸೌಖ್ಯದ ನಗೆಮೊಗದ ಸ
ರ್ವಾಂಗದಮಳಾಭರಣ ಕಿರಣ ತ
ರಂಗದನುಪಮ ಹಾವಭಾವವಿಲಾಸವಿಭ್ರಮದ

---

[1] ರ್ದರು (ಕ). [2] ವೀಥಿಯಲಿ (ಕ.ಗ.ಡ.ಣ). [3] ವದನದ (ಕ.ಚ). [4] ರ್ದುದ (ಗ.ಝ.ಡ.ಣ). [5] ಕಿಸು (ಕ.ಝ.ಟ). [6] ಜುಂ (ಕ.ಝ.ಟ). [7] ಮ (ಕ.ಗ.ಝ.ಡ). [8] ಮ್ಯ (ಗ), ಮನ (ಚ). [9] ನೆರೆದಿರ್ದರೊಂ (ಗ.ಣ), ಮೆಱೆದಿರ್ದರೊಂ (ಟ.ಡ).

ತುಂಗಕುಚದುತ್ತುಂಗಕಬರಿಯ
ಸಿಂಗರದ ಸೆಳೆನಡುವಿನಮಳ ನ
ರಾಂಗನೆಯರೆಸೆದಿರ್ದ[1]ರಾ ಸ್ಮರಭಟನ ಬಲದಂತೆ[1] ೭೨

ಉಳಿದ ಪನ್ನಗ ಗರುಡ ಗುಹ್ಯಕ
ಲಲನೆಯರು ಗಂಧರ್ವ ಕಿನ್ನರೆ
ರೊಳು ನಿತಂಬಿನಿಯರು ಮಹಾಪ್ಸರ ಯಕ್ಷರೊಳಗಾದ
ಹಲವು ಜಾತದ ಜವ್ವನದ ಜಂ
ಗಳೆಯರಿರ್ದುದು ಸುರತಸೌಖ್ಯದ
ಸುಲಲಿತಪ್ರೌಢೆಯರು ಸಕಲಕಲಾವಿದಗ್ಧೆಯರು ೭೩

ವನಧಿಮಧ್ಯದ ಹರಿಯ ಸೊಬಗಿನ
ಘನತೆಯವೊಲಸುರೇಂದ್ರನುರುಯೌ
ವನದ ಕಾಂತಾರ್ಣವದ ಮಧ್ಯದಲಿರ್ದನೊಲವಿನಲಿ
ಮನುಜದನುಜಾಮರಭುಜಂಗವು
ಜನಪತಿತ್ವವು ಸಲುವುದೈ ನಿನ
ಗೆನುತ ಮಿಗೆ ಕೊಂಡಾಡಿದನು ಕಂಡಾ ದಶಾನನನ ೭೪

ನೀರುದುಂಬಿದ ಮುಗಿಲ ಕಾಂತಿಯ
ಚಾರುತರ ತನು[2]ರುಚಿಯ ನಗೆಮೊಗ[2]
ದೋರಣದ ಥಳಥಳಿಪ ಕದಪಿನ ಕರ್ಣಕುಂಡಲದ
ವೀರಲಕ್ಷ್ಮಿಯ ವಿಹರ[3]ಣೋನ್ನತ[3]
ಭೂರಿಭುಜದಂಡದ ನಿಶಾಚರ
ವೀರವುನ್ಮಥನಿರ್ದನಾಲಿಂಗನದಿ ಮಯಸುತೆಯು ೭೫

ಹರನ ಹಣೆಗಣ್ಣಿನ ಮಹಾನಲ
ನುರಿಯ ಹೊ[4]ಯ್ಲಲಿ[4] ಸಾಯಲಾರದೆ
ಪುರುಷತನವನು ಬಿಸುಟು ಮಂಡೋದರಿಯ ರೂಪಕವ
ಧರಿಸಿದನೊ ಕಂದರ್ಪನೆನೆ ಸಿಂ
ಗರದ ಸಾರೋದಯದ ಸೊಬಗಿನ
ಶರನಿಧಿಯ ಮೌಕ್ತಿಕದವೊಲು ಮೆಱೆದಿರ್ದಳಾ ಕಾಂತೆ ೭೬

---

[1] ರೊಂದೆಸೆಯಲಿ ದಶಾನನನ (ಕ). [2] ಲತೆಯ ನಗೆಮೊಗ (ಕ), ರುಚಿಯ ಮಣಿಮಯ (ಗ.ಝ.ಟ). [3] ಣದ ಶಿರ (ಕ), ಣದ ನಿಜ (ಚ). [4] ಯ್ಲಿಗೆ (ಕ. ಝ.ಟ.ಣ).

ತಡೆದುದೀತನ ಮನ[1]ದ[1] ಸಂಶಯು
ದೆಡಹು ಕರಣೇಂದ್ರಿಯದ ಬುದ್ಧಿಯ
ಕಡುಹು ಕೈಗುಂದಿದುದು ಕಾಲೂಱಿದುದು ಕಳವಳಿಕೆ
[2]ಬಿ[2]ಡಿಸಿದನು[3]ತಾಪದಲಿ[3] ನಿಜವನು
ಹಿಡಿಯಲಱಿಯದೆ ಪವನಸುತನೆವೆ
ಮಿಡುಕದೀಕ್ಷಿಸುತಿರ್ದನೊಂದರೆಘಳಿಗೆ ಪರಿಯಂತ ೭೭

ಒಡೆಯನಾಜ್ಞಾ[4]ಪಿಸಿದ[4] ಕುಱುಹಿನ
ಕಡುಹು ಕೆಲವಿವೆ ಕಾಣಿಸದೆ ಕೆಲ
ವಡಕವಾಗಿವೆಯೇನಮಾಡುವೆನೆನುತ ಮನದೊಳಗೆ
ಮಿಡುಕುವನು ಸಂತೈಸುವನು ಘುಡು
ಘುಡಿಸುವನು ಸ್ಥೈರಿಸುವನಸುರಗೆ
ಕಡೆಯ ಕಾಬೆಣಿಕೆಯನು ನೆನೆವುತ್ತಿರ್ದನಾ ಹನುಮ ೭೮

ಆಗಲದಕೇ[5]ನೆಂದು ರಘುವರ[5]
ನಾಗಮೋಕ್ತಿಯ ಕುಱುಹುಗಳ ಲೇ
ಸಾಗಿ ನೆಱೆ ನಿರ್ಧರಿಸಿ ನೋಡುವೆನೀ ಪುರಂಧ್ರಿಯಲಿ
ಮೇಗೆ ಮನದಲಿ ತೋಱಿದುದನು
ದ್ಯೋಗಿಸುವೆನೆಂದೆನುತ ಮೆಲ್ಲನೆ
ಬಾಗಿ ದೀಪ್ತಿಯ ಬೆಳಗಿನಲಿ ಭಾಮಿನಿಯನೀಕ್ಷಿಸಿದ ೭೯

ಆ ಕಕುತ್ಸ್ಥಜ ಪೇಳ್ದ ಕುಱುಹಿನ
ಸೋಕ ಕಾಣದೆ ಕಂಡನಶುಭದ
ಕಾಕರೇಖೆಯನಂಘ್ರಿಯಲಿ ವೈಧವ್ಯಲಕ್ಷಣದ
ನೂಕಿದನು ಮನದರ್ಧಚಿಂತೆಯ
ನಾಕುಲತೆ ಬಿಡಲಱಿಯದೈಂದ್ರ
ವ್ಯಾಕರಣಪಂಡಿತನು ನೋಡಿದನಬಲೆಯಾನನವ ೮೦

ನೊಸಲೊಳಿಲ್ಲ ಖರಾಂತಕನು ನೇ
ಮಿಸಿದ ಬಾಲಸುಧಾಂಶುರೇಖೆಯು
ಮಿಸುಪಲಕ್ಷಣ[6]ವಿಲ್ಲವಾ[6] ಭಾಳಪ್ರದೇಶದಲಿ

---

[1] ವ (ಗ.ಚ). [2] ಚ (ಕ.ಝ.ಟ.ಣ). [3] ಕೋಪವನು (ಕ), ತಾಪವನ (ಝ). [4] ಪನೆಯ (ಕ.ಚ). [5] ನೊಮ್ಮೆಗಾಳುದ (ಕ), ನಿನ್ನು ರಘುವರ (ಗ) ನೊಮ್ಮೆ ರಘುವರ (ಡ). [6] ಮಿರ್ದುದಾ (ಗ.ಝ.ಡ), ವಿರ್ದುದಾ (ಣ).

ಅಸಿತರೋಮಾವರ್ತ ಸಾಕಿ
ನ್ನಸುರೆಯಿವಳೆಂದಱಿದು ಮನದಲಿ
ಗಸಣಿಗೊಂಡನು ನರಕಭಾಜನನಾದೆನೇಯೆನುತ　　೮೧

ಬೆರಸುವಳೆ ಸುರಗಂಗೆ ಕಾದಂ
ಬರಿಯು ಕಡಲನು ಸಂಶಯದ ಸಂ
ಕರವ ಸಂಘಟಿಸಿದೆನಲಾ ಸಿರಿರಾಮರಾಮೆನುತ
ಹಿರಿದು ಪರಿತಾಪದಲಿ ದೇಹವ
ನುರುಹಿಕೊಂಡು ಪುರಾರಿ ಶಂಕರ
ಹರತ್ರಿಯಂಬಕಯೆನುತ ತಲೆಗೊಡಹಿದನು [1]ಕಲಿಹನುಮ[1]　　೮೨

ಮುರಿದನಲ್ಲಿಂ ಮೇಲೆ ಮುಂದಕೆ
ಬರಲು ಕಂಡನು ವಿವಿಧಕುಸುಮೋ
ತ್ಕರದ ಗಂಧಾಕ್ಷತೆಯ ಪೂಜಾಬಂಧದನುಪಮದ
ಕಿರಣಲಹರಿಯ ವಿಮಳತರವಿ
ಸ್ತರದ ವಿವಿಧಾಯುಧದ ಮಧ್ಯದ
ಗರಳಕಂಧರದತ್ತ ನಿರುಪಮಚಂದ್ರಹಾಸಕವ　　೮೩

[2]ಅರಿ[2]ನರೋರಗದೇವಸವಿತಿಯು
ಶಿರವ ತಱಿತಱಿದಿಕ್ಕಲವರವ
ರುರುಲಲಾಟಾಕ್ಷರಕದಂಬಕವಿಂಬುಗೊಂಡಂತೆ
ಹೊರಳಿವೆಳಗಿನ ಹೊಗರಧಾರೆಯ
ಸುರುಚಿರದ ಮೋಹರದ ಮಣಿಬಂ
ಧುರದ ಖಂಡೆಯವಿರಲು ಕೈಯಿಕ್ಕಿದನು ಕಲಿಹನುಮ　　೮೪

ನೆಗಹಿ ಝಳಪಿಸಿ ಉಳಿವಡೆಯಲಿಳೆ
ಗುಗುಳಿದುದು ಬಲುಗಿಡಿಗಳನು ನಿ
ದ್ರೆಗಳ ನಿಬಿಡಸ್ತನೆಯರೆದ್ದುದು ಬೆದಱಿವಾತಿನಲಿ
ಧಗಧಗಿಸಿತುರಿ ಮತ್ತೆ ಝಳಪಿಸೆ
ನಿಗರವಲ್ಲಿದೆನುತ್ತ ರಕ್ಕಸ
ವಿಗಡಕೈದುವನಿರಿಸಿ ಕೆಲಸಾರಿದನು [3]ಕಲಿಹನುಮ[3]　　೮೫

---

[1] ಹನುಮಂತ (ಕ.ಟ.ಣ), ಪವನಸುತ (ಡ). [2] ಸುರ (ಕ.ಝ.ಟ).
[3] ಹನುಮಂತ (ಚ.ಟ).

ಸೀತೆಯಿಲ್ಲೀಯೆಡೆಯೊಳೆನುತ ಬ
ಲಾತಿಶಯ ಬಳಿಕುಳಿದ ವಳಯನಿ
ಕೇತನದಲಱಸಿದನು ಮಱೆಯದೆ ಮೂಱುಲೋಕಗಳ
ಮಾತೆಯನು ಮದನಾರಿಸಖ ಸಲೆ
ಸೋತು ಕಪ್ಪವ ತೆತ್ತ ಭುವನ
ಖ್ಯಾತದಿವ್ಯವಿಮಾನವಿ[1]ದ್ದುದು ಪೂರ್ವಭಾಗದಲಿ[1] ೮೬

ಸಕಲಸುರರ ವಿಮಾನಕದು ನಾ
ಯಕವಲೇ ನಳಿನಜನ ಸೃಷ್ಟಿ
ಪ್ರಕರಣಕೆ ಪರಮಾರ್ಥವಿದು ಪದ್ಮಜಭವಾಮರರ
ಪ್ರಕಟಿತಾಖಿಳ ಭುವನಭವನ
ಪ್ರಕರಪರಿಯಟನೈಕಪರಿರಂ
ಜಕವದೀಗದ ಕಂಡು ಹೊಕ್ಕನು ಹನುಮ ಹರುಷದಲಿ ೮೭

ಸುರಪುರದ ರಂಭಾ[2]ದಿ ಲಾಸ್ಯದ[2]
ತರುಣಿಯರನೇಳಿಸುವ ವಿದ್ಯಾ
ಧರಿಯರಿ[3]ರ್ದುದು[3] ಭರತವಿದ್ಯಾವಿಷಯ ಪರಿಣತರು
ಮುರಜವಾವುಜ ವಾಸವಾದ್ಯ
ಸ್ಫುರಿತತಾಳಸುಗೀತದಬಲೆಯ
ರಿರಲು ನೋಡಿದನವರೊಳಾ ನಿಮಿರಾಜನಂದನೆಯ ೮೮

ಹಡಪ ಸೀಗುರಿ ಚಾಮರದ ಕ
ನ್ನಡಿಯ ಕಾಳಂಜಿಯ ಸುಗಂಧದ
ಮುಡಿಯುಲರ ಹಾವುಗೆಯ ಹೊಳಹಿನ ತಾಳವೃಂತಕದ
ನುಡಿನಗೆಯ ಪರಿಹಾಸಕ[4]ರ[4] ವಂ
ಗಡದ ಸೇವಾಸಖಿಯರಲಿ ವಿಂ
ಗಡಿಸಿ ನೋಡಿದು ಕಾಣದಳವಳಿದಳಲಿದನು ಹನುಮ ೮೯

ಅರೆನಿಮಿಷವಲ್ಲಿರ್ದ ಮನದು
ಬ್ಬರದ ಚಿಂತಾಭಾರದಲಿ ಬಳಿ
ಕರಿಗೃಹವ ಹೊಱವಂಟು ಹಯಗಜಶಸ್ತ್ರಶಾಲೆಗಳ

---

[1] ರಲದ ಕಂಡನಾ ಹನುಮ (ಕ). [2] ವಿಲಾಸದ (ಕ). [3] ರ್ದರು (ಕ). [4] ದ (ಗ.ಝ.ಣ).

ತಿರುಗಿ [1]ರತ್ನಸುಗಂಧ ದಿವ್ಯಾಂ
ಬರಸುವರ್ಣಸುಧಾನ್ಯಕೋಶದ
ನೆರವಿಯಲಿ ನಿರ್ಣೈಸಿ ಸೆಜೆವನೆಗಾಗಿ ನಡೆತಂದ ೬೦

ಏನಹೇಳುವೆನಿದ್ದುದಲ್ಲಿ ಮ
ಹಾನರೇಂದ್ರರು ಯಕ್ಷ ಸಿದ್ಧವಿ
ತಾನ ಕಿನ್ನರ ಕಿಂಪುರುಷ ಗಂಧರ್ವಗುಹ್ಯಕರು
ಮಾನಿನೀಜನಸಹಿತ ಕಂಡು ಮ
ಹಾನಿರೋಧದಲದುರಿ ತಿರವನು
ಭಾನುಕುಲನರಸಿಯನು ಕಾಣದೆ ಹನುಮ ಹೊಱವಂಟ ೬೧

---

[1] ಗಂಧ ಸುರತ್ನ ಮಾಲ್ಯಾಂ (ಗ), ರತ್ನ ಸುಗಂಧ ಮಾಲ್ಯಾಂ (ಝ.ಟ.ಡ).

# ಮೂರನೆಯ ಸಂಧಿ

ಸೂಚನೆ: ಕ್ಷೋಣಿಪತಿ ಸಿರಿರಾಘವೇಂದ್ರನ
ರಾಣಿಯನು ಬನದೊಳಗೆ ಭುವನ
ಪ್ರಾಣಸುತ ಕಂಡಿತ್ತನನುಪಮರಾ[1]ಜ[1]ಮುದ್ರಿಕೆಯ

ಕಂದ ಕೇಳ್ಕೈ ಕುಶನೆ ಚಿಂತೆಯ
ಸಂದಣಿಯ ಸುಯ್ಲುಗಳ ಸೊಂಪುಱೆ
ಕಂದಿದಾನನದಿಳಿವ ಜಲಬಿಂದುಗಳ ಲೋಚನದ
ನಿಂದಿರುತ ಬೆಱಗಾಗುತವನೀ
ನಂದನೆಯದೇನಾದಳೋ ಹಾ
ಯೆಂದೆನುತ ಹಂಬಲಿಸಿ ಹಲುಬುತ ಹನುಮನೈತಂದ ೧

ಬರಬರಲು ತತ್ಪುರದ ಮಧ್ಯದ
ಪರಿಸರದ ಪಡಿತಳದ ನಾನಾ
ಪರಿಯ ಪಲ್ಲವಗಳ ಪತಾಕಾವಳಿಯ ಪಸರಿಕೆಯ
ಸುರುಚಿರದ ಕಲಶಾಳಿಗಳ ಬಂ
ಧುರದ ಬಹಳಿತಪುತ್ರಿಕೆಯ ಸಂ
ಚರದ ಸುಮನೋಹರದ ಹರ್ಮ್ಯವ ಕಂಡನಿದಿರಿನಲಿ ೨

ಏಱಿದನು ನಡೆದುದಯಶಿಖರಿಯ
ನೇಱುವಮೃತಾಂಶುವಿನವೊಲು ಹದಿ
ನಾಱುಯೋಜನದುದ್ದದುಪ್ಪರಿಗೆಯನು ತುದಿವರೆಗೆ
ತೋಱುತಾ ಸಮಯದಲಿ ಸೀತೆಯ
ತೋಱಬೇಕೆಂಬುತ್ಸವದ ಮೈ
ದೋಱಿಕೆಯ ಶಶಿಬಿಂಬವಂಬರಕಾ ಸಮೀರಜ[2]ಗೆ[2] ೩

ಒಸರಿದುದು ಶಶಿಕಾಂತಶಿಲೆ ಧವ
ಳಿಸಿದುದಂಬರವಂಬುನಿಧಿ ಲಳಿ
ಮಸಗಿದುದು ನಗೆದೋಱಿದವು ನೈದಿಲು ಚಕೋರಿಚಯ
ಬಿಸುಟವಂತಶ್ರಮವ ತಂಬೆಲ
ರೆಸಗಿದುದು ತನಿವೇಟದಲಿ ತಾ
ಮಸಿ [3]ನಿರಂ[3]ಬರೆಯಾಗಿ [4]ನಲಿದ[4]ಪ್ಪಿದಳು ನಿಜಪತಿಯ ೪

---

[1] ಮ (ಜ.ಟ.ಣ). [2] ನ (ಗ.ಜ.ಝ.ಡ.ಣ). [3] ನಿಶಾಂ (ಗ), ದಿಗಂ (ಝ). [4] ಬಿಗಿಯ (ಕ.ಟ).

ಚರಣಲಾಘವದಿಂದ ಮೆಲ್ಲನೆ
ತಿರುತಿರುಗಿ ನೋಡಿಡನು ತತ್ಪುರ
ವರವನಾ ಚಂದ್ರಮನ ಸಾಂದ್ರಪ್ರಭೆಯ ಬೆಳಗಿನಲಿ
ಮೆಱೆದುದಿಲ್ಲನಿತಱಲಿ ದೇವಿಯ
ರಿರವು ತನ್ನಯ ಕಂಗಳಿಗೆ ಗೋ
ಚರಿಸುವುದು ದುರ್ಲಭವೆನುತ ದುಮ್ಮಾನಮನನಾದ ೫

ಮಱುಗಿ ಮಾಡುವುದೇನು ಸಾಕಿ
ನ್ನಱಿಕೆಯೊಂದಿದೆ ತನಗೆ ರಘುವರ
ನಱಸಿಕೊಳಲೀ ಗಿರಿಯ ಕಿತ್ತೊಯ್ದಿಳುಹುವೆನು ಮುಂದೆ
ತೆಱನ[1]ನಾತನೆ[1] ನೋಡಿಕೊಳಲಿ
ಚ್ಚಱಿಕೆಗಿದು ತಾ ಸಮಯವಿನಿತಕೆ
ಕೊಱತೆ ಬಾರದೆನುತ್ತ ನಿಶ್ಚಯಿಸಿದನು ನಿಜಮತವ ೬

ಬಳಲಿದೆವು ಹಿರಿದಾಗಿ ನಗರವ
ತೊಳಲಿ ನಾವಿಂದಿನಲಿ ಬಾರೈ
ಬಳಿಗೆಲಸಕಿನ್ನಾರು ನೀನೆಮಗಲ್ಲದಾಪ್ತರಲಿ
ಹೊಳಲ ಹೊ[2]ತ್ತ ಮಹಾ[2] ತ್ರಿಕೂಟಾ
ಚಲವನಿದ ನೀ ಕೀಳು ಬೇಗೆಂ
ದೊಲುವ [3]ಮನ್ನಣೆಯಿಂದ[3] ಬಾಲಕೆ ಬೆಸಸಿದನು ಹನುಮ ೭

ಆ ಹನುಮನಾಜ್ಞಾಪನೆಯ ಕ
ಟ್ಟೊಹೆವಿಡಿದಾಕ್ರಮಿಸಿ ಸುತ್ತಿದು
ದಾ ಹರಾದ್ರಿಯ ಕಿತ್ತ ದೈವದ್ರೋಹಿ ರಕ್ಕಸನ
ಬೇಹ ನಗರದ ನಗವನಮರಸ
ಮೂಹ ಕಂಪಿಸೆ ಕಮಲಜಾಂಡಕ
ಟಾಹ [4]ಛಿಳಿಛಿ[4]ಳಿಲೆನೆ ವಿಹಾರಿಸಿ ಝುಡಿದುದೆಡಬಲಕೆ ೮

---

[1] ತಾನೇ (ಗ.ಜ.ಝ) [2] ಕ್ಯಾಕ್ಷಣ (ಕ). [3] ತನ್ನಯ ಚೆಲುವ (ಕ).
[4] ಖಿಳಿಖಿ (ಕ.ಜ.ಝ.ಟ.ಡ.ಣ).

ಬೆದಱಿದುದು ತತ್ಪುರಜನ ನೆಲ
ನದುರಿದುದು ಭೂಕಂಪದವೊಲಲು
ಗಿದುದು ಕುಲಕುಧರಾಳಿ ಕೂಗಿತು ಗಗನ ನಿಮಿಷದಲಿ
ಕದಡಿತಗ್ಗದ ಕಡಲು ನುಡಿಯಾ
ಯ್ತುದಱ ಮೇ[1]ಲೆ ನಭೋಗ್ರದಲಿ ನೀ
ನಿದಿರುಗೋ ಮಾರುತನ[1] ಮನದಿಷ್ಟಾರ್ಥವಹುದೆಂದು ೯

[2]ಧ್ವ[2]ನಿಯುನದನಾಲಿಸಲಿಕಾ ನಿಜ
ಜನಕನೊಯ್ಯನೆ ಬನದವನಿತೆಯ
ವಿನುತಲಾವಣ್ಯಾಂಬುವಿನ ಶೀತಳದ ಸೊಂಪಿನಲಿ
ಅನುಪಮಾನನಪದ್ಮಗಂಧದ
ಘನತೆಯಲಿ ವಕ್ಷೋಜಯುಗದಿಱು
ಬಿನಲಿ ತಡೆತಡೆದೆಸಗಿದನು ನಿಜಸುತನ ಸರಿಸದಲಿ ೧೦

ನೋಡಿದನು ಸೌರಭ್ಯಶೈತ್ಯಸ
ಘಾಡತೆಯ ಸೌಗಂಧವಾಹನ
ನಾಡಿಕೆಯ ಸರಣಿಯನು ಕಂಡನು ಗಂಧವಾಹಸುತ
ಮೂಡಣಾಶಾಪತಿಯ ಚೈತ್ರನ
ಬೀಡಿಕೆಯನೇಳಿಸುವ ದಿವಿಜವಿ
ಭಾಡನನುಪಮ ವಿಲ[3]ಸಿತ[3]ಕ್ರೀಡಾಮಹಾವನವ ೧೧

ಸಸಿಯಿಡುವನಂಗಜ ಸುಧಾಘನ
ರಸವ ಸೂಸುವನಿಂದು ಮಂದ
ಶ್ವಸನ ಸಲಹುವನೋವಿಕೊಂಡಿಹನಿಕ್ಷುಚಾಪಸಖ
ಎಸೆವ ಕುರವಕ ತಿಲಕ ಪನಸ
ಪ್ರಸರ ಜಂಬು ರಸಾಲ ದಾಡಿಮ
ವಿಸರ ವಿಲಸಿತ ವಿವಿಧ ನಿರುಪಮ ಭೂಜರಾಜಿಗಳ ೧೨

ಗಾಳಿಯೊಲಹಿಗೆ ನಿಲುಕುವವು ಹೊಂ
ಬಾಳೆ ಖಚರೀಜನದ ಕಬರಿಗೆ
ಬಾಳೆ ಬಾಯ್ದೆಱೆಸುವವು ಬಿಱಿವಣ್ಣಿನ ರಸಾವಳಿಗೆ

---

[1] ಲಶರೀರವಾಕಾಶದಲಿ ಮರುತನ ಮಗನ (ಚ.ಜ.ಝ.ಡ). [2] ದ (ಗ. ಜ.ಝ.ಡ). [3] ಸಿತದ (ಚ), ಸದ (ಜ).

ಬಾಲಕಿನ್ನರಿಯರನು [1]ಶುಕಪಿಕ[1]
ಪಾಳಿಸಿದ ನಖಹತಿಯ ಚೂತಫ
ಲಾಳಿ ನಿರ್ಜರ ನಿಲಿಸುವವು ಪಥಿಕರ ಪಥಶ್ರಮವ ೧೩

ನನೆಮುಗುಳ್ ನನೆಕುಸುಮ ನಸುಗಾಯ್[6]
ಕನರುಗಾಯ್[6] ಕಸುಗಾಯಿ ಹುಳಿಗಾಯ್[6]
ತನಿರಸದ ಮಧುರಾಮ್ರಪೂರಿತ ಮಾಧುರೀಯಕದ
ತೊನೆದು ತೂಗುವ ಫಲಭರಂಗಳ
ಘನತರದ ಸಹಕಾರಸಹ ಸುರ
ವನಕದಂಬಕವೆಸೆದುದಿದಿರಲಿ ಕಪಿಕುಲೇಶ್ವರನ ೧೪

ವಸುಮತೀಪತಿಸೂನು ಕೇಳ್ ಬ
ಣ್ಣಿಸಲು ತೀರದು ತನಗೆ ಚೈತ್ರನ
ವಸತಿಯೋ ಸೌಗಂಧಮಂದಾನಿಲನ ನೆಲೆವನೆಯೊ
ಕುಸುಮಬಾಣನ ಬೀಡೊ ಸುರವನ
[2]ದೆ[2]ಸೆವ ಜನ್ಮ[3]ನಿವಾಸವೆನೆ[3] ವನ
ವೆಸೆದುದಾ [4]ಸಿರಿ[4]ರಾಮಚಂದ್ರನ ಚರನ ಕಣ್ಮನಕೆ ೧೫

ವನವಿದೊಂದಿದೆ ಗಗನದಗ್ರದ
ಧ್ವನಿಯಿದೊಂದಿದೆ ನೋಳ್ಪೆನುಪವ
ರ್ತನೆಯುನಿಂದಿನಲೀ ಮಹಾವನದೊಳಗೆ ಬಳಿ[5]ಕಲ್ಲಿ[5]
ವನಜವದನೆಯ ಪಾದದರುಶನ
ವಿನಿತಱಲಿ ಸಂಘಟಿಸದಿರೆ ಕಂ
ಡನುವ ಕಾಬೆನೆನುತ್ತಶೋಕಾವನಕೆ ಪುಟನೆಗೆದ ೧೬

ಪುಟನೆಗೆದ [6]ಭಾರದಲಿ[6] ಕಪಿಪದ
ಚಟುಳಹತಿಗುಪ್ಪರಿಗೆ ಸಿಡಿಲಾ
ರ್ಭಟಿಸಿ ಹೊಡೆದದ್ರಿಯವೊಲಿಳೆಗೊಱಗಿತು ನಿಹಾರದಲಿ
ಕಟಕ ಬೆದಱಿತು ರಕ್ಕಸರ ಸಂ
ಘಟದ ಸಾರಂಭದಲಿ ಬಳಿಕೀ
ಪಟುಪರಾಕ್ರಮಿ ಹನುಮ ಹೊಕ್ಕನು ಲಲಿತನಂದನವ ೧೭

---

[1] ನೃಪಶುಕ (ಗ.ಜ.ಝ.ಟ.ಡ). [2] ವೆ (ಕ.ಜ.ಟ.ಣ). [3] ಸ್ಥಳವೊಯೆನೆ (ಕ.ಟ.ಣ), ದ ಗೂಡೆಯೆನೆ (ಗ). [4] ರಘು (ಕ.ಗ.ಟ.ಣ). [5] ಕಿನಲಿ (ಕ.ಟ.ಣ). [6] ಗಾಯದಲಿ (ಕ), ಗಾಢದಲಿ (ಗ), ಭರಕಾಗ (ಚ).

ತಿಳಿಗೊಳನ ದಾಂಟುತ ಲತಾವಿುಂ
ಡಳಿಯ ನುಸುಳುತ ಕುಸುಮವಲ್ಲಿಗ
ಳೊಳಗೆ ವಿಹರಿಸುತುನ್ನತದ್ರುಮತತಿಯ ಲಂಘಿಸುತ
ಕೆಲಬಲನನಾರೈವುತೊಯ್ಯನೆ
ನಿಲುಕಿ ನೋಡುತ ಬಂದನುರುವಿುಂ
ಜುಳಫಲಾನ್ವಿತ ಶಿಂಶುಪಾ[1]ದಪವಿದ್ದ[1] ಹೊರೆಗಾಗಿ ೧೮

ಆ ಮಹಾದ್ರುಮದಡಿಯ ಕದಳಿ
ಸ್ತೋಮ ಮಧ್ಯದ ದಳನಿಳಯದಲಿ
ರಾಮನಾಮಾಮೃತಸಜೀವಿತಪ್ರಾಣಧಾರಣದ
ತಾಮರಸದಳನಯನೆಯನು ನಿ
ಸ್ಸೀಮಸುವ್ರತಚರಿತೆಯನು ಸೀ
ತಾಮಹಾಲಕ್ಷ್ಮಿಯನು ಕಂಡನು ವೀರಹನುಮಂತ ೧೯

ಶರಭ ಸಿಂಹ ಚಮೂರ ವದನದ
ಕರಿಲುಲಾಯ ವೃಕಾನನದ ಪರಿ
ಪರಿಯ ಖಗಮೃಗಸರ್ಪವಕ್ತ್ರದ ವಿಕೃತದೃಷ್ಟಿಗಳ
ಎರಡುನಾಲ್ಕೈದಾಱುತಲೆಗಳ
ಕರದ ಕತ್ತಿಯ ಕಾಳರಕ್ಕಸ
ತರುಣಿಯರ ಕಾವಲಿನ ಸೀತೆಯ ಕಂಡನಾ ಹನುಮ ೨೦

ಮಂದಗಮನೆಯನಮಲತರಪೂ
ರ್ಣೇಂದುವದನೆಯ ಪೂರ್ವಹರಿಯರ
ವಿಂದಸದನೆಯ ಸಕಲಸುರಕುಲಶಕ್ತಿದೇವತೆಯ
ಇಂದು ಭಾಸ್ಕರ ಕಮಲಭವ ಸಂ
ಕ್ರಂದನಾದಿ ಸಮಸ್ತ ಸುರಮುನಿ
ವಂದಿತೆಯ ವರವಿಶ್ವಮಾತೆಯ ಕಂಡನಾ ಹನುಮ ೨೧

ಏಕವೇಣೀಧರೆಯನಶ್ರುಜ
ಲಾಕುಳಾಯತಲೋಚನೆಯನು
ದ್ರೇಕಶೋಕಾನ್ವಿತೆಯನಂತಸ್ತಾಪವಿಹ್ವಲೆಯ
[2]ಶೋ[2]ಕನಿನದೆಯನಧಿಕಪುಣ್ಯ
ಶ್ಲೋಕಚರಿತೆಯ ಮಲಿನಪಟಪರಿ
[3]ಧೀ[3]ಕೃತೆಯನವಿರಳಕೃಶಾಂಗಿಯ ಕಂಡನಾ ಹನುಮ ೨೨

---

[1] ದಪ ಪದದ (ಕ), ಪಾದಪದ (ಗ), ದಪಮರನ (ಜ.ಝ.ಟ). [2] ಸ್ತೋ (ಗ.ಚ ಝ.ಣ). [3] ದಾ (ಗ.ಜ.ಝ.ಡ.ಣ).

ಬಿಸಜಸಂಭವಜನಿತಜನನಿಯ
[1]ಕುಸು[1]ಮಶರನಂಬಿಕೆಯು ಭುವನ
ಪ್ರಸರಭರಿತೆಯ ಪುಣ್ಯಚರಿತೆಯನಧಿಕಸುವ್ರತೆಯ
ಪಶುಪತಿಬ್ರಹ್ಮಾಮರೇಂದ್ರರ
ಶಶಿವದನೆಯರ ಭಾಗ್ಯಲಕ್ಷ್ಮಿಯ
ನಸದಳದ ಮಾಯಾವಿನೋದೆ[2]ಯ ಕಂಡನಾ ಹನುಮ[2] ೨೩

ಹೊಗೆಯುಲದ ಪುತ್ತಳಿಯವೊಲು ಹಿಮ
ವಗಿದ ತಾವರೆಯಂತೆ ಬಿಚ್ಚದೆ
ಬಿಗಿದ ಚಿಪ್ಪಿನ ಮುತ್ತಿನಂದದಿ ರಾಹು ಲಂಬಿಸಿದ
ಮೃಗಧರನವೊಲು ಗೂಢದರ್ಥವ
ತೆಗೆಯಬಾರದ ಕಾವ್ಯದಷೊಲಿ
ರ್ದಗಣಿತಾಮಲಪುಣ್ಯ[3]ಚರಿತೆ[3]ಯ ಕಂಡನಾ ಹನುಮ ೨೪

ಜನನಿ ಶಿಶುವನು ಸತ್ಕುಲೀನನು
ವಿನುತ ಸದ್ವರ್ತನೆಯ ಸತ್ಪುರು
ಷನು ಸದಾಚಾರವನು ಸಜ್ಜನನಧಿಕಸದ್ಗುಣವ
ಜನಪನೈಶ್ವರಿಯವನು ಧರ್ಮ
ಜ್ಞನು ಯಶೋಲಭ್ಯವನು ಸಲಹುವ
ನೆನಹಿನವೊಲಭಿಮಾನರಕ್ಷೆಯ ಸತಿಯ ಕಪಿ ಕಂಡ ೨೫

ಆಗಬೇಕೀ ಜನನಿ ಜಾನಕಿ
ಮೈಗುಱುಹು ತಪ್ಪದು ಮಹಾದೇ
ವೀಗ [4]ಪಾತಿವ್ರತ್ಯಗುಣಗಣನಿಧಿಯ[4] ಕಂಡೆನಲ
ಭಾಗಧೇಯರು ನಾವಲಾ ನಮ
ಗಾಗು ಮುಂದಕೆ ಸುಲಭವೆಂದು ಸ
ರಾಗದಲಿ ಕೈಮುಗಿದು ಜಯಜಯ ಎಂದನಾ ಹನುಮ ೨೬

---

[1] ನಸ (ಗ.ಝ.ಡ). [2] ಗೆ ಹನುಮ ಹೊಡವಂಟ (ಚ). [3] ಮೂರ್ತಿ (ಜ.ಝ.ಡ). [4] ರುವ ಪಾತಿವ್ರತಾಗುಣನಿಧಿಯ (ಗ.ಝ.ಡ.ಣ), ರುವ ಪಾತಿವ್ರತೆಯ ಸುವ್ರತೆಯ (ಚ.ಜ).

ಅರರೆ ಶಿವಶಿವ ಸಾಂಗವಾದುದು
ನರಪತಿಯ ದೂತತ್ವವಿನ್ನೀ
ಶ್ವರನು ಪಾಡಲ್ಲೆನಗೆನುತ [1]ಹಿಗ್ಗಿ[1]ದನು ಹರುಷದಲಿ
ಬಿರುದನಿಕ್ಕುವೆನಿನ್ನು ದಶಕಂ
ಧರಗೆ ಕೈಮಾ[2]ಡಿದ[2] ನಿಶಾಚರ
ನರವೆನೆಂದುಬ್ಬರದ [3]ಹರುಷವ ತಾಳ್ದನಾ[3] ಹನುಮ ೨೭

*ಅರಸುಗಳೊಳಧಿರಾಜ ಚಕ್ರೇ
ಶ್ವರನ ಬಸುಱಲಿ ಬಂದು ಲಕ್ಷ್ಮೀ
ವರನ ತೂಕದ ಸಾರ್ವಭೌಮನ ಕೈವಿಡಿದು ಕಡೆಗೆ
ನಿರಯನಿಳಯನ ನಿಳಯದಲಿ ಕೈ
ಸೆರೆ[4]ಗೆ ಸಂದ[4] ತಾಯೆಯೆಂದಿಳೆ
ಗುರುಳಿಸಿದನಶ್ರುಗಳನಾ ಕೈಯೊಡನೆ ಕಲಿಹನುಮ ೨೮

ಇರಲು ಮಾರುತಿ ಶಿಂಶುಪಾವರ
ತರುವಿನಗ್ರದಲವನಿಜೆಯ ಸಂ
ದರುಶನದ ಸಮಯಕ್ಕೆ ಸುಳಿದುದು ಮೂಡಲಿನಬಿಂಬ
ಮುಱಿ[5]ದು[5] ನಿದ್ರೆಯ ಕಾಪಿನಸುರರ
ತರುಣಿಯರು ಬಳಸಿದರು ಬಿದ್ದುದು
ತರಣಿಬಿಂಬ ಮಹಾಂಬುನಿಧಿಯಲಿ ನಡೆದು ಪಶ್ಚಿಮದ ೨೯

ಏನ ನೆನೆದನೊ ಮನಸಿನೊಳಗೆ ದ
ಶಾನನನು ಮನಸಿಜನ ಶರಸಂ
ಧಾನದೆಸುಗೆಯ ಮಸೆಯ ಮೈನೋವಿನಲಿ ಕಳವಳಿಸಿ
ಊನವಕ್ಷರ ಬಗೆಯ ಭಂಗಿಯ
ಮಾನಸದ ಖಳ ತನ್ನ ಸೇವಾ
ಮಾನಿನಿಯರೊಡಗೂಡಿ ಹೊಱವಂಟನು ನಿಜಾಲಯವ ೩೦

ಬೆಳಗಿದವು ಬೊಂಬಾಳದೀಪಾ
ವಳಿಗಳಿದ್ದೆಸೆಗಳಲಿ ಕಂಚುಕಿ
ಳ ಘುಡಾವಣೆಯಿಂದ ಬಂದೇಱಿದನು ಪುಷ್ಪಕವ

---

[1] ಹೆಚ್ಚಿ (ಚ.ಜ.ಝ). [2] ಡುವ (ಗ.ಚ). [3] ಹರುಷವ ಪಡೆದನಾ (ಗ.ಟ), ಮುದದಲಿ ಹಿಗ್ಗಿದನು (ಜ.ಝ.ಡ), ಪುಳಕವ ಪಡೆದನಾ (ಙ). [4] ಯ ಬಂಧವು (ಕ), ಯ ಸಂದಾ (ಗ), ಗೆ ತಂದುದೆ (ಜ). [5] ದ (ಕ.ಗ.ಝ.ಡ).

* 'ಚ' ಪ್ರತಿಯಲ್ಲಿ ೨೮ನೇ ಪದ್ಯವಿಲ್ಲ.

ಹೊಳೆಹೊಳೆವ ಮಣಿಮಕುಟಬದ್ಧಾ
ವಳಿಯ ಭಟರೊತ್ತೊತ್ತೆಯಲಿ ಬಂ
ದಿಳಿದ'ನಾ ವನಮಧ್ಯದವನೀಸುತೆಯ[1] ಸರಿಸದಲಿ ೩೧

*ಸಾರಿದರು ಕಾಪಿನ ನಿಶಾಚರ
ನಾರಿಯರು ಕೆಲಬಲಕೆ ಮಣಿಮಯ
ಸಾರತರ ಸಿಂಹಾಸನದಲಾ ಮಯನಸುತೆಸಹಿತ
ಚಾರು[2]ತರ ಚಾಮರದಲುಜ್[2] ಕೈ
ವಾರಿಗಳ ಕಳಕಳದಲರಿಭಟ
ಭೈರವನು ಕುಳ್ಳಿದನು ಸಮ್ಮುಖದಲಿ ಸುಧಾರ್ಮಿಕೆಯ ೩೨

ದೇವಿಯಿದ್ದಳು ಬಾಗಿದೊಡಲಿನ
ಕೈವೆರಳ ಹತ್ತುಗೆಯ ಕದಪಿನ
ಜೀವನವನುದುಗಲಿಪ ನಯನದ ಮಣಿದ ಮಸ್ತಕದ
ತೀವಿದುಮ್ಮಳಿಕೆಗಳ ನಸಿದ ಕ
ಳೇವರದ ನಿಜಪತಿಯ ಪದರಾ
ಜೀವಯುಗಳದ ನೆನಹಿನಲಿ ನೋಡುತ ಮಹೀತಳವ ೩೩

ಕಳುಹಿದನು ಕಾಮಿನಿಯರನು ಮೈ
ಥಿಳೆಯ ಬಳಿಗೆ ಬಳಿಕ್ಕ ಸೇವಾ
ಲಲನೆಯರು ಬಳಸಿದರು ಬಹುವಿವಿಧೋಪಚಾರದಲಿ
ಇಳುಹಿದುದು ಕಮ್ಮೆಣ್ಣೆ ಹಾಯ್ಕಿತು
ಹೊಳೆವ ಮಣಿ ಮಡಿವಸೆ ಮಹಾಮಂ
ಗಲದ ಮಜ್ಜನಕುಷ್ಣಜಲ ಹೊಂಗೊಡದಲಿಳುಹಿದವು ೩೪

ವರದುಕೂಲದ ಹಾವುಗೆಯ ಬಂ
ಧುರದ ಗಂಧದ ದಿವ್ಯಮಾಲ್ಯಾಂ
ಬರದ ದಿವ್ಯಾಭರಣದಬಲೆಯರುಬ್ಬುವಾತಿನಲಿ
ಅರಸಿ ಕೇಳೀ ವೈಭವವನಾ
ಧರಿಸಬೇಕೆಂದುಚಿತವಚನದ
ಪರಿವಿಡಿಯಲಬಲೆಯರು ಬಿನ್ನೈಸಿದರು ಜಾನಕಿಗೆ ೩೫

---

[1] ನವನೀನಂದನೆಯ ನಂದನದ (ಚ). [2] ಮಣಿಮಯ ಚಾಮರದ (ಕ.ಝ.ಟ), ಮುಖಿಯರ ಚಾಮರದ (ಣ).

* 'ಗ' ಪ್ರತಿಯಲ್ಲಿ ೩೨ನೇ ಪದ್ಯವಿಲ್ಲ.

ಮೂಱುಲೋಕದ ಗಂಡನೀತನ
ವಿಾಱಲಹುದೇ ದೇವಿ ದಿವಿಜರ
ನೀಱೆಯರು ಬಯಸುವರು ಬಹುವಿಧ ಸುವ್ರತಂಗಳಲಿ
ನೂರುಜನ್ಮವ ತಿರುತಿರುಗಿ ಬಾ
ಯಾಱಿ [1]ಬಯಸಿದರೀ[1]ತನಂದದ
ನೀಱಿರುಂಟೇ ನಳಿನಭವನಿರ್ಮಿಸಿದ ಸೃಷ್ಟಿಯಲಿ ೩೬

ಇದೆ ಚತುರ್ದಶಭುವನದೊಡೆತನ
ವಿದೆ ಸಕಲ ಸಾಮ್ರಾಜ್ಯಸಂಪದ
ವಿದೆ ವಿಭುತ್ವ ಸಮಸ್ತ ಸುರ ನರ ಯಕ್ಷ ಗುಹ್ಯಕರ
ಇದನು ನೀನನುಭವಿಸಲೊಲ್ಲದೆ
ಚದುಱುಗೆಡೆವರೆ ದೇವಿ ಹೇಳೆಂ
ದದುಹಿ ಮಾಱುತ್ತರವ ಕಾಣದೆ ಕೆಲಕೆ ಸಾರಿದರು ೩೭

ಕೇಳವನಿಬರ ಮಾತು ಕಿವಿ ಕ
ಣ್ಣಾಲಿಗಳು ಕಡೆಗಣಿಸ[2]ಲೆಳಸವು[2]
ಸಾಲಸೌಗಂಧಕ್ಕೆ ನಾಸಿಕದುಸುರು ಜಾನಕಿಯು
ನಾಲಗೆಗೆ ನುಡಿ ಹೊಗದು ತನು ಸೊಂ
ಪೇಳದಿನ್ನುಳಿದಿಂದ್ರಿಯದ ಸ
ಮ್ಮೇಳವೇತಱ[3]ದೇನು[3] ಸಾಧ್ವಿಯೊ ಸೀತೆ ಭುವನದಲಿ ೩೮

ಹೃದಯ ರಾಮಧ್ಯಾನ ನಾಲಗೆ
ದುದಿ ನಿಜೇ[4]ಶಸ್ಮ[4]ರಣೆ ಕಂಗಳ
ಹೊದಸಿದೆವೆಯಪ್ಪುಗೆಗಳಪ್ಪುಗೆ ರಾಘವೇಶ್ವರನ
ಇದಿರ ಬಗೆವಳೆ ಸೀತೆ ಮಾಯಾ
ವಿದರ ಮಾಯೆಗೆ ಸಿಲುಕುವಳೆ ಲೋ
ಕದ ಮಹಾಮಾಯಾವಿನೋದೆ[5]ಗೆ[5] ಚಿತ್ರವೇನೆಂದ ೩೯

ಉಪಚರಣೆ ಕೈಕೊಳ್ಳದಾ ಖಳ
ಚಪಳೆಯರು ಚಂಡಿಸಿದರಾ ದಶ
ಲಪನನಿರ್ದನು ಸೀತೆ ಸೇರುವಳಲ್ಲ ತನಗೆನುತ

---

1 ಬಯಸುವರೀ (ಕ), ಕಾಮಿಸಲೀ (ಜ.ಝ). 2 ಲರಿಯದು (ಕ), ಲೇಳವು (ಜ.ಟ), ವೇಳದು (ಝ.ಣ). 3 ವೇನು (ಚ.ಜ). 4 ಶೋಚ್ಚ (ಕ.ಝ), 5 ವಿ (ಗ.ಜ.ಝ.ಟ.ಡ).

ತಪನಕುಲಜರು ಕೇಳಿರೈ ಲೋ
ಲುಪತಿ ಬಿಡಲಱಿಯದೆ ಮನೋಜಾ
ತಪಕೆ ಸೈರಿಸದಸುರ ಸರಮೆಯ ಕರೆದು ಬೆಸಗೊಂಡ ೪೦

ಏನನೆಂಬಳು ಸೀತೆ ಮನ[1]ದೊಳ
ಗೇ[1]ನ ಹಂಬಲಿಸುವಳು ತನ್ನನು
ಮಾನವೇನಂತಸ್ಥವಾವುದು ಜನಕನಂದನೆಯು
ಮಾನವೇಂದ್ರನ ಮಱೆದಳೇ ಹದ
ನೇನೆನಲು ಹತ್ತಿರಕೆ ಬಂದು ದ
ಶಾನನನ ಕರ್ಣದಲಿ ಮೆಲ್ಲನೆ ನುಡಿದಳಾ ಸರಮೆ ೪೧

ಆಡಲೇನದ ಜೀಯ ಲೋಕದ
[2]ಜೋಡೆಯೇ[2] ಜಾನಕಿ ಜಗತ್ರಯ
ಗಾಢಪತಿಭಕ್ತಿಯರಿಗೀ ಸತಿ ಮಾತೃಭವನವಲ
ಆಡಿದಡೆ [3]ಜನ[3]ವೇನನೆಂಬುದೊ
ಜೋಡಿಗಳು ಕಿಱಿದುಂಟು ಮಿಕ್ಕಿನ
ಹಾಡಿ ಹೊಗಳಿಸಿಕೊಂಬ ಜಗದ ಪತಿವ್ರತಾಜನಕೆ ೪೨

ಕಂಡು ಬಲ್ಲೆ[4]ನು ಹ[4]ಲಬರನು ಭೂ
ಮಂಡಲದೊಳೀ ಸತಿಯ ಹೋಲುವ
ಹೆಂಡಿರಿಲ್ಲಾ ಧ್ರುವ ವಸಿಷ್ಠ ಮಹಾತ್ರಿಮುನಿವರರ
ಹೆಂಡಿರುಗ[5]ಳೊಂದೋಜೆ[5] ಜಗದಲ
ಖಂಡಸುವ್ರತೆ ಸೀತೆ ಹುಸಿದಡೆ
ಖಂಡಪರಶುವಿನಾಣೆ ಸತ್ಯವಿದೆಂದಳಾ ಸರಮೆ ೪೩

ಆಗುಳಿಕೆಯಲಿ ಸೀನಿನಲಿ ನಡೆ
ವಾಗ ನುಡಿವಾಗಲಸಿಕೆಗಳಲಿ
ತಾಗುಗಳಲೆಡಹುಗಳಲೆಚ್ಚಱಿಕೆಯಲಿ ಮಱವೆಯಲಿ
ಜಾಗರದಲಿ ಸುಷುಪ್ತಿಗಳಲಿ ಸ
ರಾಗದಲಿ ಚಿಂತೆಯಲಿ ರಘುಕುಲ
ಸಾಗರನ ನೆನಹಲ್ಲದಿಲ್ಲನ್ಯತ್ರವೀ ಸತಿಗೆ ೪೪

---

[1] ದಲದೇ (ಕ.ಗ.ಟ.ಣ). [2] ಜೋಡಣೆಯ (ಚ.ಡ). [3] ಜಗ (ಕ.ಜ.ಝ.ಟ.ಣ).
[4] ವು ಹ (ಕ.ಟ.ಡ), ನು ಕೆ (ಗ). [5] ಳಂತಿರಲಿ (ಚ).

ತಿಳುಹಿ ತೀರಿದವೆಮ್ಮ ಬುದ್ಧಿಯ
ಹಲವುಬಗೆ ಬಹುವಿಧದ ಮಾಯೆಯ
ಸುಳಿಸಿ ಸೋತೆವು [1]ಬಳಲಿ[1]ಸಿದೆವು ಬಹುಪ್ರಕಾರದಲಿ
ಅಳುಪ ಕಾಣೆವು ಚಿತ್ತವೃತ್ತಿಯ
ನೆಲೆ ನಿಜೇಶನ ಮೇಲೆ ಘನ ಕೈ
ದೊಳಸು ಕೊಳ್ಳದು ನುಡಿಸಿ ನೋಡುವುದೆಂದಳಾ ಸರಮೆ ೪೫

ಐಸೆ ಮತ್ತೇನೆನುತ ಖಳನಭಿ
ಲಾಷೆ ಬಿಡದಿಂತೆಂದನಕಟಿ
ನ್ನೇಸುದಿನ ಬನದೊಳಗೆ ಸೆಱೆ[2]ಯಿಾ ವೈಮನಸ್ಯಕದ[2]
ವಾಸಿಯಿನ್ನಾರೊಳು ವಿವೇಕವಿ
ಲಾಸವಲ್ಲವಲಾ ನಿರರ್ಥ ಗ
ತಾಸುಗಳ ನೆನೆನೆನೆದು ಬಱುದೊಱೆ[3]ವೋ[3]ದೆ ನೀನೆಂದ ೪೬

ಮರುಳಲಾಯೆಲೆ ಸೀತೆ ನಿನ್ನನು
ತಿರುಗಿ ತೆಗೆವವಗೆಂಟುಕಂಗಳು
ಶಿರದೊಳಿರಲಿನ್ನೀವುದದು ಹುಸಿ ಹಲವುಮಾತೇನು
ಹರಿಹರಬ್ರಹ್ಮಾಮರೇಂದ್ರರ
ಸರಕುಮಾಡುವ ಮಾಡನೆಂಬುದ
ಧರೆಯೊಳಗೆ ನೀ ಕೇಳಿಕೋ ಕಾಳಾಗಬೇಡೆಂದ ೪೭

ಚದುರತನ ನಿನಗುಳ್ಳಡೀಯೊ
ಪ್ಪದಲಿ ಬೆಸುವುದು ಬುದ್ಧಿ ಪಟ್ಟದ
ಸುದತಿ [4]ನೀನೆನಿ[4]ಸುವೆನು ಜಗದೊಳಗಾಣೆ ಘೋಷಣೆಯು
ಇದೆ ಚತುರ್ದಶಲಕ್ಷಲಲನೆಯ
ರಿದೆ ಮಹಾಸಂಪದವು ನೀನಿಂ
ತಿದಕೆ ನಾಯಕಿಯಾಗು ನಡೆ ಜಡಮತಿಯದೇಕೆಂದ ೪೮

ಸುರಪ ಶಿಖಿ ವರುಣಾದಿಗಳು ಕಿಂ
ಕರರು ತನಗಿಂದಬುಜಭವಶಂ
ಕರರು ತನ್ನಾಶ್ರಿತರು ನಳಕೂಬರಜಯಂತಕರು

---

[1] ಬೆದಱಿ (ಕ.ಗ.ಝ.ಣ). [2] ಯುಲಿ ವೈಮನಸ್ಯಕದ (ಚ.ಝ), ಯುಲಿ ಸೀತೆ ವೈಮನದ(ಗ.ಣ), ಯಿಹೆ ಸೀತೆ ವೈಮನದ (ಜ.ಟ.ಡ). [3] ಯಾ (ಗ.ಜ.ಝ.ಟ.ಡ), ಯೋ (ಚ). [4] ನೀ ಸಲಿ (ಕ.ಣ), ಯನೆಸಲಿ (ಗ.ಟ).

ಚರಣಸೇವಕರಮರಮುನಿ ತುಂ
ಬುರರು ಗಾಯಕರಿಂದು ಮನ್ಮಥ
ವರವಸಂತಕರೊಲಿವ ಸತಿಯರ ದೂತ[1]ರೆನಗೆಂದ[1] ೪೯

ಸುರರಗುರು ಸಾಂವತ್ಸರಿಕ ಸುರ
ತರುಣಿಯರು ತೊತ್ತಿರು ಸುರೋರಗ
ನರನಿಶಾಚರ ಭುವನದೊಡೆತನವೆನ್ನದೆನ[2]ಗಿಂದು[2]
ಸರಿಯದಾರೆಲೆ ಸೀತೆ ಸೀನೀ
ಸಿರಿಯುನನುಭವಿಸದೆ ನಿರರ್ಥಕೆ
ಜರಡುಮನುಜನ ಧ್ಯಾನಿಸುವುದಿದು ಯೋಗ್ಯವಲ್ಲೆಂದ ೫೦

ಏಕೆ ನಿನಗೀ ಮರುಳುತನದವಿ
ವೇಕ ನೀನಾರಾ ನರಾಧಮ
ಕಾಕನಾರುಪಜೀವನಪ್ರಾರಬ್ಧಫಲಗಳಲಿ
ಸೋಕಿದುದನನುಭವಿಸುವುದೆ ನಿ
ರ್ವ್ಯಾಕುಲದ ಸುಪ್ರಾಪ್ತಿ ನಿನಗಿ
ನ್ನೇಕೆ ರಾಮನ ಚಿಂತೆಯೆನಲುರಿ ಮಸಗಿತವನಿಜೆಗೆ ೫೧

ಕಣುಗಳಲಿ ಕಿಡಿಸೂಸೆ ಕೈಯಲಿ
ತೃಣವನುಟಿ ಮುಖದಿಕ್ಕಿ ನುಡಿದಳು
ಬಣಗುರಕ್ಕಸ ಕೇಳೆಲವೊ ನಿನಗಿನಿತುಗುಣವಿರಲು
ತ್ರಿಣಯನನ ಧನುವಂದದೇತಕೆ
ಮಣಿಯುದಾದುದು ಸುಡುಸುಡೆಲವೋ
ಹೆಣದಿನಿಹಿಗಳಿಗುಚಿತವೀ ಮಾತೆಂದಳಾ ಸೀತೆ ೫೨

ತಂದಡತಿಬಲನಹುದಲೇ ರಘು
ನಂದನನ ಸಮ್ಮುಖದೊಳೆನ್ನನು
ಹಂದೆ ಹೋಗೆಲೆ ನಾಯೆ ನಿನಗೇಕಮರಮಾನವರ
ದಂದಶೂಕರ ಭುವನದೊಡೆತನ
ಬೆಂದ ಮೋಟಿಗೆ ಬಹುವಿಕಾರದ
ಮಂದೆವಾಳದ ಮಾತದೇಕೆಂದುಗುಬಿದಳು ಖಳನ ೫೩

---

[1] ರವರೆಂದ (ಚ.ಜ.ಡ). [2] ಗಿನ್ನು (ಚ.ಜ).

ತನಗೆ ಗಡ ಸುಮನಸರು ಬಂಟರು
ವನಜಭವಭವರಾಶ್ರಿತರು ಗಡ
ಮನೆಯತೊತ್ತಿರು ಗಡ ಸುರಾಂಗನೆಯರು ವಿಚಿತ್ರವಲ
ಮನಸಿಜಾದ್ಯರು ಸೇವಕರು ಗಡ
ಮನುಜ ಗಡ ರಘುನಾಥನಿವನಾ
ನನವ [1]ಸೀಳು[1]ವರಿಲ್ಲವಕಟಕಟೆಂದಳಾ ಸೀತೆ ೫೪

ಸಲುವುದೀ ನುಡಿ ಪಾ[2]ನಿ[2]ಗಳಿಗ
ಸ್ಖಲಿತಮೂರ್ಖಾಧಮರಿಗೆ[3]ಡೆಬೆ[3]ರ
ಳಳಿದವರಿಗಭಿಮಾನಹೀನರಿಗಿದು[4]ವೆ ಸಿದ್ಧ[4]ವಲ
ಎಲವೊ ನಿನ್ನೊಳು ಮಾತನಿದಿರಲಿ
ಗಳ[5]ಹಬಹುದೇ[5] ಸುವ್ರತೆಯರೆಲೆ
ಹೊಲೆಯ ಹೋಗೆಂದಬಲೆ ಮುಖದಿರುಹಿದಳು ಖಾತಿಯಲಿ ೫೫

ವಾಸುಗಿಯ ನೀರೊಳ್ಳೆ ತನ್ನ ನಿ
ವಾಸದಲಿ ಜಱೆವುದು ಗಡೆಲವೋ
ದಾಶರಥಿಯನುಚರರ ಲೆಂಕರ ಲೆಂಕರನುಚರರ
ದಾಸಿಯರ ಲೆಂಕರಿಗೆ ಸರಿಬರ
ಲೇಸಱಿವನೀ ನಾಯ ಕಳುಹೆಂ
ದಾ ಸರಮೆಗಾ ಸೀತೆ ಕೋಪಿಸಿ ನುಡಿದಳಿಂತೆಂದು ೫೬

ಲಲನೆ ಕೇಳೀ ರಕ್ಕಸನ ಕಡಿ
ದಲೆಯು ಮೆಟ್ಟಿದು ಮಿಂದ ಬಳಿಕೀ
ಖಳನ ಸತಿಯರು ತೊತ್ತಿರಹರೀ ಸಕಲಸಂಪದವು
ಸುಲಭವಹುದಿದು ಸಿದ್ಧವಿದನೀ
ಹೊಲೆಯಗುತ್ತರಕೊಟ್ಟು ಕಳುಹೀ
ಗಳಹರಕ್ಕಸನಾಯನೆಂದಳು ಸರಮೆಗಾ ಸೀತೆ ೫೭

ಘಡ ಪತಿವ್ರತೆ ತಾನು ಗಡ ಕಾ
ಳ್ಗೆಡದು ನುಡಿವವರಾವು ಗಡ ದಿಟ
ಕಡಿದಲೆಯು ತಾ ಮೆಟ್ಟಿ ಮಿಾವಳು ಗಡ ಮಹಾದೇವ

---

[1] ಸುಡುವ (ಚ), ನಿಳುಹು (ಝ). [2] ಪಿ (ಝ). [3] ದೆಬೆ (ಕ.ಣ), ದೆವೆ (ಗ). [4] ವಿಚಿತ್ರ (ಝ.ಡ). [5] ಹಲಹುದೇ (ಕ.ಜ.ಣ), ಹುವವರೇ (ಡ).

ಒಡತಿ ಗಡ ಬಹುಸಂಪದಕೆ ಬಾಯ್‘
ಬಡಿಕ ಹೆಂಗುಸ ಕೊಲುವೆ[1]ನೆನುತು
ಗ್ಗಡದ[1] ಕೋಪದಲೆತ್ತಿದನು ಖಂಡೆಯುವನಸುರೇಂದ್ರ ೫೮

ಅಹಹ ರಕ್ಕಸರಾಯ ಮರುಳನೆ
ವಿಹಿತವೇ ನಿನಗಿದು ಭುಜಶ್ರೀ
ಮಹಿಳೆ ನಗದಿಹಳೇ ಯಶೋರಮೆ ನಾಚಿ ತಲೆಗೊಡಹಿ
ಬಹಿಕರಿಸದಿಹಳೇ ಧರಾಂಗನೆ
ಗಹಗಹಿಸದಿಹಳೇ ವಿಚಾರವ
ವಹಿಸದಳಿವರೆ ಸತಿಯನೆಂದಳು ಮಯನಸುತೆ ಪತಿಯ ೫೯

ಝಡಿದು ಚಿಮ್ಮುವ ಖಂಡೆಯುವ ಕೈ
ದುಡುಕಿ ಮಂಡೋದರಿ ನಿಜೇಶನ
ಕಡುಹ ಕಳಲಿಸಿ ಕೆಲಕೆ ಸಾರಿಸುವನಿತಱೊಳೆ ಹನುಮ
ಕಿಡಿಗೆದಱಿ ಗಿಳಿವಿಂಡಿಗೆಱಗುವ
ಗಿಡಿಗನವೊಲುಬ್ಬೆದ್ದು ತೊಲಗಿದ
ಖಡುಗವನು ಕಂಡಂತರಿಸಿದನು ಮರನ ಕೊಂಬಿನಲಿ ೬೦

ಮರುಳುತನ ಬೇಡೇಳು ನಡೆ ನರ
ತರುಣಿಯೇ ತಾನೀಕೆ ಸಾಕ್ಷಾ
ತ್ಪರಮಪುರುಷನ ಪುಣ್ಯವಧುವೆಂಬೆಣಿಕೆ ತೋಱುತಿದೆ
ಸ್ಮರವಿಕಾರದ ಬುದ್ಧಿ ಸಾಕಿ
ನ್ನೆರಡುಗೆಡಬೇಡೆಂದು ಮಂಡೋ
ದರಿ ನಿಜೇಶನನೊಯ್ದಳರಮನೆಗಣುಗ ಕೇಳೆಂದ ೬೧

ಬಳಿಕ ದುರ್ಮ್ಮಾನದಲಿ ಖಳ ನಿಜ
ನಿಳಯಕಭಿಮುಖನಾದನಿತ್ತಲು
ಹಲುಬಿದಳು ಹರಿದಶ್ವಕುಲ[2]ವಧು ರಾಘವೇಶ್ವರನ[2]
ನೆಲನೆ ಬಾಯ್ದೆಱೆ ಬದುಕಲಾರೆನು
ಖಳನ ಬಾಧೆಯೊಳೆಂದು ಬಾಯ್ಬಿ
ಟ್ಟಳಲಿದಳು ನೆನೆನೆನೆದು ಮನುಕುಲಸಾರ್ವಭೌಮಕನ ೬೨

---

[1] ನೆನುತವಗಡದ (ಕ), ನೆಂದುಗ್ಗಡದ (ಜ), ನೆಂದವಗಡೆಯ (ಡ).
[2] ಜನರಾಣಿ ರಾಘವನ (ಕ.ಟ).

ರಾಮ ರಘುಕುಲವಾರ್ಧಿವರ್ಧನ
ಸೋಮ ಸೋಮಾಹ್ಲಾದಕರ ನಿಜ
ರಾಮ ನಿರುಪಮರಮ್ಯವಿಗ್ರಹ ವಿಪುಳವಿಖ್ಯಾತ
ರಾಮ ರಾಘವ ರಾಕ್ಷಸಾನ್ವಯ
ಭೀಮ ಭಾರ್ಗವ ಬಾಹುಬಲಜಯ
ರಾಮ ತನಗಿನ್ನೇನು ಗತಿ [1]ಹೇಳೆಂದಳಾ ಸೀತೆ[1] ೬೩

ಅಕಟ ಪೂರ್ವದಲಾವ ಹಿರಿಯರ
ಟಕರಿಗಳೆದನದಾವ ದೈವದ
ಭಕುತಿಯನು ಕುಂದಿದೆನೊ ನಿಂದಿಸಿದೆನೊ ಗುರುದ್ವಿಜರ
ವಿಕಳತೆಯಲಿ ವಿವೇಕಿಸದೆ ಪಾ
ತಕವ ನೆನೆದೆನೊ ಪತಿಯೊಳಕಟಾ
ಪ್ರಕಟಿಸಿತೆ ದುಷ್ಕರ್ಮಫಲವೆನಗೆಂದಳಾ ಸೀತೆ ೬೪

ಸುಳಿಯಲೇಕೆ ಕುರಂಗ ರಾಮನ
ಕಳುಹಲೇಕೆ ದುರುಕ್ತಿಯಲಿ ನುಡಿ
ದಲಘುಬಲ ಲಕ್ಷ್ಮಣನನುಚುಬಲದೇಕೆ ಬೆಂಬಳಿಯ
ಲಲನೆಯಿವಳಲ್ಲೆಂದು ಚಿತ್ತದೊ
ಳಲಸಿದರೊ ಮೇಣ್ ಖಳರ ಮಾಯೆಗೆ
ಸಿಲುಕಿದರೊ ಸಾವ್ ಬಾರದೆನಗಕಟೆಂದಳಾ ಸೀತೆ ೬೫

ಏನು ಹದನಾಗಿಹರೊ ರಘುನೃಪ
ಸೂನುಗಳು ಸೂರ್ಯಾನ್ವಯದ ಸುರ
ಧೇನುಗಳು ಸದ್ವಂಶ[2]ಸಚ್ಚರಿತಾ[2]ಭಿಮಾನಿಗಳು
ಆ ನರೇಂದ್ರ[3]ರ[3] ಸುದ್ದಿಯನು ಸಂ
ಧಾನಗೊಳಿಸುವರಿಲ್ಲಲಾ ಹಾ
ಹಾ ನರೋತ್ತಮ ಹಾ ಎನುತ ಹಮ್ಮೈಸಿದಳು ಸೀತೆ ೬೬

ಹಾ ಮಹಾದೇವ ಮಮಸುಕೃತ
ಸ್ತೋಮದಧಿದೇವತೆಯಲಾ ಸೀ
ತಾಮಹಾಸತಿ [4]ವಿಶ್ರುತದ[4] ದೃಷ್ಟಾನುಮಾನದಲಿ

---

[1] ಮತಿಯೆಂದಳಾ ಸೀತೆ (ಕ), ಹೇಳೆಂದಳಬುಜಾಕ್ಷಿ (ಝ.ಣ). [2] ಚಾರಿತ್ರಾ (ಕ.ಟ), ಸುಚರಿತ್ರಾ (ಚ). [3] ನ (ಗ.ಜ.ಝ). [4] ಶ್ರುತದಲ (ಕ), ತಾನು ಶ್ರುತ (ಗ).

ರಾಮಸತಿಗೆಣೆಯಾರು ಜಗದಭಿ
ರಾಮೆಯರಿಗೆ ವಿಭೂಷಣವಲಾ
ರಾಮಣೀಯಕ ಪತಿಭಕುತಿ ಜಗಕೆಂದನಾ ಹನುಮ ೬೭

ಆ ತಳೋದರಿ ಬಳಿಕ ಮೆಲ್ಲನೆ
ಚೇತರಿಸಿಕೊಂಡೆದ್ದು [1]ಸಾವಿಗೆ
ಶಾತಖಡ್ಗಕೆ[1] ಕೈದುಡುಕಿದಳು ಕಾವಲಸುರೆಯರ
ಭೂತಲಾ ನೀ ಜಗದ ಜೀವವಿ
ಘಾತಕಿಯಲಾ ಸಾಕು ನಮಗೀ
ರೀತಿ ಸೇರದು ಸಾರೆನುತ ಬಿಡೆ ಜಱೆದಳಾ ತ್ರಿಜಟೆ ೬೮

ಇನ್ನಬರ ಸ್ವೈರಿಸಿದ ಸ್ವೈರಣಿ
ಯುನ್ನತಿಕೆಗಿದು ಮಾರ್ಗವೇ ದಿನ
ವಿನ್ನು ಸಾರೆ ದಶಾನನಂಗೆಲೆ ತಾಯೆ ಚಿತ್ತೈಸು
ಮನ್ನಿಸದಿರವಿವೇಕವನ್ ವಿ
ತ್ಪನ್ನತೆಗೆ ಕುಂದಹುದು ಹಬ್ಬುವು
ದಿನ್ನು ನಿಮ್ಮಭ್ಯುದಯಲತೆ ಕೇಳೆಂದಳಾ ತ್ರಿಜಟೆ ೬೯

ಕನಸ ಕಂಡೆನು ನಿನ್ನಿನಿರುಳಿನ
ಕೊನೆಯಲೆಲೆ ವೈದೇಹಿ ಕೇಳ್ ಖಳ
ಜನಪ ರಾವಣನರಿದ ತಲೆಗಳಲಳುವ ನಾರಿಯರ
ನಿನದದಿಂದಂತಕನ ದಿಕ್ಕಿಗೆ
ತನುಜ ಮಿತ್ರ ಜ್ಞಾತಿ ಬಾಂಧವ
ಜನಸಹಿತ ಗಮಿ[2]ಸುವುದ[2]ನೆಂದಳು ಸೀತೆಗಾ ತ್ರಿಜಟೆ ೭೦

ಧವಳದಂತಿಯ ಹೆಗಲಿನಲಿ ರಾ
ಘವನ ಕಂಡೆನು ಪೃಥುಳಸಿತಪುಂ
ಗವವನೇಱಿರ್ದುದನು ಕಂಡೆನು ರಾಘವಾನುಜನ
ವಿವಿಧಮುಕ್ತಾಭರಣ ಮಂಗಳ
ನಿವಸನಾಲಂಕಾರದಲಿ ನಿ
ಮ್ಮುವನು ಕಂಡೆನು ತೊಡೆಯಮೇಲಿನವಂಶವಲ್ಲಭನ ೭೧

---

[1] ಸಾವಿಂಗೋತು ಖಡ್ಗವ (ಕ), ಸಾವಿಗೆ ಸೀತೆ ಖಡ್ಗಕೆ (ಗ). [2] ಸಿದುದ (ಚ.ಝ).

ಕಂಡೆನುನ್ನತಶೈಲಶಿಖರದ
ಮಂಡೆಯಲಿ ಮೂರ್ಧಾಭಿಷೇಕದ
ದಂಡಿಯನು ಧಾರ್ಮಿಕಪುಲಸ್ತ್ಯಾನ್ವಯ ವಿಭೀಷಣನ
ಕಂಡ ಕನಸಿದು ದೇವಿ ನಿಮ್ಮಯ
ಗಂಡನಭ್ಯುದಯವನು ಕಾಬಿರಿ
ಕೊಂಡುಕೊನರದಿರರಸಿ ಚಿಂತೆಯನೆಂದಳಾ ತ್ರಿಜಟೆ ೭೨

ಸಂತವಿಸಿ ದೇವಿಯರ ಬಳಿಕಾ
ಕಾಂತೆ ಕಾಪಿನ ನಾರಿಯರು ಸಹಿ
ತಂತರಿಸಿದಳು ನಿದ್ರೆಯನು ನೀರೇಜಮುಖಿ ಮನದ
ಚಿಂತೆಯನು ಬಿಡಲಱಿಯದಾ ನಿಜ
ಕಾಂತನನು ಹಂಬಲಿಸುತಿರೆ ಹನು
ಮಂತನಾ ಸಮಯದಲಿ ನುಡಿದನು ಮರನ ಕೊಂಬಿನಲಿ ೭೩

ದೇವಿಯರೆ ನಿಜಪತಿಯು ಪದರಾ
ಜೀವವತಿಸುಕ್ಷೇಮ ಲಕ್ಷ್ಮಣ
ದೇವ ಬಲ್ಲಿದನಧಿಕಬಲ ಬಲಿಮುಖಕುಲಾಧಿಪನ
ಭಾವ ಕರಲೇಸೆನ್ನ ನಿಲ್ಲಿಗೆ
ಮೂವರವರಟ್ಟಿದರು ಸೀತಾ
ದೇವಿಯರ ನೀ ನೋಡಿಬಾ ಹೋಗೆಂದು ಗುಪ್ತದಲಿ ೭೪

ಬಂದೆನಬುಧಿಯ ದಾಂಟಿ ಕಂಡೆನು
ಸಂದ ಸುವ್ರತೆಯಂಘ್ರಿಕಮಲವ
ನೆಂದೆನಲು ಮೊಗನೆಗಹಿ ನೋಡಿದಳಾ ಮಹೀರುಹವ
ಹೊಂದಿಕೆಯ ಹೊಲಬಲ್ಲವೀನುಡಿ
ಯೆಂದು ಸತಿ ಮೊಗದಿರುಹಲೊಡನಿಂ
ತೆಂದನಾ ಹನುಮಂತ [1]ಹವಣಿಸಿದುಚಿತ[1]ವಚನದಲಿ ೭೫

ದೇವಿಯರ ಖಳ ತಂದಬಳಿಕೆಲೆ
ದೇವಿ ಕೇಳು ಜಟಾಯುವನು ಕಂ
ಡಾ ವಿಭಾಕರಕುಲಜರೈ[2]ತಂದಿಂ[2]ದ್ರನಂದನನ
ಜೀವವನು ಕೊಂಡಧಿಕಬಲಸು
ಗ್ರೀವನನು ಪತಿಕರಿಸಿ ಸುರವಿ
ದ್ರಾವಣನ ರಾವಣನ ಕೊಲಲೈತಂದರವರೆಂದ ೭೬

[1] ನೊಡರಿಸಿದುಚಿತ (ಕ), ದೇವನು ಮಧುರ (ಟ). [2] ದಿದರಿಂ (ಕ.ಜ.ಣ).

ಕಳುಹಿದರು ಬಳಿಕವರು ಸೀತೆಯ
ನೆರೆಯುನಱು ಹೋಗೆನಲು ಬಂದೆನು
ಬಳಿಕ ಕಂಡೆನು ದೇವಿಯರ ವಿಮಲಾಂಘ್ರಿಪಂಕಜವ
ಎಲೆ ಜನನಿ ಚಿತ್ತೈಸೆನುತ ಮಂ
ಜುಳಮಹೀಜ[1]ದಿ[1] ನಿಳಿದು ಪಾದದ
ಲಿಳುಹಿದನು ನಿಜಶಿರವನವನಿಜೆ ಬೆದಱೆ ಭೀತಿಯಲಿ ೭೭

ಅಂಜ[2]ಲೇಕೆಲೆ[2] ತಾಯೆ ದಾನವ
ಭಂಜನನ ಭೃತ್ಯನು ಕಣಾ ತಾ
ನಂಜನಾಸುತ ಹನುಮನೆಂಬುದು ಪೆಸರಲೇ ತನಗೆ
ಅಂಜಬೇಡಾಸುರವಿಕಾರದ
ರಂಜಕರು ನಾವಲ್ಲವೆನುತ ಧ
ನಂಜಯನಸಖಸೂನು ಬಿನ್ನೈಸಿದನು ಜಾನಕಿಗೆ ೭೮

ನೀನು ಕಪಿ ನರನಾಥನಾ ರಘು
ಸೂನು [3]ತಾನಿದು[3] ಸ್ವಾಮಿಭೃತ್ಯವು
ಹಾನುಭವಕನುನಯವೆ ತಾನಿದಸಂಗತದ ಮಾತು
ವಾನರರು ವಾರುಧಿಯ ದಾಂಟುವು
ದೇನಿದಚ್ಚರಿಯಲ್ಲವೇ ಮಾ
ಯಾನಿಬದ್ಧೋಕ್ತಿಗಳಿಗಂಜುವೆನೆಂದಳಾ ಸೀತೆ ೭೯

ಜನನಿ ಕೇಳ್ ನಿಮ್ಮರಸನನುಪಮ
ವನರುಹಾಂಘ್ರಿಯ ಸೇವಕರಿಗೀ
ನೆನಹು ದೊಡ್ಡಿತೆ ನೀರಧಿಯನುತ್ತರಿಸಿದಂ[4]ಗ[4]ವನು
ಜನನಿ ಚಿತ್ತೈಸೆನುತ ವರವಾ
ಮನ ತ್ರಿವಿಕ್ರಮನಾದವೊಲು ಬೆಳೆ
ದನು ಮಹೀತಳವದುರದವೊಲಂಬರದ ತುದಿಗಾಗಿ ೮೦

ಶಿವನ ಕಾಯದ ಕಾಂತಿ ಮೈಯಲಿ
ಬವಬವಿಸಿದುದು ವದನವುದಯದ
ರವಿಯವೊಲು ರಂಜಿಸಿತು ತಾರಾಗಣದ ಹುರಿಯಂತೆ
ದಿವವನಣೆದುದು ಬಾಲ ಬಳಿಕಾ
ಹವಣ ಕಾಣುತ ಕಾಂತೆ ಕಂಗಳ
ನೆವೆಗಳಲಿ ಮುಚ್ಚಿದಳು [5]ರಘುಪತಿ[5] ರಾಮರಾಮೆನುತ ೮೧

---

[1]ವ (ಚ.ಟ). [2]ಜೇಡೆಲೆ (ಕ.ಜ), ಲೇಸಕೆ (ಚ), ರೇನೆಲೆ (ಟ.ಣ). [3]ವಿದು ಸ್ವಾ (ಕ), ವಿದು ಶಾ (ಗ.ಝ). [4]ದ (ಗ.ಜ.ಟ.ಡ.ಣ). [5]ಕಿವಿಯನು (ಗ), ಮನದಲಿ (ಚ).

ಕಂಡು ಹೆದಱುವಳೆನುತಲಾಹವ
ಚಂಡಬಲ ಸಂಕೋಚಿಸಿದನು
ದ್ದಂಡಮೂರ್ತಿಯನೆಸೆದನಣುರೂ[1]ಪದಲಿ ಕೈಯೊಡನೆ[1]
ಮಂಡಳಿಸಿದಂಬುಧಿಯನೀ ಕೈ
ಕೊಂಡ ರೂಪಿನಲುತ್ತರಿಸಿದೆನು
ಕಂಡೆನೀ ರೂಪಿನಲಿ ನಿಮ್ಮುವನೆಂದನಾ ಹನುಮ ೮೨

ಒಡಬಡುವುದೊಮ್ಮೊಮ್ಮೆ ಮನ ಮ
ತ್ತೊಡಬಡದೆ ಬೆದಱುವುದು ನಿಜವನು
ಹಿಡಿಯಲಱಿಯದೆ ಹತ್ತುಗೆಯ ಹಸ್ತದ ಕದಂಪಿನಲಿ
ನುಡಿಯಲಮ್ಮದೆ ಕಾಂತೆಯಿರೆ [2]ಮುಂ[2]
ಗುಡಿಯ ಕಿಂಕರಭಾವದಲಿ ಕಪಿ
ನುಡಿದನವನೀನಾಥ ನೇಮವನಿತ್ತ ಕುಱುಹುಗಳ ೮೩

ತಾಯೆ ಚಿತ್ತೈಸಿನಕುಲದ ರಘು
ರಾಯನನುಪಮಚಿತ್ರಕೂಟ
ಸ್ಥಾಯಿಯಲಿ ವಿಹರಣ ಜಲಕ್ರೀಡಾವಿನೋದದಲಿ
ಪಾಯವಟ್ಟವನಾ ಕೊಳನ ಪಾ
ನೀಯದಲಿ ಕೆಡಿಸಿದಿರಿ ಗಡ ನಿಜ
ವೇಯಿದೆಂದು ಸಮೀರಸುತ ಕೈಮುಗಿದನಂಬಿಕೆಗೆ ೮೪

ದೇವಿ ಕೇಳ್ ನಿಮ್ಮುವನು ಬೆದಱಿಸಿ
ದಾ ವಿಹಂಗಾಧಮನನಾ ನರ
ದೇವನುಳುಹಿದ ಗಡ ಶರಣ್ಪೊಗಲಿದುವೆ ನಿಶ್ಚಯವೆ
ದೇ[3]ವಿ[3] ಬಳಿಕಾ ಚಿತ್ರಕೂಟ
ಗ್ರಾವವನು ಕಳಿದೈದಿ[4]ದಿರಿ[4] ಗಡ
ಮೂವರಧಿದೇವತೆಗಳಯ್ಯನ ಪರ್ಣಮಂದಿರವ ೮೫

ಆ ಮುನೀಂದ್ರನ ವನಿತೆ ವಿಪುಳ
ಪ್ರೇಮದಲಿ ನಿಮ್ಮುವನು ನಿರುಪಮ
ಹೇಮರತ್ನಾಭರಣದಿಂ ಪೂಜಿಸಿದಳಲ್ಲಿ ಗಡ

---

[1] ಪಕವ ಕೈಕೊಂಡು (ಕ), ಪಿನಲಿ ಕೈಯೊಡನೆ (ಗ). [2] ಕೈ (ಕ.ಜ.ಝ.ಟ.ಣ). [3] ವ (ಗ.ಚ.ಡ.ಣ). [4] ದನು (ಗ.ಚ), ದರು (ಡ.ಣ).

ಆ ಮುನಿಯ ಬೀಳ್ಕೊಂಡು [1]ಬರುತು[1]
ದ್ದಾಮವೀರ ವಿರಾಧನನು ನಿ
ರ್ನಾಮವನು ಮಾಡಿದನು ಗಡ ನೃಪನಹುದೆ ಕುಱುಹೆಂದ ೮೬

ಮಂಗಳಾನನೆ ಚಿತ್ತವಿಸು ಶರ
ಭಂಗಮುನಿಪ ಸುತೀಕ್ಷ್ಣರ ಭವ
ನಂಗಳಲಿ ಗಮಿಸಿದಿರಿ ಗಡ ಘಟವಾರಿಸಂಭವನ
ಅಂಗಣವ ಸಾರಿದಿರಿ ಗಡ ರಘು
ಪುಂಗವಂಗಾ ಮುನಿಪ ಚಾಪ ನಿ
ಷಂಗ ಖಡ್ಗವನಿತ್ತ ಗಡ ನೃಪಗಹುದೆ ಕುಱುಹೆಂದ ೮೭

ಇರಲು ತಿಂಗಳಮೇಲೆ ಮೈತ್ರಾ
ವರುಣಿಯನು ಬೀಳ್ಕೊಂಡು ಬರೆ ನೀ
ವರುಣತನಯನ ಕಂಡು ಕಳುಹಿಸಿಕೊಂಡು ಗೌತಮಿಯ
ವರಸರೀತೀರ[2]ವನು ಸಾರಲು[2]
ಹರಿಬಕೊದಗಿದ ದೂಷಣಾದ್ಯರ
ಶಿರವ ಚಂಡಾಡಿದನು ಗಡ ನೃಪನಹುದೆ ಕುಱುಹೆಂದ ೮೮

ಮೇಲೆ ಹೊ[3]ಮ್ಮಱು[3] ಸುಳಿಯಲದಱಂ
ಬೇಳುವೋದಿರಿ ಗಡಯೆನಲ್ ಕ
ಣ್ಣಾಲಿಗಳಲುರುಳಿದವು ಜಲಬಿಂದುಗಳು ಜಾನಕಿಯ
ಹೇಳಿದೀ ಕುಱುಹುಗಳು ತಪ್ಪವು
ಕೇಳಿದೈ ಹನುಮಂತ ನಂಬುಗೆ
ಗೇಳದಿದೆ ಮನವೇನಮಾಡುವೆನೆಂದಳಾ ಸೀತೆ ೮೯

ಆದಡೆಲೆ ಕೇಳ್ ಜನನಿ ಚಿತ್ತೈ
ಸಾದರದಿ ಕರಯುಗಳತಳದಲಿ
ಪಾದದಲಿ ಪದ್ಮಂಗಳಿಡದಲಿ [4]ಮತ್ತಿ[4] ನೊಸಲಿನಲಿ
ನೈದಿಲರಸನ ಚಿಹ್ನವಿವು ತಾ
ನೈದಿಹವು ಗಡ ದೇವಿ ಕೇಳ್ ಹುಸಿ
ಯಾದಡಿವು ಬಳಿಕೆನ್ನ ನಂಬಲುಬೇಡ ನೀ[5]ನೆಂ[5]ದ ೯೦

---

[1] ಬಳಿಕು (ಕ.ಝ.ಟ). [2] ದಲಿಯಿರುತಿರೆ (ಚ). [3] ಮ್ಮೃಗ (ಟ.ಣ).
[4] ಮಚ್ಚೆ (ಚ). [5] ವೆಂ (ಕ.ಚ.ಜ.ಝ.ಟ).

ಮೂಱುಭಾಗದ ಸಂಶಯವು ಕೆಲ
ಸಾಱಿತವನೀಸುತೆಗೆ ನಂಬುಗೆ
ದೋಱದಿರೆ ತುದಿಯಂಶದಲಿ ಹನುಮಂತ[1]ನಾ ಹದನ[1]
ಮಾಱುನುಡಿಯಿರದಿರಲಱುದು ಮನ
ಮಿಾಱುವುದಲಾಯೆಂದು ಮಣಿಗಣ
ದೋಱುಕೆಯ ಮುದ್ರಿಕೆಯನಿತ್ತನು ರಮೆಗೆ ರಾಘವನ ೬೧

ಕಮಲಮುಖಿ ಸುಮುಖತೆಯ ಘನಸಂ
ಭ್ರಮದ ಪರಮಾನಂದದಲಿ ನಿಜ
ರಮಣನೆಂದೇ ವಂದಿಸಿದಳಾ ರಾಮಮುದ್ರಿಕೆಗೆ
ಕಮವನುಱೆ ಜಱೆದುಗುಳ್ವ ಕಿರಣದ
ವಿಮಲರತ್ನದ ನಡುವೆ ಹೊಳೆದುದು
ಕಮಲನಯನನ ಮೂರ್ತಿ ಕಂಗಳಿಗಾ ಪತಿವ್ರತೆಯ ೬೨

ತರಣಿಬಿಂಬದ ತೋಱುಕೆಯ ತಾ
ವರೆಯವೊಲು ಹೆಱೆಗಂಡು ಹಿಗ್ಗುವ
ಶರನಿಧಿಯವೊಲು ಸಾರ್ದ ಸಿರಿಯ ದರಿದ್ರನಂದದಲಿ
ಪರಮತತ್ತ್ವದ ನಿಲುಕಡೆಯ ಸಂ
ದರುಶನದ ಸುಜ್ಞಾನಿಯವೊಲು
ಬ್ಬರದ ಹರುಷದಲಬಲೆ ಹೊಂಪುಳಿಯೋದಳಡಿಗಡಿಗೆ ೬೩

ಮಗುಳೆ ಮಗುಳೆ ಸುಖಾತಿಶಯದು
ಬ್ಬುಗಳ ರೋಮಾಂಚನದ ಹರುಷಾ
ಶ್ರುಗಳಲಾ ಮುದ್ರಿಕೆಯ ಶಿರದಲಿ ಮಿಱುಪ ಭಾಳದಲಿ
[2]ದೃಗುಗಳಲಿ ಕುಚ[2]ಮಧ್ಯದಲಿ ಸೊಂ
ಪಗಿವ ಸಂತೋಷದಲಿ ಸೇರಿಸಿ
ಸೊಗಸಿನನುಭವ[3]ರತಿ[3]ಯಲೋಲಾಡಿದಳು ನಿಜಪತಿಯ ೬೪

ಸಂದ ಸುಖದತಿಶಯದ ಹರುಷದ
ಸಂದಣಿಯಲಾ ಸರಸಿಜಾನನೆ
ಸಂದ ವಿಶ್ವಾಸದಲಿ ಸೂಸುವ ಮಧುರವಚನದಲಿ
ಕಂದ ಬಳಲಿದೆ ಜೀವವಿದು ನಿ
ನ್ನಿಂದ ಸಪ್ರಾಣಿಸಿತು ಹೇಳ್ವೈ
ತಂದೆ ತನ್ನಯಮೇಲೆ ಕರುಣಪದೆಂ[4]ತು[4] ರಘುಪತಿಯ ೬೫

---

[1] ನದನಱುದು (ಕ.ಟ). [2] ಯುಗಪಯೋಧರ (ಕ). [3] ಕಲೆ (ಜ), ನೆಲೆ (ಝ), ತತಿ (ಟ), ಗತಿ (ಡ). [4] ತೊ (ಚ.ಡ.ಣ).

ಮನದ ಪರಿಯೇನೆನ್ನ ಮೇಲಣ
ನೆನಹಿನಂತರವೇನು ಹೇಳ್ಳೈ
ಹನುಮ ಕಠಿಣವೊ ಕೋಮಲವೊ ಕಾಕುತ್ಸ್ಥನಂತಸ್ಥ
ಕನಲಿಕೆಯ ಮಾತುಗಳೊ ಮಮತೆಯ
ವಿನಯುವಚನವೊ ನಿನ್ನ ಕಳುಹುವ
ದಿನದಲಿದ್ದಸ್ಥಿತಿಯನೇ ಹೇಳೆಂದ[1]ಳಾ ಸೀತೆ[1] ೯೬

ಅರಸಿ ಕೇಳಧ್ಯಾತ್ಮವಿದ್ಯಾ
ಚರಿತರಿನಕುಲದವರು ರಾಮನ
ಪರಿಯುವರ ಪರಿಯಲ್ಲ ಚಿಂತನೆ ದೇವಿಯುರ ಮೇಲೆ
ವರಜಪಾನುಷ್ಠಾನವಿಹಿತೋ
ತ್ಕರಸಮಾಧಿಧ್ಯಾನದಲಿ ಸಂ
ಚರ[2]ಣ[2] ಜಾಗ್ರತ್ಸ್ವಪ್ನದಲಿ ಬೇಜುಲ್ಲ ನೆನಹೆಂದ ೯೭

ಕಂದ ಕೇಳಿನಿತುಂಟೆ ಮನದಲಿ
ಕಂದುಕಸರಿಕೆಯಿಲ್ಲವಲೆ ನೀ
ನೆಂದ ಮಾತನು ನಂಬಲೇ ನಿಶ್ಚಯುವೆ ಹೇಳೆನುತ
ಸಂದಣಿಪ ಲೋಚನಪಯುಃಕಣ
ದಿಂದ ಮತ್ತೀ ಮಾತ[3]ನೆಂ[3]ದಳು
ಯೆಂದಿಗೆನಗುಕ್ಕಲವು ಹೇಳ್ಳೈ [4]ತಂದೆ[4] ಹನುಮಂತ ೯೮

ಏನಮಾ[5]ಡುವೆ[5] ತಾಯೆ ತಪ್ಪಿತು
ತಾನಲೇ ಕಡುಮೋಸವೋದೆನು
ಹೀನವಾದುದು [6]ಬಂಟತನವಿ[6]ನ್ನೆಂದು ಫಲವೇನು
ಈ ನಿಶಾಟನ ಕೊಂದು ನಿಮ್ಮವ
ನಾ ನರೇಂದ್ರನ ಬಳಿಗೆ ಕೊಂಡೊ
ಯ್ಯೋ ನೆನಹನೆಚ್ಚರಿಸದಾದೆನು ಬರುತ ತಾನೆಂದ ೯೯

---

[1] ಳಿಂದುಮುಖಿ (ಕ.ಜ.ಝ.ಡ.ಣ). [2] ಣೆ (ಗ.ಟ.ಡ). [3] ನುಡಿ (ಗ.ಜ.ಝ.ಡ.ಣ). [4] ಮಗನೆ (ಕ), ಕಂದ (ಣ). [5] ಡಲಿ (ಕ.ಜ.ಡ). [6] ಕೋಡಿಯಾಯ್ತು (ಗ), ಬಂಟತನಕಿ (ಝ.ಡ.ಣ).

ಮಾಣಲದು ಕೊಂಡೊಯ್ವೆನೇ [1]ತವ
ಪ್ರಾಣಪತಿಯೇನೆಂ[1]ಬನೋ ನಿವು
ಗೂಣಯುವ ಹೊಱುಸುವನೊ ಕೊಱತೆಯು ಹಾಯ್ಕುವನೊ ತನಗೆ
ಕಾಣಬಾರದು ಹಗೆಯ ವಿಗತ
ಪ್ರಾಣದಲಿ ನಿಮ್ಮುವನು ತೆಗವುದು
ಜಾಣತನ[2]ದಭಿಯೋಗ ರಾಮಂ[2]ಗೆಂದನಾ ಹನುಮ ೧೦೦

ಅಳಲದಿರಿ ನೀವಿನ್ನು ತಪ್ಪಿದ
ಕೆಲಸ[3]ಕೇನಂತಿರಲಿ[3] ಸತಿ ಕೇ
ಳೊಲುವ ನಿಮ್ಮಡಿಯರಸನನು ತಿಂಗಳಿಗೆ ತಾರದಿರೆ
ಬಳಿಕ ತಾ ಡಿಂಗರಿಗನೇ ಜಂ
ಗಳದ ಜಾಡ್ಯವ ಜಾರಬಿಡಿ ಮಂ
ಗಳೆಯರಾಗಿ ಮನೋರಥಕೆ ನೀವೆಂದನಾ ಹನುಮ ೧೦೧

ಬೀಳುಕೊಡಿ ನಿಮ್ಮರಸರಿಗೆ ತಾ
ಹೇಳಲೇನದ ಹೇಳಿ ಮನದಾಂ
ದೋಳವನು ಬಿಡಿ ಬಿಸುಡಿ ಚಿಂತಾಭರದ ತಲೆಹೊಱೆಯು
ಹೇಳಲೇನಿದ್ದಿರವ ಕಂಡೈ
ಮೇಲಣುತ್ತರವೇನು ಕಂಡುದ
ಹೇಳು [4]ಹೇಳುವುದೇನು ತಾನಿ[4]ನ್ನೆಂದಳಾ ಸೀತೆ ೧೦೨

ನಂಬನೀ ನುಡಿಗೆನ್ನನೆನ್ನನು
ನಂಬುವಂತಿರೆ ಕಿಱಿದು ಕುಱುಹುಗ
ಳೆಂಬವುಳ್ಳಡೆ ಕೊಡಿ ನಿರೂಪವನನಿತಱಿಂ ಮೇಲೆ
ನಂಬದಿರನಿದು ತಥ್ಯವೆನೆ ಬಳಿ
ಕಂಬುಜಾನನೆ ತೆಗೆದಳಾ ಮಲಿ
ನಾಂಬರದ ನಿಱಿಮುಱಿಯ ನಿರುಪಮವರಶಿಖಾಮಣಿಯ ೧೦೩

---

[1] ರಘುಕ್ಷೋಣಿಪನದೇನೆಂ (ಕ), ರಘುರಾಮನೇನೆಂದೆಂ (ಚ.ಣ), ರಘುಸೂನುವೇನೆಂದೆಂ (ಟ). [2] ರಾಮಂಗೆ ಜಗದೊಳ (ಕ), ಜಗದೊಳಗೆ ರಾಮಂ (ಜ.ಝ). [3] ಕೆಲೆ ರಾಜೇಂದ್ರ (ಕ), ವೇನಂತಿರಲಿ (ಗ), ಕಿನ್ನೇನೆನುತ (ಜ), ಕಿನ್ನಂತಿರಲಿ (ಝ.ಟ.ಣ). [4] ಹೇಳಿನ್ನಾವುದೆನಗಿ (ಕ.ಝ.ಣ), ಹೇಳುವುದಾವು ತನಗಿ (ಟ.ಡ).

ಗುಣನಿಧಿಯೆ ಬಾ ಕಂದ ಕಪಿದಿನ
ಮಣಿಯೆ ಬಾಯೆಂದಮಲಚೂಡಾ
ಮಣಿಯನಿತ್ತಳು ತುಂಬುವಂಬಕಜಲದ ಝಾಡಿಯಲಿ
ರಣಭಯಂಕರ ರಾಘವಂಗೀ
ಮಣಿಯ ಕೊಡು ನೀನೆಂದ ದಿನಕರಿ
ಗಣದಿಶಾಪಟಮಲ್ಲನನು ತಹುದೆಂದಳಿಂದುಮುಖಿ ೧೦೪

ಮಗನೆ ಕೇಳ್ ರಾಕ್ಷಸರು ಮಾಯಾ
ವಿಗಳು ಮಾಂಸಾಹಾರಿಗಳು ಮೈ
ದೆಗೆದು ನಡೆ ಮತಿವಂತನಾಗಿಯೆ ಕಂದ ಹೋಗೆಂದು
ಅಗಲಲಾರದೆ ಪಾವಮಾನಿಯ
ಮಗುಳೆ ಮಗುಳುಪಚರಿಸಿ ತೊರವೆಯು
ನಗರದೊಡೆಯನ ಚರನ ಕಳುಹಿದಳಶ್ರುಜಲ ಝಡಿಯೆ ೧೦೫

---

# ನಾಲ್ಕನೆಯ ಸಂಧಿ

ಸೂಚನೆ : ಮುಱಿದು ರಕ್ಕಸಬನವ ಬನದಲಿ
ತಱುಬಿ ಕಾದಿದ ಜಂಬುಮಾಲಿಯ
ಮೆಱೆಸಿದನು ಮಿಹಿರಜನ ನಗರದೊಳಂಜನಾಸೂನು

ಕೇಳಿದೈ ಕುಶ ನಿಮ್ಮ ರಘುಭೂ
ಪಾಲಕನ ನಿಜದೂತ ನೆನೆದು
ಬ್ಬಾಳುತನದ ಯಶೋವಿಲಾಸವಿನೋದವಿಭ್ರಮವ
ವ್ಯಾಳಿಹತ್ತಱ ರಕ್ಕಸಗೆ ತ
ನ್ನೋಳಿಗವನೆಚ್ಚಱಿಸದಿರೆ ಹೆ
ಚ್ಚಾಳುತನ[1]ಕತಿ[1]ಕುಂದೆನುತ ಮನದಂದನಾ ಹನುಮ ೧

ಮುಱಿದು ತೋಟದ ನೆವದಿನಸುರರ
ತುಱುಸುತೋಟಿಯ ತೆಗೆ[2]ವೆ[2] ಮೇಲವ
ರಿಱಿತಕಂಗೈಸಿದರೆ ತೋಱುವೆನೆನ್ನ ಕೈಗುಣವ
[3]ಅಱು[3]ಹಿದೀಗೆನಗೆನುತ ಸೀತೆಯ
ತೆಱಹ ತಪ್ಪಿಸಿ ತುದಿವೆರಳ ಬೊ
ಬ್ಬಿಱಿತದಲಿ ಬಾಹಪ್ಪಳಿಸಿ ಬಿಗುಹೇಱಿದನು ಹನುಮ ೨

ಬಳಿಕಲೇವೇಳುವೆನು ಕಲ್ಪದ
ಕುಲಿಶಕೋಟಿಯು ಕಳಕಳಿಕೆ ಕೈ
ಲುಳಿಯೊಳಗೆ ಕಾಲಾಟ[4]ದೊಳಗಬ್ಬರದೊಳಾದುದೆನೆ[4]
ನಿಳಿನಿಟಿಲು ನಿಟಿಲೆಂಬ ರವ ನಭ
ದೊಳಗೆ ಗಾಡಿಸೆ ಗಾಢಭುಜದಲಿ
ತಳಹತಿಯಲಂಘ್ರಿಯಲಿ ನುಗ್ಗೊತ್ತಿದನು ನಂದನವ ೩

ಒದೆದೊದೆದು ಮಾಮರನ ಬುಡವನು
ಕೆದಱಿದನು ಕೈಯಿಕ್ಕಿ ಸಿಕ್ಕಿದ
ಕದಳಿ ಖರ್ಜೂರಾದಿಫಲಭರದವನಿಜಾವಳಿಯ
ಹೊದಱ ಹೊರಳಿಸಿ ನುಗ್ಗುನುಸಿಮಾ
ಡಿದನಶೋಕಾವನದ ಘನಸಂ
ಪದದ ಸೊಗಸಿನ ವಿವಿಧಗುಲ್ಮಲತಾವಿತಾನಕವ ೪

---

[1] ಕಲಿ (ಗ), ಕಿದು (ಚ), ಕದು (ಝ). [2] ದು (ಗ.ಚ). [3] ವರ (ಕ.ಗ.ಡ.ಣ), ಕುಱು (ಜ). [4] ಬಳಿಕದನೇನನುಸುರುವೆನು (ಚ).

ಮುಟ್ಟಿದೋಱಿದ ತೆಂಗುಗಳ ಸಾ
ಲಿಟ್ಟು ಬೆಳೆದಡಕೆಗಳ ಬೇರಿಂ
ದಿಟ್ಟಣಿಸಿ ಕಡುಕಾತ ಹಲಸನು ಹಲವು ಫಲಭರದ
ಕಟ್ಟಿದಿರ ಕಳಿವಣ್ಣುಗಳ ಕಡ
ಲಿಟ್ಟು ಸುರಿವ ಸುಧಾರಸದ ಹೊಂ
ಗಟ್ಟುಗಳ ಫಲಭೂಜರಾಜಿಯ ಕಿತ್ತನಾ ಹನುಮ ೫

ಜಂಬು ಕುರವಕ ತಿಲಕ ರಸದಾ
ಳಿಂಬ ಬದರಿ ತಮಾಲ ಗುಗ್ಗುಳ
ನಿಂಬೆಯಂಬಟೆ ಮಾತುಳಂಗ ವಿಳಂಗ ನಾರಂಗ
ಎಂಬ ದಿಗುಚುಂಬಿತದ ಶಾಖಾ
ಡಂಬರದ ಕಮನೀಯ ತರುನಿಕು
ರುಂಬವನು ನಿರ್ನ್ಯೈಸಿದನು ನಿಶ್ಶೇಷವೆನೆ ಹನುಮ ೬

ಅಗರು ಚಂದನ ಚಂಪಕಾಮಳ
ಕಗಳ ಬಕುಳಾಶ್ವತ್ಥ ಪುನ್ನಾ
ಗಗಳ ಘನಕರ್ಪೂರ ಕದಳಿ ಕಪಿತ್ಥ ಕೌಂಗುಗಳ
ಬಗೆ[1]ಯಲುಂಗವಿಳಂಗಗಳ[1] ಸೊಂ
ಪಗಿವ ಸಕಲಸುರದ್ರುಮಾಳಿಯ
ನುಗಿದುಗಿದು ಹೂಳಿದನು ಹರಹಿನಲಭ್ರಮಂಡಲವ ೭

ಈಳೆ ಮಧುರರಸದ್ರವದ ಕಿ
ತ್ತೀಳೆ ಕಂಪಿತಫಲಭರದ ಹೇ
ರೀಳೆ ಹೆಂಪಿನ ಕಂಚಿ ಕಿಂಶುಕ ಶಿಂಶುಪಾದಿಗಳ
ಹೇಳಿಕೆಗೆ ಹೆಸರೆನಿಸಿದಗ್ಗದ
ಸಾಲಸಂದಣಿ ಮರನನಗಲಕೆ
ತೂಳಿ ತಳಪಟಮಾಡಿದನು [2]ಬನದ[2]ಗಲದಲಿ ಹನುಮ ೮

ಮೊಲೆಯು ಸೋಂಕಿಗೆ ತರುಣಿಯರ ತಂ
ಬುಲದ ತೊಡಹಿಗೆ ತೋಳ ಬಿಗುಹಿಗೆ
ಬೆಳೆದ ಭೂಜವ್ರಜವ ಬಲುದೋಳುಗಳ ತೆಕ್ಕೆಯಲಿ
ತಳಪಟವ ಮಾಡಿದನು ಮದ ವೆ
ಗ್ಗಳಿಸಿದಿಭಪತಿ ಹೊಕ್ಕ ಬಾಳೆಯು
ಹಳುವದವೊಲೊಡೆದೊಡೆದು ಮುಱಿದನು ಬನವನಾ ಹನುಮ ೯

---

[1] ಬಗೆಯು ರಮಣೀಯಕದ (ಕ), ಬಗೆಯು ಕಮನೀಯಕದ (ಚ). [2] ನೆಲನ (ಜ), ಜಗದ (ಟ,ಣ).

ತಂದು ಬೀಜವ ಬಿತ್ತಿ ಬೆಳೆದ ಪು
ರಂದರನ ಪುರಹರನ ಪದ್ಮಜ
ನಿಂದಿರೇಶೋದ್ಯಾನದವನೀರುಹವನವರವರ
ನಂದನಕೆ ನಗೆವೊಗದ[1]ಲ[1]ಬ್ಬರ
ದಿಂದ ಕಿತ್ತಿಟ್ಟವರ ಚಿತ್ತಕೆ
ಬಂದನೈ ಬರುಹಿರ್ಮುಖಾವಳಿ ಹೊಗಳೆ ಗಗನದಲಿ ೧೦

ಅಟವಟಿಸಿ ಪರವಧುವ ತಂದು
ತ್ಕಟದ ಪಾಪಿಗೆ ಹೇಸಿ ವನವಧು
ಚಿಟುಕಮುಱಿದಪಳೆನಲು ಬೀಳುವ ಭೂಜರಾಜಿಗಳ
ನಿಟಿನಿಳಿಲುನಿಳಿಲೆಂಬ ರವ ದಿಗು
ತಟವ ತುಂಬಲು ಸಿಡಿಲ ನಾಟ್ಯದ
ನಟಣೆಯವೊಲೇನೆಂಬೆ ವನಭಂಗದ ಮಹಾದ್ಭುತವ ೧೧

ಚಿಗುಳಿದುಳಿದನು ಬನದೊಳೆಳೆವ
ಳ್ಳಿಗಳನಮಳದ್ರಾಕ್ಷೆಗಳ ಲತಿ
ಕೆಗಳನನುಪಮಮಾಧವೀಮಂಜುಳ ಲತಾಳಿಗಳ
ಹೊಗಳಲೇನದ ಪತಿಯ ಮರಣದ
ಲಗಲಿ ಬದುಕಿದ ಸತಿಯ ಶಿರದವೊ
ಲಗಲದಲಿ ರಂಜಿಸಿತು ರಮ್ಯೋದ್ಯಾನ ರಾವಣನ ೧೨

ಮರುಗ ಮಾಲತಿ ಜಾ[2]ತಿ[2] ಕೇತಕಿ
ಸುರಗಿ ಸಂಪಗೆ ವೊಲ್ಲೆ ಮಲ್ಲಿಗೆ
ಸರಸಿರುಹ ಸೇವಂತಿ [3]ಕರವೀರಾದಿ[3] ಗಿಡುಲತೆಯ
ಪರಿಪರಿಯ ಹೂದೋಟಗಳ ಹೊ
ಯ್ದೊರಸಿದನು ಮುಡಿವಾಳ ಬಾಳದ
ಹರವರಿಯ ಹರಹಿದನು ಲಾಂಗೂಲದ[4]ಲಿ ಕಲಿಹನುಮ[4] ೧೩

ಮುಱಿದು ರಾಟಾಳಗಳನಗಲಕೆ
ತಱಿದು ಕಬ್ಬಿನ ತೋಟಗಳ ಕಿ
ತ್ತುಱುಬಿ ಕನಕದ್ರೋಣಿಗಳ[5]ನೊದೆ[5]ದಿದಿರಿನೇತಗಳ
ಹರಿವ ನಿಡುಗಾಲುವೆಯನಗಲಕೆ
ಜರುಹಿ ರಕ್ಕಸದೋಟಿಗರ ಹೊ
ಯ್ದೊರಸಿ ಬನದಲಿ ಬೀದಿವರಿದಾಡಿದನು ಕಲಿಹನುಮ ೧೪

---

1 ಲು (ಕ.ಗ.ಜ.ಟ.ಣ). 2 ಜಿ (ಕ.ಜ.ಟ.ಡ). 3 ಗಿರುವಂತಿಗೆಯ (ಜ.ಡ). 4 ಪದಾಂಗುಲಿಯ (ಕ.ಗ.ಜ.ಝ.ಟ), ಪದಾವಳಿಯ (ಣ). 5 ಕಳೆ (ಝ.ಟ).

ಕುಕ್ಕಿ ನೆಲನನು ಬಗಿದು ನೆಗಹಿ ನೆ
ಭಕ್ಕೆ ಬಿಸುಟನು ಪಳುಕಿನಱೆ ಸಂ
ದಿಕ್ಕಿ ಸವೆದ ಸರೋವರಂಗಳ ಸಾಲ ಸಂದಣಿಯ
ತೆಕ್ಕೆಯಲಿ ಕೃತಕಾದ್ರಿಗಳ ಕಾ
ಚಿಕ್ಕಿದನು ಕರಘಾತದಲಿ ದಡ
ದೊಕ್ಕನಲು ಕೆಡಹಿದನು ಕೇಳೀಸೌಧಸಂಕುಳವ ೧೫

ಹಾಱಿದವು ಹಂಸೆಗಳು ತುಂಬಿಗ
ಳೇಱಿದವು [1]ಮೊರೆ[1]ದಭ್ರದಗಲಕೆ
ಚೀಱಿದವು ಕೊಂಚೆಗಳು ಬಕ ಶುಕ ಪಿಕ ಮಯೂರಚಯ
ಜಾಱಿದವು ಜಂಗಾಯ್ಲದಲಿ ಕಪಿ
ಕೀಱಿದವು ವನಮೃಗ[2]ನಿಚಯ[2] ವ್ಯೆ
ದೋಱಿದವು ದೂರದಲಿ ಕಾಲ್ದುಳಿಗನಿಲನಂದನನ ೧೬

ಕಾಮನಡಗಿದನಾ ವಸಂತನ
ಸೀಮೆ ಯಾವುದೊ ಮಂದಮಾರುತ
ವ್ಯೊಮಱೆಸಿದನು ಸರಿದನಂಬರಕಿಂದು ಭೀತಿಯಲಿ
ಆ ಮಹಾವನಲಕ್ಷ್ಮಿ ಸೀತಾ
ಭಾಮಿನಿಯ ಮಱೆಯೊಕ್ಕಳಾ ನಿ
ಸ್ಸೀಮಬಲ ಬಲಿಮುಖಕುಲಾಗ್ರೇಶ್ವರನ ಕಳಕಳಕೆ ೧೭

ಬೆದಱಿತೀತನ ಕಾಲ್ದುಳಿಯ ವನ
ದದುಭುತಧ್ವಾನದಲಿ ನಿದ್ರೆಯ
ಕೆದಱಿಕೆಯ ಕಾಪಿನ ನಿಶಾಚರರಱಿಸುತಾಯುಧವ
ಇದೆ ರಭಸವೀಕಡೆಯಲಾಚೆಯ
ಲದೆ ಮಹಾಧ್ವನಿ ಶರವ ಸಂಧಿಸಿ
ಸದೆಯಿರೋಯೆನುತುರವಣಿಸಿತಲ್ಲಲ್ಲಿ ಖಳನಿಕರ ೧೮

ಸೊಕ್ಕಿ[3]ದಿಭವಲ್ಲವಲೆಯಲ್ಲ ವ[3]
ನಕ್ಕೆ ಬಯಸಿದ ಭೂತವಲ್ಲಲೆ
ಹೊಕ್ಕು ನೋಡಿರೊ ಭೂತವಲ್ಲುಣಿಸಿಂಗೆ ಹಸಿದಿರ್ದ
ರಕ್ಕಸನ ಬಲುಗವತೆಯಲ್ಲಲೆ
ಮರ್ಕಟವು ಕಾಣೆಲವೊ ಕವಿಕವಿ
ಹೊಕ್ಕು ತಿವಿ ಕೊಲ್ಲಿಱಿಯೆನುತ ಕೆಣಕಿದರು ಕಪಿವರನ ೧೯

[1] ಮುರಿ (ಗ.ಚ.ಟ). [2] ಚಯವು (ಚ.ಜ.ಡ). [3] ದಿಭವಲ್ಲವಲೆ ಮೇಣು ವ (ಕ), ದಿಭವಲ್ಲವಲೆಯೆಲ್ಲ ಜ (ಚ), ಬಂದಿಭವಲ್ಲಲೇ ವಿಪಿ (ಟ.ಡ).

ಇಟ್ಟರಿಟ್ಟಿಯಲೆತ್ತಿದರು ಕೈ
ಗಟ್ಟಿ ಕುಂತದಲುಲಿದು ತಿವಿದರು
ಮುಟ್ಟವಿಸಿ ಕಕ್ಕಡೆ ಕಠಾರಿ [1]ಕೃಪಾಣ ಪರಿಘ[1]ದಲಿ
ಹೆಟ್ಟಿದರು ಶೂಲದಲಿ ಕಪಿತಲೆ
ಮುಟ್ಟಿ ಮುರಿದೌಕುವ ನಿಶಾಟರ
ಮೆಟ್ಟಿದನು [2]ತಱಿದೊ[2]ಟ್ಟಿದನು ಖಳವೆಣನ ಬಣಬೆಗಳ ೨೦

ಎಲೆಲೆ ಕೋಡಗ ಕೊಲುತಲದೆ ಕಪಿ
ಬಲೆಯ ಬೀಸಿರೊ ಬೀಳಗೆಡಹಿರೊ
ತೊಲಗದಿರಿರೋ ಕವಿಯೆನು[3]ತ ಖಳನಿಕರವಲ್ಲಲ್ಲಿ[3]
ತಲೆವಿಲುಗಳಲಿ ತಱುಬಿದರು ಮುಂ
ಡಳಿಸಿ ಕುಬುಬಿಱು[4]ದಟ್ಟಿ[4] ಕಹಳೆಗ
ಳುಲುಹಿನಲಿ ಹೆಬ್ಬಱೆಯ ಹೊಯ್ಲಲಿ ಹರಿಕುಲೇಶ್ವರನ ೨೧

ಅಂಬುಗಳ ಮಳೆಗಱೆವ ಖಳನಿಕು
ರುಂಬವನು ಬಲುಹೆಮ್ಮರನ ಹೆ
ಗ್ಗೊಂಬುಗಳಲೇ ಹೊಯ್ದು ಹೊಱವಂಡಿಸಿದನುಸುರುಗಳ
ತುಂಬಿದುದು ಹೆಣನೊಟ್ಟಿಲಲಿ ನೆಲ
ನಂಬರಕೆ ಜಡಿದಿಟ್ಟನೌಕುವ
ಡೊಂಬಿಗರ ದವಡಿಗರ ದಕ್ಕಡರಕ್ಕಸರ ಹನುಮ ೨೨

ಮತ್ತೆ ಕವಿಕವಿದೌಕುವಸುರರ
ಹತ್ತಿಸಿದನಂಬರವನಸುಗಳ
ಕಿತ್ತು ನಡೆಸಿದನುಪವನದ ವಳಯದಲಿ ಪಿತೃಪತಿಯ
ಒತ್ತಬರಿಸುವ ಪಡಿತಳದ ಸುಭ
ಟೋತ್ತಮರ[5]ನನಿಲಜನು[5] ವಿಲಯದ
ಕೃತ್ತಿವಾಸನೊ ಕದನಕೇಳಿಯೊಳಣುಗ ಕೇಳೆಂದ ೨೩

ಅಟ್ಟಿ ಸದೆದನು ಮಿಱು ಘಾಡಿಪ
ಘಟ್ಟಿಯರ ಗಬಲಿಕ್ಕುವಸುರರ
ಮೆಟ್ಟಿ ಸೀಳಿದನೆಡಬಲದಲೌಕುವ ನಿಶಾಚರರ

---

[1] ಕರಾಳಭೂಜ (ಗ.ಜ.ಡ.ಣ), ಯ ಮುಸಲಸಬಳ (ಟ). [2] ನ್ಭಕೊ (ಜ.ಝ.ಡ.ಣ). [3] ತ್ತಲ್ಲಲ್ಲಿ ಖಳನಿಕರ (ಕ), ತ್ತ ನಿಶಾಟರುಬ್ಬಿಱಿದು (ಗ), ತ ತಿವಿಯೆನುತ ಖಳನಿಕರ (ಟ), ತ ಕುಬುಬಿಱಿದು ಖಳನಿಕರ (ಣ). [4] ದದಟು (ಕ.ಜ.ಣ). [5] ನೌಕಿದನು (ಕ), ಪವನಜನು (ಟ).

ತೊಟ್ಟು[1]ಳಿಕೆಗಳಲೌ[1]ಕಿ ಹದರಿನ
ಲಟ್ಟಿಸಿದನಸುಗಳನು ಪಶುಗಳ
ಬಟ್ಟೆಯಾದುದು ಕಾಲನಧ್ವರಶಾಲೆಯಂದದಲಿ ೨೪

ಕನಲಿ ಕವಿದಬ್ಬರಿಸಿ ನೂಕಿದ
ವನಪತಿಯ ಪಿತೃಪತಿಯ ಕೈಯಲಿ
ತನುಜನಿವ ಸಾಕೆಂದು ಕೊಟ್ಟನು ಕೊಂಡು ನಂಬುಗೆಯ
ತನುಜ ಕೇಳ್ಕೆ ಜಂಬುಮಾಲಿಗೆ
ಮನೆ ಕೃತಾಂತನ ಪುರದೊಳಾದುದು
ನೆನೆದುಕೊಂಡನು ಕಾಳಗಕೆ ಕರೆಸುವರೆ [2]ನಿಜಮತವ[2] ೨೫

ಬಾರೆಲವೊ ನೀ ಹೋಗು ನಾರೀ
ಚೋರನಿದ್ದೆಡೆಗಂಜಬೇಡ ಖ
ರಾರಿದೂತಾಗಮನವನು ವಿಸ್ತರಿಸು ನಿಮ್ಮವಗೆ
ವೀರರುಳ್ಳರೆ ಕಳುಹಹೇಳುಪ
ಚಾರವಲ್ಲೀ ಮಾತು ಹೋಗೆಂ
ದಾ ರಣೋತ್ಸವನುಳುಹಿ ಕಳುಹಿದನಾ ಸುಮಾಲಿಯನು ೨೬

---

[1] ಳುಕೆಯಲಿ ನೂ (ಚ.ಜ), ಳುಕೆಗಳ ನೂ (ಡ). [2] ಬಲುಭಟರ (ಚ).

# ಐದನೆಯ ಸಂಧಿ

ಸೂಚನೆ: ರಣಭಯಂಕರಹನುಮ ಸಮರಾಂ
ಗಣದೊಳಕ್ಷನ ಮುರಿದು ಮೆರೆದನು
ಗುಣದೊಳಕ್ಷಾಂತಕನೆನಿಪ ಗುಣನಾಮಧೇಯಕವ

ವೀರ ಕೇಳ್ಳೈ ಕುಶನೆ ರಣಜ
ಜ್ಝಾರನಿದ್ದನು ಬನದ ಬಾಗಿಲ
ತೋರಣದ ತುದಿಗಂಬದಲಿ ತೂಕಡಿಸುತಡಿಗಡಿಗೆ
ಊರೊಳೀ ಕಪಿವಾರ್ತೆಯಗಲಕೆ
ಬೇರುವರಿದುದು ಬೆಡಗುಬಿಂಕದ
ಭಾರಕರು ಭಾರಿಸಿತು ಕೋಟಾವಳಯುದಗ್ರದಲಿ ೧

ತುಱುಸಿಕೊಳುತಿದ್ದೆಸೆಯ ಬದಿಗಳ
ಹೈಱಗನಾಲಿಸುತುವಿಸಿದೆಳನೇ
ಸ್ಝೂನ ರಕುಮೆಗೆ ಮುಸುಡ ತಿರುಹುತ ದೂರದಿಂದಿಡುವ
ತಱುಬುಗಳ [1]ರವಗಳಿಗೆ ಮಿಗೆ[1] ಹು
ಬ್ಬಿಱಿದು ಹಣುಗುತ ಹರಿಬದಾ[2]ಜಿಯ[2]
ಹೊಱಗೆವಾಳರ ಬರವ ಬಯಸು[3]ತ್ತಿ[3]ರ್ದನಾ ಹನುಮ ೨

ಬದುಕಿತೇ ತಲೆಯೆನುತ ಬಳಲುವ
ವದನಮುಸುರಿ[4]ಡುವ[4]ಳ್ಳೆಬಾರಿನ
ಕೆದಱುಮುಂಡೆಯ ಕಲಿತ ಭಯದ ಸುಮಾಲಿ ಹರಿತಂದು
ಸದಮದದ ಕಟ್ಟೋಲಗದ ದಶ
ವದನನಿದಿರಲಿ ಹಾಯ್ದಿದನು ಬಲು
ಬೆದಱಿಕೆಯ ರಣಭೈರವನ ಸಂಗರಭಯಂಕರವ ೩

ಜೀಯ ಬರುತಿದೆ ಕಪಿಯರೂಪಿನ
ಬಾಯಿದೆಱಹಿನ ಮೃತ್ಯು ನಿನ್ನೆಡೆ
ಗಾಯತದು ಪರಿವಸಾರವನ ವನಪಾಲಸಂತತಿಗೆ

---

[1] ತೇ ರವಗಳಿಗೆ (ಗ). ತೆಯ ರವಗಳಿಗೆ (ಚ), ತರವಾರುಳಿಕೆ (ಜ), ಹುವ ರವಗಳಿಗೆ (ಝ), ತರವಾಗುಳಿಕೆ (ಟ), ತೆ ರವಂಗಳಿಗೆ (ಡ), ತೆ ರವಳಿಗಳಿಗೆ (ಣ).
[2] ದಿಯ (ಕ.ಗ). [3] ತಲಿ (ಚ.ಟ). [4] ನತ (ಚ.ಜ.ಝ.ಣ).

ಹಾಯುದಿರದರೆಘುಳಿಗೆಮಾತ್ರಕೆ
ರಾಯನಗರಿಗೆ ದಳದುಳವನದು
ಪಾಯ[1]ಮಾರ್ಗದ ಮನವನು[1]ಳ್ಳಡೆ ಕಾಣು ಬೇಗೆಂದ ೪

ತಾನು ಗಡ ರಘುನಾಥನೆಂಬ ಮ
ಹಾನರೇಂದ್ರನ ದೂತ ಗಡ ಸೀ
ತಾನಿತಂಬಿನಿಯುಱಿಕೆಗೋಸುಗ ಬಂದ [2]ತಾ[2]ನು ಗಡ
ಈ ನುಡಿಯನೇ ನುಡಿದು ಕಳುಹಿದ
ನಾನಿಕೆಯು ಭಟರುಳ್ಳರಿಱಿತಕೆ
ಜಾನಿಸದೆ ಕಳುಹೆಂದು ಜಱೆದನು ರಾವಣಾಸುರನ ೫

ಬಾಯ ಹೊಯ್ ಭಯವುಂಟೆ ತನಗರಿ
ರಾಯರಲಿ ಹೋಗೇಲವೊ ಹರಿ ಕಾ
ತ್ಯಾಯಿನೀ[3]ಪತಿ[3] ಕಮಲಭವರಿಂದೆನಗೆ ಪಾಡಲ್ಲ
ನಾಯೆ ಬಗುಳದೆ ಕೆಲಕೆ [4]ಸಾರ್ ಸುರೆ[4]
ಕಾಯವನು ವೇದಿಸಿತೆಯೆಂದಸ
ಹಾಯಶೂರರದೇವ ಜಱೆದೀಡಾಡಿದನು ಚರನ ೬

ವನವ[5]ನದು ಮುಱಿದುದು ಗಡ[5]ಳಿದುದು
ವನದ ಕಾಪಿನ ರಕ್ಕಸರು ಗಡ
ಕನಲಿ ತನ್ನನು ಕಳುಹಿದುದು ಗಡ [6]ಕದನಕೆಮ್ಮುವನು[6]
ಜನಕತನುಜೆಯನಱಿಯಲದು ರಾ
ಮನನು ಬೀಳ್ಕೊಂಡೈದಿದುದು ಗಡ
ತನಗೆ ಭಯ ಗಡ ಬಾಯ ಹೊಯ್ ಹೊಯ್ ಎಂದನಸುರೇಂದ್ರ ೭

---

[1] ಮಂತ್ರದ ಮಾರ್ಗವು (ಕ.ಚ), ಮಾರ್ಗದ ಮತಮದು (ಗ). [2] ನವ (ಕ.ಜ.ಝ.ಣ). [3] ಧವ (ಕ.ಗ.ಝ.ಣ). [4] ಸಾರುಱೆ (ಕ.ಣ), ಸಾಸುರೆ (ಚ.ಜ.ಡ), ಸಾರ್ ಸುರ (ಝ.ಟ). [5] ಮುಱಿದುದು ಕೀಶನ (ಕ), ಮುಱಿದುದು ಗಡಕಟ (ಝ.ಟ), ಮುಱಿದುದು ಗಡ ಗಡ (ಡ.ಣ). [6] ಕರೆಯಲೆಮ್ಮುವನು (ಗ.ಟ), ಕದನಕೆಮ್ಮೊಡನೆ (ಚ), ಬವರಕೆಮ್ಮುವನು (ಝ).

ಜಱೆಯಲೇಕೆಲೆ ಜೀಯ ಬಾಯನು
ಹಱಿಯಗೊಯ್ಸಾ ಮಾತು ಹುಸಿದರೆ
ಮೊಱೆಯ ಕೇಳೂರೊಳಗೆ ಸತ್ತಿರ್ದವರ ಸತಿಸುತರ
ಬಱಿಯ ಬಿಂಕದ ಮಾತನಾಡದೆ
ತಱುಬುವರೆ ನಡೆಯಲ್ಲ[1]ದಿರೆ ಮೈ[1]
[2]ಮಱಿಸಿಕೋ ಬಲು[2]ಮೃತ್ಯು ಬರುತದೆ ಬೇಗ ನಿನಗೆಂದ ೮

ಮೇಲೆಮೇಲೀವಾರ್ತೆ ಜಡಿದುದು
ಸಾಲುಗೊಂಡಚ್ಚರಿಯಿದೆನುತ ಕ
ರಾಳರೋಷಾವೇಶನಿಳಿದನು ಸಿಂಹವಿಷ್ಟರವ
ಬಾಳ ಝಳಪಿಸಿ ಕೆಂಪೊಗುವ ಕ
ಣ್ಣಾಲಿಗಳಲಸುರೇಂದ್ರನಡಿಯಿಡ
ಲಾಳುಗಳ ಹರಿಯಕ್ಷನಕ್ಷಕುಮಾರನಿಂತೆಂದ ೯

ಜೀಯ ಕೊಡು ವೀಳೆಯವನಾ ಕಪಿ
ಮಾಯದಮರಾಧೀಶನಾಗಲಿ
ವಾಯು ವರುಣಕೃತಾಂತರಾಗಲಿ ಮೃತ್ಯು ಮೈಮಱೆಸಿ
ಮಾಯೆಯಲಿ ಬಂದಿರಲಿ ಹರನಾ
ರಾಯಣರು ತಾವಾ[3]ಗಲೊಂದೇ[3]
ಘಾಯದಲಿ ಹಿಡಿತಹೆನು ಹಿಡಿವೊಲನಂತೆ ತಾನೆಂದ ೧೦

ಎಂದ ಮಾತಿನ ಮಗನ ಪೌರುಷ
ದಂದಕತಿಪರಿಣಮಿಸಿ ಖಳ ನಿಜ
ವೆಂದು ಮನದಲಿ [4]ಬಗೆದು[4] ಹೊಂಬಟ್ಟಲಲಿ ವೀಳೆಯವ
ನಂದನಂಗಿತ್ತಿಭತುರಂಗ
ಸ್ಯಂದನಾರೋಹಕಪದಾತಿಯ
ವೃಂದವನು [5]ಬೆಸಸಿದನು ಬಳಿಯಲಿ[5] ಬವರಕನಿಲಜನ ೧೧

ವೀಳೆಯವ ಕೊಂಡಸುರರಾಯನ
ಬೀಳುಕೊಂಡವನಾಹವದ ಹೊಗ
ರೇಳಿಗೆಯ ಹೊಸಮದದ [6]ಯೌವನದುಬ್ಬಿನಲಿ ಪಿತನ[6]

---

[1] ದರೆಮೈ (ಕ), ದಿರ್ದಡೆ (ಚ.ಜ). [2] ತೆಱನ ತಪ್ಪಿಸು (ಚ), ಮಱೆಸಿ ಕೊಂಬುದು (ಝ). [3] ಗಲೊಮ್ಮಿಗೆ (ಗ), ಗಲೊಂದರೆ (ಜ), ಗಲಿಂದಿನ (ಝ), ದಡಾಗಲಿ (ಟ). [4] ಮಾಡಿ (ಚ.ಜ.ಡ). [5] ಬಳಿಸಲಿಸಿ ಕಳುಹಿದ (ಗ), ಕಳುಹಿದನು ಬಳಿಯಲಿ (ಣ). [6] ಜವ್ವನದುಬ್ಬುಗೊಬ್ಬಿನಲಿ (ಕ.ಡ).

[1]ಆಲಯುವ[1] ಹೊಱವೆಂಟನಾ ಬಳ
ನೇಳುನೂಱು ಕುಮಾರಕರ ಸ
ಮ್ಮೇಳದಲಿ ಝುಳಪಿಸುವ ಖಡುಗದ ನೆಗಹುಗ್ಗೆಗಳಲಿ ೧೨

ಬಳಿಸಲಿಸಿತ್ತೈನೂರ್ವರಾತನ
ಬಳಿಯ ಪಂಚಚಮೂಪಸುತರು
ಬ್ಬಳಕೆವಾತಿನ ಬಿಗಿದ ಕಾಸೆಯ ಬಲಿದ ತಲೆಪಿಣಿಲ
ಕಲಹವಿದು ತನಗೆನಗೆನುತ ಮುಂ
ಕೊಳಿಸಿದುದು ಸೇನಾನಿ ನಂದನ
ರಳಿವ ಜಗದಲಿ ಸುಳಿವ ಸಿಡಿಲಿನ ಗಡಣದಂದದಲಿ ೧೩

ಮಿಂಡದುಂಡಿಗಳರ್ಥಿಕಾಱರು
ಗಂಡಿಗರು ಗರ್ವಿತರು ರಣದು
ದ್ದಂಡರಾಹವದುಬ್ಬಿನುಬ್ಬರ[2]ದಂಕದತಿ[2]ಬಲರು
ಖಂಡೆಯದ ಕಲಿಕೆಗಳ ತರಳರ
ತಂಡ ಕೂಡಿತು ಹೂಸಿಕೆಯ ಸಿರಿ
ಖಂಡನದ ಮಣಿಮಂಡನದ ಮುಡಿಯಲರ ಮುಱುಕದಲಿ ೧೪

ನೋಟಕರು ನಿರ್ಭಯರು ಕೊನಬಿಗ
ಳಾಟವಿಕದುರುದುಂಬಿಗರು ಕೈ
ಗೂಟದವರುತ್ತಾಳ[3]ದಂಷ್ಟ್ರ[3]ಗಳಾತತಾಯಿಗಳು
ಕೂಟ ಮುದ್ಗರ ಮುಸಲ ತೋಮರ
ಖೇಟಕಾದಿ ಸಮಸ್ತಶಸ್ತ್ರದ
ಘಾಟದತಿಬಲಖಳರು ಕೂಡಿತು ಕೋಟಿಸಂಖೆಯಲಿ ೧೫

ಖುರದ ಹೊಯ್ಲಿನಲಿಳೆ ಮೊಳಗೆ ಮೋ
ಹರಿಸಿ ನಡೆದವು ಕುದುರೆಗಳು ನೆಲ
ಹಱಿಯೆ ಹರಿದವು ತೇರುಗಳು ತೇರವದ ತೋ[4]ಳು[4]ಗಳ
ಉರುಕೃಪಾಣದ ದಂತಿಗಳು ಡಾ
ವರಿಸಿದವು ಕಾಲಾಳು ಕೂಡಿತು
ಸುರಶಿಖರ ಸಿಗುಱೇಳೆ ಮೊಳಗುವ ವಾದ್ಯರಭಸದಲಿ ೧೬

---

[1] ಕೇಳು ಕುಶ (ಕ). [2] ದಮಳಭುಜ (ಕ), ದಂಡದತಿ (ಚ.ಙ). [3] ಗಮಃ
ಕ), ತಾಂಷ್ಟ್ರ (ಜ.ಝ), ದಾಂಷ್ಟ್ರ (ಡ). [4] ಗು (ಚ).

ಬರವ ಕಂಡನು ಹನುಮ ಲಂಕೇ
ಶ್ವರನ ಮೋಹದಮಗನ ಸೇನೆಯು
ವರುಷಕಾಲದ ಕಾಳಮೇಘದ ಕಡುಹಿನಬ್ಬರಕೆ
ಕರದಲವನಿಯನಪ್ಪಳಿಸಿ ಮೊಗ
ಮುರಿದು ನಭವನು ನೋಳ್ಪ ಬಲುಗೇ
ಸಱಿಯವೊಲು ಹಱಿನಾಥನಿರಲೈತಂದುದಾ ಸೇನೆ ೧೭

ನಾಕುಮೈಯುಲಿ ಮುತ್ತಿಕೊಂಡುದ
ಶೋಕವನವನು ಬಳಿಕ ಬಲವದ
ನೋಕಹದ ಮೃಗರಾಜನಿದ್ದನು ಹಾಯ್ಕುತಾನನವ
ತೋಕಿದರು [1]ತೂಱಂಬ[1] ಬೊಬ್ಬೆಯ
ಬಾಕುಳಿಗರೊಳಹೊಕ್ಕು ಸರಳಿನ
ಸೋಕುಗಳ ಸೈರಣೆಯಲಿದ್ದನು [2]ಗಣಿಸದರಿಬಲವ[2] ೧೮

ಹೊಕ್ಕು ಕೆಣಕಿದರಡಸಿ ಹರೆಯದ
ಸೊಕ್ಕಿದಣ್ಣಗಳನಿಲಸುತನದ
ಲೆಕ್ಕಿಸದೆ ಲಳಿಯೇಱುತಿರ್ದನು ಹಾಯ್ಕಿ ಹುಬ್ಬುಗಳ
ಕಕ್ಕಡೆಯ ಕರವಾಳ ಹರಿಗೆಯ
ದಕ್ಕಡೆಯರೊತ್ತಂಬರಿಸಿ ಬೊ
ಬ್ಬಿಕ್ಕಿ ಬಿಱುಗುಂಡುಗಳಲೆಬ್ಬಿದ[3]ರಂಜನಾಸುತನ[3] ೧೯

ಕೂಡೆ ಕಳಕಳ ಬಲಿದು ಬಲ ಕೈ
ಗೂಡಿ ಕವಿಯಲು ಕಂಡನಿದ ಹೋ
ಗಾಡಬೇ[4]ಕೆಂದಿ[4]ಳಿದನಾ ತೋರಣ[5]ದಿನಿ[5]ಳೆಗಾಗಿ
ಓಡುತದೆ ಕಪಿ ಹಿಡಿಯಿರೋ ಹಿಡಿ
ಹೇಡವಿಸದಿರಿಯೆನುತ ನಗೆಮೊಗ
ಗೂಡಿದಕ್ಷಕುಮಾರ ಸಂಧಿಸಿದನು ಸಮೀರಜನ ೨೦

ಮುಱಿದು ಮಾರುತಿ ಗಗನಲಂಬಿತ
ನಿರುಪಮದ ತೋರಣದ ಕಂಬವ
ನೆರಡನಿಕ್ಕೈಗೊಂಡು ಕವಿದೆಡಬಲದ ರಕ್ಕಸರ

---

[1] ಕೂಱಂಬು (ಕ). [2] ಬಗೆಯದತಿಬಲರ (ಗ.ಚ.ಜ.ಟ), ಗಣಿಸದತಿಬಲರ (ಝ), ಗಣಿಸದತಿಬಲವ (ಣ). [3] ರನಿಲನಂದನನ (ಝ.ಟ). [4] ಕೆನುತಿ (ಚ.ಜ.ಟ). [5] ದಲಿ (ಕ.ಚ.ಝ.ಣ).

ತಿರುಹಿ ಸದೆದನು ಕಾತ ಮೆಕ್ಕೆಯ
ಹರವರಿಯೊಳಿಭಜಾರಿವರಿ[1]ವ[1]ವೊ
ಲರೆದುದಜಿಗಿಜಿಯಾಗಿ ರಣರಂಗದಲಿ ಚತುರಂಗ ೨೧

ಲಟಕಟಿಸಿ ಹೊಡಕರಿಸಿ ಹೊಳಕುವ
ಭಟರ ಕವಿವಾನೆಗಳ ತೇರ್ಗಳ
ಚಟುಳಹಯಸಂಕುಳವ ಕಾಲಾಳುಗಳ ಸಂದಣಿಯ
ಸ್ಫುಟವಱಿಯಬಾರದವೊಲರೆದಾ
ರ್ಭಟಿಸಿದನು ಸಂಹಾರರುದ್ರನ
ನಟಣೆಗಿಮ್ಮಿಗಿಲೆನಲು [2]ಸಂಯುಗದಲಿ[2] ಸಮೀರಸುತ ೨೨

ತುಡುಕಿ [3]ಬೀ[3]ಳುವ ರಾಜಪುತ್ರರ
ಹಿಡಿಸಿದನು ಸುರರೆಳೆಯ ಹರೆಯದ
ಮಡದಿಯರ ಕೈಯಿಂದ [4]ಮೈದೋಱಿದ ಮಹಾಭಟರ[4]
ನಡೆಸಿದನು ಯಮಪುರಿಗೆ ಕೂಡಿದ
ಕಡುಹುಕಾಱರ ರಕುತಗುಡುಹಿಗ
ಳೊಡಲ ತುಂಬಿ[5]ದು[5] ತುದಿವೆರಳ[6]ಲು[6]ಬ್ಬಿಱಿದನಾ ಹನುಮ ೨೩

ತರುಣ ಕೇಳ್ಕೈ ರಾಕ್ಷಸೇಂದ್ರನ
ತರುಣನುಬ್ಬಟೆಯನು [7]ಸಮೀಕೋ[7]
ದ್ಧರಣನಲ್ಲಾ ಸಾಹಸದಲಿನ್ನಾರು [8]ಸರಿ[8]ಯುವಗೆ
ಸರಳಶರಧಿಯೊಳದ್ದಿದನು ಸುಳಿ
ತೆರೆಯೊಳಗೆ ತಲೆಯೆತ್ತದವೊಲ
ಬ್ಬರಿಸಿ ಹೂಳಿದನಕ್ಷನಕ್ಷಯಶರದಲನಿಲಜನ ೨೪

ಕೊಂಬವೇ ಕಣೆ ಕದನವಿಜಯತ್ರಿ
ಯಂಬಕನ ವಿಕ್ರಾಂತಲಕ್ಷ್ಮಿಯ
ಚುಂಬಕನ ಚಾತುರ್ಯಸಮರಸರೋರುಹಾಂಬಕನ
ಅಂಬುಧಿಯ ನಿಡಿಯೊಡಲನುಱೆ ಬಗಿ
ದಂಬರವ ಚುಂಬಿಸುವ ರಚನಾ
ಡಂಬರದ ವಡಬಾಗ್ನಿಯವೊಲು[9]ಪ್ಪರಿಸಿದನು[9] ಹನುಮ ೨೫

---

[1] ದ (ಗ.ಝ.ಟ.ಡ.ಣ). [2] ಸವರಿದನಾ (ಜ.ಟ.ಡ). [3] ತೂ (ಗ.ಡ). [4] ಕವಿವೆಡಬಲದ ರಕ್ಕಸರ (ಗ.ಝ). [5] ಸಿ (ಕ), ತು(ಝ.ಡ.ಣ). [6] ಬೊ (ಕ.ಡ). [7] ಸಮೀರಾ (ಜ.ಟ), ಸಮೀರೋ (ಝ.ಡ.ಣ). [8] ಪಡಿ (ಕ.ಜ.ಡ). [9] ಬ್ಬಿಱಿದನಾ (ಗ.ಝ).

ಎಲವೊ ಖಳ ಕಾಲಾಗ್ನಿ ಮಂಜಿನ
ಮಳೆಗೆ ಮೈದೆಗೆವುದೆ ನಿದಾಘದ
ಸುಳುವಿಗಿನಮಂಡಲವ ತಡೆವುದೆ ತಿಮಿರಲತೆ ಕಡುಗಿ
ಅಳಿದವರ ಕಂಡಾ ವಿವೇಕವ
ಬಳಸುವರೆ ಮೈದೆಗೆ ದಶಾಸ್ಯನ
ಕಳುಹು ಮಿಕ್ಕಿನ ಭಟರು ಪ್ರತಿಭಟರಲ್ಲ ತನಗೆಂದ ೨೬

ತಗರು ಗಡ ತಲೆ[1]ಯೆ[1]ತ್ತಿ ತೋಳನ
ತೆಗೆಸಿ ಕರೆವುದು ಗಡ ಮೃಗೇಂದ್ರನ
ಹೊಗಳಿಕೊಳದಿರು ನೋಡು ನಿಮಿಷಕೆ ನಿನ್ನ ಜಠರದಲಿ
ತೆಗವೆನಳಿದ ನಿಶಾಟರನು ಮೂ
ಜಗದ ದೇವರ ಹಿಂಡಿ ಹಿಳಿವನ
ಮಗಕಣಾ ಹಿಡಿಯೆನುತಲಿಟ್ಟನು ಗದೆಯಲನಿಲಜನ ೨೭

ಉಡಿದುದಿಕ್ಕಡಿಯಾಗಿ ಹನುಮನ
ಮುಡುಹಿನಲಿ ಮಂಡಿಸಿದ ಗದೆತುದಿ
ಸಿಡಿದು ಶರನಿಧಿಯೊಳಗೆ ಬಿದ್ದುದು ಸುರಿವುತಾಜಲವ
ನಡುಗಿದುದು [2]ತೋಳಿಡೆಯ ಲಕ್ಷ್ಮಿಯ[2]
[3]ನುಡಗಿ[3] ನಿಮಿಷದಲುಗ್ರರೋಷಂ
ಬಡೆದು ಹೊಯ್ದನು ತೋರಣದ ಕಂಬದಲಿ ರಕ್ಕಸನ ೨೮

ಹೊಯ್ದ ಘಾಯವ ಪರಿಘದಲಿ ಖಳ
ಕಾಯ್ದುಕೊಂಡುಪ್ಪರಿಸಿ ಹನುಮನ
ಹೊಯ್ದಡಿಕ್ಕಡಿಯಾದುದೆದೆಯಲಿ ಬಿದ್ದು ಬಲುಗೈದು
ಎಯ್ದದಾದುದು ಸಮತೆ ಸಿಡಿಲ ನಿ
ನಾದದಲಿ ಪುಟನೆಗೆದು ರಣರಸ
ವಾದಿ ಹಗೆವನ ತೇರ ತಿರುಹಿಟ್ಟನು ನಭಸ್ಥಳಕೆ ೨೯

ತಿರುಗುತಿರ್ದುದು ತೇರು ಸೂರ್ಯನ
ಸರಿಸದಲಿ ಬಳಿಕಕ್ಷನುರುಸಿಂ
ಧುರಕೆ ಲಂಘಿಸಿ ನೂಕಿ ಹೊಯ್ದನು ಶಿರವನನಿಲಜನ

---

[1] ಯೊ (ಕ.ಗ.ಜ.ಝ.ಡ.ಣ). [2] ತೋಳ ವನಲಕ್ಷ್ಮೀ (ಕ), ಬಲಪವಯ ಲಕ್ಷ್ಮಿಯು (ಜ.ಡ), ಧರೆ ವೀರಲಕ್ಷ್ಮಿಯು (ಟ). [3] ಮಡುಗಿ (ಕ.ಗ.ಚ.ಣ).

[1]ಪರಿಘದಿಂದದನಣೆದು[1] ಕಪಿಮದ
ಕರಿಯ ತಿವಿದನು ತಿವಿಯೆ ರಕ್ಕಸ
ತುರಗದಲಿ ಧುಮ್ಮಿಕ್ಕಿ ಸೆಳೆದನು ಹೊಳೆವ ಖಂಡೆಯವ ೩೦

ದಂತಿಯೊಡಲೊಳಗದ್ದುದಾ ಹನು
ಮಂತದೇವನ ಮುಷ್ಟಿ ನೆಗಹಿ ನ
ಭಾಂತರಕೆ [2]ಜಡಿ[2]ದಿಟ್ಟನಂಬರಚರರು ಖೋ ಎನಲು
ಅಂತಕನ ಕರ ಕಂತುಕವು ಬೀ
ಳ್ವಂತೆ ಬಿದ್ದುದು ರಾವಣನ ನಗ
ರಾಂತರಾಳದೊಳಕ್ಷನೆಱಗಿದನಸಿಯಲನಿಲಜನ ೩೧

ಎಱಗಿದಸಿಘಾತದಲಿ ನಡುಹಣೆ
ಹಱಿಯಲತಿರೋಷದಲಿ ಹಯದೆಲು
ಮುಱಿಯಲೊದೆದನು ಸಿಡಿದು ಕಲಿಗಳದೇವ ಫಡಯೆನುತ
ಒಱೆಯನುಗಿದು ಕಠಾರಿಯಲಿ ಬೊ
ಬ್ಬಿಱಿದು ತಿವಿದನು ಲೇಸು ಲೇಸೆಂ
ದಱಿಚೆ ವಿದ್ಯಾಧರರು ಗಗನದಲಂಜನಾಸುತನ ೩೨

ತಿವಿದು ಹಿಂಗುವ ಭಟನ ಪವನಜ
ನವಚಿ ತಡೆಗಾಲಿಂದ ಕೆಡಹಲು
ಕವಿದು ಬೀಳುತ ಕಾಲ ಡೊಕ್ಕರಿಸಿದನು [3]ಕಪಿವರನ[3]
ಅವನಿಗಂಘ್ರಿಗೆ ಕೀಲಕೊಟ್ಟಂ
ತವನು ಜಡಿಯಲು ದಡದಡಿಸಿ ಕಲಿ
ಪವನಸುತ ತರಹರಿಸಿಕೊಳುತೆಱಗಿದನು ರಕ್ಕಸನ ೩೩

ಎಱಗಿದಶ[4]ನೀ[4]ಘಾತಮುಷ್ಟಿಯ
ಬಿಱುಬಿನಲಿ ಬುಡುಬುಡಿಸಿ ನೆತ್ತರಿ
ನೊಱೆತೆ ಹಾಯ್ದುದು ವದನದಲಿ ನಾಸಿಕದ ನಾಳದಲಿ
ಅಱಿಸಿತಕ್ಷಕುಮಾರನಸು ಜವ
ಪುರದೊಳಳಿದ ಕುಮಾರಕರ ಖಳ
ಶಿರವ ಕಿತ್ತಿಟ್ಟನು ದಶಾಸ್ಯನ ಸಭೆಯ ಸರಿಸದಲಿ ೩೪

---

[1] ತಿರಿಗಿ ತಪ್ಪಿಸಿಕೊಂಡು (ಚ), ಕರದ ದಂಡೆಯುಲಣದು (ಜ). [2] ಚಿಗಿ (ಗ), ತೆಗ (ಚ.ಟ), ನೆಗ (ಜ). [3] ಪವನಜನ (ಗ.ಜ.ಟ.ಡ.ಣ). [4] ನಿನಿ (ಚ), ನಿಯು (ಝ).

ಉಳಿದ ಮುಂಡವ ತಂದು ಬಾಗಿಲ
ಬಳಿಯ ನೆಲೆಯುಪ್ಪರಿಗೆಯಗ್ರದ
ಕಳಸವನು ಕಿತ್ತಲ್ಲಿ ಸೆಕ್ಕಿ ಮನೋನುರಾಗದಲಿ
ಕಲಹಕೊದಗುವ ಭಟರ ಬರವನು
ಬಲಿವುತಿರ್ದನು ದೈತ್ಯಕೋಲಾ
ಹಲನೃಕಂಠೀರವನ ಬಂಟನುದಗ್ರತೇಜದಲಿ ೩೫

---

# ಆರನೆಯ ಸಂಧಿ

**ಸೂಚನೆ**: ವಿಶತತರಾಕ್ಷಸರಾ[1]ಜ[1]ಬಲಸಂ
[2]ಗತವ[2]ನುಜೆ ಸಂಹರಿಸಿ ರಾವಣ
ಸುತನಿನಬುಜಭವಾಸ್ತ್ರದಲಿ ಬಿಗಿವಡೆದನಾ ಹನುಮ

ಕೇಳಿದೈ ರಘುವಂಶಲಕ್ಷ್ಮೀ
ಲೋಲಸುತ ಹರಿಸುತನ ಕೈಯಲಿ
ಕಾಲಗಂಡ ಕರಾಳಲಂಕೇಶ್ವರನನಂದನನ
[3]ಬಾ[3]ಳುದಲೆ ರಾವಣನ ಸಭೆಯಲಿ
ಬೀಳೆ ಬಳಿಕಾ ಹದನನಾಕ್ಷಣ
ಕೇಳಿ ಬಂದಳು ತವಕದಲಿ ತಲೆಯೆಡೆಗೆ ಮಯತನುಜೆ ೧

ಆರು ಕೊಂದ[4]ರು ಕಂದ[4] ಮುನಿದವ
ರಾರು ಹೇಳೆಲೆ ಮಗನೆ ಬೇಟದ
ಬೇರುಗೊಲೆ ಮಿತ್ತಾದುದೇಯಕಟಕಟ ತವಪಿತನ
ವೀರ ಹಾ ಸುಕುಮಾರ ಹಾ ರಣ
ಧೀರ ಹಾ ಹಾ [5]ಕಂದಯೆಂದು ನಿ
ಜೋರಸಿನೊಳಾ[5] ತಲೆಯ ತಕ್ಕಿಸಿಕೊಂಡು [6]ಹೊರಳಿ[6]ದಳು ೨

ಕಂಡನಣುಗನ ತಲೆಯ ತಕ್ಕಿಸಿ
ಕೊಂಡು ಹೊರಳುವ ಸತಿಯನುದರದ
ಗುಂಡಿಗೆಯನೊಡೆದುಚ್ಚಳಿಸಿದುದು ಕೋಪಶಿಖಿ ಮುಖದ
ಮಂಡಳಿಗಳಲಿ ಮಾತದೇನು
ದ್ದಂಡಪುರಹರಲಯದಲಾ ಬ್ರ
ಹ್ಮಾಂಡವನು ಸುಡಬಗೆ[7]ವ[7] ಬಗೆಯನು ಬಗೆದನಸುರೇಂದ್ರ ೩

---

[1] ಯು (ಗ.ಚ). [2] ಹತಿಯು (ಕ.ಝ), ತತಿಯ (ಗ.ಟ.ಣ). [3] ಬೀ (ಕ.ಗ.ಟ.ಣ).
[4] ರು ತಂದೆ (ಕ), ವರಾರು (ಗ). [5] ಯೆಂದು ಮೋಹದ ಭಾರಣೆಯಲಾ (ಕ).
[6] ಹಲುಬಿ (ಗ). [7] ದ (ಕ.ಝ.ಟ.ಣ).

ಬರಲಿ ಕಮಲಜದತ್ತರಥ ಸಂ
ಗರಭಯಂಕರಘೋರತರ ಹಿಮ
ಕಿರಣಹಾಸವೆನುತ್ತ ರಕ್ಕಸರಾಯ ಮೀಸೆಗಳ
ಮುರಿದು ನಿಂದಿರಲಿಂದ್ರಜಿತು ಬಲು
ಬಿಱು[1]ಬಿನುಬ್ಬರ[1]ವಾತಿನಲಿ ಕಿಡಿ
ಸುರಿಯೆ ಖಡುಗವ ಝಡಿದು ರಕ್ಕಸರಾಯಗಿಂತೆಂದ ೪

ನಿಲಲು ಬೇ[2]ಕೆಲೆ[2] ಜೀಯ ನೀ ಹಗೆ
ಗಲಹದಲಿ ಹರನೊಡನೆ ಮಿಕ್ಕಿನ
ಗಲಭೆಕಾಱರು ಪಾಡೆ [3]ನಿನಗಿಂದಮರರೊಗ್ಗಿನಲಿ[3]
ಹುಲು[4]ಗಪಿಗೆ ನೀನೇಕೆ[4] ನೇಮಿಸು
ನಿಲಿಸುವೆನು ಹಿಡಿತಂದು [5]ನಿನ್ನಯ[5]
[6]ಬಳಿಯಲೆಂದಿಂದ್ರಾರಿ[6] ಹೊಱವಂಟ[7]ನು ಸಭಾಸ್ಥಳವ[7] ೫

ಕೂಡಿತಾಕ್ಷಣ ಜಂಬುಮಾಲಿಯ
ಕೂಡ[8]ಣವರಕ್ಷಕನ ಬಳಿಯೊಡ[8]
ನಾಡಿಗಳು ದೇವಾಂತಕಪ್ರಮುಖಾದಿ ಭಟರುಗಳ
ಜೋಡಿಗರು ಜೀವಾಳಜೋಕೆಯ
ಗಾಡಿಕಾಱರು ಗಂಡಿಗರು [9]ರಣ[9]
ಖೇಡರಗ್ಗದ ಹೊಂತಕಾಱಗಳೊಂದುನಿಮಿಷದಲಿ ೬

ವೀರಭಟರಬ್ಬರಣೆ ನಿಗುರುವ
ತೇರ ಚೀತ್ಕೃತಿ ಗಜದ [10]ಬೃಂಹಿತ[10]
ವಾರುವಂಗಳ ಹೇಷಿತಧ್ವನಿ ಝಡಪು ಹರಿಗೆಗಳ
ಭೇರಿ ಶಂಖ ಮೃದಂಗ ರಣಕಹ
ಳಾರವದ ರಭಸದಲಿ [11]ಮೇಲ್ವಗ[11]
ದೋರಣೆಗೆ ಪೈಸರಿಸಿ ನಡೆತಂದನು ಸುರೇಂದ್ರಜಿತು ೭

---

[1] ಬಿನದುಬ್ಭತ(ಚ), ದಿನುಬ್ಬರ (ಝ.ಡ.ಣ). [2] ಕೇ (ಕ.ಣ). [3] ನಿನಗಿಂದಾಜಿರಂಗದಲಿ (ಕ), ನಿಮಗಿಂದಮರರೊಗ್ಗಿನಲಿ (ಗ.ಣ), ನಿನಗಿನ್ನಮರರೊಗ್ಗಿನಲಿ (ಡ). [4] ಕಪಿಗೆ ನೀನೇಕೆ (ಕ), ಗಪಿಯ ನೀನೆನಗೆ (ಗ), ಗಪಿಗೆ ನೀವೇಕೆ (ಜ.ಝ). [5] ನಿನ್ನೀ (ಕ), ನಿಮ್ಮಯ (ಜ.ಝ.ಡ). [6] ಸಲುವ ಸಭೆಯಲೆನುತ್ತ (ಕ), ಬಳಿಯಲೆಂದಮರೇಂದ್ರಜಿತು (ಗ.ಝ.ಟ). [7] ನರಮನೆಯ (ಗ.ಝ.ಟ). [8] ಣವರಾಕ್ಷಣದಿ ಬಳಿಯೊಡ (ಕ), ಣಿಗರವರಕ್ಷಕನವಡ (ಗ). [9] ಗತ (ಕ.ಣ), ಗತಿ (ಜ.ಡ). [10] ಘರ್ಜನೆ (ಗ.ಝ.ಣ). [11] ಮೇಲ್ಪಗೆ (ಗ), ಯೋಲಗ (ಜ.ಡ).

ಮುತ್ತಿತಾ ಬಲಜಲಧಿ ವಡಬನ
ಮುತ್ತುವಂಬುಧಿಯಂತೆ ಬಳಿಕಾ
ಹತ್ತುಗೆಯ ಹವಣಿನಲಿ ಹರಿಸುತನಿರ್ದನಂ[1]ಜಿ[1]ಕೆಯು
ಹತ್ತಿರಕೆ [2]ಹುಗಗೊ[2]ಡದೆ ಶೌರ್ಯದ
ಸತ್ತಿಗೆಯು ನೆಳಲಿನಲಿ ಸಮರೋ
ನ್ಮತ್ತರೋಷಾವೇಶದಲಿ ಲೆಕ್ಕಿಸದೆ ರಿಪುಬಲವ ೮

ಝುಳಪಿಸುವ [3]ಕೈದುಗಳ ಹೊಳಹಿನ[3]
ಬೆಳಗು ಬೆರಸಿತು [4]ಬಲಿದ[4] ಬೊಬ್ಬೆಯ
ಕಳಕಳಿಕೆ ಕಲಿಯೇಱಿಸಿತು ಕಡುಗಲಿಯನಾಹವದ
ವೊಳಗುವಭಿನವವಾದ್ಯ[5]ತತಿ[5] ಹೆ
ಕ್ಕಳವ ಹುಟ್ಟಿಸಿತಧಿಕಚಾಪಳ
[6]ಛಲಿಗಳಾ[6]ಕುವ [7]ಕೈದುಗಳು ಕನಲಿಸಿದವನಿಲಜನ[7] ೯

ಎಲ್ಲಿ ಕೋಡಗ ಬನವನುಱೆ ಹೊಡೆ
ಹುಲ್ಲಮಾಡಿದ ಮರ್ಕಟಾಧಮ
ನೆಲ್ಲಿ ರಾಜಕುಮಾರಕರನುನ್ಮತ್ತಮಾರ್ಗದಲಿ
ಕೊಲ್ಲಗೊಲೆಯಲಿ ಕೊಂದ ವಾನರ
ನೆಲ್ಲಿಯೆನುತುರವಣಿಸುತಾಹವ
ಮಲ್ಲ ಹನುಮನ ಹೊರೆಗೆ ಹೊಳೆ[8]ಸಿದನಿಂ[8]ದ್ರಜಿತು ರಥವ ೧೦

ಒಡನೆ ನೂಕಿತು ತೋಕುವಂಬಿನ
ತಡೆವ ಶೂಲ[9]ವ[9] ಹೊಯ್ವ ಖಡುಗದ
ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ
ಅಡಿವಿಡುಕದಾ ತೋರಣದ ತುದಿ
ಗಡೆಯಲಿದ್ದನು ತೂಳುವದ್ರಿಗೆ
ಸಿಡಿಲು ಸಮರಕೆ ಸಂವರಿಸಿಕೊಂಬಂತೆ ಕಲಿಹನುಮ ೧೧

---

[1] ಬಿ (ಚ.ಜ). [2] ಹೊಗಗೊ (ಕ.ಡ.ಣ), ಹುಗಗು (ಗ.ಝ.ಟ). [3] ನಿಜಕರದ ಖಡುಗದ(ಕ.ಗ.ಝ). [4] ಬಱಿಯ (ಗ.ಝ), ಬಲಿಯ (ಡ). [5] ರವ(ಕ.ಜ.ಟ.ಡ.ಣ) [6] ಚಲವನಾ (ಕ), ಚಲಿಯನಾ (ಗ.ಝ.ಟ.ಣ). [7]ಕೈದುಗಳು ಕನಲಿಸಿದವಾ ಕಪಿಯ (ಕ), ಕೈದುಗಳು ಕನಲಿಸಿದುದರಿಬಲವ (ಗ), ರಭಸವುಬ್ಬಿಸಿತೀಮರುತ್ತ ಜನ (ಚ.ಜ.ಟ.ಡ). [8] ಸುತಲಿಂ (ಗ), ಕಿದನಿಂ (ಜ.ಝ.ಣ). [9] ದ (ಕ.ಝ.ಡ.ಣ).

*ಭರದ ಬೇಸಗೆಗಾಲದೊಣಗಿಲು
ಮರನ ವಿಪಿನದೊಳೆದ್ದ ವೈಶ್ವಾ
ನರನವೊಲು ಕೋಪದಲಿ ಕಿಡಿಕಿಡಿಯೋಗಿ ಕಲಿಹನುಮ
ಧರೆಗೆ ಧುಮ್ಮಿಕ್ಕಿದನು ಕೊಂಡನು
ಗಿರಿಯು ಸಾರದ ಕೋಟಿಹತ್ತರ
ಭರದ ಭಾರದ ತೂಕದುಕ್ಕಿನ ಲಾಳವಿಂಡಿಗೆಯು ೧೨

ಹೊಕ್ಕುದಾ ಸಮಯದಲಿ [1]ಸುಂ[1]ಡಿಲ
ಸೆಕ್ಕುಗಳ ಖಂಡೆಯದ ಗಜದಳ
ಬಿಕ್ಕಲಿಳೆ ಬೆರಸಿದುದು ರಣರಥರಾಜಿ ಲೌಡೆಗಳ
ರಕ್ಕಸರು ನೂಕಿದರು ಹಯ[2]ಗಳ
ದಕ್ಕಡೆ[2]ಯ ದೂವಾಳಿಯಲಿ ಕೈ
ಯಿಕ್ಕಿದುದು ಕಾಲಾಳು ಖಳಫಳಯೆನಲು ಕೈದುಗಳ ೧೩

ವೀರ ಹೇಳುವುದೇನನಸುರರೊ
ಳಾರು ಸೆಣಸಿದು ಬದುಕಿದವರಸು
ರಾರಿಯಲ್ಲದೆ ಪೂರ್ವದಲಿ ನಾನಾಯುಗಂಗಳಲಿ
ಆ ರಮಾಧೀಶನ ಸಮಾನಕೆ
ಸೇರಿಸಲು ಬಹುದನಿಲಜನ ಕೈ
ಹಾರದಂಗದ ಕೊಲೆಯು ಕವತೆಯು ಕೇಳು ನೀನೆಂದ ೧೪

ಅಟ್ಟಿ ಸದೆದನು ಕವಿವ ಕುಂತದ
ಪಟ್ಟಿಯದ ಪರಿಘದ ಪದಾತಿಯ
ಥಟ್ಟನೊಳಹೊಗುವಾನೆ ಕುದುರೆಯ ತೇರ ತಿಂಥಿಣಿಯ
ಥಟ್ಟುಗೆಡಹಿದನಿದಿರಲೊದಗುವ
ಘಟ್ಟಿಯರ ಗರ್ವಿತರ ಗಗನದ
ಬಟ್ಟೆಗಳ ಹತ್ತಿಸಿದನರೆನಿಮಿಷದಲಿ [3]ಕಲಿಹನುಮ[3] ೧೫

ಹೊರೆದುದಿಳೆ ಹನುಮಂತದೇವನ
ಧುರದ ಕಠಿಣಕರೋಗ್ರದಂಡದ
ಭರದ [4]ಬಿಱು[4]ವೊಯ್ಲಿನಲಿ ಕರಿರಥಹಯಪದಾತಿಗಳ

---

* ೧೩ನೆಯ ಪದ್ಯವು 'ಕ' ಪ್ರತಿಯಲ್ಲಿ ೧೪ನೆಯ ಪದ್ಯವಾದವೋಲೂ 'ಗ' ಪ್ರತಿಯಲ್ಲಿ ೧೫ನೆಯ ಪದ್ಯವಾದ ವೋಲೂ ಬಂದಿದೆ. [1] ಸೊಂ (ಗ.ಚ). [2] ದಳ ದುಕ್ಕುಡಿ (ಕ.ಜ.ಟ.ಣ), ರಥದಕ್ಕಡೆ (ಝ). [3] ಹನುಮಂತ (ಕ.ಟ.ಡ) [4] ಬಲು (ಕ.ಗ.ಜ.ಟ.ಡ.ಣ).

ತೊರಳೆ ತೊಗಲೆಲು ಮಜ್ಜೆ ಮಾಂಸದ
ಹೊರಳಿಯಲಿ ರಣಭೂತದುಣಿಸಿಗೆ
ಹರಿಯಣವನಿಟ್ಟಂತೆ ಹೊಸಪರಿಯಾಯ್ತು .ರಣಭೂಮಿ ೧೬

ಹೇಳುವರೆ ಬೆಱಗನಿಲಜನ ವಿಕ
ರಾಳ ರಣದಭಿನಯವನೊಂದೇ
ವೇಳೆಯಲಿ ಕಂಡುದು ದಶಾಕ್ಷೋಹಿಣಿ ನಿಶಾಟಬಲ
ಬಾಲ ಕೇಳಪವರ್ಗಲಕ್ಷ್ಮೀ
ಬಾಲಕಿಯ ಸಿರಿಪದವ ಮಿಕ್ಕಸು
ರಾಳಿ ಕಾಣಲಿಕಿದ್ದುದೆಡೆಯಲಿ ಪಡೆಯದವಸರವ ೧೭

ಒಡೆದು ಜಾಱುವ ಭಟರ ಭಟರಿಂ
ದಿಡುತ ಕರಿಗಳ ಕರಿಗಳಿಂದಡ
ಗೆಡಹುತಶ್ವವನಶ್ವದಿಂದಪ್ಪಳಿಸುತೊಡಹಾಯ್ದು
ಬಿಡುರಥವ ರಥದಿಂದ [1]ಹೊಯ್ದುಡುಱೆ
ಹುಡಿಗೆದಱುತಱೆ[1]ಯಟ್ಟಿ ಸದೆದನು
ಸುಡಲಿ ಸಂಸಾರವನೆನಲು ಕಣನೊಳಗೆ ಕಲಿಹನುಮ ೧೮

ಸಿಡಿಸಿಡಿದು ಹೊಗಲೆಡೆಯ ಕಾಣದೆ
ಪಡಿತಳಿಸಿ ನಿಂದಸುರರಸುಗಳ
ಕೊಡಹಿ ಹಾಯ್ಕುತ ಕೊಂದನೀಪರಿ ಕೋಟಿಸಂಖ[2]ಯಲಿ[2]
ಹೊಡೆವ ಹಿಮದುಬ್ಬರಕೆ ಬೇಸಗೆ
ಯುಡಸಿದವೊಲಸುರೇಂದ್ರಜಿತು ಮೇ
ಲುಡಿಯಬಿದ್ದನು ಕಣೆಯ ಕೋಳಾಹಳಗಳೆಸುಗೆಯಲಿ ೧೯

[3]ಮು[3]ತ್ತಿದವು ಶರಜಾಲ ಜೇನಿನ
ಹತ್ತುಗೆಯ ನೊಣದಂತೆ ಬಳಿಯಂ
ಬೆತ್ತಿದವು ಕೋಪಾಗ್ನಿಯನು ಮಹದಗ್ನಿಸಖಸುತನ
ಎತ್ತಿ ಬಾಹಾದಂಡವನು ನಭ
ಕೊತ್ತಿ ಹಲುಗಳ[4]ನೌಡಿನಲಿ ಲಯ
ಮಿತ್ತುವೊಗನೆಱಗಿ[4]ದನು ಮದದುಬ್ಬಿನಲಿ ರಾವಣಿಯ ೨೦

---

[1] ಹೊಯ್ದ್‌ಹೊಯಿದ್ದಡುತಲುಱುೞ (ಕ), ಹೊಯ್ದೊಡೆ ಹುಡಿಗೆದಱುತರೆ (ಚ). [2] ಗಳ (ಕ.ಗ.ಝ.ಟ.ಣ). [3] ಮೆ (ಕ.ಗ.ಚ.ಣ). [4] ಮಸೆದು ವಿಲಯದ ಮೃತ್ಯು ವೊಗದೆಱಗಿ (ಕ), ನೌಡಿ ವಿಲಯದ ಮೃತ್ಯುವೆನಲೆಱಗಿ (ಚ), ನೌಡಿರ್ದಿದುದು ಲಯಮಿತ್ತು ವೊಗನೆಗಹಿ (ಝ).

ಸಿಡಿದುಬಿದ್ದನು ತೇರಿನಿಂದಿ[1]ಳೆ
ಗಡಿಮುಗುಚಿ ನೆಲನಾಳ ನಡನಡ[1]
ನಡುಗಿದುದು ರಾವಣಿಯ ತನು ಕರಘಾತಕನಿಲಜನ
ಪಡಿ[2]ತಳಿ[2]ಸಿ ಸಂತೈಸಿಕೊಳುತವ
ಪಡಿರಥಕೆ ಧುಮ್ಮಿಕ್ಕಿ ವಿಲಯದ
ಸಿಡಿಲವೊಲು ಸೀವರಿಸಿ ಸುಱಿದನು ಸರಳ ಸರಿವಳೆಯ ೨೧

ನೂಕಿದವು ಶರಜಾಲ ಹನುಮನ
ಸೋಕಿನಲಿ ಮದಗಜವನೆಳೆಮು
ಳೌಕುವವೊಲಂಜನೆಯಸುತ[3]ನಂಜು[3]ವನೆ ಶರಹತಿಗೆ
ನೌಕವಱಿಚಲು ಬೊಬ್ಬಿಱಿದು ರಣ
ದಾಕೆವಾಳರದೇವ ದಿವಿಜಾ
ನೀಕ ಹೊಗಳಲು ಹೊಕ್ಕು ಹೊಯ್ದನು ಮತ್ತೆ ರಾವಣಿಯ ೨೨

ಹೊಯ್ಲಿಗವನೊಳಗಾಗದಾಕ್ಷಣ
ಮೈಲುಳಿಯಲುಪ್ಪರಿಸಿ ಸೋಲದ
ಮೈಲಿಗೆಗೆ [4]ಮೈಗೊ[4]ಡದೆ ಪಡಿರಥಕಾಗಿ ಪುಟನೆಗೆದು
ಕೈಲುಳಿಯ ಕಣೆಗಳಲಿ [5]ತೋದ[5]ನ
ಲೈ ಲಘುಪ್ರಕರಪ್ರಯೋಗದ
ಲೈಲಪೈಲದ ವೀರನೇ ವಿಬುಧೇಂದ್ರಜಿತುವೆಂದ ೨೩

ಹಿಂದೆ ದಿಗುವಿಜಯದಲಿ ಸೋತು ಪು
ರಂದರಾದ್ಯರು ಕೊಟ್ಟ ಬಾಣಗ
ಳಿಂದ ಹೂಳಿದನುಬ್ಬಿ ಬೊಬ್ಬಿಱಿದಂಜನಾಸುತನ
ಮಂದವಿಸಿ ಮುಸುಕುವ ಬಳಾಹಕ
ವೃಂದದುಪಟಳಕಳುಕುವನೆ ರವಿ
ಕಂದ ಕೇಳ್ ಕೌತುಕವನೊಳಹೊಕ್ಕೆಱಗಿದನು ಖಳನ ೨೪

ಎಱಗಿದರಿಭಟಭೈರವನನು
ಬ್ಬಿಱಿದು ಗದೆಯಿಂದಣೆದು ಬೊಬ್ಬೆಯ
ಬಿಱುಬಿನಲಿ ಬೀಸಿಟ್ಟನಾ ಲಂಕಾಭಯಂಕರನ

---

[1] ಳೆಗಡಿಮುಗುಚಿ ನೆಲಕಿಂದ್ರಜಿತು ನಡ (ಕ), ರದಡಚಿ ನೆಲದೊಳು ಹೊರಳಿದುದು ರಥ (ಚ). [2] ಬರಿ (ಕ), ಬಲಿ (ಗ.ಡ), ಭವಿ (ಜ.ಣ). [3] ನಳುಕು (ಕ.ಜ.ಣ). [4] ಹೊಯ್ಗೊ (ಗ), ಮೈಗು (ಚ.ಟ), ಮನಗು (ಝ). [5] ಕೊಂದ (ಜ.ಟ), ಕೊಯ್ದ (ಝ).

ಮುಱಿವ ಗದೆಯಲ್ಲದು ಸುರೇಶ್ವರ
ನುಱುವವಜ್ರದ ಸಾರ[1]ತರವದ[1]
ತಱುಬುವರೆ ಪವಮಾನನಂದನನಲ್ಲದಿಲ್ಲೆಂದ ೨೫

ಇಟ್ಟ [2]ಭಾರಕೆ[2] ಸಿಡಿದು ತರಣಿಯ
ತಟ್ಟಿ ಬಿದ್ದುದು ಖಳನ ತೇರಿನ
ನಟ್ಟನಡುವೆ ಸುರೇಂದ್ರಜಿತು ಪಡಿರಥಕೆ ಲಂಘಿಸಲು
ಹಿಟ್ಟುದೋಱಿತು ತೇರು ಬಳಿಕವ
ನಿಟ್ಟನಿಟ್ಟಿ ಮುಸುಂಡಿ ಮುದ್ಗರ
ಪಟ್ಟೆ ಪರಿಘ ಪರ[3]ಶ್ವಧಾದಿ[3] ಮಹಾಯುಧಂಗಳಲಿ ೨೬

ಬಳಿಕ ಕಮಲಜದತ್ತರಥವನು
ನಿಲಿಸಲಡಱಿ ಸುರೇಂದ್ರಜಿತು ಕಳ
ವಳಿಸೆ ಜಗ[4]ವೈಂ[4]ದ್ರಾಗ್ನಿ[5]ಯಾಮ್ಯಾಸುರದ ವಾರುಣವ[5]
ಹಿಳುಕುಗಳ ಸಂದರ್ಭದಲಿ [6]ಸರ
ಗೊ[6]ಳಿಸಿ ವಾಯು ಕುಬೇರ ಹರ ಗಿರಿ
ಕುಲಿಶ ಸೌರಾದಿಗಳಲೆಚ್ಚನು ವಜ್ರವಿಗ್ರಹನ ೨೭

ಆವ ದಿವ್ಯಾಸ್ತ್ರಂಗಳೀತನ
ನೋವಿಗೊದಗಿದುದಿಲ್ಲವಸುರ ಶ
ರಾವಳಿಗಳಳುಕಿ[7]ಸಲು ನೆರೆದುದ ಕಾಣೆನನಿಲಜನ[7]
ದೇವರಿಪು ಕಿಡಿಮಸಗಿ ವರರಾ
ಜೀವಸಂಭವಶರವ ಹೂಡಿದ
ನಾ ವಿಬುಧರಸು ಜಱಿಯೆ ಝುಮ್ಮೆಡೆ ತನು ತ್ರಿಯಂಬಕನ ೨೮

ಓಡಿದನು ಜವರಾ[8]ಜ[8] ಸರಿದನು
ಬೀಡಿಕೆಗೆ ಭವಭಯದಲಾನೆಯ
ಜೋಡ ಕಳಚಿ ಸುರೇಂದ್ರನಂಕುಶವಿಕ್ಕಿದನು [9]ಪುರಿಗೆ[9]
ಕೋಡದೀ ಶರ ಕಟ್ಟಿದರೆ ಕೈ
ಗೂಡುವುದು ಕಡುಗೋಪವೇನನು
ಮಾಡುವನೊ ಮಾರುತಿಯೆನುತ್ತುಳಿದಮರರಡಗಿದರು ೨೯

---

1 ವಿದು ನೆಱೆ (ಕ), ವದನದ (ಝ). 2 ಭರಕದು (ಚ). 3 ಶ್ವ ಲೌಡಿ (ಗ.ಚ.ಟ), ಶುಗದಾದಿ (ಝ). 4 ವಿಂ (ಜ.ಟ). 5 ಯಾಮ್ಯಾಪುರದ ವಾರುಣರ (ಗ), ಯಮಸುರನಿರುತಿವಾರುಣವ (ಜ). 6 ಮುಂಕೊ (ಕ.ಜ.ಟ.ಡ.ಣ). 7 ಸಿದುದಿಲ್ಲಾ ಕಾಣೆನೀ ಕಲಿಯ (ಗ), ಸಲು ನೆರೆಯದು ಕಾಣೆನೀ ಕಪಿಗೆ (ಝ.ಣ). 8 ಯ (ಚ.ಜ). 9 ಕರಿಗೆ (ಗ.ಜ), ಗಜಕೆ (ಡ).

ರಣದಿಳೆಯ ಹುಗಲಂಜಿ ಶಾಕಿನಿ
ಗಣ ಸರಿದುದತ್ತತ್ತ ತೊಲಗಿದ
ಹೆಣನ ಜೀವವನೊಯ್ವ ಕಾಲನ ದೂತರಲ್ಲಲ್ಲಿ
ಮಣಿಕಟಿಯ ಮುಱಿಮಾಡಿ ಸಮರಾಂ
ಗಣದ ಭೂಮಿಯ ಸೀಮೆಯಲಿ ಮೈ
ಹಣುಗಿ ಹೊದಱಿನಲಿರ್ದರಂಜಿಕೆಗನಿಲನಂದನನ ೩೦

ಆತುಕೋ ಕಪಿ ಕಪಿಯ ರೂಪಿನ
ಭೂತಪತಿ ನೀನಾಗು ಬೊಮ್ಮನ
ತಾತನಾಗಲ್ಲದಡೆ ಮೇಣಾ ಬೊಮ್ಮ ನೀನಾಗು
ಈ [1]ತು[1]ಠಾರದ ತೋಮರವ ನಿ
ರ್ಭೀತಿಯಲಿ ನೀ ಗೆಲಿದೆಯಾದಡೆ
ಸೋತವನು ನಾ ನಿನಗೆನುತ [2]ಕವಿದೆಚ್ಚನನಿಲಜನ[2] ೩೧

ಸುರಿವ ಕಿಡಿಯುಡಗಿದವು [3]ಕಬ್ಬೊಗೆ[3]
ಹರೆದುದುರಿ [4]ಸಮನಿಸಿತು[4] ಕೊಲುವು
ಬ್ಬರದ ಬಗೆ ಬಯಲಾಯ್ತು ಕುಶ ಕೇಳಾ ಮಹಾಶರದ
ಅರರೆ ಹನುಮನ ವಿಕ್ರಮಾಗ್ನಿಯ
ಹರಹದೆಂತುಟೊ ಹೊದ್ದಲಮ್ಮದೆ
ತಿರುತಿರುಗಿ ಬರುತಿರ್ದುದೊಂದರೆಘಳಿಗೆಪರಿಯಂತ ೩೨

ಕೆರವ ಮುಗಿದಂಭೋಜಭವನಂ
ಬರದಲೀತನ ಬೇಡಿಕೊಂಡನು
ವರವ ಕೊಡು ನೀನೆಮಗೆ ನಾವ್ ಮುನ್ನಿತ್ತ ವರದಿಂದ
ಶರವಿದೆಮ್ಮದಮೋಘವೆನೆ ಮ
ತ್ತರಿಭಯಂಕರಹನುಮನಾ ಬಲು
ಸರಳ ಕರೆದನು ಕಟ್ಟುವಡೆದನು ಕದನಕೇಳಿಯಲಿ ೩೩

---

[1] ಕು (ಜ.ಟ.ಡ.ಣ). [2] ತೆಗದೆಚ್ಚುಬೊಬ್ಬಿಱಿದ (ಕ.ಜ.ಟ.ಡ.ಣ). [3] ಕಾಬೊರ್ಗೆ (ಗ.ಜ.ಝ.ಟ.ಡ). [4] ನಂದಿದುದು (ಕ.ಝ.ಣ), ನಂದಿದವು (ಗ.ಟ), ಮಸಳಿಸಿತು (ಜ).

ಒದಱಿದವು ರಣವಾದ್ಯತತಿ ಖಳ
ಕೆದಱಿಕೊಂಡು ವರೂಥದಿಂದಿಳಿ
ದೊದದೊದೆದು ಸೇದಿದನು ಕಮಲಜಪಾಶದಲಿ ಕಪಿಯ
ಬೆದಱಿ ಹಾಯ್ದಣ್ಣಗಳು ಕೈಗಳ
ಲೆದೆಯ ನೇವರಿಸುತ್ತ ರಣಸಂ
ಪದ[1]ದ[1] ನರಕೇಸರಿಯ ದೂತನನೈದಿತೊಗ್ಗಿನಲಿ ೩೪

---

[1] ನ (ಚ.ಟ).

# ಏಳನೆಯ ಸಂಧಿ

ಸೂಚನೆ : ಚಂಡಬಲರಾವಣನ ಸಭೆಯಲಿ
ಗಂಡಗಂಡರಗಂಡ ರಣದೋ[1]
ರ್ದಂಡ[1]ಮಾರುತಿ ಜಱೆದು ಮೆಱೆದನು ಸುಪ್ರತಾಪಕರ

ಕೇಳಿದ್ವೈ ಕುಶ [2]ಮುತ್ತಿ[2] ಕೊಂಡುದು
ಸೋಲದಸುರರು ವಿಷಮರಾಕ್ಷಸ
ಕಾಲಭೈರವನನು ಕನಲ್ದು ಕಠಾರಿ ಕುಂತದಲಿ
ಲಾಳವಿಂಡಿಗೆ [3]ಪಿಂ[3]ಡಿವಾಳ ಕ
ರಾಳಖಡ್ಗ ಮುಸುಂಡಿ ಮುದ್ಗರ
ಶೂಲಪಟ್ಟಿಸ ಪರಿಘ ಪರಶು ಗದಾದಿ ಶಸ್ತ್ರದಲಿ ೧

ಹೊಡೆದರಿಱಿದರು ಹೊರಳಿಚಿದರಡ
ಗೆಡೆಹಿದರು ಕೋಳಾಹಳದ ಬಲು
ಗಡಿಯ ಭಟರಬ್ಬರಿಸಿ ಸದೆದರು ಸೂಳುಪಾಳಿನಲಿ
ಹೊಡೆಯದಿರಿರೋ ಸಾಯದೀ ಕಪಿ
ಹೆಡಗುಡಿಯ ಬಿಗಿದಸುರವಲ್ಲಭ
ನೆಡೆಗೆ ಹೊಱಕೊಂಡೊಯ್ವೆವೆನೆ ಹೊತ್ತುದು ಖಳವ್ರಾತ ೨

ಹೊತ್ತು ಹೊತ್ತೇಳೆಂಟು ಸೂಳಲಿ
ಸತ್ತುದೆಂಬ[4]ತ್ತೈದು[4]ಸಾವಿರ
ಕಿತ್ತು ಧರೆಯನು ಧರಿಸುವತಿಬಲ ಸರಿಗರಕ್ಕಸರು
ಎತ್ತಿದಿರಿ ಬಲುಮಿಳಿಯಲಿವನನು
ಸುತ್ತಿ ಸಿಂಧುರ ಘಟೆಗಳಿಂದೆಳೆ
ಸುತ್ತ ಕೊಂಡೊಯ್ಯೆನಲು ಹಮ್ಮಿದರಾನೆಯಲಿ ಕಪಿಯ ೩

ಎಳಸಲಿರ್ಭಾಸಿರ ಘಟಾವಳಿ
ನೆಲಕೆ ದಾಡೆಯನೂಱಿ ಘೀಳಿ
ಟ್ಟಿಳಿದವನಿಲ[5]ಜ ಜಡಿದ ಜವದುಗ್ಗಡದ ಸತ್ವದಲಿ[5]
ಛಲವಿದರ ಕೂಡೆನುತ ಹರಿರಿಪು
ಹಲುಮೊರೆದು ತರಿಸಿದನು ವಜ್ರದ
ಹಳಿಯ ರಥವನು ಕುಂಭಕರ್ಣನಿಶಾಚರೇಶ್ವರನ ೪

[1] ಜಗದುದ್ದಂಡ (ಕ), ಸಮರೋದ್ದಂಡ (ಗ). [2] ಮುಸುಕಿ (ಗ.ಝ.ಟ.ಣ).
[3] ಭಿಂ (ಕ.ಣ). [4] ತ್ತೆಂಟು (ಚ). [5] ಕುಮಾರನೆಡಬಲಕೊಲದ ಮ್ಯಾಗಳಲಿ (ಕ).

ಪಿಳಿ ನೊಗನು ಕೀಲಚ್ಚು ಕೂಬರ
ಬಳೆಮೊಳೆಯನಾರೈದು ಹೆರೆಯನು
ಬಳಿದು ಹೂಡಿದರಿದ್ದ ಸೆಯಲೆಂಭತ್ತು ಸಾವಿರವ
[1]ಇಳೆಯ ಹೊತ್ತಿ ಭರಾಜಿಯಿಂದ
ಗ್ಗಳದ ಕರಿಗಳ ಕೂಡೆ ಬನದಲಿ
ಬೆಳಗಿದವು ಬೊಂಬಾಳದೀವಿಗೆ ಲಕ್ಕಸಂಖ್ಯೆಯಲಿ[1] ೫

ಸರಿಗರಕ್ಕಸಕಿಂಕರರು ಬೊ
ಬ್ಬಿಱಿದು ಬಲುಸನ್ನೆಗಳಲುಕ್ಕಿನ
ತುಱುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ
ಅಱಿಚಿದನು ಫಣಿರಾಜ ಕೂರುಮ
ನೊಱಲಿದನು ಕೂಗಿಟ್ಟವಿಭವಿಳೆ
ಗೊಱಗಿತಗ್ಗದ ಮೇರುಗಿರಿ ಮಾರುತಿಯ ಭಾರದಲಿ ೬

ಎತ್ತಲಳಿದುದು ರಕ್ಕಸರು ತಱು
ಬೊತ್ತಿ ಹನುಮನ ಭಾರದಲಿ ಕರಿ
ಸತ್ತವನಿಲಜನೊಲದ ವ್ಯೆಯಲಿ ಬಗೆಯ[2]ದುರವಣಿಸಿ[2]
ಹತ್ತಿಸಿದ[3]ರಾ[3]ನೆಗಳನಸುರರು
ಸತ್ತುದೈ ಸೂಳೆಂಟಱಲಿ ಬೇ
ಸತ್ತು ಬಳಿಕವುರೇಂದ್ರಜಿತುವಿಂತೆಂದನಸುರರಿಗೆ ೭

ಸೆಡೆಯದಿದು ಕಯ್ದುಗಳ ಕವತೆಗೆ
ನಡೆಯದಿದು ಕರಿಗಳಿಗೆ ಖಳರಿಗೆ
ಮಡಿಯದಿದು ವಿಕ್ಕಾದ ಕೊಲೆಗಿದರೊಡನೆ ಹೋರದಿರಿ
ಬಿಡಿರೊ ಸಾಯಲು ಬೇಡ ನಿಲ್ಲಿವ
ರೊಡನೆ ಬಲುಮರಗಿಚ್ಚನೊಟ್ಟಿದು
ಸುಡಿಯೆನುತ ನೇಮಿಸಿದನಿಂದ್ರಾರಾತಿ ನಿಜಬಲಕೆ ೮

---

[1] ಬೆಳಗಿದವು ಬೊಂಬಾಳ ದೀಪಾವಳಿಗಳಿದ್ದ ಸೆಗಳಲಿ ಬಲಿದುದು ಕಳಕಳಿಕೆ ಕಡುಧೂರ್ತ ಕಪಿರಾಜೇಂದ್ರನೊತ್ತಿನಲಿ (ಕ). [2] ದಿಂದ್ರಜಿತು (ಕ.ಗ.ಝ.ಟ.ಡ.ಣ). [3] ನಾ (ಕ.ಝ.ಟ).

ಒಟ್ಟಿದರು ತಾಳೇಳಱುದ್ದದ
ಲಿಟ್ಟಣಿಸಿ ಹಳೆವರವನುರಿಗಳ
ಲಿಟ್ಟು ಬೊಬ್ಬಿಱಿದಬ್ಬರಿಸಿದರು ನಾಲ್ಕುಮೈಗಳಲಿ
ಪಟ್ಟಣವನುರಿಗೊಳಿಸಲಿದು ತಾ
ಬಟ್ಟೆ ತನಗೆನುತಱಿಚಿ ಹಲುಗಿರಿ
ದೊಟ್ಟಿದಿಂಧನಗೆದಱಿ ಬಿದ್ದನು ರಥದ ಮಧ್ಯದಲಿ ೯

ಬಿಱುನಗೆಯಲಿಂದ್ರಾರಿ ದಳ್ಳುರಿ
ಡುಱುಗಲಿನ ಕೊಳ್ಳಿಗಳಲಿದ್ದೆಸೆ
ಗೊಱಗದಂತಿರೆ ಕಟ್ಟಿದರು ಕಂಭದಲಿ ಹಳವಿಗೆಯ
ಕಿಱಿಕಿಱಿನೆ ಹಲುಗಿರಿದು ಹಣುಗುತ
ಗಿಱಿಕುಗುಟ್ಟುತ ಮಿಣಿಕಿನೋಡುತ
ಹಱುವ ನಗರಕೆ ನೆನವುತಿರ್ದನು ಮನದೊಳಗೆ ಹನುಮ ೧೦

ನಡೆದುದಲ್ಲಿಂ ಮೇಲೆ ನೆಲ ದಡ
ದಡಿಸಲಾನೆಗಳಂಕುಶದ ಬೆಂ
ಗೊಡತಿಗಳ ಬಲುವೊಯ್ಲ ಬೊಬ್ಬೆಯ ಬಿಱುಬುಗಹಳೆಗಳ
ಹೊಡೆವ ಹರೆಗಳ ಕಳಕಳಿಕೆ ಕೂ
ಗಿಡೆ ಫಣೀಂದ್ರನಗೇಂದ್ರಚಯವೊ
ಗರ್ುಡಿಸೆ ಬಂದುದು ತೇರು ತೋಪಿನ [1]ಕಡೆಯ[1] ಬಾಗಿಲಿಗೆ ೧೧

ಬಳೆಮೊಳೆಯನಾರಯ್ವ ಕಮ್ಮರ
ರುಲುಹುಗಳ ಕೈವಾಚಿ [2]ಚೀಲಣ[2]
ದುಳಿಯ ಕೆಲಸದ ಬಡಗಿಯರ ಬಿರುದನಿಯ ಕುಳಿ ತೆವರ
ತಳಪಟವ ಮಾಡುವ ಪದಾಗ್ರದ
ಸಲಿಕೆ ಗುದ್ದಲಿ [3]ಹಾರೆ[3]ಗಳ ಬಲು
ಗೆಲಸದೊಡ್ಡರ ಕಳಕಳದಿ ಬರುತಿರ್ದುದಸುರರಥ ೧೨

ನಟ್ಟ ಗಾಲಿಯ ಕೀಳುತರೆಗಳ
ಕಟ್ಟುತಚ್ಚಿನ ಕಿಚ್ಚಿನುಱುಬೆಯ
ದಟ್ಟಣಿಗೆ ಧಾರೆಗಳ ಬಿಡುತೆಣ್ಣೆಗಳ ಪಕ್ಕಲೆಯ

---

[1] ತುದಿಯ (ಜ.ಟ.ಡ.ಣ). [2] ಕೀಲಣ (ಕ), ಚಾರಣ (ಚ). [3] ಗೊಕ್ಕೆ (ಕ), ಗೋರೆ (ಗ.ಜ.ಡ.ಣ), ಕೊಡಲಿ (ಝ.ಟ).

ಘಟ್ಟಿಗೆಡುವಾನೆಗಳಿಗಾನೆಯು
ಕಟ್ಟುತಸುರರಿಗಸುರರನು ಹೊಗ
ಗುಟ್ಟುತೀಪರಿ ನಡೆಸಿ ತಂದರು [1]ದೃಢಪರಾಕ್ರಮನ[1] ೧೩

ಕೆಡಹಿದರು ಮುಱಿಮುಱಿದು ಕೇರಿಯ
ತೊಡಕುವೀಥಿಯು ಮನೆಮನೆಯನೊಡ
ಬಡಿದರಾನುವ ವಿವಿಧಸೌಧದ್ವಾರಸಂಕುಳವ
ನಿಡಿಯುಬಾಲವ [2]ಬೀಸಿ[2] ಬೀದಿಗ
ಳೆಡಬಲದ ನೆಲೆಯುಪ್ಪರಿಗೆಗಳ
ನಡಿಮಗುಚುತೈತಂದನನಿಲಜ[3]ನಂಜಲಖಿಳಜನ[3] ೧೪

ಕಳಕಳಿಕೆ ಕಡುಹಾಯ್ತು ಖಳಪುರ
ದೊಳಗಿದೆತ್ತಣ ಮಾರಿಯನು ಹೊಳ
ಲೊಳಗೆ ಹೊಗಿಸಿದರಕಟ ಖಳರಿಗೆ ಕೇಡುಗಾಲವಿದು
ಮೊಳವುದಿಲ್ಲಿರಬಾರದೆಂದಳ
ವಳಿವುತಲ್ಲಿಯದಲ್ಲಿ ಬಲ್ಲವ
ರಿಳಿದು ದುರ್ಗವನೈದಿದರು ಶಾಖಾಪುರಾಳಿಗಳ ೧೫

ಊರ ಹೊಗಿಸಿದರಱಿದಱಿದು ಹೆ
ಮ್ಮಾರಿಯನು ಕೇಡಾಯ್ತೆನುತ ಧವ
ಳಾರಗೋಪುರದೇಱಿಕೆಯ ನೋಟಕರು ಮುಱಿಗೆಡದು
ದೂರದಲಿ ನಿಂದಿದರು ಬಳಿಕವ
ಗೋರಿದನು ಗುಡಿಯಿಱಿದು ಬಾಲದ
ಗೋರೆಯಲಿ ತಳಮಗುಚಿದನು ತೋರಣದ ಸಾಲುಗಳ ೧೬

ಪಳುಕಿನಱೆ ನೆಗ್ಗಿದವು ವಜ್ರದ
ಹಳಿಯು ಹೊಯ್ಲಿಗೆ ಹೋದ ಬೀದಿಯು
ಬಳಿಯ ಮಣಿಮಯಭದ್ರಭವನಾವಳಿಗಳನಿಲಜನ
ಬಳಲುಗೈಸೋಂಕಿನಲಿ ನೆಲಕ
ಪ್ಪಳಿಸಿ ಬಿದ್ದವು ಪುರದೊಳಗಲಕೆ
ಕಳಕಳಿಕೆ ಕಡುಹಾ[4]ಗೆ[4] ಖಳ ಬಂದಿತ್ತನೋಲಗವ ೧೭

---

[1] ಮೃಡಪಗಾಕ್ಷ್ರಮನ (ಕ.ಗ.ಡ), ಮೃಡಪರಾಕ್ರಮಿಯು (ಜ.ಝ). [2] ಬೆಳಸಿ (ಕ.ಗ.ಝ.ಟ.ಣ). [3] ನಖಿಳವೀಥಿಗಳ (ಗ), ನಂಜಿನಖಿಳಜನ (ಚ.ಡ). [4] ಯ್ತು (ಗ.ಚ).

ತಂದನಿಂದ್ರಾರಾತಿ ರಾಯರಿ
ಪುಂಥಮನ ರಾಕ್ಷಸಮದದ್ವಿಭ
ವೃಂದಕಂಠೀರವನ ಖಳಕುಲಕಾಲಭೈರವನ
ನಂದನವ ಕಿತ್ತಕ್ಷಮುಖ್ಯರ
ಕೊಂದ ಕೋಡಗವಿದೆ ಮನಸ್ಸಿಗೆ
ಬಂದ ಪರಿಯನು ಮಾಡೆನುತ ಕೈಮುಗಿದನಯ್ಯಂಗೆ ೧೮

ಈತನಿದ್ದನು ಬಲೆಗೆ ಸಿಲುಕಿದ
ಕೋತಿಯಂದದಲುಸುರದೊಡಕಿನ
ಧಾತುಗುಂದಿದ ಮುಖದ ಮುರುಹಿನ ಮುಚ್ಚುಗಂಗಳಲಿ
ಯಾತುಧಾನಶಿರೋಮಣಿಯು ದು
ಷ್ಪ್ರೀತಿವಾಕ್ಯಸ್ಫುರಣೆಗಳ ನಿಜ
ರೀತಿಗಳನರೆನೋಟದಿಂದೀಕ್ಷಿಸುತ[1]ಲಾ ಹನುಮ[1] ೧೯

ಕೊಲ್ಲು ಕಡಿ ತಿವಿ ತಿದಿಯನುಗಿ ಹೊಯ್
ಹಲ್ಲ[2]ನಿಱಿ ತಱಿ ಕೊಱೆ[2]ಯೆನುತ ಕಿಡಿ
ಯಲ್ಲೊಗುವ ಕೋಪದಲಿ ಖಳಪತಿ ಬೆಸಸೆ ಭಟನಿಕರ
ಘಲ್ಲಿಸಿದರೀತನನು ಘಾಡಿಯ
ಘಲ್ಲಣೆಯ [3]ಘಾಯದಲಿ[3] ಹನುಮನು
ಹುಲ್ಲಕಡ್ಡಿಗೆ [4]ಬಗೆಯ[4]ದಿರ್ದನು ನಿಖಿಳಕೈದುಗಳ ೨೦

ಸೈರಿಸಿರೊ ಹೊಯ್ಯದಿರಿ ಹೋ ಹೊ ವಿ
ಚಾರವುಂ[5]ಟಿವನೆಲ್ಲಿಯವನಿವ[5]
[6]ಗಾ[6]ರೊಡೆಯ[7]ರೆಮ್ಮಾ ಪುರಕ್ಕಿವ[7] ಬಂದ ಕಾರಿಯದ
ಕಾರಣವ ಬೆಸಗೊಂಬೆವೆಂದು ಚ
ಮೂರಮಣನನುಚರರ ಜಱೆದು ಸ
ಮೀರಜನ ನೀನಾರಬಂಟನೆನುತ್ತ ಬೆಸಗೊಂಡ ೨೧

---

[1] ಕಲಿಹನುಮ (ಕ.ಝ.ಟ.ಡ), ಪವನಸುತ (ಜ), ಹನುಮಂತ (ಣ). [2] ನಿಱಿ ತರಿ ಕಡಿ (ಕ.ಗ), ಗಳ ಮುಱಿ ಕೊಱೆ (ದ), ತೆಗೆ ತರಿ ಕಡಿ (ಣ). [3] ಖ್ಯಾತಿಯಲಿ (ಗ), ಖಾತಿಯಲಿ (ಚ). [4] ಗಣಿಸ (ಕ.ಝ.ಟ). [5] ಟಿವನೆಲ್ಲಿಯವನಿಟಿ (ಗ), ಟಿವನಲ್ಲಿ ಯವನಿನ (ಚ), ಟಿವನಲ್ಲಿ ಮೇಣಿವ (ಝ), ಟಿವನಲ್ಲಯೆಮಗಿವ (ಡ). [6] ದಾ (ಚ). [7] ನಮ್ಮಾ ಪುರಕೆ ನೀ (ಗ), ನಮ್ಮಾ ಪುರಕ್ಕಿವ (ಝ.ಡ.ಣ).

ನೋವು ಘನ ಮಾತಾಡಬಾರದು
ಜೀವ ಚಂಚಲವಾಗುತಿದೆ ಸ
ಜ್ಜೀವಿಗಳು ನಾವಾದರೈಸಲೆ ಮಾತು ಬಳಿಕೆಮಗೆ
ನಾವು ಮಾಡಿದ ಹೊಲ್ಲೆವಾವುದು
ನೀವು ನಮ್ಮನು ಕಟ್ಟಿ ಕೊಲುವುದಿ
ದಾವರಾಯರ ರಾಜಪದ್ಧತಿಯೆಂದನಾ ಹನುಮ ೨೨

ಮುಗುಳುನಗೆಯಲಿ ನಗುತ ಹನುಮನ
ಮೊಗದ ಮೋಡಿಯ ಧೂರ್ತವಚನದ
ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು
ವಿಗಡ[1]ಭಟನಿವ ಕುಟಿಲಶಾಖಾ[1]
ಮೃಗವಿವನು ನಾಡಾಡಿಕೆಯ ವನ
ಮೃಗದ ಪರಿಯಲ್ಲಿವನ ನುಡಿಸಿದು ನೋಡಬೇಕೆಂದ ೨೩

ತೋಳಕಟ್ಟೊಂದುಳಿಯೆ ಮಿಕ್ಕಿನ
ಕಾಲು ಕೈ ನಡು ತೊಡೆ ಕೊರಳ್ಗಳ
ಕಾಲಪಾಶದ ಕಟ್ಟ ಸಡಲಿಸಿ ಕೇಳೆ ಕಲಿಹನುಮ
ಹೇಳಬೇಕೇ ನಿಮಗೆ ಕಿವಿಗೊ
ಟ್ಟಾಲಿಸಾದಡೆ ನಿಮ್ಮ ರಕ್ಷಿಸು
ವಾಳುದನ ತಲೆಗೊಳಲು ಬಂ[2]ದನ ಭೃತ್ಯ ತಾನೆಂದ[2] ೨೪

ಆತನಾರೆನಲಹುದು ಕೇಳುವ
ರೀತಿ [3]ಲೇಸು ಪು[3]ಲಸ್ತ್ಯಕುಲಸಂ
ಭೂತ ಭೂಭಾರಕ ದಶಾನನನೊಬ್ಬನುಂಟು ಗಡ
ಆತನೊಡಹುಟ್ಟಿದ ಖರಾದಿ ಮ
ಹಾತಿಬಲಭಟರುಗಳನುಗ್ರಪ
ರೇತಪುರಿಗಟ್ಟಿದನನಱಿಯಾ ಕೇಳಿ ನೀನೆಂದ ೨೫

[1] ತನವವನು ನೋಡಿ ಬಲುಖಗ (ಗ), ತನವವನು ನೋಡಿ ಶಾಖಾ (ಚ). [2] ದಿಹ ದೂತರಾವೆಂದ (ಗ), ದನ ದೂತ ತಾನೆಂದ (ಜ.ಝ.ಡ). [3] ವಿಮಲಪು (ಕ.ಟ), ಯೆನುತ ಪು (ಗ), ಕೇಳ್ ಪೌ (ಣ).

ಮಾಯೆಯಲಿ ಸುಳಿದಸುರನಸುವನು
ಸಾಯಕದಲುಗಿದವನ ಬಲ್ಲೈ
ರಾಯಸಭೆಯಲಿ ರಾಜವ್ರಮೌಳಿಯ ಚಾಪದಲಿ ಸಿಲುಕಿ
ಸಾಯಬಗೆದವನನುಜೆಯಭಿಮಾ
ನಾಯತವ ಕೊಂಡವನ ಬಲ್ಲೈ
ಬಾಯಿಗುಱುಹಿನಲಾ ನರೇಂದ್ರನ ದೂತರಾವೆಂದ ೨೬

ಮಗುಳೆ ಮತ್ತೇನುಂಟು ಕೇಳುವ
ಸೊಗಸುವಾತುಗಳುಳ್ಳ[1]ದನೆ[1] ಹುಸಿ
[2]ಹೊಗದವೊಲು ಪೇಳಿದೆವು[2] ನಮಗಿದಕಂಜಲೇಕೆನಲು
ನಗೆಯ ನಸುಗೋಪದಲಿ ನವ್ಮಾ
ನಗರಕೇತಕೆ ಬಂದೆ ಹುಲುಗೋ
ಡಗವ ಕಳುಹಿದನೇನುಕಾರಣ ನಿನ್ನ ಪತಿಯೆಂದ ೨೭

ಆದಡೆಲವೋ ಕೇಳು ಶಿರವೀ
ರೈದರವನೀಪುರದರಸು ಗಡ
ಕಾದಲಱಿಯದೆ ಕಳವಿನಲಿ ಕುಂಭಿನಿಯನಂದನೆಯ
ಒಯ್ದ ಗಡ ನಾವಱಿಯೆವದ [3]ಬಳಿ
ಕಾ ದಿನೇಂದ್ರಕುಲೇಂದ್ರ[3] ತನ್ನ ತ
ಳೋದರಿಯನಱಿಯೆಂದು ಕಳುಹಲು ಬಂದೆವಾವೆಂದ ೨೮

ಎಲವೊ ನೀನಾ ಸತಿಯ ಕಂಡಾ
ಕಲಹಮುಂಚಿತ ಕಂಡೆ[4]ನಲ್ಲದೆ[4]
ಗಲಭೆಕಾಱರು ಘಾಸಿಮಾಡಿದರಣಕಸಣಕದಲಿ
ಬಳಿಕ ಕೈಮೈಸೋಂಕಿಗಾಱದೆ
ಸಿಲುಕಿದೆವು ಸೋಲದಲಿ ಬಂಧನ
ಕೊಳಗು[5]ಗೊಟ್ಟಿತು[5] ವಿಧಿ ಪುರಾಕೃತವಾರವಶವೆಂದ ೨೯

---

[1] ಡದ (ಚ), ಡೆನೆ (ಜ), ದೆನೆ (ಟ), ವೆನೆ (ಚ). [2] ಹೊಗದವ್ರೊಲು ಹೇಳಿದೆವು (ಗ.ಜ.ಝ.ಡ.ಣ), ಹೊಗದೆ ಪೇಳಿದೆವಾವು (ಬ). [3] ನೆಂದಾ ದಿವಾಕರಕುಲಜ (ಕ), ನಾನಾದಿನೇಂದ್ರಕುಲೇಂದ್ರ (ಟ.ಣ). [4] ವಲ್ಲದೆ (ಕ.ಗ.ಟ), ಯಲ್ಲದೆ (ಡ), ವಗ್ಗದ (ಣ). [5] ಮೂಡಿತು (ಚ.ಟ).

* ಬಟ್ಟೆದೆಗೆಡೆವು ನಿಮ್ಮ ರಕ್ಕಸ
[1]ಘಟ್ಟೆಯರ[1] ಗಾಢಣೆಗೆ ಸ್ಯೆರಿಸ
ದಟ್ಟಿ ಹಿಡಿದರು ಹಿಡಿದು ಸದೆಬಡಿದೆಮ್ಮನೀಪರಿಯ
ಕಟ್ಟಿ ತಂದರು ನಾವು ಲೋಗರ
ಬಟ್ಟೆಯವರೇ ದಿಟ ವಿಚಾರಿಸಿ
ಬಿಟ್ಟರೆಯು ಬಿಡಿ ಬಿಡದೆ ಕೊಲುವರೆ ಕೊಲ್ಲಿ ನೀವೆಂದ ೩೦

ಆಗಲಿದ್ದುದು ನಮಗದೃಷ್ಟದ
ಭೋಗವಿನಿತಿದನೊಲ್ಲೆವೆಂದಾವ್
ನೀಗಲಳವೇ [2]ಹಲುಬಿ[2] ಮಾಡುವುದೇನು ನಾವಿನ್ನು
ಆಗಲದಕೇನುಸುರು ಬದುಕಿ
ದಾರ್ಗಲಾಳ್ದನ ಹಗೆಯ ಹವಣಿನ
ಮೈಗುಱುಹ ನಾವಱಿಯೆವಾತನ ತೋಱು ತನಗೆಂದ ೩೧

ತೋಱಬೇಕೇ ನಿನಗೆ ಕರುಣವ
ತೋಱಬೇಕಾದರೆಯೆನುತ್ತವೆ
ತೋಱಿಸಿದನಾ ಸಚಿವಪತಿ ಸುರರಾಜದಲ್ಲಣನ
ತೋಱಿಸಲು ತಲೆದೂಗಿ ನಸುನಗೆ
ದೋಱಿಕೆಯ ನಯನಾಗ್ರದುಗ್ರದ
ಬೀಱಿಕೆಯಲೀ ಮಾತ[3]ನಾಡಿದನಾ[3] ಪ್ರಹಸ್ತಂಗೆ ೩೨

ಆಯತಾಕ್ಷಿಯ ತಂದ ರಕ್ಕಸ
ನಾಯನೇತಕೆ ಕಾಕತಾಳಿ
ನ್ಯಾಯದಿಂದವೆ ಕಂಡೆವೈ ಶಿವಶಿವ ಮಹಾದೇವ
ಆಯಸದ ಕತ್ತಲೆಗೆ ಕಂದೆಱ
ವಾಯಿ[4]ತಿನ್ನಾವ್[4] ಧನ್ಯರಬುಜದ
ಳಾಯತಾಕ್ಷನ ಪಾದಸೇವೆಯಲೆಂದನಾ ಹನುಮ ೩೩

---

[1] ಟ್ಟಣೆಯ (ಚ.ಟ). [2] ಮಱುಗಿ (ಕ.ಜ.ಡ.ಣ). [3] ನೆಂದನು ಕಲಿ (ಕ.ಗ.ಣ), ನಾಡಿದ ಕಲಿ (ಚ). [4] ತಿದು ನಾವ್ (ಕ.ಚ).

* ‘ಕ’ ಪ್ರತಿಯಲ್ಲಿ ೩೦ನೆಯ ಪದ್ಯವಿಲ್ಲ.

ಎಲವೊ ರಾವಣ ತೋಱುವೀ ಜಗ
ದಳಿವುಪರಿಯಂತರ ನಿರರ್ಥಕೆ
ಘಳಿಸಿಕೊಂಡೆಯಲಾ ಮಹಾಂಧತಮೋನಿವಾಸಕವ
ಕಳವಿನಲಿ ಕಾಕುತ್ಸ್ಥಭೂಪನ
ಲಲನೆಯನು ತರಲಹುದೆ ಹೋಗೆಲೆ
ಹೊಲೆಯ ಸುಡು ಸುಡು ನಿನ್ನ ಮೋರೆಯ ನೋಡುವರೆಯೆಂದ ೨೪

ಕಂಡು ಸೈರಿಸಿ ಬಿಡುವುದಕಟಾ
ಭಂಡತನ ಬಲುವೀರರಿಗೆ [1]ಹಿಡಿ[1]
ಖಂಡಗೊಯ್ಯಲು ಬೇಕು ಬಲ್ಲಡೆ ಶಾಸ್ತ್ರಸಿದ್ಧವಿದು
ಭಂಡತನವಾಯ್ತೇನಮಾಡುವೆ
ಗಂಡುಗಲಿ ರಾಮನಲಿ ನೇಮವ
ಕೊಂಡು ಬಾರದೆ [2]ಕೋ[2]ಳುವೋದೆನೆನುತ್ತ ಹಲುಮೊರೆದ ೨೫

ಜಳ್ಳುರಕ್ಕಸನಿವನನೀ ಹೆಂ
ಗಳ್ಳನನು [3]ಸಂತಾಪಿಸುವ[3] ರಣ
ಗಳ್ಳನನು ಗತಿಗೇಡುಗನನೀ ದ್ರೋಹಿ ರಕ್ಕಸನ
ಎಳ್ಳನಿತು ಕಡಿಖಂಡಮಾಡಿಯೆ
ಹೊಳ್ಳುವಾರಿಸಲೂದುವೆನು ಕೈ
ಕೊಳ್ಳದಾದೆನು ಬರುತ ನೇಮವನಕಟ ತಾನೆಂದ ೨೬

* ತೋಱುವೀ ಸಂದಣಿಯ ಸಾಲಿನ
ಮೋಱೆಗಳ ಮೀಸೆಗಳ ಗಡ್ಡವ
ಕಾಱುಿಡಲು ಸುಡಬೇಕು ಬಲ್ಲರೆ ಕೊಯ್ದು ಖಂಡಗಳ
ಬೀಱುಬೇಕಕಟಕಟ ಸೈರಣೆ
ದೋ[4]ಱುವು[4]ದು ಕಡುಹೀನ ತನಗೆನು
ತೇಱುಿಸಿದ ಕಡುಗೋಪದಲಿ ಹಲುಮೊರೆದೆನಾ ಹನುಮ ೨೭

ಎಲವೊ ನಿನ್ನೀ ಪುತ್ರ ಮಿತ್ರಾ
ವಳಿಸಹಿತ ನಿನ್ನೀ ತ್ರಿಕೂಟಾ
ಚಲಸಹಿತ ನಿನಗೊಸೆದು ಸೇರಿದ ಸಕಲ ಸಿರಿಸಹಿತ

---

[1] ಕಡಿ (ಕ.ಜ.ಝ). [2] ಕಾ (ಕ), ಬೇ (ಜ.ಡ.ಣ). [3] ಸಂಪಾದಿಸುತ (ಕ.ಟ.ಣ), ಸಂಪಾತಿಯಲಿ (ಗ.ಝ). [4] ಱುತಿ (ಚ.ಜ.ಡ).

* ಕ.ಟ.ಣ ಪ್ರತಿಗಳಲ್ಲಿ ೨೮ನೆಯ ಪದ್ಯವಾದಮೇಲೆ ೨೭ನೆಯ ಪದ್ಯ ಬಂದಿದೆ.

ಕಲಕುವೆನು ಕಡಲೊಳಗೆ ತಪ್ಪಿದ
ಕೆಲಸಕಿನ್ನೇನೆಂದು ಹಲುಮೊರೆ
[1]ದುಲಿದು[1] ಹೂಂಕೃತಿಗೈದು ಕಿಡಿಕಿಡಿಯೋದನಾ ಹನುಮ ೩೮

ಇವನ ನುಡಿಸಿದಡೇನು ಹುರುಳಿ
ಲ್ಲವನನೊಯ್ದು ನಿಕುಂಭಿನಿಯ ನಿಜ
ಭವನದಿದಿ[2]ರಿನ[2] ಶೂಲದಲಿ ಸೆಳಸೆಂದು ತನುಜಂಗೆ
ದಿವಿಜರಿಪು ನೇಮಿಸಲು ಪುಣ್ಯ
ಶ್ರವಣವೀರವಿಭೀಷಣನು ಬಳಿ
ಕವಿ[3]ರಳ[3]ಕ್ರೋಧಂಗೆ ಕೈಮುಗಿದೆಂದನೀ ಹದನ ೩೯

ಚರರು ಮಾಡುವುದಾವುದಾಳ್ದನ
ನಿರತಿಶಯವಿಕ್ರಾಂತಲಕ್ಷ್ಮಿಯ
ಸಿರಿಯನಗ್ಗದ ಸುಪ್ರತಾಪವ ಹೊಗಳುವುದೆ ಸಹಜ
ಅರಿವಿರೋಧಕೆ ದೂತಹಿಂಸಾ
ಚರಣೆ ಚದುರೇ ರಾಯರಿಗೆ ತರು
ಚರವಧಾ ಪರಿಸಮಯ ಪರಿಹಾಸಕವಲೇಯೆಂದ ೪೦

ಆದಡೀ ಕಪಿವರನ ಕಿವಿಗಳ
ಕೊಯ್ದುಬಿಡಿ ಭಂಗಸ್ಫುರದ ಸಂ
ಪಾದನೆಯ ಸೂರ್ಯಾನ್ವ[4]ಯಂಗೆಚ್ಚಱಿಸಲಿವನೆನಲು[4]
ಮಾದುದಾ ಕೊಲೆ ಕಪಿವರನ ಕಿವಿ
ಗೊಯ್ದು ಚಾಚಿದ ಖಡ್ಗವಿಕ್ಕಡಿ
ಯಾದುದಲ್ಲದೆ ಹಱಿದುದಿಲ್ಲನಿಲಜನ ರೋಮಚಯ ೪೧

ಬೆಱಗುಗೊಂಡಸುರೇಂದ್ರ ಮೂಗಿನ
ಬೆರಳಲಿರೆ ಬಳಿಕಾ ಪ್ರಹಸ್ತನು
ಕಿಱುನಗೆಯ ಕೇವಣಿಸಿ ನುಡಿದನು ರಾಮಭೃತ್ಯಂಗೆ
ಉರುವ ನಮ್ಮಾ ಬನವನೇತಕೆ
ಮುಱಿದೆಯೆನೆ ಕಪಿಮುಚ್ಚಿ ನಾವಿದ
ನಱಿಯೆವೀ ಹುಲುಬಾಲವೆಸಗಿದ ಕೆಲಸವೈಸೆಂದ ೪೨

---

[1] ದೊಳಗೆ (ಗ), ದಳಲಿ (ಜ.ಡ). [2] ರಲಿ (ಕ.ಗ.ಝ.ಣ). [3] ನಯ (ಗ.
ಟ.ಣ). [4] ಯಗೆ ತೋಱಿಸಲಿಯಿವನೆನಲು (ಕ), ಯಂಗೆಚ್ಚಱಿಸಲೀಹದನ (ಗ).

ಇವನ ಸಮ್ಮತವಲ್ಲ ಗಡ ತ
ದ್ವ್ಯವಹರಣೆ ಲಾಂಗೂಲದಲಿ ಸಂ
ಭವಿಸಿದುದು ಗಡ ಕಡಿಯಲಸದಳವಾದಡಗ್ನಿಯಲಿ
ನಿವಸನದಲೆಣ್ಣೆಯಲಿ ಹರುವನು
ಹವಣಿಸುವುದೆನೆ ತಪ್ಪದೆಂದಾ
ದಿವಿಜಪತಿಜಿತು ಬಿನ್ನವಿಸಿದನು ರಾಕ್ಷಸೇಂದ್ರಂಗೆ ೪೩

ಹೋರಬೇಡಿದರೊಡನೆ ಶಸ್ತ್ರದ
ಗಾರುಡವು ಗರ್ವಿಸದು [1]ಬೆವರದು[1]
[2]ಭೂ[2]ರಿಬಾಧೆಗೆ ಬಾಲವನು ಸುಡುವುದೆ ಸುನೀತಿಯೆನೆ
ಭೂರಿಬಲ ಬಾಲದಲಿ ಹೆಣಗಿದು
ಹೋರಿ [3]ಬಳಲಲು ಬಳಿಕಲಾ ಶ
ಕ್ರಾರಿ[3] ಕೈದೀವಿಗೆಗಳಿಂದಿರಿಸಿದನು ಕಪಿವರನ ೪೪

ಚೀಱಿ ಕಿಱುಕಿಱುಗುಟ್ಟುತಟ್ಟುಳ
ವಾಱಿಬಿದ್ದನು ಹಲುಗಿರಿದು ಹು
ಬ್ಬೇಱಿಸುತ ಹಣುಗುತ್ತ ಹೆದಱುತ ತಲೆಯ ಚಟ್ಟಿ[4]ಕ್ಕಿ[4]
ತೋಱಿಸಿದ ದೀವಿಗೆಗೆ ಕರುಣವ
ತೋಱುತಿತ್ತನು ಬಾಲವನು ನಗೆ
ಗಾಱರಿಗೆ ನಾಟಕವ ನಟಿಸುತ ವೀರಹನುಮಂತ ೪೫

ಭಾವ ಸಿಕ್ಕಿದನೆಂದು ಸಭೆಯ ವಿ
ಭಾವರೀಚರರುಬ್ಬಿ ನಗೆಯಲಿ
ಪಾವಮಾನಿಯು ಮುಕ್ಕುಱಿಕ್ಕಿದರಳ್ಳೆಗುಕ್ಕಿನಲಿ
ತೀವಿದತಿಶಯ ರೋಷದಿಂದಾ
ರಾವಣನು ಬೆಸಸಿದನು ಬಳಿಕ[5]ಸು
ರಾ[5]ವಳಿಗೆ ಸುಡಿ ಕಪಿಯ ಬಾಲವನೆಂದು [6]ಸಭೆಯೊಳಗೆ[6] ೪೬

---

[1] ಬೆದಱಿದು (ಕ.ಝ.ಟ), ನೆರವಿದು (ಜ.ಡ). [2] ಭಾ (ಗ.ಜ.ಝ.ಡ).
[3] ಬಳಲಿದು ಬಳಿಕಲಾ ಶಕ್ರಾರಿ (ಕ.ಡ), ಸಾಯಲುಬೇಡವೆಂದಿಂದ್ರಾರಿ (ಚ).
[4] ಸುತ (ಗ.ಚ). [5] ಭಟಾ (ಗ.ಟ). [6] ನೇಮಿಸಿದ (ಗ.ಚ).

ಅಡಸಿ ಬಳಿಕಐವತ್ತುಸಾವಿರ
ದಡಿಗರಕ್ಕಸರನಿಲಜನ ಬಲು
ಗಡಿಯ ಬಾಲವನುಗಿದರಾ ಲಯದಹಿಯನುಗಿವಂತೆ
ಝಡಿದು ತೈಲದಲದ್ದಿ ಸೀರೆಯ
ನುಡಿಸಲುದ್ಯೋಗಿಸಿದರೈ ಜಗ
ದೊಡೆಯ ತೊರವೆಯರಾಯ ನರಕೇಸರಿಯ ಕಿಂಕರನ ೪೭

---

# ಎಂಟನೆಯ ಸಂಧಿ

---

ಸೂಚನೆ : ತ್ರಿಪುರದಹನದ ಭಾಳಲೋಚನ
ನುಪಮೆಗ್ಯವಡಿಯೆನಲು ಮಾರುತಿ
ವಿಪುಳವಹ್ನಿಯ ವದನದಲಿ ನೂಕಿದನು ರಿಪುಪುರವ

ಕೇಳಿದೈ ಕುಶ ಕಲ್ಪಿತೋಗ್ರಕ
ರಾಳಕಾಯದ ಕಪಿಯ ಕರ್ಬುರ
ರಾೞುಗಳು ಕೈಮಾಡಿ ಕೈದೀವಿಗೆಗ[1]ಳೊಗ್ಗಿ[1]ನಲಿ
ಬಾಲವನು ಬರಸೆಳೆದು ಧಾರೆಯ
ತೈಲದದ್ದುಗೆಯಱುವೆಗಳಲು
ಬ್ಬಾಳುಗಳು ಸುತ್ತಿದರು ಸೂರ್ಯಾನ್ವಯನ ಕಿಂಕರನ ೧

ಸುತ್ತ ಸುತ್ತಲು ಬೆಳೆವುತಿರ್ದುದು
ಹತ್ತು ನೂಱಿನ್ನೂಱು ತದ್ದ್ವಿಗು
ಣೋತ್ತರದ ಪರಿವಿಡಿಯ ಪರಿವೃದ್ಧಿ[2]ಯಲ[2] ಸೀರೆಗಳ
ಸುತ್ತುತಿರ್ದರು ಬೆಳೆವುತಿರ್ದುದು
ಹೊತ್ತುಹೊತ್ತಿಗೆ ನೋಡನೋಡಲು
ತುತ್ತಿದುದು ಕಂಗಳಿಗೆ ಕೌತುಕವಸುರವಲ್ಲಭನ ೨

ತಿದ್ದಿ ಮೀಸೆಯ ಮುರುಹಿ ರಕ್ಕಸ
ನೆದ್ದು ನಿಂದಿದ್ದನುಚರರ ಬಿಡ
ದದ್ದಲಿಸೆ ತಂದೊಟ್ಟಿದರು ಗತಜೀರ್ಣವಸ್ತ್ರಗಳ
ಅದ್ದಿ ತೈಲದಲಱುವೆಗಳ[3]ನು[3]
ಬ್ಬೆದ್ದು ಸುತ್ತಿದರನಿಲಜನ ಹೊಱ
ಬಿದ್ದ ಬಾಲವ[4]ನೊದೆದೊದೆದು[4] ಹುರಿಕಟಿಸಿ ಖಳನಿಕರ ೩

ತೀರತೀರ[5]ಲಿಕೊಟ್ಟುತಿ[5]ರ್ದರು
ಭಾರಸಂಖ್ಯೆಯ ಬಣ್ಣ ಬಿಳಿದಿನ
ಸೀರೆ [6]ಬುದ್ದಣಿ ಹಾಡಪಕ್ಕಲೆ ಕಂಬಿ[6]ಗಳ ಕೊಡನ

---

[1] ಳಳುಕಿ (ಕ.ಗ.ಟ.ಣ). [2] ಗಳ (ಗ.ಚ.ಟ). [3] ಲು (ಗ.ಚ.ಣ). [4] ಹಿಡಿದೊಡನೆ (ಗ), ನುಗಿದುಗಿದು(ಝ). [5] ಲು ಕೊಡುತಲಿ (ಗ), ಲು ಕಟ್ಟುತಿ (ಜ), ಲು ಕೊಟ್ಟುತಿ (ಡ). [6] ಗಳದ ವಿಹಾರಪಕ್ಕಲೆ ಕಂಬಿ (ಗ), ಗಳ ಪಕ್ಕಲೆಯ ಕಂಬಿಯ ಹಾಡ (ಚ), ಗುದ್ದಲಿ ಹಾರೆ ಪಕ್ಕಲೆ ಕಂಬಿ (ಝ.ಡ).

ಧಾರೆಗಳ ಘೃತ ತೈಲ ಬಸೆಗಳ
ಸಾರ ಕಟ್ಟಿತು ತೋದು ಸುತ್ತುವ
ಭೂರಿರವ ಹಿಗ್ಗಿಸಿತು ಹನುಮನ ಹೇಳಲೇನೆಂದ ೪

ತರತರದ ಕೊಪ್ಪರಿಗೆಗಳು ಸಾ
ಸಿರದ ಸಂಖ್ಯೆಯಲಿಳುಹಿದವು ಸುರಿ
ಸುರಿವ ತೈಲತಟಾಕ [1]ಜೀರ್ಣದ ವಸನವಪರಿಮಿತ[1]
ಹರಿಪದಾಬ್ಜಪರಾಗಮುದಮಧು
ಕರನ ಮಹಿಮೋನ್ನತನ ಬಾಲದ
ಹರಹಿನಲಿ ಹಿಂಗಿದವು ಹವಣಿಸದಾಯ್ತು ಲಾಂಗೂಲ ೫

ಧರಣಿಜಾಸುತ ಕೇಳು ಮೂರ್ಖರ
ಗುರುವಲಾ ಛಲಪದಪರಿಗ್ರಹ
ದುರುಳ ದುರ್ನೀತರಿಗೆ ಕರ್ತೃವಲಾ ದಶಗ್ರೀವ
ಪುರದ ಹನನವು ಪುರದಹನನಿಂ
ದೊರಕುವುದಲಾಯೆಂಬ ಬುದ್ಧಿಗೆ
ಬರಡನಾಗಿ ಬಳಿಕ್ಕ ರಕ್ಕಸರಾಯನಿಂತೆಂದ ೬

ಒಡೆಯಿರೋ ಕಣಜಗಳನೆಣ್ಣೆಯ
ನಡಕಿರೋ ಸೀರೆಗಳ ದಿಂಡನು
ಬಿಡಿಸಿರೋ ತೋದುಡಿಸಿರೋ ತಡವೇನು ಬೇಗೆನುತ
ಝುಡಿಯೆ ಝುಡಿತೆ[2]ಗಳಿಂದ[2] ರಕ್ಕಸ
ರಡಕಿ ತೈಲಾಂಬರದಲೀತನ
ನಿಡಿಯಬಾಲವ ಸುತ್ತುತಿರ್ದರು ಲಕ್ಕಸಂಖ್ಯೆಯಲಿ ೭

ಎಡೆಗೆಡೆಗೆ ಹತ್ತಿಗಳ ಹೊಱೆಗಳ
ಹೊಡಚಿದರಳೆಯ ಸುತ್ತಿದರು ಮು
ತ್ತೆಡೆಯೆಡೆಗೆ ಪುಡಿಯರಗು ಸಜ್ಜರಸಾದಿಧೂ[3]ಸರದ[3]
ಹೆಡಗೆಗಳ ಹೊಯ್‌ಹೊಯ್ದು ಹೊಱದೆಡೆ
ಯೆಡೆಗೆ ಬಸೆಗಳ ಬಳಿದು ಬಾಲವ
ಬಿಡದೆ ಸುತ್ತಲು ಬೆಳೆವುತಿರ್ದುದು ಮತ್ತೆ ಲಾಂಗೂಲ ೮

---

[1] ದೀಪ್ತಿನಿವಾಸವಪರಿಮಿತ (ಕ.ಟ.ಣ), ಗಳಲದ್ದಿದರು ವಸನವನು (ಗ).
[2] ಯಱೈದಿ (ಚ). [3] ಪಗಳ (ಜ.ಝ.ಟ).

ತೀರಿದವು ಹಳೆಸೀರೆ ವಸ್ತ್ರಾ
ಗಾರದಖಿಳಾಂಬರದ ಹೊಱೆಗಳ
ಸಾರ ಸವೆದವು ಸವೆದವಸುರರ ಕಣಜ [1]ಕೊ[1]ಟ್ಟಿಗೆಯು
ಮೇರೆಯಿಲ್ಲದ ತೈಲ ಘೃತ ಬಳಿ
ಕೂರಹರದರ ಹಾರುವರ ಬೇ
ಹಾರಿಗಳ ಬಲುಸೂಱೆಯಾದುದು ಕೇರಿಕೇರಿಯಲಿ ೯

ದೊರೆದೊರೆಗಳರಮನೆಯ ಮಂತ್ರೀ
ಶ್ವರರ ಮಂದಿರ[2]ದ[2]ರಸುಮಕ್ಕಳ
ಪರಿಸರದ ನಿಳಯಂಗಳಾಪ್ತನಿಯೋಗಿಪರಿಜನದ
ಪುರಜನದ ಸಂಚಿತದ ವಸ್ತ್ರಾ
ಕರುಷಣವು ಬಳಿಕಾಯ್ತು ಲಂಕಾ
ಪುರದ ಗಾವಳಿ ಗುಡಿಯಿಱಿದು ಗಾಡಿಸಿದುದಗಲದಲಿ ೧೦

ಅಂಗಡಿಯ ಗಾಣಿಗರ ವಣಿಜಗೃ
ಹಂಗಳೂರೊಳಗುಳ್ಳ ಕುಸುಬೆ ಕ
ವುಂಗು ಬೇವವುಡಲಿಕೆ ಹುಲಿಗಿಲು ತಾರೆಯುಗಸೆಗಳ
ತೆಂಗು ಸಾಸುವೆಯಿಪ್ಪೆ ಗೇರು ವಿ
ಳಂಗವಂಕಲೆ ಮುಖ್ಯತೈಲದ
[3]ಸಂಗುಡಿಯು[3] ಸಂವರಣೆ ಸವೆ[4]ದವು[4] ಕಪಿಯ ಬಾಲದಲಿ ೧೧

ಹೊಳಲ ಧನಿಕರ ಧಾರ್ಮಿಕರ ಮನೆ
ಗಳಲಿ [5]ದೊರೆಗಳ ಭವನ[5]ವಸನಗ
ಳುಳಿದುದಿಲ್ಲವರವರ ಗೃಹ [6]ಘೃತ ತೈಲವನಿತ[6]ನಿತು
ಬಳಿದು ಬಂದುದು ಜೀಯ ಬಾಲದ
ಬೆಳವಿಗೆಗೆ [7]ಬಿಡುವಿ[7]ಲ್ಲವೆನೆ ಖಳ
ತಿಲಕ ತರಿಸಿದನಂಬರವನಂತಃಪುರೀಜನದ ೧೨

ಬೆಳೆವುದವುರಿದ ಸೀರೆ ಹಿಂದ
ಕ್ಕುಳಿಯಲದಕೋರಣಿಸಿ ಮುಂದ
ಗ್ಗಳಿಸಿಹುದು ಬಳಿಕನಿತಕೊದಗಿಸೆ ಮತ್ತೆ ಹೊಡಕರಿಸಿ

---

[1] ಪೆ (ಚ.ಡ). [2] ವ (ಕ.ಚ). [3] ಸಂಗಡಿವ (ಚ.ಟ). [4] ದುದು (ಚ.ಡ). [5] ಮಲಿನದ ವಸನ (ಗ), ಮಲಿನ ನವೀನ (ಜ), ನವೀನಮಲಿನ (ಝ.ಟ). [6] ದಲ ತೈಲವಿನಿತಿ (ಚ), ಘೃತತೈಲವೆನಿತೆ (ಗ.ಝ). [7] ಕಡೆಯಿ (ಕ.ಣ).

ಪೊಳೆತಿಹುದು ಘುಸುಕಲ್ಕನಿತ ಪೆ
ಗ್ಗಳಿಸಿಹುದು ಮಣಿಸಲ್ಕನಿತ ಮುಂ
ಕೊಳಿಸಿಹುದು ಬಲುಬಾಲದಂಡ ಸಮೀರನಂದನನ* ೧೩

*ಕಾಣಬರುತಿದೆ ಬಾಲ ಬಿಲ್ಲಪ್ರ
ಮಾ[1]ಣಿನಷ್ಟಡಗದಿದೆ[1] ಪುರ ನಿ
ರ್ವಾಣದಲಿ ನಿಲಿಸಿದವು ನಿನ್ನ ಕುಮಾರವರ್ಗಗಳ
ರಾಣಿಯರು ಸಹಿತಿನ್ನು ಯುಕ್ತಿಯ
ಕಾಣಿವೆನಲತಿಮೂರ್ಖನಾ ಮುಂ
ಗಾಣದವ ನೀಗಿದನು ತನ್ನಮಲಾಂಬರವನುರಿಗೆ ೧೪

* ಪಟ್ಟೆ ಪಟ್ಟಾವಳಿಯ ಸುರಪತಿ
ಕೊಟ್ಟ ಕೈಗಾಣಿಕೆಯ ಧನಪತಿ
ಮುಟ್ಟಿ ಹೊದೆಸಿದ ಚೀನಿ ಚೀನಾಂಬರವನಜ ಹರಸಿ
ಕೊಟ್ಟ ದಿವ್ಯದುಕೂಲಗಳ ಯಮ
ಕೊಟ್ಟ ಝಗೆಗಳ ವರುಣ ಕಾಣಿಕೆ
ಗೊಟ್ಟ[2]ರು[2]ಣವಸನಗಳ ಪೆಟ್ಟಿಗೆ ತೀರಿದವು [3]ಬಳಿಕ[3] ೧೫

ರಂಗು ಚಿತ್ರವಸಂತರತಿ ಸಾ
ಳಂಗ ಗುಜ್ಜರಿ ರತುನ ರವೆಯ ಭು
ಜಂಗವಲ್ಲರಿ ಪಲ್ಲವಾವಳಿ [4]ಮಕರಚಿತ್ರಲತೆ[4]
ಭೃಂಗಲತಿಕೆ ಸುವರ್ಣಫಳಿ ಮದ
ನಾಂಗ[5]ಲೇ[5]ಖೆ ಸು[6]ರಾಗ[6]ರಚಿತ ತು
ರಂಗ ವಿಲಸಿತ ವಸನ ಬಾಲಕೆ ಸೇರಿದವು ಕಪಿಯ ೧೬

ಹಳದಿ ಸಂಧ್ಯಾರಾಗ ಹರಿಣಾ
ವಳಿ ಹಯಾವಳಿ ಹಸ್ತಿ ಹರಿಮುಖ
ವಿಲಸಿತಾವಳಿ ವಿವಿಧಚಿತ್ರಲತಾಂತ ಲತಿಕೆಗಳ
ಫಳಿಸುರೇಖೆ ಮಯೂರಹಂಸಾ
ವಳಿ ಸುರಾವಳಿ ಮೇಘವಣ್ಣಿಗೆ
ಗಳ [7]ನವೀನದ ನಿವಸನಗಳೊಪ್ಪಿದವು[7] ಬಾಲದಲಿ ೧೭

---

[1] ಣಿನಷ್ಟರಗಡಿಗೆ (ಕ), ಣವಷ್ಟಡಗದಿದೆ (ಗ.ಜ). [2] ಗು (ಚ). [3] ಮುಂದೆ (ಚ). [4] ಪಚ್ಚೆ ವ್ಯೊಮಣಿವ (ಗ.ಜ.ಡ.ಣ). [5] ರೇ (ಕ.ಡ). [6] ರಂಗು (ಗ.ಚ), ರಾಂಗ (ಣ). [7] ನವೀನದ ವಸನವೊಪ್ಪಿತು ಕಪಿಯು (ಗ), ವಿವಿಧ ವಸನಂಗಳೊಪ್ಪಿತು ಕಪಿಯು (ಡ).

*ಝ.ಟ.ಡ.ಣ ಪ್ರತಿಗಳಲ್ಲಿ ೧೩, ೧೪ ಮತ್ತು ೧೫ನೆಯ ಪದ್ಯಗಳಿಲ್ಲ.

ಮಾದಳಿರು ಮಂಜಟಿಕೆ ಮಾಧವಿ
ಮೈದೊಡವ ಸಾವಂತ ಸೊಗಸಿನ
ಬೀದಿ ಬಿಳಿದೆಳೆಗಾವಿ ಸಂಪಗೆಗಾವಿ ತೆಳುಗಾವಿ
ಐದೆ ದೇಶಿ ಸರೋಜವಲ್ಲರಿ
ಪಾದಪಾವಳಿ ಪಟ್ಟೆಗಳು ಮೊದ
ಲಾದ ವಿವಿಧಾಂಬರಗಳೆಸೆದವು ಕಪಿಯ ಬಾಲದಲಿ ೧೮

ಗೌರಿಗಣೆಯ ಕುರಂಜಿ ಕುಂಕುಮ
ಪಾರನಾರಿ ಬೆಡಂಗು ಪರಸಿಂ
ಧೂರ ಮಂಜರಿ ಮನ್ಮಥಾವಳಿ ಮಕರಚಿತ್ರಲತೆ
ಚಾರುಚಾಪಲ ಚತುರತರ ಶೃಂ
ಗಾರನಾಯಕಿಯರ ನವಾಂಬರ
ಮಾರುತಿಯ ಬಾಲದಲಿ ಬೆಳೆದವು ಬಿಡದೆ ಬೆಂಬಳಿಯ ೧೯

ಬಿಳಿದು ಬೆಂಬಿಳಿದೆಳೆಬಿಳಿದು ಪೊ
ಪ್ಪುಳಿ ಪೊಸುರ್ವಡಿ ಪಟ್ಟೆ ಪಟ್ಟೆಯ
ಪಳಿ ಸುರಂಗ ಸು[1]ರಾಗ ಬೊಂಬೆಯ ಬಣ್ಣ[1] ಮೊದಲಾದ
ಹಲವು ದೇಶದ ದೇಶಿಯುದ ಭೂ
ತಳ ಭುಜಂಗಮ ಭುವನವೀಥಿಯ
ವಿಲಸದಂಬರವಿಂಬುಗೊಂಡುದು ಕಪಿಯ ಬಾಲದಲಿ ೨೦

ಉಡುವ ಸೀರೆಗಳುಳಿಯೆ ಬಂದವು
ಬಡ[2]ವು[2] ಬಿನುಗು ಸಮರ್ಥರೆನ್ನದೆ
ನುಡಿಯಲಮ್ಮೆವು ಜೀಯ ಮೊಱೆ ಬಲುಹಾದುದೂರೊಳಗೆ
ಬಿಡದು ಬೆಳವಿಗೆ ಬಾಲದಲಿ ನಿಲು
ಕಡೆ[3]ಗೆ[3] ಬುದ್ಧಿಯ ಕಾಣೆವೆನೆ ಕಾ
ಳ್ಗಿಡೆಯದೂರನು ಸುಲಿ[4]ಯಿ ಹೋಗೆಂದಸುರ ಘರ್ಜಿಸಿದ[4] ೨೧

ಕೇಳಿದನು ಹನುಮಂತನಾ ಕಡು
ಖೂಳರಕ್ಕಸನೆಂದ ಮಾತನು
ಕೇಳಿ ಕಿವಿಗಳ ಮುಚ್ಚಿಕೊಂಡನು ರಾಮರಾಮೆನುತ

---

[1] ರಾಂಗ ಬಿಂಬೆಯ ಬಾಣ (ಗ), ರಾಗ ಬೊಂಬೆಯ ಬಾಣ (ಚ), ಪಾಚಿ ಬೆಂಚಿಯ ಬಣ್ಣ (ಟ), ರಾಗ ಜೀಬಿಯ ಬಣ್ಣ (ಣ). [2] ವ (ಗ.ಡ), ಗು (ಚ.ಝ). [3] ಯ (ಗ.ಜ.ಟ.ಡ). [4] ದು ತಾ ಹೋಗೆಂದನಸುರೇಂದ್ರ (ಚ), ಯಿ ಹೇಳೆಂದಸುರ ನೇಮಿಸಿದ (ಜ.ಣ).

ಖೂಳನಿವ ತಾನಾದಡಾ[1]ವತಿ[1]
ಖೂಳರಹುದನುಚಿತವಲಾ ನಾವ್
ಹೇಳುವೆವು ಬಾಲಕ್ಕೆ ಬುದ್ಧಿಯನೆಂದನಾ ಹನುಮ ೨೨

ಭಂಡನಿವನೀ ಖಳನು ಲೋಕದ
ಭಂಡರಿಗೆ ಗುರು ನಾಣುನಸಿಕರ
ಚಂಡಿಯಿವನಲೆ ಬಾಲವೇ ಸಾಕಿನ್ನು ಬೆಳೆಯದಿರು
ಕಂಡವರನಿವ ಸುಲಿಯದಿರನೀ
ಭಂಡತನದವರಲ್ಲ ನಾವ್ ಕೈ
ಕೊಂಡ ಕೆಲಸದ ಕಡೆಯ ನಿನಗಿನ್ನಱುಹಲೇ[2]ನೆಂದ[2] ೨೩

ಇಳೆಯು ಲಲನಾಜನವೆನಗೆ ತಾ
ಯ್ಗಳು ಮರುಳ್ತನ ಬೇಡ ಬರಿದೇ
ಬೆಳೆಯದಿರು ಬೆಳಸದಿರು ನಮಗಪಕೀರ್ತಿಸಾಧನವ
ಹೊಳಲ [3]ಪುಣ್ಯಸ್ತ್ರೀಜನದ ನಾ
ಣಳಿಯ ಬಂದೆವ್[3] ಬಂದ ಕಾರ್ಯದ
ನೆಲೆಯ ನೀನೇ ನೋಡಿಕೋಯೆನೆ ನಿಂದುದಾ ಬಾಲ ೨೪

ಕಟ್ಟಿದೀ ಕೌಪಿದನು ಕಮಲಜ
ಕೊಟ್ಟನಿನಿತಕೆ ಪೂರ್ವಭವದಲಿ
ಕೊಟ್ಟು ಹುಟ್ಟಿದುದಿಲ್ಲವಾಗಿ ನಿದಾನವಿದು ನಮಗೆ
ನೆಟ್ಟನಾದಿಯಲಾವ ಸುಕೃತವ
ಮುಟ್ಟಿ ನೀ ಮಾಡಿದೆಯೊ ನಿನ್ನವೊ
ಲುಟ್ಟು ಮೆಱೆದವರಾರು ಸಾಕಿನ್ನಧಟುತನವೆಂದ ೨೫

ಸಂತವಿಸಿದುದು ಬಾಲ ಬಳಿಕಸು
ರಾಂತಕನ ನಿಜಚರನ ನೇಮದ
ಲಂತರಿಕ್ಷವನಳ್ಳಿಱಿದುದುದಿತಪ್ರತಾಪದಲಿ
ತಂತುಪಟ ಸಾಕಿನ್ನು ಬೆಳವಿಗೆ
ಗಂತವಾದುದು ಸುಲಿಯದಿರಿ ಹೋ
ಸಂತವಿಸಿಯೆಂದೊದಱಿದವು ಡಂಗುರಗ[4]ಳಲ್ಲಲ್ಲಿ[4] ೨೬

---

[1] ಗಲಿ (ಚ.ಡ). [2] ಕೆಂದ (ಚ.ಡ). [3] ಪೌರಸ್ತ್ರೀಯ ನಾಚಿಕೆಗೊಳಲು ಬಂದೆವೆ (ಗ), ಪುಂಸ್ತ್ರೀಜನದ ನಾಚಿಗೆಗೊಳಲು ಬೇಡೆನೆ (ಚ), ಪುಂಸ್ತ್ರೀಜನದ ನಾಚಿಕೆಗೊಳಲು ಬಂದೆವೆ (ಜ.ಟ.ಣ), ಪುಣ್ಯಾಜನದ ನಾಚಿಕೆಗೊಳಲು ಬಂದೆನೆ (ಝ.ಡ). [4] ಳಗಲದಲಿ (ಗ.ಜ.ಝ.ಟ.ಣ), ಳೂರೊಳಗೆ (ಡ).

ಕುಮತಿರಾವಣನೆದ್ದು ಬಳಿಕು
ಭ್ರಮಿನಿಶಾಟರ ಕರದು ನೇಮಿಸೆ
ನಿಮಿಷದಲಿ ಹತ್ತಿದರು ಹೊತ್ತಿಕ್ಕಿದರು ಹುತವಹನ
ಅಮರಿತುರಿ ಬಾಲದಲಿ ರಘುಭೂ
ರಮಣನನುಚರನಱಿಚಿ ಕೆಡೆಯಲು
ತಮತಮಗೆ ಘೊಳ್ಳೆಂದು ಗುಹಿಲಿಕ್ಕಿತು ಭಟಸ್ತೋಮ ೨೭

ಜಾಣನೈ ಶಕ್ರಾರಿ ವರ್ಮವ
ಕಾಣಿಸಿದನೀ ಕಪಿಗೆನುತ ಗೀ
ರ್ವಾಣರಿಪುವಡಬಿದ್ದು ತಂಬುಲಸೂಸಲೆಡಬಲಕೆ
ಗೋಣುಗಳನೊಱಗಿಸುತ [1]ನಗಲ[1]
ಕ್ಷೀಣಬಲನದ ಕಂಡು ಮನದಲಿ
ಮಾಣಿಸುವೆನೀ ನಗೆಯ ಸೈರಿ[2]ಸು ತವಕವೇಕೆಂದ[2] ೨೮

ಊರೊ[3]ಳೀತನ[3] ಮೆಱೆಸಿ ಮಹಿಜಾ
ನಾರಿ[4]ಗೀತನ[4] ತೋಱು ತಡೆಯದೆ
ವಾರಿಧಿಯ ಹೊರವಡಿಸಿಬಿಡಿ ತನ್ನೊಡೆಯನಿದ್ದೆಡೆಗೆ
ದಾರಿದೆಗೆಯಲಿಯೆಂದು ನಾರೀ
ಚೋರ ನೇಮಿಸೆ ಬಳಿಕ ಬಲ್ಲಿದ
ವೀರಭಟರೊತ್ತಾಗಿ ಹೊಱವಂಡಿಸಿದರನಿಲಜನ ೨೯

ಹಣೆಗೆ ಮಸಿಯನು ಬರೆದು ನಿಡುದಾ
ಸಣದ ದಂಡೆಯ ಹಾಯ್ಕಿ ಹಗ್ಗದ
ಕುಣಿಕೆಗಳ ಸರಿದೆರಡುಮೈಗಳಲುಬ್ಬಿ ಬೊಬ್ಬಿಱಿದು
ಕುಣಿಸಿ ಕೈಚಪ್ಪಳೆಗಳಲಿ ವೀ
ರಣ ಕೊಳಲ್ಕೊಂಬುಗಳ ಸಬುದದ
ಲಣಿಯರದಲನಿಲಜನ ತಂದರು ರಾಜಬೀದಿಯಲಿ ೩೦

ನೆರೆದುದೈ ನೋಟಕರು ನಗೆಗಳ
ಹೊರಳಿಗಳಲಂಗಡಿಯ ಹಸರದ
ಹುರಿಗಡಲೆ ಗುಡ ಹಣ್ಣು ಹಂಪಲುಗಳನು ಹಾಯ್ಕುತಲಿ

---

[1] ನಗುತ (ಗ), ನಗುವ (ಚ.ಡ). [2] ಸಿ ಬೇಗ ನೀವೆಂದ (ಗ), ಸು ಯೆಂದನಾ ಹನುಮ (ಡ). [3] ಳಿವನನು (ಕ.ಟ.ಚ). [4] ಗಿವನನು (ಕ.ಟ).

ನೆರೆನೆರೆದು ಕುಣಿದಾಡಿಸುತ ನಿಜ
ಪುರದ ಕಡೆಗೋಟೆಯ ಕವಾಟದ
ಹೊಱಗೆ ತಂದಲ್ಲಿಂದ ಬೊಬ್ಬಿಱದೆಬ್ಬಿದರು ಕಪಿಯು ೩೧

ಅಧಿಕಬಲ ನಸುನಗುತಲಲ್ಲಿಯೆ
ವಿಧಿಯ ಪಾಶವ ಹಱಿದು ಕೋಪದ
ಕದವ ಕಳಚಿದು ಕೆಕ್ಕಳಿಸಿ ಕೈಯಿಕ್ಕಿ ಪರಿಘದಲಿ
ನಿಧನಗೊಳಿಸಿದನೆಡಬಲದ ವೈ
ಬುಧವಿರೋಧಿಗಳನು ಬಳಿಕ್ಕರಿ
ವಧೆಗೆ ಹೇಸದೆ ಹನುಮ ತಿರುಗಿದನಟ್ಟುತರಿಬಲವ ೩೨

ತಿರುಹಿ ಬಾಲದ ಕೊನೆಯ ವಹ್ನಿಯ
ನುರಿಗೊಳಿಸಿ ಪುಟನೆಗೆದು ನಿಂದನು
ಸರಿಸದಲಿ ಸುರ ನರ ಭುಜಂಗವು ಭುವನದಲ್ಲಣನ
ಮರಳಿ ಬಂದುದೆ ಮಾರಿ ಕೊಯ್ದನು
ಕೊರಳನಿಂದ್ರಾರಾತಿಯೆನುತು
ಬ್ಬರದ ಭೀತಿಯಲೋಡಿದುದು ದೆಸೆದೆಸೆಗೆ ಪೌರಜನ ೩೩

ತರಣಿವಂಶಜ ಕೇಳು ಪವನಜ
ನುರವಣೆಗೆ ಸಭೆ ಬೆಚ್ಚಿ[1]ದುದು ದಶ
ಶಿರನು ಧೈರ್ಯೋತ್ಕರನು ಕೊಂಡನು ವೀರ[1]ಖಂಡೆಯುವ
[2]ಉರಿ ಬಲುಹು ನಮಗೆಲೆ[2] ವಿಭೀಷಣ
ತೆರಳು ಕೈತಪ್ಪುಹುದೆನುತ ಕಪಿ
ಕರದ ಖಂಡೆಯುದಸುರನಾನನಕೇಱಿಸಿದನುರಿಯ ೩೪

ಬೆದಱಿ ಬಳಿಕಸುರೇಂದ್ರ ಗಡ್ಡವ
ನದುರಿಸುತ ಗಗನಕ್ಕೆ ಹಾಯ್ದನು
ಹೊದಕೆಗಳ ಬಿಸುಟೋಡಿತಲ್ಲಿಯದಲ್ಲಿ ಭಟನಿಕರ
ತುದಿವೆರಳ[3]ಲು[3]ಬ್ಬಿಱಿದು ಕಪಿ ಕೈ
ಗುದಿಗೆಯಲಿ [4]ಬೆದಱಿಟಟ್ಟಿನ್ಪದು[4]
ಸದೆದು ಸುಳಿದನು ಮತ್ತೆ ರಕ್ಕಸರಾಯನರಮನೆಗೆ ೩೫

---

[1] ದುದು ದಶಶಿರನು ಕೊಂಡನು ವೀರಧೈರ್ಯೋತ್ಕರನು (ಕ), ಬೆದಱಿತು ದುರುಳದಶಶಿರ ಕೊಂಡನುರುತರಹಲಗೆ (ಗ). [2] ಹರಿಬ ಬಲುಹೆನಗೆಲೆ (ಕ.ಜ.ಟ.ಣ), ಹರುಬ ಬಲುಹೈಯೆಲೆ (ಗ), ಹರಿಬ ಬಲುಹೆಮಗೆಲೆ (ಝ). [3] ನು (ಕ), ಬೊ (ಝ.ಟ.ಣ). [4] ಕೆದೆಱಿಟ್ಟನ (ಗ.ಣ), ಕೆದಱಿಟ್ಟೆಯ (ಝ), ತೆಗೆದಿಟ್ಟನ (ಟ.ಡ).

ತುಱುಕಿದನು ತುದಿವಾಲದಗ್ನಿಯ
ನಿಱುಸಿನುದಿತಶಿಖಾಳಿ[1]ಯನು[1] ಬೊ
ಬ್ಬಿಱಿದು ಬರುಹಿರ್ಮುಖವಿರೋಧಿಯ ಭದ್ರಭವನದಲಿ
ಮೊಱೆಯ ಬಯ್ಗಳ ಬಾಯ ಹೊಯ್ಗಳ
ತೆಱದ ಮೇಲುದಿನಸುರರಾಯನ
ಕುಱುಹಿನರಸಿಯರಱಿಕೆಯಾಯಿತು ಪುರಜನಂಗಳಿಗೆ ೩೬

*ಬಾಲೆಯರ ನಿಡುಮುಡಿಯ ನೀರೊಱೆ
ವಾಲಿಗಳ ಕರತಳ[2]ದಿ ಜಠರವ
ಸೂ[2]ಳವಿಪ ಹಾಹಾರವದ [3]ಕಳಕಳದ ಕಳಕಳವ[3]
ಕೇಳಿ ಬಳಿಕಸುರೇಂದ್ರನಬಲಾ
ಜಾಲವನು ಪುಷ್ಪಕದೊಳಿರಿಸಿ ವಿ
ಶಾಲಬಲನನಿಲಜನ ಗರ್ಜಿಸಿ ನಿಂದನಿದಿರಿನಲಿ ೩೭

ಮಸಗಿ ಮಾಱಾಂತಸುರರಾಯನ
ಮುಸುಡುಗಳ ಮುಂಭಾಗದಲಿ ಜಾ
ಡಿಸಿದನುರಿಯ ವಿಮಾನದಗ್ರದಲಭ್ರಮಂಡಲಕೆ
ವಸತಿಯೆನಿತನಿತನು ಮಹಾಗ್ನಿಯ
ಬಸುಱೊಳಗೆ ಬೈಚಿಟ್ಟು ಬೊಬ್ಬಿಱಿ
ದಸಮಬಲ ತಿರುಗಿದನು ತಿರುಹುತ ಲಾಳವಿಂಡಿಗೆಯ ೩೮

ಗಗನದಲಿ ಬಳಿಕಸುರಪತಿ ಧಗ
ಧಗಿಪ ಕಿಚ್ಚನು ಕಂಡು ಬೆಚ್ಚಿದು
ಬೆಗಡಿನಲಿ ಬೆಸಸಿದನು ಬಳಿಸಂದಸುರಸಂಕುಲಕೆ
ತೆಗೆಯ ಹೇಳಿದು ಕುಂಭಕರ್ಣನ
ನಗಿವ ಬೊಬ್ಬೆಯಲಳವಿಗಳುಕದ
ವಿಗಡರಕ್ಕಸರೆಕ್ಕತುಳದಲಿ ಹೊಕ್ಕರುರವಣಿಸಿ ೩೯

ಮುಱಿದು ಬಾಗಿಲುಗಳನು ಸಂಧಿಸಿ
ಸಱಿಗ ರಕ್ಕಸಕಿಂಕರರು [4]ನೆಲ
ನಱಿಚೆ ಹೂ[4]ಣಿಸಿ ಹೊತ್ತರಸಿತಾಚಲವ ಹೊಱುವಂತೆ

---

[1] ಗಳ (ಗ.ಝ.ಟ). [2] ದ ವದನದಿ ರಾ (ಕ), ಧಿ ವದನವ ನೂ (ಝ).
[3] ಕಳಕಳದ ಕರಣದಲಿ (ಕ), ಮೊಱೆಯಿಡುವ ಕಳಕಳದ (ಝ). [4] ಬೊಬ್ಬಿಱಿದು ಮಾ
(ಕ), ಬೊಬ್ಬಿಱಿದು ಹೋ (ಝ), ನೆಲನಱಿಚೆ ಹವ (ಟ).
* ಗ.ಟ.ಣ ಪ್ರತಿಗಳಲ್ಲಿ ೩೭ನೆಯ ಪದ್ಯವಿಲ್ಲ.

ತೊಱೆದ ಜೀವದ ಹೆಣನ ನಗರದ
ಹೊಱಗೆ ಬಿಸುಡುವವೋಲು ಬಿಸುಟರು
ಮುಱಿಗೆಡೆದು ಖಳರೋ[1]ಡಲು ಪಲಂಕೆಯಲಿ ರಕ್ಕಸನ[1] ೪೦

ಎಡೆಯೆಡೆಗೆ ಮಾಱಾಂತು ತಱು[2]ಬಿದ[2]
ದಡಿಗರಕ್ಕಸಭಟರ ಬೀದಿಯೊ
ಳಡಸಿ ಸದೆವುತ ಸದನಸದನದೊಳನಿಲಬಾಂಧವನ
ಬಿಡಿಸುತತಿವೇಗದಲಿ ಕೋಪದ
ಕಿಡಿಯನುಗುಳುತ ಬಂದನಿಂದ್ರನ
ಹಿಡಿದುತಂದ ನಿಶಾ[3]ಚರನ ಮನೆಗಾಗಿ ಕಲಿಹನುಮ[3] ೪೧

ಕೆಡಹಿ ಕಟ್ಟಿದನೆಮ್ಮನೀ ಮನೆ
ಯೊಡೆಯನೀ ನಿಳಯವನು ಮೆಲ್ಲನೆ
ಸುಡಿ ಸಮಾಧಾನದಲಿ ನೀವೆಂದಗ್ನಿದೇವರಿಗೆ
ನುಡಿದು ಕೈಮುಗಿದವರನಲ್ಲಿಯೆ
ಬಿಡಿಸಿ ಮುಱಿದನು ಮೂಗಿನುಸುರಲಿ
ತೊಡಕಿ ತಾ ಸಿಕ್ಕಿದ ನಿಶಾಟನ ನಿಜನಿಕೇತನಕೆ ೪೨

ಈತ[4]ನೆಮ್ಮುವ ತನ್ನ[4] ಮೂಗಿನ
ಮಾತರಿಶ್ವನ ಬಿಱುಬಿನಲಿ ನೆಱೆ
ಧಾತುಗೆಡಸಿದ[5]ನಿವನು ಜಗಕತಿಬಲನಲಾಯೆಂದು[5]
ಭೀತಿಗೊಳ್ಳದೆ ಬೆದಱಿದಳುಕದೆ
ಕಾತರಿಸದನುಮಾನಿಸದೆ ಸಂ
ಪ್ರೀತಿಯಲಿ ಕೈಕೊಂಬುದೆಂದೊಳಪೊಗಿಸಿದನು ಶಿಖಿಯ ೪೩

ಬಳಿಕ ಶುಕ ಶಾರ್ದೂಲ ಸಾರಣ
ಕುಲಿಶ ದಂಷ್ಟ್ರ ಸುಪಾರ್ಶ್ವ ದುರ್ಮದ
ಖಳಶಿರೋಮಣಿ ಕುಂಭ ದೇವಾಂತಕ ನರಾಂತಕರ
ನಿಳಯ ನಿಳಯದಲಗ್ನಿದೇವರ
ಬೆಳವಿಗೆಗೆ ಬೆಸವೇಳ್ದು ಬಂದನು
ಕಲಿಲಲಾಮನು ಶೂರ್ಪಣಖಿಯ ನಿಕೇತನಾಂತರಕೆ ೪೪

---

[1] ಡಿತು ಪಲಂಕೆಯನು ರಕ್ಕಸರು (ಚ). [2] ಬುವ (ಕ.ಚ). [3] ಚರೇಂದ್ರನ ಸದನಕವನಂದು (ಕ), ಟನರಮನೆಗಾಗಿ ಕಲಿಹನುಮ (ಚ), ಚರೇಂದ್ರನ ಮನೆಗೆ ಕಲಿಹನುಮ (ಜ). [4] ನೆನ್ನನು ತನ್ನ (ಗ), ನೀಗೆಮ್ಮುವನು (ಚ.ಡ). [5] ನಿವನು ಜಗದತಿಬಲನಲೇಯೆಂದು (ಕ), ದನುಜ ಜಗಕತಿಬಳನಲಾಯೆನುತ (ಗ), ನಿವನು ಜಗಕತಿಬಲನಲೇಯೆಂದು (ಡ.ಣ).

ತಾನಿಡುವ ಕಿಚ್ಚಲ್ಲ ಮೊದಲೀ
ಕೈನೆಯಿಕ್ಕಿದ ಕಿಚ್ಚು [1]ವೈರ[1] ದ
ಶಾನನಂಗಿವಳಿಂದ ಬಂದುದು ಪೂರ್ವಕೃ[2]ತ್ಯದಲಿ[2]
ಈ ನರಕಿ ರಕ್ಕಸಿಯ ದೆಸೆಗನು
ಮಾನಿಸದೆ ಭವದುದರ ತೀವ್ರಕ್ಕೃ
ಶಾನುವಿಂಗಾಹುತಿಯ ಕೊಡಿ ನೀವೆಂದು ಕೈಮುಗಿದ ೪೫

ತಿರುಗಿ ಮನೆ ಮನೆಗಗ್ನಿದೇವರ
ನಿರಿಸುತತಿಕಾಯಪ್ರಹಸ್ತರ
ಕರೆದು ಹೊಱವಡಿಸುತ್ತ ಹೊಗಿಸುತ ಪರಮಪಿತೃಸಖನ
ಮುಱಿದು ಧೂಮ್ರಾಕ್ಷನ ನಿಕುಂಭನ
ದುರುಳಯುದ್ಧೋನ್ಮತ್ತ ಖಳದು
ರ್ಮರುಷಣರ ದರುಶನವ ಮಾಡಿಸಿದ[3]ನು ಧನಂಜಯನ[3] ೪೬

ಮಿಕ್ಕು ಮುಂಬರಿವರಿದು [4]ನೀ[4]ಡಿದ
ನಿಕ್ಕೆಲದ ಕೇರಿಗಳ ಕಿಡಿ ಸಿಡಿ
ದಿಕ್ಕಿ ಬಾಲದ ಶಿಖಿಯ ಸೀವರಿಸುವ ಶಿಖಾಳಿಗಳ
ಅರ್ಕಕೇತುವ ಕಂಪನರ ಸದ
ನಕ್ಕೆ ಲಂಘಿಸಿ ಗಾಳುಮೇಳಿನ
ರಕ್ಕಸರ ಬೀಡಿನಲಿ ಬಿಡಿಸಿದನುರಿಯ ಪಾಳೆಯವ ೪೭

ರಾಯಕುವರಶಿ[5]ರೋ[5]ಮಣಿಯೆ ಕೇ
ಳಾ ಯಶೋಸಂಭೃತನ ಸಂಭ್ರಮ
ದಾಯತವನೇನೆಂಬೆನೈ ಶಿವಶಿವ ಮಹಾದೇವ
ಈಯಶೇಷಿತ ಭುವನದಳಿವಿನ
ವಾಯುಬಾಂಧವಭಾಳನೇತ್ರನ
ಕಾಯದಂತಿರೆ ಮೆಱೆ[6]ದನಕ್ಷಿಗೆ[6] ಕಲಿವಿಭೀಷಣನ ೪೮

ಗೆರೆಯ ಬರೆದನು ಕಂಡು ವೈಷ್ಣವ
ರರಸನಾಲಯದಿದಿರಿನಲಿ ನಿ
ಮ್ಮುರವಣೆಗೆ ತಾ ಸೀಮೆ[7]ಯಿ[7]ದು ಹೊಗದಿರಿ ವಿಭೀಷಣನ

---

[1] ಕುಮತಿ (ಕ), ವೈರ (ಗ.ಜ.ಝ.ಟ.ಣ). [2] ತವಿಡಿದು (ಗ), ತಕವದು (ಚ). [3] ನಗ್ನಿದೇವರಿಗೆ (ಗ.ಟ). [4] ತೀ (ಗ.ಜ.ಝ.ಟ.ಣ). [5] ಖಾ (ಚ.ಡ), [6] ದುದರ ಮನೆ (ಕ.ಚ). [7] ಯ (ಗ.ಚ).

ಅರಮನೆಗೆ ನೀವೆಂದು ವಹ್ನಿಗೆ
ಕರವ ಮುಗಿದಲ್ಲಿಂದ ಮುಂದಕೆ
ತಿರುಗಿದನು ತುದಿವಾಲದಗ್ನಿಯನು[1]ರಿಗೊಳಿಸಿ[1] ಹನುಮ ೪೯

ಕುಣಿಕುಣಿದು ಕೈಚಪ್ಪಳೆಯ [2]ಕ
ಟ್ಟಣಿಯರಲ[2] ಕುಱುಬಿಱಿದು ಕಾದಿದ
ಕಣುಗುಱುಹಿನಸುರರಪಚಾರಿಸುತುಱುಬಿ ಬಾಲದಲಿ
ಕಣಜ ಕಮ್ಮಟ ಶಸ್ತ್ರಶಾಲಾ
ಗಣವ ವಸ್ತ್ರ ಸುರತ್ನಮ[3]ಯ[3]ಭೂ
ಷಣದ ಕೋಶಂಗಳಲಿ ಹೊಗಿಸಿದನನಿಲಬಾಂಧವನ ೫೦

ಕರಿಘಟೆಯ ಶಾಲೆಗಳ ಹಯಮಂ
ದಿರದ ವೀಥಿಯ ಬಾಲದಲಿ ಬೋ
ಹರಿಸಿದನು ಬಿಱಿತೋಡೆ ಹಯ ಗಜ ಬೀದಿಬೀದಿಯಲಿ
ಮುಱಿದು ಹರದರ ಹಾರುವರ ಶೂ
ದ್ರರ ಮಹಾಕ್ಷತ್ರಿಯರ ಕೇರಿಯ
ತರವಳಿಕೆಯನು ತಂದೆ[4]ಗಿತ್ತೊಡೆಮುಱಿದನಾ[4] ಹನುಮ ೫೧

ಮಸಗಿ ಮುಂದಣ ಬಡಗಿ ಕಮ್ಮರ
ವಸುವಿಭೇದಕ ತಾಮ್ರಮರ್ದನ
ಮಸಗ ಮುಚ್ಚಿಗ [5]ರಜಕ ಚಿತ್ರಿಕ[5] ಕಟಿಕ ಕಲುಕುಟಿಕ
ಕುಸುಮಮಾಲಿಕ ಹಾವಡಿಗ[6]ರಿಂ
ದೆಸೆವ[6] ಹರದರ ಕೇರಿಗಳಲು
ಬ್ಬಿಸಿದನುಬ್ಬಿಱಿದಬ್ಬಱಿಸಿ ಕಪಿ ಹವ್ಯವಾಹನನ ೫೨

ಕಳಕಳಿಕೆ ಕೋಳಾಹಳಿಸೆ ಕ
ದ್ದಳಿಗ ದೂಸಿಗ [7]ಬೂಸಗಂಧಿಗ[7]
ಕೊಲಪ ಚಿಪ್ಪಿಗ ಬಚ್ಚರಣಿ [8]ಬಳೆಗಾಱ ಬೋಗಾಱ[8]
ತಿಲವಿಘಾತಕ ಕಾಳಸಿಗ ತಂ
ಬುಲಿಗ ಜಂಗಮ ಜೋಗಿಗಳ ಜಂ
ಗುಳಿಗಗೇರಿಗಳೊಳಗೆ ಝಾಡಿಸಿದನು ಶಿಖಾಳಿಗಳ ೫೩

---

[1] ರುಹಿ ಕಲಿ (ಕ.ಝ). [2] ಚಡ್ಡಣಿಯರಲಿ (ಕ), ಕಟ್ಟಳೆಯಲರಿ (ಗ), ಕಟ್ಟಣಿ ಯಱಿದು (ಝ). [3] ಣಿ (ಕ.ಜ.ಝ.ಣ). [4] ಗೊಪ್ಪಿಸಿ ತಿರುಗಿದನು (ಕ.ಚ). [5] ರಚಿತ ಚಿತ್ರಕ (ಕ), ಕೊಲಪ ಚಿಪ್ಪಿಗ (ಗ), ರಜಕ ಚಿಪ್ಪಿಗ (ಡ). [6] ಹಾಲಸಿತ (ಗ.ಣ), ಹಾಲಸಿಗ (ಟ). [7] ಬೋಗಗಂಡಿಗ (ಗ), ಬೋಸಗಂಧಿಗ (ಚ). [8] ಬೋಗಾಱ ಬಳೆಗಾಱ (ಕ), ಬೋಗಾಱ ಬಿಂಗಾಱ (ಚ).

ತಳವಱಿರ ಸುಂಕಿಗರ ದಂತಾ
ವಳರಥಾಶ್ವಾರೋಹಕರ ಮನೆ
ಗಳಲಮಾತ್ಯ ನಿಯೋಗಿ ಸಚಿವ ಪಸಾಯ್ತ ಪರಿಜನದ
ದಳಪತಿಗಳ ಸುಸಂಧಿವಿಗ್ರಹಿ
ಗಳ[1]ಲಿ ಸು[1]ಪ್ರೌಢರ ನಿವಾಸಂ
ಗಳಲಿ ವಾಸವ ಮಾಡಿಸಿದನೊಲಿದನಿಲಬಾಂಧವನ ೫೪

ಉಳಿಯಲೊಂದು ವಿಭೀಷಣನ ನಿಜ
ನಿಳಯವೆಲೆ ಕುಶ ಕೇಳು ಕೋಟಾ
ವಳಯ ಮಧ್ಯದ ಧನಿಕದೊರೆಗಳ ಬಿನುಗು ಬಿಚ್ಚಟೆಯ
ಹಲವುಜಾತದ ವರ್ಣಭೇದದ
ಹೊಳಲ ಜನದ ಸಮಸ್ತಭುವನಾ
ವಳಿಯ ಭರಭಾರವನು ಹೊಱಿಸಿದನಗ್ನಿದೇವರಿಗೆ ೫೫

ಉರಿವ ಮನೆಗಳನುರಿಗೊಳದ ಮಂ
ದಿರಕೆ ನೂಕಿದನೊದೆದು ಕೆಲವನು
ಹಿರಿದು ಹೆಗ್ಗೊಳ್ಳಿಗಳಲಿಟ್ಟನು ಹೊಗೆಯಬಾಲಯುವ
ಚರಿಸಬಾರದ ಸಂದಿಗೊಂದಿಯು
ತಿರಿಕಜಾತಿಯು ಜಳ್ಳು [2]ಜರಗಿನ[2]
ನೆರವಿಗರ ನಿಳಯದಲಿ ಬಾಲವ ನೀಡಿದನು ಹನುಮ ೫೬

ಉರಿ ಚಡಾಳಿಸೆ ಬಾಲವೊಳಗೊಳ
ಸರಿವುತಿರ್ದುದು ಹೆಚ್ಚಿ ಹಿಂಗುವ
ವರಸುಧಾಸೂತಿಯು ಕಲಾವೈಚಿತ್ರದಂದದಲಿ
ಧರಣಿತನುಜೆಯ ವಹ್ನಿಸೂಕ್ತದ
ಪರಮಮಹಿಮೆಯೊ ಮೇಣು ವಿಶ್ವಂ
ಭರನ ಕರುಣವೊ ಸೋಕದಾದುದು ಶಿಖಿ ಸಮೀರಜನ ೫೭

ತಂದೆ ಮಾರುತ ಬಾ ತವಪ್ರಿಯ
ನಂದವಾವುದು ನೋಡು ದಶಮುಖ
ನಿಂದ ಬಲಿಮುಖರಗ್ಗಳರೊ ನಿಗ್ಗಳರೊ ಚಿತ್ತಯಿಸು

---

[1] ಲಿ ವಿ (ಕ.ಜ.ಡ.ಣ), ಲತಿ (ಗ). [2] ಗರ ನಿಜ (ಕ.ಗ.ಝ.ಣ).

ಸಂಧಿಸದೆ ಭೀತಿಯನು ಪುರಹರ
ಗಂದು ಕೈನೆರವಾಗಿ ಕಾಣಿಸಿ
ದಂದವನು ಕರುಣಿಸಲು ಬೇಕೆಂದೆಱಗಿ ಕೈಮುಗಿದ　೫೮

ಮಗನ ಮಾತನು ಸಲಿಸಬೇಕೆಂ
ದೊಗುಮಿಗೆಯ ಹರುಷದಲಿ ವಹ್ನಿಯು
ನೆಗಹಿದನು ನೀರೇಜಜಾಂಡಕಟಾಹಪರಿಯಂತ
ಭುಗುಭುಗಿಲ್ ಭುಗಿ ಭುಗಿಲು ಧಗಧಗ
ಧಗಿಲು ಧಗಿಲೆಂ[1]ದೊದಱಿದುರಿ[1] ನಾ
ಲಗೆಗಳನು ನೀಡಿದುದು ನಿಖಿಳಾಮರಪುರಂಗಳಿಗೆ　೫೯

ಛಿಳಿಛಿಳಿಲ್ ಛಿಳಿಲೆಂದು ಚಿಮ್ಮಿತು
ಜಲಜಜಾಂಡದ ಚಿಪ್ಪು ಕುದಿದುದು
ತಳಪಳನೆ ತತ್ಕಮಲಜಾಂಡಾವರಣ ಜಲರಾಶಿ
ಇಳಿದುದಂಬುಧಿ ಕಾದ ಕಡುಗಾ
ವಲಿಯೊಲಾಯ್ತಿಳೆ ವಾಸುಗಿಯ ಹೆಡ
ತಲೆಯ ಮಣಿಯುರಳಿದವು [2]ಹೊಗಳುವೆನೇನನದ್ಭುತವ[2]　೬೦

ಧಾಳಿಗಿಚ್ಚಿಗೆ ಬೆಚ್ಚಿ ತೆಗೆದವು
ಗೂಳಯುಪನಲ್ಲಲ್ಲಿ ಸುರನಗ
ರಾಳಿ ನದಿಯೇನಾಯ್ತೊ ನಭದಿಂದಿಳಿವ ನಿರ್ಜರರ
ನಾಲಗೆಯುನರೆಗಚ್ಚಿದವು ತುರ
ಗಾಳಿ ತರಣಿಯ ತಿಂಥಿಣಿಯ ತಾ
ರಾಳಿ ಸಿಡಿದರಳಿದವು ಲಂಕಾನಗರ ದಹನದಲಿ　೬೧

ಛಿಳಿಛಿಳಿಧ್ವನಿ ಛಟಛಟತ್ಕೃತಿ
ಘುಳುಘುಳುಸ್ವನ ಘನಶಿಖಾ ಸ
ಮ್ಮಿಳಿತಧೂಮಧ್ವಾನ ಧಗಧಗಧಗಿಲು ಭುಗಿಲೆಂಬ
ಕಳಕಳಿಕೆ ತಲೆದೂಗಿಸಿತು ಕಪಿ
ಕುಲಲಲಾಮನ ಭಾಪುರೇ ಪಿತ
[3]ಗೊಲು[3]ವ ಸಖ ನೀನಹುದೆನುತ ಕೊಂಡಾಡಿದನು ಶಿಖಿಯು　೬೨

---

[1] ದೊರೆದು ತುದಿ (ಗ), ದುರಿಯೊದಱಿ (ಚ). [2] ಲಂಕಾನಗರ ದಹನದಲಿ (ಕ.ಝ.ಣ). [3] ಗೊಲು (ಕ), ನೊಲು (ಗ.ಜ.ಝ.ಣ).

ಪರಮಪಿತೃಸಖ ಕೇಳು ಗಗನಾಂ
ತರದ ಪುರದಹನದಲಿ ಹೊಟ್ಟೆಗೆ
ನೆಱೆಯದಾದುದು ಕೇಳ್ದ ನರ್ಥಗ್ರಾಸವಾಯ್ತೆಂದು
ಪರಿಹರಿಸು [1]ಮಿಕ್ಕರ್ಧ[1] ಹಸಿವನು
ಹರೆದಭೀತಿಯ ಹರುಷದಲಿ ಸು
ಸ್ಥಿರಸಮಾಧಾನದಲಿ [2]ಹನುಮನ ಹರಸು ಬಳಿಕೆಂದ[2] ೬೩

ಪರವಧೂವ್ಯಸನಿಗಳ ಸಂಗವು
ನರಕಭಾಜನವೆಂದು ನೆಱೆ ಧಿ
ಕ್ಕರಿಸಿ ದಶಕಂಧರನ ನಗರಾಂಗನೆ ವಿರಾಗದಲಿ
ಪರಮಪ್ರಾಯಶ್ಚಿತ್ತ[3]ಕಂಗೀ
ಕ[3]ರಿಸಿ ಹೊಗಲುದ್ಯೋಗಿಸಿದ ನಿ
ರ್ಭರದ ನಿಡುಗಿಚ್ಚಿನವೊಲಿರ್ದುದು ದಹನ ರಿಪುಪುರದ ೬೪

ಕುಶಕುಮಾರಕ ಕೇಳು ಗಾವಳಿ
ಮಸಗಿತೂರೊಳು ತಾಯ್ಗಳೊಂದೆಸೆ
ಶಿಶುಗಳೊಂದೆಸೆಯಾಯ್ತು ಕಟ್ಟಿದ ಕಿಚ್ಚಿನುಱೆಯಲಿ
ಸುಸರವಾದರು ಕೆಲರು ಕೊರಳಿನ
[4]ಲಸುವ[4] ಹಿಡಿದರು ಕೆಲರು ಕೆಲರು
ಬ್ಬಸದಲೋಡಿದರುರಿಯ ಧಾಳಿಗೆ ಹೇಳಲೇನೆಂದ ೬೫

ಕರೆವ ಕೂಗುವ ಕುಬುಬಿಱಿವ ಕಾ
ಹುರದ ರಕ್ಕಸರೊಂದುದೆಸೆಯಲಿ
ಮುರುಟುಗ್ಗೈಮೋಱೆಗಳ ಕೌರಿನ ಖಳರದೊಂದೆಸೆಯು
ತರುಣ ಯೌವನ ವೃದ್ಧ ಪುಂಸ್ತ್ರೀ
ನೆರವಿಗಳದೊಂದೆಸೆಯು ವಿಗತಾಂ
ಬರದ ಭಟರೊಂದೆಸೆಯ ಕಾಣಿಸಿತನಿಲನಂದನಗೆ ೬೬

ಕೊಡುವೆನೇ ಕೌಪೊಂದು ತನಗು
ಗ್ಗಡದ ಧನಿಕರು ನೀವು ನಾವೇ
ಬಡವರಿಂದಿಗೆ ಬಲುಸಮರ್ಥ ದಶಾಸ್ಯನವ ತಾನು

---

[1] ಮಿಕ್ಕಿರ್ದ (ಗ.ಜ.ಡ.ಣ). [2] ನೀವೆಂದಗ್ನಿದೇವರಿಗೆ (ಗ). [3] ವನು ಮಿಗೆ ಧ (ಕ), ವನು ನೀ ಕ (ಗ), ವಂಗೀ ಕ (ಝ.ಣ), ವನು ಸ್ವೀಕ (ಟ). [4] ಲುಸುರ (ಕ.ಜ.ಡ).

ಸುಡಿಸಿದನು ಸೀರೆಗಳ ಮೆಲ್ಲನೆ
ನಡೆಯಿ ಹೆಂಡಿರು ಮಕ್ಕಳನು ಕೈ
ವಿಡಿದು ನೀವೆಂದವರನುಪಚರಿಸಿದನು ಕಲಿಹನುಮ ೬೭

ಉರಿ ಭಡಾಳಿಸಿ ವೆಂಟಣಿಸಿದುದು
ತಿರುಗಿ ಬರೆ ಬಳಿಕವು[1]ವು ಲಂಕಾ[1]
ಪುರವನುಪ್ಪರಿಸಿದುದು ಗಾವಳಿ ಗಗನದಳತೆಯಲಿ
ಸರಕ ಸಂವರಿಸುವ ಸುವರ್ಣಾ
ಭರಣ ವಸನಾದಿಗಳ ತೆಗೆವತಿ
ಭರದ ಕಳಕಳ ಕಾಣಿಸಿತು ಕಂಗಳಿಗೆ ಕಪಿವರನ ೬೮

ಮುದುಕಿ ಹೊಱವಡು ಹೊಱವಡೆಂದೊದೆ
ದೊದೆದು ತಾಯ್ ಮುತ್ತಬ್ಬೆಯರ ಕೈ
ದುದಿಗಳನಃ ಹಿಡಿದೆಳೆದು ಶಿಶುಗಳ [2]ಹೆಡಕ ಹಿಡಿದಡಕಿ[2]
ಹದರಿನಲಿ ಹೆಂಡಿರನು ಜರೆನರೆ
ಪುದಿದ ವೃದ್ಧ ಪಿತಾಮಹರನೆಳೆ
ವದುಭುತದ ಕಳಕಳಿಕೆ [3]ಬಲಿದುದು ನಗರದಗಲದಲಿ[3] ೬೯

ತೆಗೆ ತಿಲವನೌಪಾಸನದ ಕೊಳ
ವಿಗಳ ಧೋತ್ರವ ಪುಸ್ತಕವ ಸ
ಜ್ಜಿಗೆಯ ಗುಡ [4]ಹಪ್ಪಳವ ಪುರಿಸಂಡಿಗೆಯ[4] ಹೂರಿಗೆಯ
ಬ[5]ಗರಗೆ[5]ಯ ಸೇವಿಗೆಯೊರಳ ಬೇ
ಳಿಗಳ ಸಾಲಗ್ರಾಮಗಳ ದೋ
ಸೆಗಳ ಕಾವಲಿಗಳನೆನುತ ಕಳವಳಿಸೆ ಭೂಸುರರು ೭೦

ಮಗನ [6]ಕಾಣೆವು[6] ಕಂಡಿರೇ ನೀವ್
ಮುಗಳ ತೆಗೆದಿರೆ ಸೊಸೆಯ ಬಂಗಾ
ರಗಳ ತಂದಿರೆ ದೇವಪೂಜೆಯನಕಟ ಸಾಕಿನ್ನು
ಹೊಗದಿರುರಿ ಘನ ಮಿಕ್ಕ ದ್ರವ್ಯಾ
ದಿಗಳ ಧಾರೆಯನೆಱೆಯಿ ಕಕ್ಕುಲಿ
ತೆಗಳು ಬೇಡೆಂಬುಲುಹು ಬಲುಹಾಯ್ತವನಿಯಮರರಲಿ ೭೧

[1] ಲ ಲಂಕಾ (ಕ), ಮಲಸುರನ (ಗ). [2] ಹಿಡಿದು ಹಿಡಿದಿಱುಕಿ (ಗ), ಹೊತ್ತು ಹಿಡಿದಿಕ್ಕಿ (ಚ.ಡ), ಹಾರ ಹಿಡಿದಿಡುಕಿ (ಣ). [3] ಕಾಣಿಸಿತನಿಲನಂದನಗೆ (ಕ.ಜ), ಬಲಿದುದು ಗಗನದಳತೆಯಲಿ (ಗ). [4] ಸಂಡಿಗೆಯ ಹಪ್ಪಳ ಮಿರಿಯ (ಕ.ಜ), ಹಪ್ಪಳವ ಮಿರಿಸಂಡಿಗೆಯ (ಚ.ಝ.ಟ.ಡ.ಣ). [5] ಗೆಬಗೆ (ಕ.ಜ.ಣ), ಗರಣಿ (ಚ). [6] ಕಾಣಿರೆ (ಕ.ಝ), ಕಾಣೆನು (ಗ.ಜ.ಟ).

ಜರೆಯ ಜಾಡ್ಯದ ವಿಪ್ರರಾ ಖಳ
ನರಮನೆ[1]ಯು[1] ಮುಖವಾಗಿ ನೆಗಹಿದ
ಕರದಲಲುಗುವ ಶಿರದ [2]ಸರಣಿಯುಲಸವು[2]ರೋಷದಲಿ
ಹರಸಿದರು ಲೇಸಾಗಲೋ ನಿ
ಶ್ಚರತೆಯಲಿ ದೀರ್ಘಾಯುವಾಗೆಂ
ದುರಿಗೆ ನಿಲ್ಲದೆ ನಡೆದರೆಡಹುತ ಮುಗ್ಗುತಲ್ಲಲ್ಲಿ ೭೨

ನೀರ ಹೊಯ್ ನಂದಿಸು ಕೆಲಕ್ಕೊದೆ
ನಾರಿಯರ ಹೊಟಿವಡಿಸು ತೆಗೆ ಕೌ
ಮಾರವರ್ಗವ ಬಿಸುಡು ಸೀಸಕ ಕವಚ ಕೈದುಗಳ
ದೂರ ಕಿಚ್ಚಂಜದಿರಿ ತೆಗೆ ಹಯ
ತೇರುಗಳ ತಳ್ಳಂಕ ಬೇಡೆಂ
ಬಾರುಭಟೆ ಬಲುಹಾಯ್ತು ಬಾಹುಜರಾಲಯಂಗಳಲಿ ೭೩

*ತೆಗೆಯಿ ಮೆಣಸಿನ ಕಂಟಣಿಯನರ
ಳಿಗಳ ಹೇಱಿನು ಹೊರಚಿಬಿಡಿಯೆ
ತ್ತುಗಳ ಹೊತ್ತೆಳೆದೆಲೆಯ ಚೀಲದ ಶುಂಠಿ ಸಾಸುವೆಯು
ಹೆಗಲಲ್ಯೈದಿಸು ಲಾಭ ಲೋಭಿಸಿ
ತೊಗದಿರುಪ್ಪನು ಬಳ್ಳಿ[3]ವೋ ಸೊ
ಲ್ಲಗೆಯೊ ಮಾನವನೆನುತಲೊಱಲಿತು[3] ವೈಶ್ಯಸಂದೋಹ ೭೪

ಕಂಡಿರೇ ಹೆಗ್ಗೇಡ ಬೆಂದುದು
ಭಂಡ ಮೊದಲಾದೊಡವೆ ಸಾಲಿಗ
ರಂಡಲದರಿನ್ನೇನ ಕೊಡುವೆವು ಕಪಿಯು ಹಾವಳಿಯು
ಕೊಂಡು ಕೊನರಿದ ಖಳನ ಹೆಂಡತಿ
ರಂಡೆಯಾಗಲಿ ಸಿಕ್ಕಿದನಿತನು
ಕೊಂಡು ನಡೆಯೆಂಬುಲುಹು ಬಲಿದುದು ಹರದಗೇರಿಯಲಿ ೭೫

ಕುಡನ ತೆಗೆ ಕೂರಿಗೆಯ ಬಿಸುಡೀ
ಕಡೆಗೆ ಬಿಡು ದನಕರುವ ಗುದ್ದಲಿ
ಕೊಡಲಿ ಮಿಣಿ ನೊಗ ಬಂಡಿ ಬೀಜದ ಮೂಡೆ ಭತ್ತಗಳ

---

[1] ಗ (ಗ.ಜ.ಝ.ಟ). [2] ಲನುಸರಣಿಸ (ಚ.ಟ.ಡ).? [3] ವೋ ಸೊಲ್ಲಗೆಯೊ ಮಾನವನೆನುತವ್ಪೊಱಲಿಡೆ (ಕ), ಸೊಲ್ಲಿಗಯೊಗುವಿಗೆಯ ತವಕದಲಿವೊಱಲಿತು (ಗ).
* ಜ.ಝ.ಟ.ಡ.ಣ ಪ್ರತಿಗಳಲ್ಲಿ ೭೪ನೆಯ ಪದ್ಯವಿಲ್ಲ.

ಹೊಡಕೆ ಡಾವಣಿ [1]ಹಾಡ[1] ಜೊತ್ತಿಗೆ
ಮಡಕೆಗಳು ಕುಡುಗೋಲುಗಳ ತೆಗ
ದಡಕಿಯೆಂದೊಕ್ಕಲಿನ ಕೇರಿಯೊಳಾಯ್ತು ಬೊಬ್ಬಾಟ ೭೬

ತೊತ್ತೆ ಬಾ ತೆಗೆ ಹಾಸು ಮಂಚವ
ನಿತ್ತ [2]ಹಾಯಿಕು[2] ಗಿಳಿಯ ಗೂಡನು
ನೆತ್ತವಲಗೆಯ ವೈಸಿಕೆದ ಮದ್ದುಗಳ ಭರಣಿಗಳ
ಹೊತ್ತು ಕೊ[3]ಳ್ಳೆಲೇಳು ಮೂಸಡಿ
ದೊ[3]ತ್ತೆ ನಡೆ ಮುದಿಮುಂಡೆ ನೀನೆಂ
ಬೊತ್ತುವಲ್ಲಿನ ಸಬುದ[4]ವೆಸೆ[4]ದುದು ಸೂಳೆಗೇರಿಯಲಿ ೭೭

ಬಿಟ್ಟ ಮಂಡೆಯ ಬೀದಿವರಿಗಳ
ಕಟ್ಟುಲುಹುಗಳ ತೆಗೆದ ಸರಕಿನ
ಮೊಟ್ಟೆಗಳ ಕೈವಿಡಿದ ಮಕ್ಕಳ ಗಾಳುಮೇಳುಗಳ
[5]ಇಟ್ಟಣೆಯ[5] ಬೀದಿಗಳಲುಱೆ ಕಂ
ಗೆಟ್ಟು ಪುರಜನವಖಿಳದೆಸೆಯಲಿ
ಪಟ್ಟಣವ ಹೊಱವಡುತಲಿರ್ದುದು ಕೋಟಿಸಂಖ್ಯೆಯಲಿ ೭೮

ಕೂಡೆ ನಗರದ ನಿಖಿಳಜನ ತೆಗೆ
ದೋಡಿತಲ್ಲಿಯದಲ್ಲಿ ದಳ್ಳುರಿ
ವೇಡೆಯಲಿ ಸಿಲುಕಿದ ನಿಶಾಚರರಾ ಪುರಾಂತರದ
ಬೇಡಕುಣಿಹೊಕ್ಕ ರಣಿಗಳಲ
ಕ್ಕಾಡಿದರು ಲಾಯದಲಿ ಹಯ ಬಿರಿ
ತೋಡಿದವು ಗಜ ಬೀದಿವಱಿದವು ಕೇರಿಕೇರಿಯಲಿ ೭೯

ಕರಗಿ ಹರಿದವು ಹೇಮರಸ ಹೆ
ದ್ದೊರೆಯವೊಲು ಬಹುರತ್ನಚಯ ಬಿಡ
ದರಳಿದವು ಹುರಿದರಳಿನಂತಿರೆ ಹೊಳಲೊಳಗಲದಲಿ
ಮರಕತದ ಮಾಣಿಕದ ವಜ್ರದ
ತರತರದ ಭಿತ್ತಿಗಳು ಬಿಕ್ಕನೆ
ಬಿರಿದವಡಗೆಡೆದುರುಳಿದವು ಪ್ರಾಸಾ[6]ದ[6]ಸೌಧಚಯ ೮೦

---

[1] ಹೊರಜೆ (ಗ.ಝ). [2] ಹಾಯ್ಕೀ (ಕ.ಗ.ಝ.ಣ). [3] ಳ್ಳೆಲೆ ಹಿಳ್ಳೆ ಮುಸುಡಿನ ತೊ (ಕ.ಜ). [4] ಸುಳಿ (ಗ.ಜ.ಟ.ಣ). [5] ಇಟ್ಟಣಿಸಿ (ಕ.ಝ.ಣ), ಇಟ್ಟೈಡೆಯ (ಗ). [6] ರ (ಕ).

ಕಳಸಕುಚವನಮರ್ಚಿ ಕೇತನ
ಲಲಿತಕೇಶಾಕರುಷಣದಿನು
ಜ್ವಲಿಪ ವಿದ್ರುಮತೋರಣಾಧರಗಳನು ಚುಂಬಿಸುತ
ಹೊಳೆವ ಹರ್ಮ್ಯನಿತಂಬವನು ಹೊ
ಯ್ದಳೆದು ನಖದಲಿ ಘುಳುಘುಳುಧ್ವನಿ
ಗಳರವದಿ ರಮಿಸಿದನು ವಿಟನವೊಲಗ್ನಿ ಪುರವಧುವ ೮೧

ಮಂಡಳಿಸಿ ಮುರಿದೇಳ್ವ ವಹ್ನಿಯು
ತುಂಡದಲಿ [1]ತಳಿತೊಗೆ[1]ದವಂಬರ
ಮಂಡಲದ ವಳಯದಲಿ ವಿಲಯಾಶಿಖಾಗ್ನಿಕಣದಂತೆ
ತುಂಡುಗಿಡಿಗಳ ತೂಱುಗಿಡಿಗಳ
ಗುಂಡುಗಿಡಿಗಳ ಘಾಡಣೆಯು ಕಿಡಿ
ಚಂಡಿಯಾಯ್ತು ಚತುರ್ವದನನಿರ್ಮಿತ ಮಹಾಭವನ ೮೨

ಕುಶನೆ ಕೇಳ್ಕೈ ಯೂಪವಾದುದು
ಬಿಸರುಹಾಕ್ಷನ ಕೀರ್ತಿತರು ರಾ
ಕ್ಷಸಪುರ ತ್ರೇತಾಗ್ನಿಕುಂಡಗಳಾ[2]ದವ[2]ವನಿಜೆಯು
ವಿಷಮವಿಹ್ವಲಶೋಕಶಿಖಿ ಶೋ
ಭಿಸುವ ಹುತವಹನಾದನಸುರರು
ಪಶುಗಳಾದರು ಯಜ್ಞದೀಕ್ಷಿತನಾದನಾ ಹನುಮ ೮೩

ಬಂದ[3]ನೀತನು[3] ವಹ್ನಿಯನು ಬಲ
ವಂದು ಬಳಿಕುತ್ತರದ ಗೋಪುರ
ಕಿಂದಿರೇಶಪದಾಭಿಗತ ವಿಶ್ರುತವಿಲಾಸಕದ
ಇಂದಿರೇಶಪದಾಭಿಜನಿತಾ
ನಂದನದಿಯುದಕದಲಿ ಕಪಿ ರಘು
ನಂದನಾರ್ಪಣವೆನುತ ಧಾರೆಯನೆಱೆದನನಲಂಗೆ ೮೪

ತರುಣ ಕೇಳುರಿನಾಲಗೆಗಳು
ಬ್ಬರದೆಸಳ್ಗಳು ವಿಸ್ಫುಲಿಂಗೋ
ತ್ಕರಪರಾಗದ ಧೂತಧೂಮಭ್ರಮರಮಾಲಿಕೆಯ

---

[1] ತಳದೊಗೆ (ಕ), ತುಳಿಕೊಡ (ಗ). [2] ದುದ (ಗ.ಜ.ಝ). [3] ನಿತ್ತಲು (ಚ.ಡ).

ಸರಭಸದ ಸಾಗರ ಸರೋವರ
ಸರದ ಮಧ್ಯದ ಸರಸಿಜದವೊಲು
ಸುರಕದಂಬದ ಕಣ್ಗೆ ಕೌತುಕವಾಯ್ತು ಪುರದಹನ ೮೫

ಆಹ ಲೇಸಾಯ್ತುಮವು ನಿಷ್ಪ್ರ
ತ್ಯೂಹದಲಿ ನಾವ್ ಬಂದ ಕಾರ್ಯ ಮ
ಹಾಹವವ ಜೈಸಿದೆವು ದಹಿಸಿದೆವಹಿತಪುರವರವ
ಈ ಹದನವೇಲಿನ್ನು ಗಮನೋ
ತ್ಸಾಹವೇ ಕರ್ತವ್ಯವೆಂದು ವಿ
ದೇಹಜಾವರಚರನು ಘನಪರಿತೋಷಮನನಾದ ೮೬

ಬಂದ ಕೆಲಸ ಸುಸೂತ್ರ[1]ವಿಲಿತನ
ಕೆಂ[1]ದು ಹಾರೈಸಿದನು ಕೈಯೊಡ
ನಂದಗೆಟ್ಟನು ನೆನೆದು ನಿಮಿಕುಲರಾಜನಂದನೆಯು
ಇಂದುಮುಖಿಯೇನಾಗಿಹಳೊ ತ
ನ್ನಿಂದ [2]ತೋಱಿತು[2] ದೂಱು ದುರ್ಭಯ
ಸಂದಿಸದಲೇ ತಾ[3]ಯನೆನುತ[3]ಳವಳಿದನಾ ಹನುಮ ೮೭

ಅನುಚಿತವು ವನಭಂಗವಾಸುರ
ಹನನವದು ತಾ [4]ಹೊಲ್ಲ ಪುರದಾ[4]
ಹನವದೀಗತ್ಯಂತ ದೂತರಿಗಾತತಾಯಿತನ
ಇನಕುಲೇಂದ್ರನ ಚರನು ತಾನೆಂ
ದನುವರಿಸುವುದು ನೀತಿ ಮೂರ್ಖರ
ಮ[5]ನ[5]ಗಳಿಗೆ ತಾ ಮಾನ್ಯನಾದೆನೆ [6]ಶಿವಶಿವಾ ಎಂದ[6] ೮೮

ಏನುಹದನಾಗಿಹರೊ ದೇವಿಯು
ರೇನ ನೆನೆವರೊ ಖಳರು ತನ್ನಿಂ
ದೀ ನಿರೋಧನಿಯುಕ್ತವಾಯ್ತೆಂದಳ್ಳೆಬಾಱಿರಲೆ
ಮಾನಸದ ವಿಹ್ವಲವ[7]ನಿದನಾ[7]
ಮಾನಿನಿಯ ಮಂಡನೆಯ ಘನಮಹಿ
ಮಾನಿಭೃತ ಪದದರುಶನದಲಪಹರಿಸಬೇಕೆಂದ ೮೯

---

[1] ವೀಧಿನಕೆಂ (ಕ), ವಿನಿತೀಗೆಂ (ಚ). [2] ಬಂದುದು (ಕ.ಜ). [3] ಯಿಗೆಂದ (ಗ.ಟ), ಯನೆಂದ (ಚ.ಝ). [4] ಹೊಲ್ಲ ತತ್ಪುರ (ಕ), ತಪ್ಪುವಾಪುರ (ಗ.ಝ), ತಪ್ಪು ಪುರದಾ (ಟ.ಣ). [5] ನೆ (ಕ.ಚ). [6] ಯೆಂದನಾಹನುಮ (ಗ.ಝ.ಟ.ಡ.ಣ). [7] ನಾ ವರ (ಕ.ಜ).

ಮಗನದೇನಾದನೊ ನಿಶಾಟರ
ಹಗೆತನವ ಗಂಟಿಕ್ಕಿಕೊಂಡನು
ವಿಗಡತನವಸುರರಲಿ ಸಲುವುದೆ ತನಗೆಯಕಟಕಟ
ಮಗುಳೆ ಗವಿಸುವುದರಿದು ದುಷ್ಕೃತಿ
ಮಿಗಿಲು ತನಗೆಂದಳ್ಳೆಬಾಱುವ
ಜಗದ ಮಾತೆಯ ಬಳಿಗೆ ಬಂದನು ವೀರ ಹನುಮಂತ ೯೦

ತಂದೆ ಬಂದ್ಯೆ ಹನುಮ ಮಾರಿಯ
ತಂದೆ ಖಳರನು ಕೆಣಕಿ ತಾನಿ
ನ್ನೆಂದು ಮಾಡುವುದೇನು ರಕ್ಕಸರಱಿಯದವ್ವೊಲಿನ್ನು
ತಂದೆ ತೆರಳೆನ್ನಯ್ಯ ತೆರಳೆಲೆ
ಕಂದ ನಡೆಯಿನ್ನಿರದಿರೆಂದಾ
ನಂದಭಯಸಮ್ಮಿಳಿತೆ ಮೈದಡವಿದಳು [1]ಮಾರುತಿಯ[1] ೯೧

ಅಂಜಲೇಕಲೆ ತಾಯೆ ತವಪದ
[2]ಕಂಜದನುಕಂಪೋದಯದಲ[2] ಸ
ಮಂಜಸನಲೇ ತಾನು ತಪ್ಪಿದ ಕೆಲಸಕಿನ್ನೇನು
ಅಂಜಿದೆನು ಬೇಡಲಿಕೆ ದಶಮುಖ
ಭಂಜನೆಗೆ ನೇಮವನು ರಘುಕುಲ
[3]ರಂಜಕನ ರಾಕ್ಷಸಮಹಾರ್ಣವ[3]ವಾಡಬಾನಳನ ೯೨

ಚಿಂತಿಸದಿ[4]ರಿನ್ನೆನ್ನೆಡೆಗೆ[4] ಭೂ
ಕಾಂತನಂಘ್ರಿಸರೋಜದರುಶನ
ವೆಂತು ಘಟಿಸುವುದೆಂಬ ಕರಣೇಂದ್ರಿಯದ ಕಳಕಳದ
ಭ್ರಾಂತಿ ಸಾಕಿನ್ನೆಂದು ಜನನಿಯ
ಸಂತವಿಸಿ ಮುಱಿದಕ್ಷಿವಾರಿಯ
ತುಂತುರಿನಲಡಿಗೆಱಗಿ ಬೀಳ್ಕೊಂಡನು ಮಹೀಸುತೆಯ ೯೩

---

[1] ಪವನಜನ (ಚ). [2] ಪಂಜರದ ತಂಪ್ರೊಡೆಯ ಸಲಿಲ (ಗ,ಝ). [3] ಕುಂಜರನ ರಾಕ್ಷಸ ಕುಲಾರ್ಣವ (ಗ), ರಂಜಕನನಾ ರಾಕ್ಷಸಾಂಬುಧಿ (ಚ). [4] ರೀಯೆಡೆಗೆ ರಘು (ಕ), ರೀ ನಿಮ್ಮೆಡೆಗೆ (ಗ).

ಕೊರಳ ಸೆರೆ ಬಿಗಿದರಸಿ ಬಿರಿಬಿರಿ
ದುರುಳುವಶ್ರುಗಳಿಂದ ಹನುಮನ
ಹರಸಿ ಕಳುಹಿದಳುಕ್ಕುವಕ್ಕೆಯು ಬಿಕ್ಕುಳಿನ ಬಳಿಯು
ಸುರಿವ ನಯನೋದಕದ ಧಾರಾ
ವರುಷದಲಿ ನನೆದಮಳತೊರವೆಯು
ನರಹರಿಯ ನಿಜದಾಸನೈತಂದಡಱಿದನು ನಭವ ೯೪

---

# ಓಂಬತ್ತನೆಯ ಸಂಧಿ

ಸೂಚನೆ : ರಣಭಯಂಕರ ಹನುಮನಾ ದಿನ
ಮಣಿಕುಲೇಂದ್ರಂಗಮಲ ಚೂಡಾ
ಮಣಿಯ ತಂದಿತ್ತನು ಸುರೇಂದ್ರಾದಿಗಳು ನಲಿದಾಡೆ

ಓಡಿದನು ಕಪಿಯೆಂದು ಮನದಲಿ
ಮಾಡದಿರಿ ನಾವೀ ನಿಜಾಯುಧ
ಗೂಡಿ ನಿಜಸೈನಿಕದ ಸಮ್ಮೇಳದಲಿ ಸಂಗರವ
ಪಾಡುಗೈವುದೆ ಪಂಥವಿದನಾ
ವಾಡಿ ತಪ್ಪೆವು ನಮ್ಮ ರಣ [1]ಜ
ಜ್ಜಾಡಜೋಕೆಯ ತೋಱಿಸುವೆ[1]ವಿನ್ನೊಮ್ಮೆ ನಿಮಗೆಂದ ೧

ಅಱಸದಿರಿ ಬೇಱತ್ತಲಿತ್ತಲು
ತೆಱಪುದೋಱುವೆ ನೋಡಿ ಸಮರವ
ಮೆಱೆವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆನುತ
ಅಱಚಲಳಿದುಳಿದಸುರಪಡೆ ಮು
ಕ್ಕಱಿಕಿಕೊಂಡುದು ಬೆಟ್ಟವನು ಕ
ಟ್ಟಿಱುಹೆ ಕವಿವಂದದಲಿ ಕವಿದುದು ಕೂಡೆ ಖಳನಿಕರ ೨

ಕುಶನೆ ಕೇಳೈ ಕುಲಿಶಹತಿ ನೋ
ಯಿಸಲು ನೆರೆಯದ ಹನುಮನುಱೆ ಕಂ
ಪಿಸುವನೇ ಖಳರಿಱಿತದಲಿ ಲವ ಕೇಳು ಕೌತುಕವ
ಮುಸುಕುವತಿಬಲರಕ್ಕಸರ ಕ
ರ್ಕಶಕರಾಗ್ರನಿಘಾತದಿಂದೆ
ಬ್ಬಿಸಿದನಂತಕಪುರಿಗೆ ನಿಮಿಷದಲಾ ಸಮೀರಸುತ ೩

ತಿರುಗಿ ಸದೆದನು ಕುಂಭನನು ನೆಲ
ಕುರುಳಿಸಿದನು ನಿಕುಂಭನನು ನಡು
ಶಿರವನೆಱಗಿದನಾ ಸುರಾರಿಯನಾ ನರಾಂತಕನ

[1] ಜಜ್ಜಾರಜೋಕೆಯು ತೋಱಿಸುವೆ (ಕ.ಜ.ಝ.ಟ.ಡ.ಣ), ದ ಸಪಾವತೆಯು ತೋಱುಸುವೆವಾ (ಗ).

[1]ಬರಿಯನ[1]ಪ್ಪಳಿಸಿದನು ತ್ರಿಶಿರನ
ಕೊರಳ ಹಿಡಿದೀಡಾಡಿ ಶುಕ ದು
ರ್ದರುಷ ಸಾರಣ ವಜ್ರದಂಷ್ಟ್ರಾದಿಗಳನೋಡಿಸಿದ ೪

ಅಡಸಿ ಕೆಣಕಿದ ಕಂಪನನು ಮುಸು
ದೊಡೆಯ ತಿವಿದು ಮಹೋದರನ ಹೇ
ರೊಡಲನೊದೆದು ಸುಪಾರ್ಶ್ವಯುದ್ಧೋನ್ಮತ್ತರಕ್ಕಸರ
ಮಡದಲುಜಿಘಟ್ಟಿಸಿ ಸಮೀಕವ
ಹಿಡಿದು ಹಳಚಿದ ಶಕ್ರಜಿತುವನು
ಹುಡುಕುನೀರದ್ದಿದನು ನಡೆದು ಸಮುದ್ರಮಧ್ಯದಲಿ ೫

ಮಿಕ್ಕವರ ಸದೆಬಡಿದು [2]ಸಾಕೇ
ಸ[2]ಕ್ಕಜವು ಕಪಿಯೊಡನೆ ನಿಮಗೆನು
ತೆಕ್ಕತುಳದಲಿ ಬರಲಿದಿರ್ಗೊಂಡನು ನಗೇಂದ್ರಸುತ
ತಕ್ಕ ಸನ್ಮಾನವನು ಕೈಕೊಂ
ಡೆಕ್ಕತುಳದಲಿ ಬಂದನಮರರ
ಹೆಕ್ಕಳದ ಹೂಮಳೆಯು ಹೊ[3]ಯ್ಲಿ[3]ನ ಪೂರದಲಿ ಹನುಮ ೬

ಅದೆ ಬರವು ಪವಮಾನಜನ ಜಯ
ವದನವಿಕಸಿತ ವಿಸ್ತರಣದ
ಭ್ಯುದಯ ಮುಖವೆಮಗಜುಹುತದೆಯೆಂದಖಿಳಕಪಿಸೇನೆ
ತುದಿವೆರಳ ಬೊಬ್ಬೆಗಳ [4]ತಿಗ[4]ಗಳ
[5]ತದಹದಬ್ಬರವಜೆಯ[5]ಲೀತನ
ನಿದಿರು[6]ಗೊಂಡಪ್ಪಿದರು ನಮಿಸಿದ ಜಾಂಬವಂತಂಗೆ[6] ೭

ವೀರ ಬಂದ್ಯೆ ಸ್ವಾಮಿಕಾರ್ಯೋ
ದ್ಧಾರ ಬಂದ್ಯೆ ಕೀಶಕುಲವನ
ವಾರಿರುಹದಿನನಾಥ ಬಂದ್ಯೆ ತಂದೆಯೆಂದೆನುತ
ಸೋರುವಾನಂದಾಶ್ರುಪುಳಕದ
ಪೂರಣದಲೆತ್ತಿದನು ಪವನಕು
ಮಾರಕನ ಮಸ್ತಕವ ನಲಿದೊಲಿದಬುಜಭವಸೂನು ೮

---

[1] ಬಿರಿಯುಲಿ (ಗ.ಡ), ಜರಿಯುಲ (ಟ). [2] ಸಾಕೀಗ (ಗ), ಸಕ್ಕಾಸ (ಡ). [3] ದರಿ (ಗ.ಜ.ಟ), ನಲಿ(ಟ). [4] ಹರೆ (ಗ). [5] ಲೊದಜುವಬ್ಬರವರೆಯು (ಗ), ಹದರುವರೆಯುಲಿ ಬಳಿಕ (ಝ), ಹದರುವಬ್ಬರವರೆಯು (ಐ). [6] ಗೊಳಬರಲೊಡನೆ ನಮಿಸಿದ ಜಾಂಬವಂತಂಗೆ (ಕ), ಗೊಂಡಪ್ಪಿದರು ಸುರದುಂದುಭಿಯು ರಭಸದಲ (ಗ.ಜ.ಐ), ಗೊಂಡರು ಬಂದು ನಮಿಸಿದ ಜಾಂಬವಂತಂಗೆ (ಝ).

ಪವನಸುತನೀಚೆಯಲಿ ಲವಣಾ
ರ್ಣವವ ದಾಂಟಿದ ಬಳಿಕ ರಚಿಸಿತು
ದಿವಿಜರಿಪು ಪುರವಿಶ್ವಕರ್ಮಮಯಾನುಮತಗಳಲಿ
ನವವಿಚಿತ್ರದ ಮಣಿಖಚಿತಭವ
ನವನು ಹೊಕ್ಕನು ಬಳಿಕ ಭೃಗುಸಂ
ಭವಸುರಾಚಾರಿಯರ ನೇಮದಲಾ ದಶಗ್ರೀವ ೯

ಏನೆ ಮಾಡಿದೆಯೆಂದು ಕಲಿಪವ
ಮಾನಜನನಾ ಕಮಲಗರ್ಭನ
ಸೂನು ಬೆಸಗೊಂಡನು ಮುಗುಳ್ನಗೆ [1]ಮುಖದೊಳವತರಿಸೆ[1]
ಏನನೆನಗೆ ನಿರೂಪಿಸಿದಿರದ
ರಾನಿಕೆಯಲೇ ಹೋಗಿ ಕಂಡೆನು
ಜಾನಕಿಯ ಬಳಿಕಿತ್ತೆನ[2]ವರಿಗೆ ರಾಮ[2]ಮುದ್ರಿಕೆಯ ೧೦

ತನು ಬಡವು ದೇವಿಯರ ದೇವರ
ನೆನಹದಲ್ಲದೆ ಕಾಣೆನನ್ಯವ
ಮನವಚನಕಾಯದಲಿ ಶಿವ ಶಿವ ಶಿವಮಹಾದೇವ
ಎನಿತು ಪಾತಿವ್ರತೆಯೊ ಜಗದಲಿ
ತನಗೆ ಬಳಿಕೀ ರತ್ನವನು ಕೊ
ಟ್ಟಿನಿಯನಲ್ಲಿಗೆ ಹೋಗೆನುತ ಬೀಳ್ಕೊಟ್ಟರವರೆಂದ ೧೧

ಮೇಲೆ ಮಾಡಿದ ಕೆಲಸವೇನದ
ಹೇಳೆನಲು ತಲೆಗುತ್ತಿದನು ವೈ
ತಾಳಿಕರು ಹೊಗಳಿದರು [3]ಮೇಲಮರೇಂ[3]ದ್ರನೋಲಗದ
ಕೇಳು ಜಾಂಬವದೇವ ರಿಪುವನ
ಪಾಲಕರ ಸದೆಬಡಿದು ಸವಖುದ
ನಾ ಲಲಿತನಂದನವನೊಂದೇ[4]ಕ್ಷಣದೊಳೀ[4] ಹನುಮ ೧೨

ಬವರಕೈತಂದಸುರರಾಯನ
ಕುವರರೇಳ್ನೂರ್ವರನು ಕಾಲನ
ಭವನವನು ಕಾಣಿಸಿದನಕ್ಷಾದ್ಯಖಿಳರಾಕ್ಷಸರ

---

[1] ಮಿನುಗೆ ಮುಖದೊಳಗೆ (ಗ), ಮಿನುಗೆ ವದನದಲಿ (ಣ). [2] ನುಪಮರಾಜ (ಗ.ಟ), ವರಿಗೆ ರಾಜ (ಜ.ಝ). [3] ಬಳಿಕಮರೇಂ (ಗ.ಡ), ಮೇಲೆ ಮಹೇಂ (ಣ). [4] ನಿಮುಷದಲಿ (ಕ), ಕ್ಷಣದಲಾ (ಗ.ಣ).

ಕವಿಸಿ ಸಭೆಯಲಿ ರಾವಣನ ಪರಿ
ಭವಿಸಿ ಪುಚ್ಛಾಗ್ರದಲಿ ಸುತ್ತಿದ
ನಿವಸನದ ಶಿಖಿಯಿಂದ ಸೀಕರಿಮಾಡಿದನು ಪುರವ ೧೩

ತಾಗಿ ತಱುಬಿದ ಖಳರ ಬಟ್ಟೆಯು
ಸಾಗರದೊಳದ್ದಿದನು ದೂತೋ
ದ್ಯೋಗವಿದು ನಿರ್ಮ್ಮಿತ ಮಾಡಿದ ರಾಜಕಾರಿಯದ
ಮೇಗೆ [1]ಹೇ[1]ಳುವುದೇನೆನುತ ದಿವ
ಕಾಗಿ ನಡೆದರು ನುಡಿಯನಿದ ಕೇ
ಳ್ದಾಗಲಾ ಕಪಿಸೇನೆ ಕೊಂಡಾಡಿತು ಸಮಿರಜನ ೧೪

ಬಳಿಕ ಬೀಡೆತ್ತಿದುದು ಹರುಷದ
ಹೊಳಹಿನಲಿ ಹೊದಱೆದ್ದು ಗಗನದ
ಜಲಧರದ ಜವಗತಿಯಲದ್ರಿವನೋಪವರ್ತನವ
ಕಳಿದು ಮಾರ್ಗಶಿರಾಸಿತದ ಶಶಿ
ನಳಿನಸಖಸಂಗಮದ ದಿವಸದ
ಲಳಿಯಬಿದ್ದರು ಕೋಟೆಯನು ಫಲಭರದ ಮಧುವನವ ೧೫

ಕಾಪಿನಗ್ಗದ ದಧಿಮುಖನ ಭಟ
ರೀ ಪಡೆಯು [2]ಹುಗಗು[2]ಡದೆ ತಡೆಯಲು
ತೋಪ ಸೂಱೆಯ ಕೊಂಡು ಕೊಡಹಿದರಾ ವನೌಕಸರ
ಆಪರೇ ಬಳಿಕವದಿರಿವರಾ
ಟೋಪಕೊದಗುವ[3]ಡ[3]ರುಣಜಲದ ವಿ
ಲಾಪಮುಖರೈತಂದು ದೂಱಿದರಿನತನೂಜಂಗೆ ೧೬

ಅಱಿದನನಿತಱ ಮೇಲೆ ಹುಯ್ಯಲ
ಹೊಱಗೆಯನು ದೇವಿಯರ ಸುದ್ದಿಯ
ನಿಱುಗೆಯನು ಬಳಿಕವರ ಸಂತೈಸಿದನು ಸುಗ್ರೀವ
ನೆಱೆಯದಂಬರವಿವರ ಗಮನದ
ತೆಱಹಿಗೆನೆ ತೀರಯ್ಸಿ ತೊಡೆಗಳ
ಹಱೆಯ ಹೊಯ್ಲಿನಲಿಳಿದರಾ ಪ್ರಸ್ರವಣಗಿರಿಗಾಗಿ ೧೭

[1] ಕೇ (ಗ.ಡ). [2] ಹೊಗಗೊ (ಕ.ಟ.ಡ.ಣ). [3] ದ (ಕ.ಟ.ಣ).

ದೇವನಿದ್ದನು ವೀರಭಟನು
ಗ್ರೀವಲಕ್ಷ್ಮಣರುಗಳ ಗಡಣದ
ಲೀ ವನೌಕಸರಿದಿರಿನಲಿ ಜಯ ಜಯ ನಿನಾದದಲಿ
ತೀವಿದುತ್ಸವದಿಂದ ವಿಮಲಫ
ಲಾವಳಿಯ ಕಾಣಿಕೆಯನಿತ್ತು ಭಿ
ಭಾವಭಕ್ತಿಯಲೆಱಗುತಿರ್ದರು ಪದಕೆ ರಘುಪತಿಯ ೧೮

ನಮಿಸಿ ಜಾಂಬವದೇವನುದಧಿ
ಕ್ರಮನ ಕಾಣಿ[1]ಸೆ[1] ರೋಮಹರುಷೋ
ದ್ಗಮದಲುಪಚರಿಸಿದನು [2]ಜನ[2]ಪತಿ ಜಾಂಬವಾದಿಗಳ
ಗಮನಕಾರ್ಯ ವಿಸಂಚವಾಗದೆ
ವಿಮುಖವಿಲ್ಲದೆ ಕಂಡಿರೇ ನೀ
ವಮರವೈರಿದಶಾನನನನೆಂದರಸ ಬೆಸಗೊಂಡ ೧೯

ದೇವರನು ಬೀಳ್ಕೊಂಡು ನಡದೆವು
ದೇವ ಚಿತ್ತೈಸವನಿಜೆಯ ವಿವಿ
ಧಾವನಿಯ ಹೊಕ್ಕಱಸುತಿಳಿದೆವು ವಿತಳಕುಹರದಲಿ
ತಾವರೆಯಸಖಸುತನ ತನುಜೆಯ
ಠಾವ ಕಂಡೆವು ತೊಳಲಿದೆವು ಬಳಿ
ಕಾ ವಿಚಿತ್ರದ ವಿಷಯವೀಥಿಯನೆಂದನಜಸೂನು ೨೦

ಬಲುಹ ಮೆಱೆದಲ್ಲಿಂದ ಹೊಱವಂ
ಟಿಳೆಯ ಸಾರ್ದೆವು ಮುಂದೆ ಕಂಡೆವು
ಕಲಿಜಟಾಯುವಿನಗ್ರಜನನಾ ವಿಹಗಪತಿಯಿಂದ
ಖಳನ ಸುದ್ದಿಯನಱಿದು ಸಾರ್ದೆವು
ಜಲನಿಧಿಯನಲ್ಲಿಂದ ಹನುಮನ
ಕಳುಹಿದೆವು ಗುಪ್ತದಲಿ ಸೀತೆಯನಱಿದುಬಾಯೆಂದು ೨೧

ಈತ ಬಳಿಕ ಸಮುದ್ರಮಧ್ಯದ
ಲಾತ ಕಂಟಕ ಹಲವ ಕಳಿದು ಪ
ರೇತಪತಿ ಶಂಕರ ವಿರಿಂಚಾದಿಗಳಿಗಸದಳದ
ಯಾತುಧಾನನ ರಾಜಧಾನಿಯ
ಲಾ ತಮಿಸ್ರಿಯಲಱಿಸಿ ಕಂಡನು
ಮಾತೆಯನು ಮೂಲೋಕದಮರನರೋರಗಾವಳಿಯ ೨೨

---

[1] ಸಿ (ಗ.ಜ.ಢ.ಣ). [2] ರಘು (ಗ.ಟ.ಣ).

ಬಡವು ಗಡ ದೇವಿಯರು ಸೆರೆವನೆ
ಗಡ ಮಹೋದ್ಯಾನದಲಿ ಕಾವಲು
ಗಡ [1]ಮಹೋಗ್ರನಿಶಾಟಸತಿಯರು ನೃಪತಿ[1] ಚಿತೈಸು
ನಡೆನುಡಿಯಲಲಸಿಕೆಗಳಲಿ ನಿ
ಮ್ಮಡಿಯ ಸಿರಿಚರಣಾರವಿಂದದ
ದೃಢತರದ ನೆನಹಲ್ಲದಿಲ್ಲವನೀಶ ಕೇಳೆಂದ ೨೩

ಕಳಲಿ ಸೂಸಿದ ಕೇಶಪಾಶದ
ಮಲಿನ ವಸನದ ಮಸುಳಿಸಿದ ಕೋ
ಮಲತೆಯಂಗದ ಕೋಡಿವರಿವಶ್ರುಗಳ ನಿರ್ಜರದ
ಬಳಲಿಕೆಯ ಬಾಯ್ದೆಙಿಯಲಿದ್ದಳು
ಜಲಜಮುಖಿಯೆಂದೀತ ಹೇಳಲು
ಸಲೆ ಮಱುಗಿ[2]ತೆನ್ನೊಡಲೆನಲು ತಲೆಗುತ್ತಿದನು ರಾಮ[2] ೨೪

ಘುಡುಘುಡಿಸಿ ಮಾಗಧಿಯಮಗನಲಿ
ಜಡಿ[3]ದವಿಳೆಗ[3]ಶ್ರುಗಳು ಮನದಲಿ
ಮಿಡುಕಿದನು ಸುಗ್ರೀವನನಿಬರ ಸಂತವಿಸಿ ಬಳಿಕ
ನುಡಿದನಾ ಜಾಂಬವನು ಹನುಮನ
ಕಡುಹ ಹೇಳಿದು ವನವಕಿತ್ತು
ಗ್ಗಡದ ಕದನದ ಕಥೆಯ ಲಂಕಾ[4]ನಗರದಾಹನದ[4] ೨೫

ಅಳಿದುದನಿತಱ ಮೇಲೆ ಚಿಂತಾ
ಕುಲತೆ ರೋಮಾಂಚನದ ಹರುಷದ
ಹೊಳೆಯೊಳೀಸಾಡಿದರು ರಘುಪತಿ ಲಕ್ಷ್ಮಣಾದಿಗಳು
ಬಲುಸಖರು ಬಲುಭೃತ್ಯ[5]ರಿದ್ದಡೆ[5]
ಬೆಳಗದೇ ಸತ್ಕೀರ್ತಿಚಂದ್ರಿಕೆ
ಕಲಿಯೆ ಬಾಯೆಂದಪ್ಪಿದನು ರಘುರಾ[5]ಮ[5]ನನಿಲಜನ ೨೬

---

[1] ಮಹಾರಾಕ್ಷಸಿಯರುಗಳು ನೃಪಾಲ (ಕ.ಗ.ಟ), ಮಹೋಗ್ರನಿಶಾಚರಿಯರು ನೃಪಾಲ (ಜ.ಣ). [2] ದನು ರಾಮ ಚಿಂತಾಭರದ ಕೋಪದಲಿ (ಚ). [3] ದು ಸುರಿವ (ಗ), ದುದಿಳೆಗ (ಚ.ಡ). [4] ದಹನಪರಿಯಂತ (ಕ), ನಗರನಿರ್ದಹದ (ಡ). [5] ರುಳ್ಳಡೆ (ಕ.ಝ), ರಿದ್ದರೆ (ಗ.ಜ.ಟ.ಣ). [6] ಯ (ಕ.ಗ.ಟ.ಡ.ಣ).

ಪಟುತನವು ದೊರಕಿದರೆ ಶುಚಿತನ
ಘಟಿಸಲಱಿಯದು ಶುಚಿತನವು ಸಂ
ಘಟಿಸಿದರೆ ಪಟುವಾಗನುಭಯಗುಣಂಗಳುಳ್ಳವಗೆ
ಘಟಿಸದಧಿಕವಿವೇಕವೀ ವಿ
ಸ್ಫುಟಗುಣಂಗಳು ನಮ್ಮ ಭಾಗ್ಯೋ
ತ್ಕಟದಲೇ ಸೇರಿದವು ನಿನಗೆಂದರಸ ಹರುಷಿಸಿದ ೨೭

ಮುರಿದು ಚರಣಕೆ ನಮಿಸಿ ವಿಶ್ವಂ
ಭರೆಯಸುತೆಯ ಶಿರೋಮಣಿಯ ಬಳಿ
ಕೆರಡು ಕೈಗುಡಿತೆಯಲಿ ಧರಿಸಿ ಮನೋನುರಾಗದಲಿ
ಅರಸರಾಮಂಗೀಯೆ ನಗುತಾ
ದರದಿನಾ ಹನುಮಂತದೇವನ
ಪರಮಕರುಣಕಟಾಕ್ಷರುಚಿಯಲಿ ಹೊ[1]ದೆಸಿ[1]ದನು ರಾಮ ೨೮

ಉದಧಿಮಥನದೊಳವುಳಕೌಸ್ತುಭ
ದುದಯದಂತರದಲ್ಲಿ ಜನಿಸಿ
ತ್ತಿದು ಸುರೇಂದ್ರಂಗಾಯ್ತು ಹಸುಗೆಯಲೀ ಮಹಾಮಣಿಯ
ತ್ರಿದಶಪತಿ ಜನಕಂಗೆ ನೃಪಯ
ಜ್ಞದಲಿ ಕೊಟ್ಟನು ಜನಕ ಸೀತೆಯ
ಮದುವೆಯಲಿ ತನಗಿತ್ತ[2]ನಿ[2]ತ್ತೆನು ಸೀತೆಗಾನೆಂದ ೨೯

ಕುಱುಹಿದಹುದೆಂದರಸನೆಳೆನೇ
ಸಱಿನವೊಲು ರಂಜಿಸುವ ರತ್ನವ
ತುಱುಗಿ ತೂಳುವ ಹರುಷಪುಳಕದಿನಿತ್ತನನುಜಂಗೆ
ನೆಱೆಯಃದೀತಂಗೀವ ವಸ್ತೂ
ತ್ಕರವದಂತಿರಲೆಂದು ಬೊಮ್ಮನ
ಪರಮಪದವಿಯನಿತ್ತು ನೃಪ ಮನದಣಿಯೆ ಮನ್ನಿಸಿದ ೩೦

ತೀರದೇ ತಾ ಬೇಡ ತನ್ನಯ
ನಾರಿಯಮಳಕಟಾಕ್ಷದಗ್ರದ
ಧಾರೆ ಸೋಂಕಿದಡಹುದಲೇ ಬ್ರಹ್ಮೇಂದ್ರಪದವಿಗಳು
ಸಾರತರ ನಿಗಮಾರ್ಥವಿದು ಬೆಱ
ಗಾರಿಗಾ ಲಕ್ಷ್ಮೀಶನೊಲಿದರೆ
ವೀರ ಕೇ[3]ಳು ವಿಚಿತ್ರವಿದ ಕೇಳೆಂ[3]ದನಾ ಮುನಿಪ ೩೧

---

[1] ಗಳಿ (ಗ), ಗಿಸಿ (ಜ.ಡ). [2] ಡಿ (ಕ.ಝ.ಟ). [3] ಳಿದ ಚಿತ್ರವಲ್ಲೆನುತೆಂ (ಕ).

ಕೇಳಿದನು ಬಳಿಕಮರ[1]ವೈರಿ ವಿ
ಶಾಲ[1]ನಗರದ ಪಥವನಾ ದಶ
ಮೌಳಿಯನುಪಮದುರ್ಗದುಗ್ರಾಟೋಪವನು ರಾಮ
ಆಳು ಕುದುರೆ ರಥಾಶ್ವದುಬ್ಬರ
ದೇಳಿಗೆಯನವನೈಶ್ವರಿಯದು
ಬ್ಬಾ[2]ಳಿಸುವ[2] ಢಾಳಿಸುವ ನಗೆಮೊಗದಲಿ ಸಮೀರಜನ ೩೨

ನೂಱುಯೋಜನ ಜಲಧಿ ಮೇಲಿ
ನ್ನೂಱುಯೋಜನ ಪಥ ಮಹಾಪುರ
ನೂಱುಯೋಜನದುನ್ನತದ ಗಿರಿ ಮೂಱರಗ್ರದಲಿ
ತೋಱುತಿಹುದಿನಬಿಂಬದವೊಲದ
ನೇಱಲಮರರಿಗಸದಳವು ಹದಿ
ನಾಱುಯೋಜನದು[3]ದಿತ[3]ಕೋಟಾವಳಯವದಕೆಂದ ೩೩

ಅಗಲು ತಾನೈವತ್ತುಯೋಜನ
ದಗಲ ಕೆಳಗಣ ಕೋಟೆಯೊತ್ತಿನ
ಲಗಡುರಕ್ಕಸನೈಶ್ವರಿಯವನು ಹೊ[4]ಗಳುವಡೆ ತ[4]ನಗೆ
ಮಿಗದು ಮತಿ ಸೈನಿಕದ ಸಂಖ್ಯೆಯ
[5]ಪೊಗಳಲಸದಳವಮರರಾಯನ[5]
ಬಿಗುಹು ದೇವರು ಮುನಿದು ನೋ[6]ಡಿದಡೇನಹುದೊಯೆಂದ[6] ೩೪

ಹರೆದುದೋಲಗವನಿತಱಿಂ ಮೇ
ಲರಸ ಸುಗ್ರೀವಾದಿ ಸುಭಟರ
ಕರಸರೋಜದಿ ಬೀಳುಕೊಟ್ಟನು ಬಳಿಕ ಬೀಡಿಕೆಗೆ
ತೊರವೆಯಧಿಪತಿರಾಯ ನರಕೇ
ಸರಿ ನಿಜಾನುಜಗೂಡಿ ನೂಕಿದ
ನಿರುಳನಹಿತವಧಾವಿರೋಧದ ಬಹಳಚಿಂತೆಯಲಿ ೩೫

---

[1] ವಂಶಾಭೀಳ (ಗ.ಜ.ಣ). [2] ಳುವನು (ಗ), ಳುಗಳ (ಜ.ಡ). [3] ದ್ಧ (ಗ.ಡ.ಣ). [4] ಳಲರಿದೆ (ಗ), ಳುವರೆ ತ (ಚ.ಟ), ಳುವರೆ ನಿ (ಜ). [5] ದೃಗು ನಿರೀಕ್ಷಿಸಲರಿದು ದನುಜನ (ಗ), ಸೊಗಸು ಜಿಹ್ವೆಗೆ ಜೀಯಯಿನಿತಱ (ಚ.ಜ.ಝ.ಡ), ನಿಗರಿಸಲದೇಕನಿತದೇತಱ (ಟ.ಣ). [6] ಡಲಿಕಾವುದರಿದೆಂದ (ಕ), ಡಿದ ಡೆಂದನಾ ಹನುಮ (ಗ.ಝ.ಟ.ಣ).

# ಪರಿಶಿಷ್ಟ

ಸೂಚನೆ :—ಪದ್ಯಗಳ ಅಡಿಯಲ್ಲಿ ಕೊಟ್ಟಿರುವ ಅಕ್ಷರವು ಪ್ರತಿಯ ಸಂಕೇತವನ್ನೂ, ಅದರ ಮುಂದಿರುವ ಮೊದಲನೆಯ ಅಂಕಿ ಸಂಧಿಸಂಖ್ಯೆಯನ್ನೂ, ಎರಡನೆಯ ಅಂಕಿ ಪ್ರಕೃತಮುದ್ರಣದ ಪದ್ಯಸಂಖ್ಯೆಯನ್ನೂ ಸೂಚಿಸುತ್ತವೆ. ಪ್ರಕೃತಪದ್ಯವು ಸೂಚಿತಪದ್ಯವಾದಮೇಲೆ ಬಂದಿರುವುದೆಂದು ತಿಳಿಯಬೇಕು.*

## ಬಾಲಕಾಂಡ

ಕಡಲ ಕಡಹದೊಳಿಡಿವ ತೆರೆಗಳೊ
ಳೊಡದು ಮೂಡಿ ಸಮಸ್ತದೇವರ
ಗಡಣಗಳನೀಕ್ಷಿಸುತ ಕಂಡು ಜನಾರ್ದನನ ಚೆಲುವ
ಬಿಡದೆ ನೋಡುತ್ತಡಿಗಡಿಗೆಸವ
ಸಡಗರದ ಸಂಭ್ರಮದ ಹರಿಯುರ
ದೆಡನನಪ್ಪಿದ ಮಡದಿ ರಕ್ಷಿಸು ಲಕ್ಷ್ಮಿ ತ್ರೈಜಗವ

ಕ. ೧-೧, ಝ. ೧-೮

ವಾಣಿ ಚತುರಾನನನ ಪಟ್ಟದ
ರಾಣಿ ವೀಣಾಮಂಡಮಂಡಿತ
ಪಾಣಿ ನಿರ್ಜರಮಕುಟಮಂಡಿತ ಪದನಖಶ್ರೇಣಿ
ಜಾಣನುಡಿಗಳ ಕಾಣವೆನಿಸುವ
ಮಾನಿನಿಯ ಮುಖಲಲಿತಪದನಿ
ಶ್ರೇಣಿ ಮಾಳ್ಕೆಮಗೀಪ್ಸಿತವನನವರತ ಕಲ್ಯಾಣಿ

ಟ. ೧-೬

ಶೈಲರಾಜಕುಮಾರಿಯಂಗನೆ
ಲೋಲಲೋಚನೆ ಲೋಕನಾಯಕಿ
ಶೂಲಪಾಣಿ ನಿಶುದ್ಧಶುಭರಿ ತ್ರಿಪುರಸಂಹಾರಿ
ಶೂಲಶಕ್ತಿ ವರಪ್ರದಾಯಿನಿ
ಕಾಳಿ ಕಾತ್ಯಾಯಿನಿಯೆ ಮಂಗಲೆ
ಪಾಲಿಸೆನ್ನನು ಕರುಣದಲಿ ವರಪಾರ್ವತಾದೇವಿ

ಝ. ೧-೮.೧

---

* ಉದಾ :—ಕ. ೧.೧ ಅಂದರೆ ಪ್ರಕೃತಪದ್ಯವು 'ಕ' ಪ್ರತಿಯಲ್ಲಿ ೧ನೇ ಸಂಧಿ ೧ನೇ ಪದ್ಯವಾದ ಮೇಲೆ ಬಂದಿದೆ ಎಂದು ತಿಳಿದುಕೊಳ್ಳುವುದು.

ನೋಟದಲಿ ನಗೆನುಡಿಗಳಲಿ ಕ
ಣ್ಬೇಟದಲಿ ಕೈಸೋಂಕಿನಲಿ ಮೈ
ಗೂಟದಲಿ ಮನ್ಮಥವಿಲಾಸಕ್ರೀಡೆಯಲಿ ಮುನಿಯ
ಪಾಟುಗೆಡಿಸಿ ಮನೋಜತತ್ತ್ವವ
ಧೂಟಿಯರು ಕುಸುಮೇಷು ಚಿತ್ತೋ
ತ್ಪಾಟಿಯರು ನಿಲಿಸಿದರು ರಜನಿರಥಾಭಿಯೋಗದಲಿ

ಟ. ೫-೫೭

## ಅರಣ್ಯಕಾಂಡ

ಇದೆ ಸಮೀಪವು ಗೌತಮಿಯ ತೀ
ರದಲಿ ಪಂಚವಟಿಪ್ರದೇಶದ
ಸುದತಿ ಸಹಭವಸಹಿತ ವನವಾಸದಲಿ ರಘುನಾಥ
ಕದನವಿಲ್ಲದೆ ಶಂಬುಕನ ವಧಿ
ಸಿದರೆ ನೊಂದೈದಲು ಪುರಾಕೃತಿ
ವಿಧಿಯಿನಿತ ಬಂದುದನು ತೋಜುವೆಳೆಂದಳಸುರಂಗೆ

ಝು. ೫-೫

ಏನನೆಂಬೆನು ಮೊದಲೊಳಂಗವಿ
ಹೀನರಾದರ ಕಂಡು ಗಮಿಸಲು
ಹಾನಿ ತಪ್ಪದು ಪೋಪಕಾರ್ಯಕ್ಕೆಂಬ ನಾಳ್ನುಡಿಗೆ
ತಾನೆ ಗುರುವೆಂಬಂತೆ ಖರನ ಸ
ಗಾಢಬಲದ ಪರಿಜಯವೆನಲು (?)
ಕಾನನದ ಪಥವಿಡಿದು ನಡದಳು ಮುಂದೆ ಶೂರ್ಪಣಖಿ

ಝು. ೫-೬

ಎಮ್ಮ ಮಾತನು ಕೇಳಿದರೆ ನಿನ
ಗೊಮ್ಮೆಯೂ ಕೇಡಿಲ್ಲ ನೀನಾ
ನಿರ್ಮಳಾತ್ಮಕನಂಗನೆಗೆ ಮನವಿಕ್ಕಬೇಡೆಂದು
ಬೊಮ್ಮಮುಖ್ಯ ಸುರಾದಿವೈರಿಗೆ
ಧರ್ಮವನು ವಿರಚಿಸಲು ಕೇಳಿದು
ತಮ್ಮ ಮಾವನ ಜಱೆದು ನುಡಿದನು ಖತಿಯೊಳಸುರೇಂದ್ರ

ಚ. ೭-೪೪

ನಮ್ಮ ಸೋದರಮಾವನಿವನೆಂ
ದುಮ್ಮಹದಲೈತಂದು ಕೇಳಿದ
ರೆಮ್ಮ ಮಾತುಗಳೆಲ್ಲವನು ತಾ ಜಱೆದು ಚಾಳೈಸಿ
ಬೊಮ್ಮನಯ್ಯನ ಕಥನಗಳ ತಾ
ಪೆರ್ಮೆಯಲಿ ಕೊಂಡಾಡಿ ನಮಗೆ ವಿ
ಕರ್ಮ ಬಹುದೆಂದೆಂಬುದಕೆ ನಗೆ ಬಂದುದೆಮಗೆಂದ

ಟ. ೭-೪೫

ಎನುತ ಮನದಲಿ ನೆನೆದುಕೊಂಡನು
ದಿನಕರಾನ್ವಯದಾ ರಘುಕ್ಷಿತಿ
ಜನಪರನು ವಿಂಗಡಿಸಿ ವಿಮಳವಿದೇಹವಂಶಜೆಯ
ಅನುಮಿಷಾರಿಯ ವಶಕೆ ಸೇರಿಸು
ವನಿತನೇ ನಿಶ್ಚೈಸಿ ಮಾಯಾ
ಮನಿಕನಕ್ಕಾಡಿದನು ಖಳ ತಾಪಸದ ರೂಪಕವ

ಚ. ೮-೧೩

ಏನ ಹೇಳುವೆನೆನ್ನ ಬುದ್ಧಿಯ
ಹಾನಿಯನು ಮೃಗವ್ಯಸನ ಬಲಿದಾ
ಕಾನನಕೆ ಕಳುಹಿದೆನು ತನ್ನಯ ಪತಿಯ ಬಲುಹಿಂದ
ನೀ ನುಡಿದ ನುಡಿಗಳನು ತಾನನು
ಮಾನಿಸದೆ ಕಡುಗೇಡಗೆಚ್ಚೆನು
ಮಾನನಿಧಿಯಿರವೆಂತುಟೋ ಹಾ ಎಂದಳಾ ಸೀತೆ

ಚ. ೬-೩

ಕೌಳಿಕದ ಹೊಮ್ಮಱಿಯ ಕಥನದಿ
ಕೋಳುವೋದನು ರಾಮ ಮಿಗೆ ತಾ
ಬೀಳಗೆಡಹಿದೆನೋ ಮೃಗವನಡನಾರು ಬಲ್ಲವರು
ಏಳುತಿದೆ ಶೋಕಾಗ್ನಿ ವಿಲಯದ
ಕಾಳುಗಿಚ್ಚಿನ ತೆಱದಿ ನೆಱೆ ತಾ
ಕೋಳುವೋದೆನು ಶೋಕವಹ್ನಿಗೆಯೆಂದಳಾ ಸೀತೆ

ಚ. ೬-೩.೧

ನೊಂದು ಮನದಲಿ ಮಱುಗಿ ಲೋಚನ
ಬಿಂದುಗಳನಂಬರದೊಳಱಸುತ
ಲಂದು ದೈವವ ನೆನೆದು ಜೈದನು ಬಹಳದುಷ್ಕೃತವ
ಹಿಂದೆ ತಾನಾರಾರನಳಲಿಸಿ
ಬಂದ ಭವ ಕೈಗೂಡಿತೇ ತನ
ಗಿಂದೆನುತಲವನಿಜೆಗೆ ಬಿನ್ನಯಿಸಿದನು ನಿಜಮತವ

ಚ. ೬-೪

ಇನಕುಲೇಶ್ವರಗಪಜಯಶ್ರೀ
ವನಿತೆ ಹೊದ್ದಿದಡೀಗಲೇ ಭೂ
ವನಿತೆ ಸಹವಾಕಾಶ ಬ್ರಹ್ಮ ಮಹೇಶ್ವರಾದಿಗಳು
ತನತನಗೆ ಕಂಗೆಡದೆ ನಿಜನೆಲೆ
ವನೆಯೊಳಿಹರೇ ತಾಯೆ ಬಯಲಿಗೆ
ತನುವ ಬಳಲಿಸಬೇಡ ರಾಮನು ಮನುಜನಲ್ಲೆಂದ

ಚ. ೬-೪.೧

ಮಾತ ಹೋಗಾಡುವರೆ ರಾಮನು
ತಾತನಲ್ಲಾ ತನಗೆ ನಿಮ್ಮನು
ಮಾತೆಯೆಂದೇ ತಿಳಿದಿಹೆನು ಸದ್ಭಾವಶುದ್ಧಿಯಲಿ
ಭೂತಳಾಧಿಪ ನುಡಿದ ನುಡಿಗಾ
ನಾತು ಸ್ಥೈರಿಸಿ ನಿಂದೆ ನಿಮ್ಮಯ
ಮಾತ ಮೀಱುವನಲ್ಲ ರಾಮನ ತಹೆನು ತಾನೆಂದ

ಚ. ೯-೧೧

ಸನ್ನೆಯಲಿ ಲಕ್ಷ್ಮಣನ ಚೇಷ್ಟಾ
ಭಿನ್ನ ಭೇದವನಱಿದು ಮನದಲಿ
ಖಿನ್ನನಾದನು ರಾಮನಾಕ್ಷಣ ಸತಿಯ ಭ್ರಮೆ ಹಿಡಿದು
ಮುನ್ನ ನಾನಾರಾರ ಸತಿಯರ
ಖಿನ್ನಮಾಡಲು ಬಗೆದೆನೋ ಹಾ
ಎನ್ನವಿಧಿಯೆನಗೀಗ ಕೈಯಲಿ ಕಾಣಲಾಯ್ತೆಂದ

ಚ. ೧೧-೧೭

## ಕಿಷ್ಕಿಂಧಾ ಕಾಂಡ

ಅರಸ ಚಿತ್ತೈಸಾದಡಾ ಸರ
ಸಿರುಹಸಖನ ತನೂಜನೆಂಬು
ಬ್ಬರದ ವೆಸರೆನಗಾವ ಪರಿಯಲಿ ಬಂದುದೆಂಬುದನು
ನಿರುತದಿಂದುಸುರುವೆನು ನಿಮ್ಮಯ
ಚರಣಕಮಲಕೆಯೆಂದೆನುತಲಾ
ದರದಿ ಕೈಗಳ ಮುಗಿದು ಬಿನ್ನಹಮಾಡಿದನು ರವಿಜ

ಗ. ಟ. ೨-೧೨

ಅವನದಾರೆಂದಸುರ ಕೇಳಲು
ದಿವಿಜಪತಿಸುತ ಬಾಲಿಯೆಂಬವ
ನವನಿಯೊಳಗಿಹನವನು ಕಿಷ್ಕಿಂಧಾದ್ರಿಯಗ್ರದಲಿ
ಭವವಿರಿಂಚಿಸುರೇಂದ್ರಮುಖ್ಯರು
ತವಿಸುವರಿಗಸದಳವು ಕೊಂದರೆ
ಕುವರವಧೆ ದುಷ್ಟಾಪಕರವೆನಲಱಿನುತ್ತೈತಂದ

ಕ. ೨-೩೪

ಬಂದನಾಕ್ಷಣ ಭೂತಳದ ಕಿ
ಷ್ಕಿಂಧದದ್ರಿಯ ಹೊರೆಗೆ ಬರಹೇ
ಳೆಂದು ಸಮರಕೆ ಕರೆಯ ಕಳುಹಿದನಿಂದ್ರನಂದನನ
ಇಂದು ನಮ್ಮೊಳು ಕದನ ಲೇಸ
ಲ್ಲೆಂದು ಪೊಱಮಡೆ ಸುತನ ತೋರಾ
ಯೆಂದೆನುತ ಶಕ್ರಜನ ತುಡುಕಿದನಸುರ ಮುಳಿಸಿನಲಿ

ಕ. ೨-೩೪.೧

## ಸುಂದರಕಾಂಡ

ಏನಿವಳು ವಿಲಯಾಂಧಕಾರವ
ಜನಿಯಿಸುವ ಸೂಗನಿತಿಯೋ (?)
ಭಾನು ಜನಿಸದ ಮುನ್ನ ಜನಿಸಿದ ಕಾಳರಕ್ಕಸಿಯೊ
ಈ ನಳಿನಗರ್ಭಾಂಡಭಾಂಡಾ
ನೂನತಿಮಿರದ ಮಾತೃಕಿಯೊಯೆನು
ತಾನನವನಲ್ಲಾಡಿ ಜುಣುಗಲು ನೆನೆದನಾ ಹನುಮ

ಕ. ೨-೯

ಆಯುವಂತನು ರಾಮಲಕ್ಷ್ಮಣ
ರಾಯರಿದ್ದರು ಸುಖದೊಳೆನ್ನಯ
ತಾಯೆ ಭಯಬಡಬೇಡ ರಾಮನ ಮುದ್ರೆಯುಂಗುರವು
ವಾಯುಸುತ ನಾ ತಾಯೆ ದನುಜರ
ಮಾಯುದಂಬುಧಿಯನ್ನು ದಾಂಟಿದೆ
ಸಾಯಸವರುವೆ ದನುಜಕೋಟಿಯನೆಂದನಾ ಹನುಮ

ಣ. ೩-೯೧

ಮಗನೆ ಹಾಯೆಂದಬಲೆ ಸವುರದ
ಜೊಗಸಿನಲಿ ನಲವೇಱ ಸಾವಿಗೆ
ಮೊಗಸಿದುತ್ಕಟರಣರಸದ ಮೊಗದೆಸವ ಕಡಿದಲೆಯ
ತೆಗೆದುಕೊಳುತಿರಲಳಿಗೆ ಮೂರ್ಚೆಯು
ಬಿಗುಹಿನಲಿ ಬಿಡೆ ಬೀಸಿಬಿದ್ದಳು
ನಗರದಬಲಾಜನವು ಖೋಯೆಂದೊದಱೆ ಶೋಕದಲಿ

ಕ. ೬-೧

ಸುರಪಥನಪರ ಸಿರಿಗೆ ಶತಸಾ
ವಿರದಮುಡಿ ದಶಕಂಠನಷ್ಟೈ
ಶ್ವರಿಯ ವಾಜ್ಯಾಮತ್ರಕ್ಕೆ ವಸ್ತ್ರಾವಳಿಯ ದಿಂಡುಗಳ
ಗಿರಿ ನೆರೆದವಗಣಿತಸಮುದ್ರಕೆ
ಸರಿಯೆನಿಸಿ ಘೃತಪೂರಿತದ ಕೊ
ಪ್ಪರಿಗೆಗಳು ತೀರಿದವು ಸಮ್ಮುಖದಲಿ ದಶಾನನನ

ಕ.ಗ.ಜ.ಝ. ೮-೫

ಉಳಿದ ನಾನಾವರ್ಣದವರುರಿ
ಗೊಳುವ ತಮತಮ್ಮಾಲಯಂಗಳ
ಬಳಕೆಗಳ ಗೇಹೋಪಕರಣಂಗಳನು ಬೀದಿಗಳ
ಬಳಿಗಳಲಿ ತಂದಿಳುಹುತಿರ್ದರು
ಕೆಲರದನು ಬಿಟ್ಟೋಡುತಿರ್ದರು
ಕೆಲರು ನಂದಿಸುತಿರ್ದರುರಿಗಳ ಭರದ ಭಾರಣೆಯ

ಚ. ೮-೭೯

WD 1502—GBPM—3,000—22-9-55

